


ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೮] ಜೂನ ೧೯೪೪. [ಸಂಚಿಕೆ ೯


## ವಿಷಯಾನುಕ್ರಮಣಿಕೆ.

# ಶಿವಾನುಭವ

ವರ್ಷ ೧೮ | ಜೂನ ೧೯೪೪. | ಸಂಚಿಕೆ ೯

## ಕನ್ನಡ ಭಕ್ತಿ-ದೀಪಕ ಬಸವಣ್ಣ.

### ೧. 'ಚರಿತ ಶರಣ'

(ಲೇ:- ಸಿಂಪಿ ಲಿಂಗಣ್ಣ ಮು. ಹಲಸಂಗಿ)

---

### ಬಸವಣ್ಣ ಯಾರು ?

ಬಸವಣ್ಣನು ಬಾಗೇವಾಡಿಯ ಶೈವಬ್ರಾಹ್ಮಣನೆಂದೂ, ಮಾದರಸ-ಮಾದಲಾಂಬಿಕೆಯರ ಮಗನೆಂದೂ, ಮೌಂಜಿಯ ಪ್ರಕರಣದಲ್ಲಿ ಮನೆ ಬಿಟ್ಟು ಓಡಿಹೋಗಿ ಕಪ್ಪಡಿಸಂಗಮದಲ್ಲಿ ಜ್ಞಾನಾರ್ಜನೆ-ಆತ್ಮಸಾಧನೆ ಮಾಡಿದನೆಂದೂ, ಕಲ್ಯಾಣದಲ್ಲಿ ಮಂತ್ರಿಕಾರ್ಯ ಹಾಗೂ ಧಾರ್ಮಿಕ ಸುಧಾರಣೆಯಕಾರ್ಯ ಇವನ್ನು ಕೈಕೊಂಡನೆಂದೂ ಹೇಳುವುದು ಈಗ ನಮಗೆ ಬೇಕಿಲ್ಲ. ಅವನನ್ನು ಭಕ್ತಿಭಂಡಾರಿಯೆಂದು ಕೆಲವರೂ, ಕ್ರಾಂತಿಕಾರಕನೆಂದು ಹಲವರೂ ಕರೆಯಲಿ; ಮಹಾತ್ಮನೆಂದೂ ಮಹಾನುಭಾವನೆಂದೂ ಕೂಗಲಿ; ಕುಲೋದ್ಧಾರಕನೆಂದೂ ಕಾರಣಪುರುಷನೆಂದೂ ಹೊಗಳಲಿ; ಸಂಗನಬಸವನೆಂದೂ ಶಿವನೇ ಬಸವನೆಂದೂ ಹಾಡಲಿ; ಅವನ ಅನುಪಮ ಮಹಿಮೆಗಳು ಮೆರೆಯಲಿ, ಅಗಾಧ ಪವಾಡಗಳು ಮೊಳಗಲಿ, ಉತ್ಸವಮೂರ್ತಿಯನ್ನು ಸ್ಥಾಪನಮೂರ್ತಿಯಂತೆ ಕಟ್ಟಿ ಪೂಜಿಸಲಿ; ಯಾರು ಏನು ಹೇಳಿದರೂ ಅದು, "ಬಸವಣ್ಣನು ಯಾರು" ಎಂಬ ಮಾತಿಗೆ ಪೂರ್ಣ ಉತ್ತರವೆನಿಸಲಾರದು. ಆತನು ಎಂಟುನೂರು ವರುಷಗಳ ಹಿಂದೆ ಆಗಿ ಹೋದ ಒಬ್ಬ ಐತಿಹಾಸಿಕ ಪುರುಷನೆಂಬ ಮಾತನ್ನು ನಮ್ಮ ಶಾಲೆಯ

ಹುಡುಗರೂ ಬಲ್ಲರು. ಆತನು ಮಂತ್ರಿಕಾರ್ಯಕ ವಹಿಸಿದ ಧರ್ಮಪ್ರಸಾರಕನೆಂಬುದು ಸಾಮಾಜಿಕರೆಲ್ಲರಿಗೂ ಗೊತ್ತು. ಐತಿಹಾಸಿಕ ಆಧಾರಗಳು ಇರಲಿ, ಇಲ್ಲದಿರಲಿ ಬಸವಣ್ಣನೊಬ್ಬನು ಕವಿಗಳ ಕಾವ್ಯದಲ್ಲಿ ಕಾಲ್ಪನಿಕ ಪಾತ್ರನಾಗಿರದೆ, ಆಗಿಹೋದ ಅಥವಾ, ಆಗಿಯೂ ಹೋಗದ ಒಬ್ಬ ಮಾನವನೆಂಬ ಮಾತಿಗೆ ಸಂಶಯುವೇ ಇಲ್ಲವಷ್ಟೇ? ಆದರೆ ಎಲ್ಲಿ ನಿಸ್ಸಂಶಯವೋ ಅಲ್ಲೇ ಸಂಶಯದ ಬೀಜ. ಅವನು ಮಾನವನೇ? ಅಲ್ಲ. ಮಾದಲಾಂಬಿಕೆಯು ಅವನನ್ನು ಮಾನವನನ್ನಾಗಿ ಹಡೆದಳು; ಆದರೆ ಕನ್ನಡಾಂಬಿಕೆಯು ಅವನನ್ನು ಶರಣನನ್ನಾಗಿ ಪಡೆದಳು. ಮಾನವ ಜಂಗುಳಿಯಂತೆ ನರಕುರಿಯಾಗಿ ಬಾಳಿದ್ದರೆ, ಅವನೊಬ್ಬ ಯಾವುದೋ ಮಳೆಯ ಹನಿಯಂತೆ ಎಲ್ಲಿಯೋ ಇಳಿದು, ಯಾತರಲ್ಲೋ ಬೆರೆತು ಏನೋ ಆಗಿ ಅಳಿದು ಹೋಗುತ್ತಿದ್ದನು. ಆದರೆ ಅವನು "ಮರೆತ ಮಾನವ" ನಾಗದೆ, "ತಾನು ಯಾರು? ಹುಟ್ಟಿದ್ದೇಕೆ? ಬಾಳ್ವಿಯ ಅರ್ಥವೇನು? ಜೀವನ ಸಾರ್ಥಕ್ಯವೆಂತು?" ಮೊದಲಾದ— ಪ್ರತಿಯೊಬ್ಬರಲ್ಲಿ ಒಮ್ಮೆಯಾದರೂ ತಲೆದೋರುವ ಒಡಪುಗಳನ್ನು ಒಡೆಒಡೆದು, ಬಿಡಿಬಿಡಿಸಿ, ಅರೆದರೆದು, ಬೀಜದಲ್ಲಿ ಮರವನ್ನ ಕಾಣುವ ಹವ್ಯಾಸವನ್ನು ತಾಳಿನಿಂತ ಬಸವನು "ಅರಿತ ಶರಣ" ನಲ್ಲದೆ ಮತ್ತೇನೂ ಅಲ್ಲ. 'ಅರಿತರೆ ಶರಣ, ಮರೆತರೆ ಮಾನವ' ಅಲ್ಲವೇ?

### "ಜಾತಿಗೋತ್ರಕುಲಧರ್ಮದೂರ" ನು.

ಬಸವಣ್ಣನ ಜಾತಿ ಯಾವುದು? ಆತನು ಬ್ರಾಹ್ಮಣ ತಾಯ್ತಂದೆಗಳಲ್ಲಿ ಹುಟ್ಟಿದನೆಂದು ಬ್ರಾಹ್ಮಣನೆನ್ನಬೇಕೆ? ಲಿಂಗಾಯತ ಧರ್ಮಪ್ರಸಾರಕಾರ್ಯಮಾಡಿದನೆಂದು ಲಿಂಗವಂತನೆನ್ನುವುದು ಕ್ರಮಪ್ರಾಪ್ತವೇ? ಕೀಳುಮೇಲುಕುಲಗಳೆನ್ನದೆ ಎಲ್ಲರೊಡನೆಯೂ ಹೊಕ್ಕುಬಳಸಿದನೆಂದು ಮಿಶ್ರಕುಲಜನೆನ್ನುವುದು ವಾಸ್ತವಿಕವೇ? ಇವುಗಳಲ್ಲಿ ಯಾವುದು ಸುಳ್ಳು? ಯಾವುದು ಸತ್ಯ? ಎಲ್ಲವೂ ದಿಟವಾದರೆ ನಿಶ್ಚಿತ ಜಾತಿಯಾವುದು? ಈ ತೊಡಕನ್ನು ಸರ್ವಜ್ಞ ಕವಿಯು ಬಹು ಸಮಾಧಾನಕಾರಕವಾಗಿ ಬಿಡಿಸಿದ್ದಾನೆ. "ದೇವನೊಲಿದಾತನೇ ಜಾತ" ನೆನ್ನುವ ಶ್ರೇಷ್ಠಜಾತಿಯ ವ್ಯಾಖ್ಯೆಯನ್ನು ಮುಂದಿಟ್ಟುಕೊಂಡರೆ, ಬಸವಣ್ಣನು ದೇವನೊಲಿದ ಜಾತಿಯುವನೆಂದು ಹೇಳಲಿಕ್ಕೆ ಹಗುರಾಗುವದು. ಹಾಗಾದರೆ ಬಸವಣ್ಣನು ಲಿಂಗವಂತರ ಸ್ವತ್ತು ಮಾತ್ರ ಹೇಗೆ? ಅಹುದು, ಅಷ್ಟೇ ಅಲ್ಲ. ಎತ್ತಿನಮೂರ್ತಿ

ಯಾಗಿ ಗೇಣು ಗುಡಿಯಲ್ಲಿ ಕುಳಿತ ಬಸವಣ್ಣನು ಎಂದು ಬಯಲಿಗೆ ಬಂದನೋ, ವಿಭೂತಿಯ ಥರಗಳೊಳಗಿಂದ ಎಂದು ಆತನ ವಚನಗಳಿಗೆ ಬಿಡುಗಡೆ ಆಯಿತೋ ಅಂದೇ ಬಸವಣ್ಣನು ಕನ್ನಡಿಗರೆಲ್ಲರ ಮುತ್ತು ಆದನು; ಬರಿಯ ಲಿಂಗಾಯತ್ತರ ಸ್ವತ್ತು ಮಾತ್ರ ಆಗಿ ಉಳಿಯಲಿಲ್ಲ. ಅಂದೇ ಅವನು ಕನ್ನಡನಾಡಿನ ಮುಗಿಲ ವರೆಗೆ ಬೆಳೆದು ನಿಂತನು. ಅಂದೇ ಆತನ ವಚನಗಳು ಹುಡಿಯೊಳಗಿಂದ ಹಾರಿ ಅಂತರಿಕ್ಷದಲ್ಲಿ ಕುಡಿಯಾಗಿ ಕಂಗೊಳಿಸಿದವು. ಜೊತೆಗೆ ಲಿಂಗವಂತಮತಕ್ಕೂ ಹೆಚ್ಚು ಹೆಚ್ಚು ಪ್ರಶಸ್ತಿ ಬರತೊಡಗಿತು. ಕನ್ನಡಿಗರೆಲ್ಲರೂ ಒಗ್ಗೊರಲಿನಿಂದ "ನಮ್ಮ ಬಸವಣ್ಣ! ನಮ್ಮ ಕುಲಗುರು!" ಎಂದು ಕೂಗುತ್ತಿರುವ ಕೂಗು, ಅಖಿಲ ಭಾರತದಲ್ಲೆಲ್ಲ ದುಮುದುಮಿಸಬೇಕಾಗಿದೆ. ಆಗ ಬಸವಣ್ಣನು ಭಾರತೀಯರ ಬದುಕಾದರೆ ಕನ್ನಡಿಗರು ಹಳಹಳಿಸುವುದಕ್ಕೆ ಕಾರಣವೇನು? ಭಾರತವ್ಯಾಪಿಯಾದ ಬಸವಣ್ಣನು, ನಾಳೆ ಕ್ರಿಸ್ತ-ಬುದ್ಧ-ಮಹಮ್ಮದರಂತೆ ವಿಶ್ವವ್ಯಾಪಿಯೂ ಆದಾಗ ಭಾರತೀಯರಿಗೆಷ್ಟು ಹಿಗ್ಗು? ಆತನನ್ನು ಕಟ್ಟಿನಿಲ್ಲಿಸುವ ಸಂಕುಚಿತಭಾವಬಂಧನಗಳು ಇಲ್ಲವಾದರೆ ಮಾತ್ರ, ದೇವನೊಲಿದ ಜಾತಿಯ ಬಸವಣ್ಣನು ವಿಶ್ವವ್ಯಾಪಿಯಾಗಬಲ್ಲನು.

## ಮಾನವ ಬಾಂಧವ್ಯ

ದೇವನ ಅವತಾರವು ಮಾನವನಿಗೆ ಅಚ್ಚರಿಯ ಕೈಚಳಕ; ಅದು ಕೇಳಲಿಕ್ಕೂ ಹೇಳಲಿಕ್ಕೂ ಸುಗಮ; ನಡೆಯಲಿಕ್ಕೆ ಕಠಿಣ. ಅವತಾರಗಳ ಮಾರ್ಗ ಮಾನವಕುನ್ನಿಗಳಿಗೆ ಹಾಳತಕೇಗೆ? ಆದರೆ ಮಾನವನೊಬ್ಬನ ಆತ್ಮೋದ್ಧಾರಪಥವು ಪ್ರತಿಒಬ್ಬನಿಗೂ ಆತ್ಮೋದ್ಧಾರಕವಾದದ್ದು. ಬಸವಣ್ಣನು ನಮ್ಮಂಥ ಒಬ್ಬ ಮನುಷ್ಯನಲ್ಲವಾದರೂ, ನಮ್ಮಂತೆ ಹುಟ್ಟಿ, ಬದುಕಿ, ಬಾಳಿ ಬೆಳಗಿದನಷ್ಟೇ? ತೋಳ-ಕುರಿ-ಹುಲ್ಲುಗಳನ್ನು ಹೊಳೆ ಹಾಯಿಸುವ ಕುರುಬನ ಗೋಳಾಟದಂತೆ ಪ್ರತಿಒಬ್ಬ ಮನುಷ್ಯನ ಬಾಳಿನಾಟ. ನಮ್ಮಂತೆ ಬಸವಣ್ಣನು ಶರೀರಪ್ರಾಣಮನಸುಗಳ ಮೇಳದೊಡನೆ ಭೂಮಿಗೆ ಬಂದಿದ್ದನಷ್ಟೇ. "ಬೆನ್ನಿಗೆ ಬಿದ್ದುದೊಂದು ವೈರಿ; ಹೊಟ್ಟೆಯಲ್ಲಿ ಹುಟ್ಟಿದುದೊಂದು ವೈರಿ" ಎಂದು ಹೇಳುವಂತೆ, ಮನುಷ್ಯನಾದವನಿಗೆ ಅವನವೇ ಅನ್ನಿಸುವ ಮನಸ್ಸು ಪ್ರಾಣ ಶರೀರಗಳು ವೈರಿಗಳಾಗಿ ಅಥವಾ ವೈರಿಗಳಂತೆ, ಹರಿಶ್ಚಂದ್ರನನ್ನು ಬೆಂಬಿಡಿದ ನಕ್ಷತ್ರಕನಂತೆ ಕೈತೊಳಕೊಂಡು ಬೆನ್ನುಹತ್ತಿದರೆ ವ್ಯಕ್ತಿಯು ಹೇಗೆ ಪಾರಾದೀತು?

ಅದಕ್ಕೊಂದು ಯುಕ್ತಿ ಇರಲೇಬೇಕಲ್ಲವೇ? ಗೋರಖನಾಥನ ಸರಪಳಿ ಬಲೆಗೂ ಅದನ್ನು ಬಿಡಿಸುವ ಯುಕ್ತಿ ಉಂಟಲ್ಲವೇ? ಅಂಥ ಯುಕ್ತಿಯೊಂದು ಇದೆ. ಅದು ಜೀವನಕಲೆ. ಜೀವನಕಲೆ ಅರಿತವನಿಗೆ ಸಂಸಾರವು ಲೀಲಾಭೂಮಿ! ಅರಿಯದವನಿಗೆ ಕಳ್ಳಹಾದಿಲು. ಬಸವಣ್ಣನು ಅಂಥ ಕಲೆಯನ್ನು ಕಲಿತು, ಇಹದಲ್ಲಿಯೇ ಮಹಾಜೀವನವನ್ನು ನಡೆಯಿಸಿದನು. ಹಸಿವೆ–ತೃಷೆಗಳೂ, ಕಾಮಕ್ರೋಧಾದಿಗಳೂ, ಆಶೆ–ಆಮಿಷಗಳೂ ಬಸವಣ್ಣನನ್ನು ಬಿಟ್ಟಿಲ್ಲ. ಮನಸ್ಸು "ನಾನೊಂದ ನೆನೆದರೆ ತಾನೊಂದ ನೆನೆಯುವದು. ನಾನಿತ್ತ ಎಳೆದರೆ ತಾನತ್ತ ಎಳೆಯುವುದು" ಎಂದೂ, "ಕಾಯವಿಕಾರ ಕಾಡಿಹುದಯ್ಯ; ಮನವಿಕಾರ ಕೂಡಿಹುದಯ್ಯ; ಇಂದ್ರಿಯವಿಕಾರ ಸುಳಿವುದಯ್ಯ" ಎಂದೂ ಗೋಳಿಟ್ಟಿದ್ದಾನೆ.

"ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳಿಂದ ಕಟ್ಟುವಡೆದೆನು;

ಹಸಿವು, ತೃಷೆ, ವ್ಯಸನಗಳಿಂದ ಕುದಿವುತ್ತಿದ್ದೇನೆ;
ಪಂಚೇಂದ್ರಿಯ ಸಪ್ತಧಾತು ಹಂಚುಹರಿಮಾಡಿ ಕಾಡಿಹವಯ್ಯ;
ಅಯ್ಯ! ಅಯ್ಯ! ಎನ್ನ ಹುಯಿಲ ಕೇಳಯ್ಯ;
ಕೂಡಲಸಂಗಮದೇವ! ನಾನೇವೆನಯ್ಯ."

"ಆಶೆ, ಆಮಿಷ, ತಾಮಸ, ಹುಸಿ, ವಿಷಯ, ಕುಟಿಲ, ಕುಹಕ, ಕ್ರೋಧ, ಕ್ಷುದ್ರ, ಮಿಥ್ಯೆ ಇವನ್ನೆನ್ನ ನಾಲಗೆಯ ಮೇಲಿಂದತ್ತ ತೆಗೆದು ಕಳೆಯಯ್ಯ.

"ಅಶನ ಕುಂದದು; ವ್ಯಸನ ಮಾಣದು;
ಅರತವಡಗದು; ವ್ಯವಹಾರ ಮಾಣದು;
ನಾನು ಶರಣನಲ್ಲ...
ಕೂಡಲಸಂಗಮದೇವರಲ್ಲಿ ಅಂತರಬೇತರನಾನಯ್ಯ"
"ವಿಷಯವೆಂಬ ಹಸುರನೆನೆ ಮುಂದೆ ಪಸರಿಸಿದೆಯಯ್ಯ-
ಪಶುವೇನ ಬಲ್ಲದು? ಹಸುರೆಂದೆಳಸುವದು"

ಹೀಗೆ, ಶರೀರ ಪ್ರಾಣಮನಗಳ ವಿಕಾರಗಳಿಗೆ ಒಳಗಾಗುವುದು ಸ್ವಾಭಾವಿಕವಾಗಿದ್ದರೂ, ಅವುಗಳಿಂದ ತಪ್ಪಿಸಿಕೊಳ್ಳುವುದಕ್ಕೆ ಧಡಪಡಿ

ಸುವುದೂ ಜೀವದ ಸ್ವಭಾವವೇ ಆಗಿದೆ. ಆ ಸ್ವಾಭಾವಿಕವಾದ ಕೆಲಸವನ್ನು ಬಸವಣ್ಣನು ಮಾಡಿದನು. ನಮ್ಮವರೊಳಗಿನವನೊಬ್ಬನು ಈ ಸಿಪರಾದ ಪ್ರವಾಹದಲ್ಲಿ ಧುಮ್ಮಿಕ್ಕಲಿಕ್ಕೆ ಹಿಂದಿನವರಿಗೆ ತುಂಬ ಧೈರ್ಯ ಬರುವದು. ಹಿಂದಿನವರಲ್ಲಿ ಧೈರ್ಯವನ್ನೂ, ವಿಶ್ವಾಸವನ್ನೂ, ಶಕ್ತಿಯನ್ನೂ, ಹಟ್ಟಿಸುವ— ಹೆಚ್ಚಿಸುವ ಜೀವನವೇ ಮಹಾಜೀವನ. ಆತ್ಮೋದ್ಧಾರಕ್ಕೆ ಕೈಕೊಡುವ ಆತ್ಮವೇ ಆತ್ಮಬಂಧು. ಅಂಥ ಆತ್ಮಬಂಧುವು ಮಾನವರಿಗೆಲ್ಲ ಬೇಕು. ಬಸವಣ್ಣನಲ್ಲಿ ನಮಗೆ ಬೇಕಾದ ಮಾನವ ಬಾಂಧವ್ಯವು ಬೇಕಾದಷ್ಟಿದೆ. ಅದೇ ಹಾದಿ ಹಿಂದಿನವರಿಗೆ ಅನುಕರಣೀಯ; ಹಾಗೂ ಅನುಸರಣೀಯ. "ಮುಗಿಲಲ್ಲಿ ಹಾರಿದರೂ ಬುವಿಯಲ್ಲಿ ಜಾರುತಿಹ" ಗೆಳೆಯನ ಪಂಥ ನಮಗೆ ಸುಲಭ; ಶಕ್ಯ.

## ವಿಷಾದ ಯೋಗ.

ಬಾಳಿನಕ್ಷಣಿಕತೆ, ಶರೀರದ ನಶ್ವರತೆ, ಮರಣ, ಪ್ರೀತಿಯುವರ ಅಗಲಿಕೆ ಮೊದಲಾದವುಗಳಿಂದ ಮನುಷ್ಯನಲ್ಲಿ ತನ್ನ ಸಲುವಾಗಿ ಇಲ್ಲವೆ ತನ್ನ ಸಂಸಾರದ ಸಲುವಾಗಿ ಬೇಸರ— ತಿರಸ್ಕಾರಗಳು ಹುಟ್ಟುತ್ತಿರುವುದು ಎಲ್ಲರಿಗೂ ಗೊತ್ತಿದೆ. ಆದರೆ ಅವನ್ನು ಮುಳ್ಳಿನಂತೆ ಕಿತ್ತೊಗೆದು ಸಾಗುವರೂ ಉಂಟು; ಸಂಜೀವನೀಕಡ್ಡಿಯಂತೆ ಅವುಗಳಿಂದ ನವಜನ್ಮವನ್ನು ಪಡೆದವರೂ ಉಂಟು. "ಎಂದೋ, ಎಂದೋ ಈ ಸಂಸಾರ ದಂದುಗ ಹಿಂಗುವುದು?'' ಎಂಬ ಕಿರಿಯ ವಾಕ್ಯವೊಂದರಲ್ಲಿ ಜೀವನ ದೆಶೆಯನ್ನೇ ಬದಲಿಸಿಬಿಡುವ ಕೀಲಿಯಿದೆ ''ಸಂಸಾರವೆಂಬುದು ಗಾಳಿಯ ಸೊಡರು. ಸಿರಿಯೆಂಬುದು ಸಂತೆಯ ಮಂದಿ" ಎಂದು ಅನ್ನಿಸಿದ ಪ್ರಾಣಿಯೇ ಸಂಸಾರದ ದಂದುಗಹಿಂಗಿಸುವ ಹೋರಾಟಕ್ಕೆ ಬೀಳುವದು. ಸಂಸಾರದ ಬಲೆ'ಯಲ್ಲಿ ಸಿಲುಕಿದ್ದು ತಿಳಿದವನಿಗೆ— ಜೀವನ ಇರವು ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ, ತೋರಣಕ್ಕೆ ತಂದ ತಳಿರಮೇಯುವ ಹರಕೆಯ ಕುರಿಯಂತೆ, ಇಲಿಗೆ ಅಡಹನೊಡ್ಡಿದಲ್ಲಿ ಇರ್ಪಂತೆ, ಒಂದು ಮೊಲಕ್ಕೆ ನಾಯನೊಂಬತ್ತು ಬಿಟ್ಟಂತೆ" ಅನಿಸುವುದರಲ್ಲಿ ಸಂಶಯವೇನಿದೆ ? 'ಸರ್ವಗ್ರಾಸಿಯಾಗಿ ನುಂಗಬರುವ ಸಂಸಾರವೆಂಬ ರಾಹು' ವಿಗೆ ಹೆದರಿ, ಇಲ್ಲವೆ, 'ಸಂಸಾರಸಾಗರ ಶಿರದುದ್ದವಾದ ಬಳಿಕ' ಜೀವಶಿಶುವು ದಾರಿಗಾಣದೆ ಕಂಗೆಟ್ಟು ನಿಲ್ಲುವುದು ಅರಿದೇ ?

" ವ್ಯಾಧನೊಂದು ಮೊಲನ ತಂದರೆ ಸಲುಗಹಾಗಕ್ಕೆ ಬಿಲೆಗೈಯ್ಯ ರಯ್ಯ;
ನೆಲನಾಳ್ವನ ಹೆಣನೆಂದರೆ ಒಂದಡಿಕೆಗೆ ಕೊಂಬವರಿಲ್ಲ ನೋಡಯ್ಯ;
ಮೊಲನಿಂದ ಕರಕಷ್ಟ ನರನಬಾಳುವೆ"

ಇಂಥ ಆತ್ಮತಿರಸ್ಕಾರವು ಜಗತ್ತಲೆಯುಂತೆ ದಿಕ್ಕುಗೆಡಿಸುವಂತಿದ್ದರೂ ಅದು ಮುಂಬೆಳಗಿನ ಪೂರ್ವಚಿಹ್ನವೆಂದೇ ಭಾವಿಸಬೇಕು. "ಗಿಡದಿಂದ ಬಿದ್ದ ಹಣ್ಣು ನೆಲಕ್ಕೇ ಏಕೆ ಬರಬೇಕು ?" ಎಂಬ ತೊಡಕು ನ್ಯೂಟನನ ತಲೆ ಕೆಡಿಸಿತು; ಅವನ ಬಾಳು ಕೆಡಿಸಿತು; ಅವನ ಸರ್ವಸ್ವವನ್ನೂ ಹಾಳುಹರಿ ಮಾಡಿದರೂ ಹೊಸದಾದ ಯಶೋಜೀವನವನ್ನು ತಂದುಡಿಸಿತಲ್ಲವೇ? ಬಸವಣ್ಣನ ಜೀವನದ ಈ ವಿಷಾದವು ಅವನನ್ನು ಸುಮ್ಮನೆ ಕೂಡಗೊಡಲಿಲ್ಲ. ಗುರಿ ತಗಲಿದ ಮೃಗ ಒಂದಡಿಯುನಿಡುವುದೇ? ಯುಕ್ತಿಯನ್ನು ಅರಸಹಚ್ಚಿತು. ಸಾವಕಾಶವೆಂದರೆ ಜೀವ ಕೇಳದು. "ಸರ್ಪದ ಬಾಯ ಕಪ್ಪೆ" ಯಂತೆ ಮನುಷ್ಯನು ಮರಣಾಧೀನ "ತನುವಿನ ಹೇಳಿಗೆಯಲ್ಲಿದ್ದ ಮನವೆಂಬ ಸರ್ಪವು" ಕಚ್ಚಲಿರುವಾಗ— ಗಾರುಡವನ್ನರಿತುಕೊಂಡಿರಬೇಡವೇ ? ರೋಗವು ಯಾರ ಮನೆಯದು? ಮುಪ್ಪು ಬಿಡಲಾರದ ನಂಟ! ಎಂಬ ಮಾತುಗಳಿಗೆ ಮತಿವಂತರು ಆರೋಗ್ಯನಿಯಮ, ಅಷ್ಟಾಂಗಯೋಗಗಳನ್ನು ಮುಂದೆ ಮಾಡಬಹುದು. ಆದರೆ ಅದೆಷ್ಟು— "ನೀರಬೊಬ್ಬುಳಿಕೆಗೆ ಕಬ್ಬುನದ ಕಟ್ಟುಕೊಟ್ಟು ಸುರಕ್ಷಿತವ ಮಾಡುವ ಭರವು ನೋಡಾ"! ಒಂದು ವೇಳೆ ತುಸು ಸಾಧಿಸಿದರೂ ಅದು "ಕಾಳಬೆಳದಿಂಗಳ ಸಿರಿ" ಮಾತ್ರ. ಆದ್ದರಿಂದ 'ಕೇಡಿಲ್ಲದ ಪದವಿ' ಸಿಗಬೇಕು; ಅದು 'ಪರಮಸಂತೋಷದಲ್ಲಿಪ್ಪ" ವಂತೆ ಮಾಡುವದು. ಸರಿ! ಆದರೆ ಎಂದು? "ಹೊತ್ತು ಹೋಗದ ಮುನ್ನ, ಮೃತ್ಯು ಒಯ್ಯದ ಮುನ್ನ."

" ನೆರೆಕೆನ್ನೆಗೆ, ತೆರೆಗಲ್ಲಕ್ಕೆ, ಶರೀರಗೂಡುವೋಗದ ಮುನ್ನ;
ಹಲ್ಲುಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ;
ಕಾಲಮೇಲೆ ಕೈಯನೂರಿ ಕೋಲಹಿಡಿಯದ ಮುನ್ನ;
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯುಮುಟ್ಟದ ಮುನ್ನ."

ಪ್ರಸವವೇದನೆಗಳು ತೀವ್ರವಾದಂತೆ ಶಿಶುವಿನ ದರ್ಶನವು ಸಮೀಪವಾಗುವದು. ಹಾಗೆಯೇ ಆತ್ಮದ ತೀವ್ರತಿರಸ್ಕಾರವು ಪ್ರಗತಿಯ ಸಾಮೀಪ್ಯವನ್ನು ಸೂಚಿಸುತ್ತದೆ.

## ಚತುರೋಪಾಯ.

ಮನುಷ್ಯನ ಜನ್ಮಸಹ-ಜಗಳಾದ ಶರೀರ, ಪ್ರಾಣ, ಮನಸ್ಸು, ಆತ್ಮ ಈ ನಾಲ್ಕು, ಪುರುಷಾರ್ಥಗಳನ್ನು ಸಾಧಿಸಿಕೊಡುತ್ತವೆ. ಮಾನವನು ಪುರುಷಾರ್ಥಗಳನ್ನಲ್ಲದೆ ಮತ್ತೇನು ಸಾಧಿಸಬೇಕಾಗಿದೆ? "ಪುರುಷಾರ್ಥಂಗಳು ನಾಲ್ಕು ಹೆಚ್ಚೇಂ ಬೇಕು ಗೆಳೆಯಾ" ಧರ್ಮಾರ್ಥ ಕಾಮ ಮೋಕ್ಷಗಳನ್ನು ಬಿಟ್ಟರೆ ಭೂಮಿಯ ಮೇಲೆ ಇನ್ನೇನಿದೆ? ಶರೀರವು ಅರ್ಥವನ್ನೂ, ಮನಸ್ಸು ಧರ್ಮವನ್ನೂ ಗಳಿಸಲು ತಕ್ಕವಾಗಿವೆ! ಅದರಂತೆ ಪ್ರಾಣವು, ಕಾಮವನ್ನು ಪ್ರೇಮದಲ್ಲಿಯೂ, ಆತ್ಮವು ಮೋಕ್ಷವನ್ನು ಜೀವನ್ಮುಕ್ತಿಯಲ್ಲಿಯೂ ರೂಪಾಂತರಿಸಬಲ್ಲವೆಂದು ತೋರುತ್ತದೆ. ಬಸವಣ್ಣನ ಇಡಿಯ ಜೀವನವನ್ನು ಪರೀಕ್ಷಿಸಿದರೆ, ಅತನು ಇವೇ ನಾಲ್ಕನ್ನು ಸಾಧಿಸುವ ಚತುರೋಪಾಯಗಳನ್ನು ಕೈಕೊಂಡಿದ್ದನೆಂದು ತಿಳಿಯುತ್ತದೆ; ಅಂತೇ ಆ ಜೀವನ ಸರ್ವಾಂಗಸುಂದರವಾಯ್ತೆನ್ನಬೇಕು. ಅದನ್ನು ಅನುಸರಿಸಿದ ಸಮಾಜವೂ ಪರಿಪೂರ್ಣದೆಶೆಗೆ ಸಮೀಪಿಸಿತೆನ್ನಲು ಅಡ್ಡಿ ಇಲ್ಲ. ಶರೀರ, ಪ್ರಾಣ, ಮನಸ್ಸು, ಆತ್ಮ ಇವುಗಳಲ್ಲಿ ಮನಸ್ಸು ಆತ್ಮಗಳು ಸೂಕ್ಷ್ಮತರವೂ ಸೂಕ್ಷ್ಮತಮವೂ ಆಗಿವೆಯೆಂದು ಹೇಳುತ್ತಾರೆ. ಬಸವಣ್ಣನ ಜೀವನದಲ್ಲಿ ಅವೇ ಮೊದಲು ಸಂಸ್ಕರಣ ಹೊಂದಿದವು. ಬಾಗೇವಾಡಿಯಿಂದ ಓಡಿಬಂದು, ಕಪ್ಪಡಿಸಂಗಮದಲ್ಲಿ ನೆಲಿಸಿದ ಬಳಿಕ, ಅತನು ಗುರುವಿನ ಸಹಾಯದಿಂದಲೇ ಆಗಲಿ, ದೇವದೇವನ ಕೃಪೆಯಿಂದಲೇ ಆಗಲಿ ಧರ್ಮಗ್ರಂಥಗಳ ಅಧ್ಯಯನವನ್ನೂ, ಅಧ್ಯಾತ್ಮಸಾಧನೆಯನ್ನೂ ಕೈಕೊಂಡನೆಂದು ತಿಳಿಯುತ್ತದೆ. ಅದರಿಂದ ಅವನ ಬುದ್ಧಿಯು ಧರ್ಮವನ್ನೂ ಆತ್ಮವು ಮೋಕ್ಷವನ್ನೂ ಸಾಧಿಸಲು ತೊಡಗಿದವು ಸಮರ್ಪಿತ ಆತ್ಮಕ್ಕೆ ಕೂಡಲಸಂಗಮದೇವನು ತನ್ನನ್ನೇ ತಾನು ದಾನವಾಗಿತ್ತನು. "ನಿಂದಲ್ಲಿ ನಿಂದಪೆಂ; ಕುಳಿತಲ್ಲಿ ಕುಳಿತಪೆಂ ಪಿಡಿದುದಂ ಪಿಡಿದಪೆಂ ಮಾಣ್ಬುದಂ ಮಾಣ್ದಪೆಂ" ಎಂದು ಕೂಡಲಸಂಗನು ನುಡಿದನೆಂಬುದರಲ್ಲಿ ಅತಿಶಯವೇನು? ಹೀಗೆ, ಬಾಗೇವಾಡಿಯ ಬಸವನು ಸಂಗನಬಸವನಾದ ಬಳಿಕ, ಬುದ್ಧಿಯ ಧರ್ಮಸಾಧನವೂ ಸಹಜವಾಗಬೇಕು.

"ಯೋಗವಾಗಲಿ ಭೋಗವಾಗಲಿ ನಿನ್ನ ಸಂಯೋಗವಾದರೆ ತಾನೆ ಮುಕ್ತಿ" ಯಷ್ಟೇ? ಸಂಗನ ಸಂಯೋಗವು ಬಸವಣ್ಣನಿಗೆ ಮುಕ್ತಿ ಅಂದರೆ ಜೀವನ್ಮುಕ್ತಿಯನ್ನು ಒದಗಿಸಿಕೊಟ್ಟಿತು. ಬಸವನೆಂಬ ಹಾಲು ಹಾಲಾಗಿ ಉಳಿಯದೆ ಕಾಯ್ದು, ಹೆಪ್ಪು ಬೆರತು, ಮೊಸರಾಗಿ ಕಡೆದ ಬೆಣ್ಣೆಯಂತೆ ಸಂಸಾರಸಾಗರದಲ್ಲಿ ಘುಮ್ಮಿಕ್ಕಿತು. ಆಗ ಅದಕ್ಕೆ ಮುಳುಗುವ ಭಯ ವೆಲ್ಲಿ? ಹಾಲಿನಂತೆ ಬೆರತುಹೋಗುವ ಬೆದರಿಕೆಯೆಲ್ಲಿ? ಹೀಗೆ, ಕಪ್ಪಡಿ ಸಂಗಮ ಜೀವನವು ಸಂಜೀವನಿಯನ್ನು ಗಳಿಸಿದ ಮೇಲೆ, ಆತನು ಜಗ ನ್ನಾಥನ ರಥವಾದನು. ಜಗನ್ನಾಥನು ಆ ರಥವನ್ನು ಆದರ ಕಲ್ಯಾಣ ಕ್ಕಾಗಿಯೂ, ನಾಡಕಲ್ಯಾಣಕ್ಕಾಗಿಯೂ ಬಿಜ್ಜಳಭೂಪನ ಕಲ್ಯಾಣಪಟ್ಟ ಣಕ್ಕೆ ಎಳತಂದನು. ಅಲ್ಲಿ ಬಸವಣ್ಣನು ಮತ್ತೆರಡು ಪೌರುಷಗಳನ್ನು ಸಾಧಿಸಲು ನಡುಗಟ್ಟಿದನು. ಮೊದಲು ಕರಣಿಕನೂ, ಬಳಿಕ ಮಂತ್ರಿ ಯೂ ಆಗಿ, ಶರೀರವನ್ನು ದುಡಿಸಿ ಅರ್ಥವನ್ನು ಸಾಧಿಸಿದನು; ಮಡದಿ ಮಕ್ಕಳಲ್ಲಿ ಊರಿದ ಮೋಹದ ಮೊಳಕೆಯು ಮಮತೆಯಲ್ಲಿಯೂ, ಬಳಿಕ ತನ್ನ ಸಮಾಜದ ಕಲ್ಯಾಣಕ್ಕಾಗಿ ಸೇವೆಯಲ್ಲಿಯೂ, ಕೊನೆಗೆ ಎಲ್ಲರಲ್ಲಿಯೂ ತಾನೆಂಬ ಪ್ರೇಮದಲ್ಲಿಯೂ ರೂಪಾಂತರಿಸುವ ಕಾಮ ವನ್ನು ಪ್ರಾಣದಿಂದ ಸಾಧಿಸಿದನು. ರಾಜಕಾರಣದಲ್ಲಿ ಸಾಮದಾನ ಭೇದ ದಂಡುಗಳು ಚತುರೋಪಾಯಗಳಾಗಿರುವಂತೆ, ಜೀವನಯೋಗ ದಲ್ಲಿ ನಾಲ್ಕು ಪುರುಷಾರ್ಥಗಳನ್ನು ಸಾಧಿಸುವ ಯುಕ್ತಿಗಳೂ ಚತು ರೋಪಾಯಗಳೇ ಸೈ. ಈ ಚತುರೋಪಾಯಗಳಲ್ಲಿ ಧರ್ಮ-ಮೋಕ್ಷಗಳು ಸಂಜೀವನಸಾಧನಗಳಾಗಿಯೂ ಅರ್ಥಕಾಮಗಳು ಮಹಾಜೀವನಸಾಧ ನಗಳಾಗಿಯೂ ಬಸವಣ್ಣನಿಗೆ ಪರಿಣಮಿಸಿದವು. ಮೊದಲಿನವೆರಡು ಗಳಿ ಕೆಯ ಹಾದಿ; ಹಿಂದಿನವೆರಡು ಬಳಕೆಯ ರೀತಿ ಬಸವಣ್ಣನು ಜೀವ ನೌಕೆಯಲ್ಲಿ ಸಮತೋಲವನ್ನು ತರುವ ಈ ಚತುರೋಪಾಯಗಳನ್ನು ಬಲ್ಲ ಚತುರನಾಗಿದ್ದನು.

## ಜೀವನವೇ ತಪೋಭೂಮಿ.

ಬಸವಣ್ಣನು ಈ ಸಿದ್ಧಿಗಾಗಿ ಯಾವಕಾಡಿಗೂ ಹೋಗಲಿಲ್ಲ; ಜೀವ ನದ ಯಾವ ವ್ಯವಹಾರವನ್ನೂ ತೊರೆಯಲಿಲ್ಲ. ವಿದ್ಯಾರ್ಥಿಯಾಗಿ ವಿದ್ಯೆ ಗಳಿಸಿದನು; ಅರ್ಚಕನಾಗಿ ದೇವನನ್ನೊಲಿಸಿದನು; ಮಡದಿಮಕ್ಕಳಲ್ಲಿ ಮೋಹವನ್ನು ಊರಿದನು ಕಾಯಕ ಕೈಕೊಂಡನು; ಹಣ ಗಳಿಸಿದನು;

ಅತಿಥಿಸತ್ಕಾರ ಮಾಡಿದನ; ಸಾಮಾಜಿಕ ಕುಂದುಕೊರತೆಗಳಿಗೆ ನೊಂದನು; ಸೇವೆಗಾಗಿ ನಡುಗಟ್ಟಿದನು; ನಿಂದೆಗೆ ಬೆನ್ನುಕೊಟ್ಟನು; ತನ್ನವರ ಹಳಿವೆಯನ್ನು ಮೆಟ್ಟಿನಿಂತನು; ಕುಲ ಕೆಡಿಸಿದನು; ಕುಲ ಕೊಟ್ಟನು. ಈ ಬಗೆಯಾಗಿ ಬಸವಣ್ಣನಿಗೆ ನಡೆದುದೇ ಹಾದಿ, ನುಡಿದುದೇ ವೇದವಾಯ್ತು. ಕೂಡಲಸಂಗನ ಸಂಗದಿಂದ ಜೀವನವು ಬರಿಯ ಜೀವನವಾಗದೆ, ಆತನಿಗೆ ತಪೋಭೂಮಿಯಾಯ್ತು. ಬಲ್ಮೆಯಿಲ್ಲದ ಕೆಲಸವು ಆಟವೂ, ಬಲ್ಮೆವೆತ್ತ ಆಟವು ಕೆಲಸವೂ ಆಗಿ ಪರಿಣಮಿಸುತ್ತವಂತೆ. ನಡೆಯು ಶರಣಮಾರ್ಗ; ನುಡಿಯು ವೇದವಚನ. ಇವು ಬಸವಣ್ಣನಂಥ ಜೀವಜ್ಯೋತಿಗಳಿಗೆ ಹಾಕಿಕೊಟ್ಟ ಜಹಗೀರು. ಇಷ್ಟೆಲ್ಲ ಅನುಗ್ರಹಿಸಿದವನು ದೇವದೇವನಾದರೂ ಅದನ್ನು ಆಕಾಂಕ್ಷಿಸಿ ಹಲಬುವ "ಅಯ್ಯಾ! ಅಯ್ಯಾ! ಎಂದು ಒರಲುತ್ತಿದ್ದೇನೆ; ಓ! ಎನ್ನಲಾಗದೇ ಅಯ್ಯಾ?" ಎನ್ನುವ ಮರಿಬೆಕ್ಕಿನಂತೆ ಮಾನವನ ಇರವಾಗಬೇಕು.

"ಕೋಡಂಗಿಯಾಟವಾಡಿದರೆ, ಬೇಡಿದ್ದನೀವ ಕೂಡಲಸಂಗಮದೇವ" ಎಂಬುದನ್ನರಿತವನು ಬಸವಣ್ಣ. ಅಂತೇ ಆತನು "ಮರೆತ ಮಾನವನಲ್ಲ, ಅರಿತ ಶರಣ."

---

# ವೇದಾಭ್ಯಾಸ.

(ಮಧುರಚೆನ್ನ ಹಲಸಂಗಿ.)

ವೇದಗಳು ನಾಲ್ಕಷ್ಟೆ? ಕೆಲಕಾಲ ಮೂರೇ ವೇದಗಳೆಂದು ಖ್ಯಾತಿಯಿದ್ದಿತು. ಅಥರ್ವಣವನ್ನು ಎಣಿಕೆಯಲ್ಲಿ ಹಿಡಿಯುತ್ತಲೇ ಇರಲಿಲ್ಲ. ನಿಜವಾಗಿ ನೋಡಿದರೆ ಅದೂ ವೇದವೇ.

ನಾನು ವೇದಗಳ ಕಡೆಗೆ ಹೊರಳಿ ನೋಡುವುದಕ್ಕೆ ಒಂದು ಕಾರಣವುಂಟಾಯಿತು. ಭಗವಾನ್ ಶ್ರೀಅರವಿಂದರ ಮೇಧಾವೀ ಶಿಷ್ಯರಲ್ಲೊಬ್ಬರಾದ ಶ್ರೀ. ನಲಿನೀಕಾಂತ ಗುಪ್ತರೆಂಬವರು ಋಗ್ವೇದದ ಆರಂಭದ ಹತ್ತೇ ಸೂಕ್ತಗಳ (ಸುಮಾರು ೧೦೦ ಮಂತ್ರಗಳ) ಅನುವಾದ ಮತ್ತು ವಿವರಣೆಗಳನ್ನು ಒಳಗೊಂಡ ಪುಸ್ತಕವೊಂದನ್ನು ಬಂಗಾಲೀ ಭಾಷೆಯಲ್ಲಿ

ಬರೆದಿದ್ದಾರೆ. ೧೯೨೬ ರಲ್ಲಿ ಅದನ್ನು ನಾನು ನೋಡಿದಾಗ, ಅದಕ್ಕಿಂತ ಮೊದಲೇ ನನಗೆ ವೇದಗಳ ಬಗೆಗೆ ಗೊತ್ತಾಗಿದ್ದ ಅಲ್ಪಸ್ವಲ್ಪ ತಿಳುವಳಿಕೆಯು ನೆಲೆಯೋ ಹಾರಿತು. ಇಂಗ್ಲೀಷ ಅನುವಾದಗಳ ಆಧಾರದ ಮೇಲಿಂದ ವೇದಗಳೆಂದರೆ ನಿಸರ್ಗಶಕ್ತಿಗಳ ಪ್ರಾರ್ಥನಾಸಂಗ್ರಹವೆಂದು ದೇಶೀಯ ಪಂಡಿತರಲ್ಲಿ ಒಬ್ಬಿಬ್ಬರು ಬರೆದಿರುವದನ್ನು ಅಲ್ಪಸ್ವಲ್ಪವಾಗಿ ನಾನೆಲ್ಲಿಯೋ ಓದಿದ್ದೆನು. ಆದರೆ ಈ ಬಂಗಾಲೀ ಪುಸ್ತಕದ ಸುದೀರ್ಘವಾದ ಪ್ರಸ್ತಾವನೆಯಲ್ಲಿ ಮೇಲ್ಕಂಡ ಅಭಿಪ್ರಾಯಗಳನ್ನು ಖಂಡಿಸಿ, ವೇದಗಳಲ್ಲಿ ಆಳವಾದ ಅಧ್ಯಾತ್ಮವಿದೆಯೆಂದು ಪ್ರತಿಪಾದಿಸಲಾಗಿದೆ.

ನನ್ನದೊಂದು ಸ್ವಭಾವವೇ ಬೇರೆ. ಪ್ರಚಲಿತ ಅಭಿಪ್ರಾಯಕ್ಕೆ ವಿರುದ್ಧವಾಗಿ ಯಾರು ಏನೇ ಪ್ರತಿಪಾದಿಸಿದರೂ, ಇವರ ಅಭಿಪ್ರಾಯವಾದರೂ ಸತ್ಯದ ತಳಹದಿಯ ಮೇಲೆ ಕಟ್ಟಲ್ಪಟ್ಟಿದೆಯೆಂಬುದು ಏತರ ಮೇಲಿಂದ?—ಎಂಬ ಪ್ರಶ್ನವು ನನ್ನ ತಲೆಯಲ್ಲಿ ಥಟ್ಟನೆ ಮೂಡಿತೆಂದೇ ತಿಳಿಯಬೇಕು ಶ್ರೀ. ನಲಿನೀಕಾಂತರ ಪ್ರತಿಪಾದನೆಯೇನೋ ನನಗೆ ಬಹಳ ಸೇರಿತಾದರೂ ಅದರ ಸತ್ಯಾಸತ್ಯತೆಯನ್ನು ಮನಗಾಣುವುದಕ್ಕೆ ಮನಸ್ಸು ಹಾತೊರೆಯತೊಡಗಿತು. ಆದರೆ ವೇದಗಳಂಥ ಗಹನಗ್ರಂಥಗಳ ಪರಿಶೀಲನದ ಬಗೆಯು ಹೇಗೆ??

ಶ್ರೀ. ನಲಿನೀಕಾಂತರ ಪ್ರಸ್ತಾವನೆಯಲ್ಲಿಯೇ ಒಂದು ಅಪೂರ್ವವಾದ ಸೂಚನೆಯಿದ್ದಿತು. ಅದು ಹೀಗೆ: – "ಮೂಲ ವೇದಗಳಲ್ಲಿ ಸಹಜವಾಗಿ ಅರ್ಥವಾಗುವಂಥ ಸುಲಭಸೂತ್ರಗಳು ಸಹ ಎಷ್ಟೋ ಇವೆ. ಮೊದಲಿಗೆ ಇಂಥ ಮಂತ್ರಗಳನ್ನು ಮನನ ಮಾಡಿಕೊಂಡು ಬಳಿಕ ಬೇರೆ ಮಂತ್ರಗಳನ್ನು ಪರಿಶೀಲಿಸಲಾರಂಭಿಸಿದರೆ, ಮೊದಲಿನವುಗಳ ಸಹಾಯದಿಂದ ಈಗ ಇವುಗಳಲ್ಲಿಯೂ ಕೂಡ ಅರ್ಥದ್ಯೋತನವಾದಂತಾಗುವದು. ಹೀಗೆಯೇ ಸಾಗಿದರೆ ಕೊನೆಗೆ ವೇದದಲ್ಲಿ ಅರ್ಥವಾಗದ ಭಾಗವು ಬಹಳವೇನೂ ಉಳಿಯಲಾರದು."

ಈ ಅಭ್ಯಾಸಪದ್ಧತಿಯು ನನಗೆ ಬಹಳ ಸಯುಕ್ತಿಕವೆನಿಸಿತು. "ಮಧುಚ್ಛಂದಾ ಋಷಿಯ ಮಂತ್ರಮಾಲೆ"ಯೆಂಬ— ಶ್ರೀ ನಲಿನೀಕಾಂತರ, ಬಂಗಾಲೀ ಪುಸ್ತಕದಿಂದಲೇ ಅಭ್ಯಾಸಕ್ಕೆ ಮೊದಲು ಮಾಡಿದೆನು.

ಈ ಮೊದಲೇ ಮರಾಠೀ ಅರ್ಥವುಳ್ಳ ಋಗ್ವೇದದ ಸುಮಾರು ನೂರಾಐವತ್ತು ಸೂಕ್ತಗಳುಳ್ಳ ( ಒಂದು ಮಾಸಿಕದ ) ಕೆಲವು ಸಂಚಿ

ಕೆಗಳನ್ನು ೧೯೨೨ ರಲ್ಲೇ ಒಬ್ಬ ಮಹರ್ಷಿಯರ ಕಡೆಯಿಂದ—ಎಂದಾದರೂ ಉಪಯೋಗಕ್ಕೆ ಬರಬಹುದೆಂದು ಸಂಗ್ರಹಿಸಿ ತಂದು ಕಟ್ಟಿ ಇಟ್ಟಿದ್ದೆನು. ಅವುಗಳನ್ನೆಲ್ಲ ಈಗ ಹೊರಗೆ ತಗೆದೆನು.

ಇದಲ್ಲದೆ ಗೆಳೆಯ ಬೇಂದ್ರೆಯವರ ಬಳಿಯಲ್ಲಿ ಇನ್ನೂ ಹಲಕೆಲವು ಬೇರೆ ಅನುವಾದಗಳು ನೋಡಲಿಕ್ಕೆ ಸಿಕ್ಕವು. ಒಂದೆರಡು ವರುಷ ಅಭ್ಯಾಸ ಮಾಡಲಾಗಿ ಅಲ್ಪ ಸ್ವಲ್ಪ ವೈದಿಕ ಭಾಷಾ ಪರಿಚಯವೂ ಆಯಿತು; ಮತ್ತು ಹಲಕೆಲವೆಡೆಯಲ್ಲಾದರೂ ಸ್ಪಷ್ಟ ಅಧ್ಯಾತ್ಮವಿದೆ ಯೆಂದು ಗೊತ್ತಾಯಿತು.

ಆದರೆ ವೇದಗಳಂಥ ಮಹಾಸಾಗರಗಳನ್ನು ಮಥಿಸುವುದು ನನ್ನಂಥವನ ಅತ್ಯಲ್ಪ ಶಕ್ತಿಗೆ ಮೀರಿದ ಮಾತಾದ್ದರಿಂದ ನಾನಿವುಗಳ ಅಭ್ಯಾಸವನ್ನು ಹೆಚ್ಚಿಗೆ ಮಾಡುವ ಗೊಡವೆಗೆ ಹೋಗಬಾರದೆಂದು ನಿರ್ಧರಿಸಿದ್ದೆನು.

ಹೀಗೆ ಐದಾರು ವರುಷಗಳು ಗತಿಸಿದವು. ಆದರೆ ೧೯೩೫ ರಲ್ಲಿ ನಾನೊಮ್ಮೆ ಹೊಲದಲ್ಲಿದ್ದಾಗ ಆಡವಿಯ ಒಲೆಯೊಳಗಿನ ಬೆಂಕಿಯು ನನಗೆ ಸುಮ್ಮ ಸುಮ್ಮನೆ ಬಹಳ ಸುಂದರವಾಗಿ ಕಾಣಿಸತೊಡಗಿತು. ಆಗ ಋಗ್ವೇದದ ಪ್ರಥಮ ಮಂತ್ರದಲ್ಲಿ ಅಗ್ನಿಗೆ "ರತ್ನಧಾತಮಂ" ಎಂದು ವರ್ಣಿಸಿದ್ದು ನೆನಪಿಗೆ ಬಂತು. ಆ ಮೇಲೆ ಅಗ್ನಿ ಮಂತ್ರಗಳನ್ನು ಹೆಚ್ಚಾಗಿ ನೋಡಬೇಕೆಂದು ಪುನಃ ಲವಲವಿಕೆಯುಂಟಾಯಿತು. ನನ್ನ ಕಡೆಗಿದ್ದಷ್ಟೇ ಸಂಗ್ರಹವನ್ನು ಹರಿಸತೊಡಗಿದೆನು. ಋಷಿ ಪರಾಶರನ ಅಗ್ನಿಸೂಕ್ತಗಳನ್ನು ನೋಡಿದ ಬಳಿಕ ನನಗಾದ ಸಂತೋಷಕ್ಕೆ ಪಾರಾವಾರವೇ ಉಳಿಯಲಿಲ್ಲ. ಆ ಸೂಕ್ತಗಳು ಅಷ್ಟು ರಸಭರಿತವೂ ಅನುಭಾವ ಪೂರ್ಣವೂ ಆಗಿದ್ದವು.

ಅದೇ ವರ್ಷ ಕೆಲದಿನಗಳ ಮೇಲೆ ಪಿಂಡಾಂಡದೊಳಗಿನ ಕೆಲವೊಂದು ಶಕ್ತಿಗಳ ಸಂಖ್ಯೆಗೂ ವೇದದೊಳಗಿನ "ಮರುತಿ" ದೇವತೆಗಳ ಸಂಖ್ಯೆಗೂ ಸಾಮ್ಯ ಕಲ್ಪನೆಯಾದುದರಿಂದ ಪುನಃ ನನ್ನ ಅಭ್ಯಾಸಕ್ಕೆ ಹೊಸ ಹುರುಪು ಹುಟ್ಟಿತು. ಹೀಗಾಗಿ ನನ್ನ ಬಳಿಯಲ್ಲಿದ್ದ ಸಂಗ್ರಹದೊಳಗಿಂದ ಮರುತ್ ಸೂಕ್ತಗಳನ್ನು ಆರಿಸಿಕೊಂಡು ಕೂಲಂಕಷವಾಗಿ ಓದತೊಡಗಿದೆನೆಂಬುದು ಸಹಜವೆ.

ಅನಂತರ ಮರುತರಿಗೂ ಇಂದ್ರನಿಗೂ ಅಕಾಟ್ಟ ಸಂಬಂಧವಿದೆ
ಯೆಂದು ಕಂಡುಬಂದಬಳಿಕ ನನ್ನ ಸಂಗ್ರಹದೊಳಗಿದ್ದಷ್ಟರೊಳಗಿಂದಲೇ
ಇಂದ್ರಸೂಕ್ತಗಳನ್ನೆಲ್ಲ ನೋಡುವ ಆಶೆ ಹುಟ್ಟಿತು.

ಆದರೆ ಮರೆತುಳಿದ ಮಾತೇನೆಂದರೆ, ತೀರ ಮೊದಮೊದಲೇ
ಸೃಷ್ಟಿಸೌಂದರ್ಯದ ಅನುರಾಗವಶನಾಗಿ ಉಷಾಸೂಕ್ತಗಳನ್ನಂತೂ
ಆರಂಭದ ಅಭ್ಯಾಸ ಕಾಲದಲ್ಲಿಯೇ ನೋಡಿದ್ದೆನು. ಹಾಗೂ ಹೀಗೂ
ಆಗಿ ನನ್ನ ಕಡೆಗಿದ್ದ ಸಂಗ್ರಹದ ಬಹು ಭಾಗವು ಮುಗಿದಂತಾದದ್ದು
ಕಂಡುಬರಲು ಅದರೊಳಗಿನ ಇನ್ನುಳಿದ ಸ್ವಲ್ಪ ಸೂಕ್ತಗಳನ್ನಿಷ್ಟು ನೋಡಿ
ಬಿಡೋಣವೆಂದು ನಿರ್ಧರಿಸಿ ಉಳಿದ ದೇವತೆಗಳ ಸೂಕ್ತಗಳನ್ನೂ ನೋಡಿ
ದೆನು. ಹೀಗೆ ೧೯೩೭ ರ ಫೆಬ್ರುವರಿ ೨೧ನೆಯ ತಾರೀಖಿಗೆ ನನ್ನ ಬಳಿ
ಯಲ್ಲಿದ್ದ ಸುಮಾರು ಒಂದು ಸಾವಿರ ಮಂತ್ರಗಳ ಇಡಿ ಸಂಗ್ರಹವನ್ನು
ಹಾಗೂ ಹೀಗೂ ಅಭ್ಯಸಿಸಿದಂತಾಯಿತು.

ಇಷ್ಟೆಲ್ಲ ಅಭ್ಯಾಸದಿಂದ ನನಗೆ ವೇದಗಳ ಭಾಷಾಪರಿಚಯವು
ಇನ್ನೊಂದಿಷ್ಟು ಹೆಚ್ಚಾಯಿತು; ಮತ್ತು ವೈದಿಕ ಋಷಿಗಳ ಬಗೆಗೆ ಆದ
ರವು ವೃದ್ಧಿಂಗತವಾಯಿತು.

ಅಂತೂ ಋಗ್ವೇದದ ಪರಿಚಯವು ತಕ್ಕಷ್ಟು ಆದಂತಾಯಿತು.
ಆ ಮೇಲೆ ಬೇರೆ ವೇದಗಳ ಕಡೆಗೆ ಮನಸ್ಸು ಎಳೆಯಲಾರಂಭಿ
ಸಿತು. ನಮ್ಮೂರಲ್ಲಿ ವೇದಾಧ್ಯಾಯಿಗಳಾದ ಮುಷ್ಟಿನ ಭಟ್ಟರೊಬ್ಬ
ರಿರುವರು. ಅವರು ಬಹಳ ಸಾತ್ವಿಕರಿದ್ದದರಿಂದ ನನ್ನ ಪ್ರೀತಿ ಅವರ-
ಮೇಲೆ ಹೆಚ್ಚು. ಅದರಂತೆ ನಾನು ಶಾಸ್ತ್ರಾಧ್ಯಯನಶೀಲನೆಂಬ ಕಾರ
ಣದಿಂದ ನನ್ನ ಮೇಲೆ ಅವರ ಪ್ರೇಮವೂ ಅತಿಶಯ. ಆದುದರಿಂದ
ಇವರ ಬಳಿಯಲ್ಲಿದ್ದ ಯಜುರ್ವೇದದ ಹಸ್ತಲಿಖಿತ ಪ್ರತಿಯನ್ನು ದೊರ
ಕಿಸುವದಕ್ಕೆ ನನಗೆ ಅನುಕೂಲವಾಯಿತು. ತಿಳಿಯಲಿ, ತಿಳಿಯದಿರಲಿ
ಅದನ್ನೊಮ್ಮೆ ನೋಡಿ ಮುಗಿಸಿದ ಬಳಿಕ ಅನಿಸಿದ್ದೇನಂದರೆ: —

ಯಜುರ್ವೇದದಲ್ಲಿಯೂ ಸ್ತೋತ್ರಮಂತ್ರಗಳೇ ಹೆಚ್ಚಾಗಿ ಉಂಟು.
ಅಲ್ಲದೆ ಪ್ರತ್ಯಕ್ಷ ಋಗ್ವೇದದೊಳಗಿನ ಮಂತ್ರಗಳೆಷ್ಟೋ ನಡುನಡುವೆ
ಆಧಾರರೂಪದಿಂದ ಬಂದಿರುವವು. ಆದರೆ ಅಲ್ಲಲ್ಲಿ ಬರುವ ಗದ್ಯಭಾಗವು
ಈ ವೇದದ ವಿಶಿಷ್ಟ ಅಂಶವೆಂದು ತೋರಿತು. ರುದ್ರಾಧ್ಯಾಯವೆಂದು

ಈಗ ಎಲ್ಲ ಕಡೆಗೆ ಪ್ರಚಾರದಲ್ಲಿರುವ ಭಾಗವು ಈ ವೇದದ ಇಂಥ ಅಂಶಗಳಲ್ಲೊಂದಾಗಿದೆ.

ಮುಂದೆ ಕೆಲ ದಿನಗಳಲ್ಲಿ ಶ್ರೀ ಬೇಂದ್ರೆಯವರಲ್ಲಿ ಸಾಮವೇದವನ್ನು ನೋಡಿದೆ. ಇದರಲ್ಲಿ ಋಗ್ವೇದದ ಮಂತ್ರಗಳನ್ನೇ ಒಂದು ವಿಶಿಷ್ಟಕ್ರಮದಲ್ಲಿ ಆರಿಸಿ ಸಂಗ್ರಹಿಸಿದ್ದಾರೆ ಸಂಗ್ರಹಕಾರರ ಔಚಿತ್ಯವು ವರ್ಣನೀಯವಾಗಿದೆ. ಋಗ್ವೇದದೊಳಗಿಲ್ಲದ ಮಂತ್ರಗಳೂ ಇದರಲ್ಲಿ ತುಸು ಇವೆ. ಆದರೆ ಬಹಳೇ ಸ್ವಲ್ಪ. ವೈದಿಕ ಸಂಗೀತಪದ್ಧತಿಯಿಂದ ಹಾಡಲಿಕ್ಕೆ ಬರುವಂತೆ ಈ ವೇದದ ಮಂತ್ರಗಳ ಮೇಲ್ಗಡೆಗೆ ಸಾಂಕೇತಿಕವಾಗಿ ಸ್ವರಸೂಚಕ ಅಂಕೆಗಳನ್ನು ಒರೆದಿರುತ್ತಾರೆ.

ಮೊನ್ನೆಮೊನ್ನೆ ಪ್ರೊ. ಮಾಳವಾಡ ಮಹಾಶಯರು ನನ್ನದೊಂದು ಲೇಖನವನ್ನು ತಮ್ಮ ಪುಸ್ತಕದಲ್ಲಿ (ಗದ್ಯಮಾಲೆಯಲ್ಲಿ) ತೆಗೆದುಕೊಂಡುದರ ಪ್ರತಿಫಲಸ್ವರೂಪವಾಗಿ ನನಗೆ ಸಂತೋಷ ಧನವನ್ನೊಂದಿಷ್ಟು ಕೊಡತಕ್ಕವರಿದ್ದರು. ನಾನವರಿಗೆ ಹಣಕ್ಕೆ ಬದಲಾಗಿ ವೇದಗ್ರಂಥಗಳನ್ನು ಕೊಂಡು ಕಳಿಸಬೇಕೆಂದು ಕೇಳಿಕೊಂಡೆನು ಆ ಮೇರೆಗೆ ಅವರು ಅಥರ್ವಣ, ಸಾಮ ಮತ್ತು ಯಜುರ್ವೇದ ಹೀಗೆ ಮೂರು ವೇದಗಳನ್ನು ಕಳುಹಿಸಿಕೊಟ್ಟರು. ಇದರಿಂದ ನನ್ನ ಅಧ್ಯಾಸಕ್ಕೆ ಇನ್ನಿಷ್ಟು ಅನುಕೂಲವಾದುದಲ್ಲದೆ ನಾನು ನೋಡದೆ ಉಳಿದಿದ್ದ ಅಥರ್ವಣ ವೇದವನ್ನು ನೋಡುವುದಕ್ಕೂ ಆಯಿತು.

ಅಥರ್ವಣವೇದವೂ ಋಗ್ವೇದದಂತೆ ಪ್ರಕಾಂಡ ಗ್ರಂಥವಾಗಿದೆ. ಇದರಲ್ಲಿ ಮುಖ್ಯವಾಗಿ ಅಥರ್ವಋಷಿಯ ಮಂತ್ರಗಳೇ ಮುಕ್ಕಾಲು ಮೂರು ಪಾಲಾಗಿವೆ. ಇದರಲ್ಲಿ ಐಹಿಕ ಪ್ರಯೋಜನಾರ್ಥವಾಗಿ ಗೈದ ದೇವತಾ ಪ್ರಾರ್ಥನೆಗಳು ಅನೇಕವಾಗಿ ಇವೆ. ಆದರೆ ಪ್ರತ್ಯಕ್ಷ ಅಧ್ಯಾತ್ಮವನ್ನೇ ಪ್ರತಿಪಾದಿಸುವ ಸೂಕ್ತಗಳೂ ಹೇರಳವಾಗಿಯೇ ಇವೆ. ಸರ್ವಾಧಾರ ಸೂಕ್ತವು ಇಂಥವುಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದು ಇದಲ್ಲದೆ ಭೂಮಿ ಸೂಕ್ತದೊಳಗಿನ ಕಾವ್ಯಝರಿಯು ಬೆರಗುಗೊಳಿಸುವಂತಹದಾಗಿದೆ.

ಹಿಂದಕ್ಕೆ ಶ್ರೀ ಅರವಿಂದರ "ಆರ್ಯ" ಮಾಸಪತ್ರಿಕೆಯಲ್ಲಿ "ಸಿಕ್ರೆಟ್ ಆಫ್ ದಿ ವೇದ" (ವೇದರಹಸ್ಯ) ಎಂಬ ಲೇಖನ ಮಾಲೆಯೊಂದು ಪ್ರಕಟವಾಗಿದೆ. ಅದರ ಆಧಾರದ ಮೇಲೆ ಶ್ರೀ ನಲಿನೀಕಾಂತರ ಬಂಗಾಲೀ ಗ್ರಂಥವು ಸ್ವತಂತ್ರವಾಗಿ ರಚಿತವಾಗಿರುವದರಿಂದ ಇದರ

ಮೂಲಾಧಾರ ಗ್ರಂಥವಾದ "ವೇದರಹಸ್ಯ" ದ ಸ್ವಲ್ಪ ಭಾಗವನ್ನು ಆರ್ಯದ ಸಂಪುಟಗಳಲ್ಲಿ ಎರಡು ಮೂರು ವರ್ಷಗಳ ಹಿಂದೆ ನೋಡುವ ಸೌಭಾಗ್ಯ ಲಭಿಸಿತು. ಅದರಿಂದ ಅವರ ವೈದಿಕ ಅಧ್ಯಾತ್ಮದ ವಿವರಣೆಯೂ ಕೆಲಮಟ್ಟಿಗೆ ಮನದಟ್ಟಾಯಿತು. ಇ ಲ್ಲಾ ಆ ಕೃಪಾಮಯನ ಅಪಾರ ಕರುಣೆಯ ಫಲವು. ನನ್ನಂಥಾ ಅಲ್ಪನ ಪಾಡೇನು?

(ಈ ಲೇಖನವು ೧೯೪೦ ಕೊನೆಯ ಭಾಗದಲ್ಲಿ ಬರೆಯಲ್ಪಟ್ಟಿರುವದು. ಆದರೆ ಈಚೆಗೆ ನಾಲ್ಕೂವೇದಗಳ ಪೂರ್ಣ ಪುಸ್ತಕಗಳನು. ನೋಡುವ ಭಾಗ್ಯಲಭಿಸಿತು- ಋಗ್ವೇದದ ಸುಮಾರು ಒಂದು ಸಾವಿರ ಸೂಕ್ತಗಳಲ್ಲಿ ನೂರಾರನ್ನು ಮಾತ್ರವೇ ನೋಡಿದ್ದೆನಷ್ಟೇ. ಇತ್ತೀಚೆಗೆ ಇಡಿಯದನ್ನೇ ನೋಡುವ ಸೌಭಾಗ್ಯಲಭಿಸಿದ್ದರಿಂದ ಮಹದಾನಂದವಾಯಿತು. ಅದಲ್ಲದೆ ಔಂಧದ ಸ್ವಾಧ್ಯಾಯ ಮಂಡಲದಿಂದ ಹೊರಡುವ "ವೈದಿಕ ಧರ್ಮ"ವೆಂಬ ಮಾಸಪತ್ರಿಕೆಯೊಳಗೆ ಎರಡು ವರುಷಗಳಿಂದಲೂ ಶ್ರೀ ಅರವಿಂದರ ವೇದರಹಸ್ಯ"ದ ಅನುವಾದವು (ಹಿಂದೀ ಭಾಷೆಯಲ್ಲಿ) ಧಾರಾವಾಹಿಕವಾಗಿ ಪ್ರಕಟವಾಗುತ್ತಲಿದೆ. ಅದರ ಎಷ್ಟೋ ಭಾಗವನ್ನು ಕೆಲವು ತಿಂಗಳುಗಳ ಹಿಂದೆ ನೋಡಿ ಅತ್ಯಾನಂದಿತನಾದೆನು. ಇಷ್ಟಕ್ಕಿಂತ ಹೆಚ್ಚಿಗೆ ಈ ವಿಷಯಕ್ಕೆ ಬರೆಯಲು ನಾನು ತುಂಬಾ ಅನರ್ಹನೆಂಬುದನ್ನು ಪುನಃ ಪುನಃ ಬಿನ್ನೈಸಿ ಈ ಲೇಖವನ್ನು ಮುಗಿಸುವೆನು ಓಂ),

ಪಿತಾಽಹಮಸ್ಯ ಜಗತೋ<br>
ಮಾತಾ ಧಾತಾ ಪಿತಾಮಹಃ ।<br>
ವೇದ್ಯಂ ಪವಿತ್ರಮೋಂಕಾರ<br>
ಋಕ್ ಸಾಮ ಯಜುರೇವ ಚ

—(ಭಗವದ್ಗೀತಾ)

---

* ಶ್ರೀ ಅರವಿಂದರ "ವೇದರಹಸ್ಯ" ದ ಹಿಂದೀ ಅನುವಾದವನ್ನು (ವೈದಿಕ ಧರ್ಮ—ದಲ್ಲಿ) ಸಂಪೂರ್ಣವಾಗಿ ದೊರಕಿಸಿ ಓದಿದ ಮೇಲೆ ಆ ಬಗೆಗೆ ಮುಂದಿನ ಲೇಖಾಂಕಗಳನ್ನು ಬರೆಯಲಪೇಕ್ಷಿಸುತ್ತೇನೆ.

—ಲೇಖಕ.

# ಬಸವನಾಮದ ಹೆಚ್ಚಳ.

(ಶ್ರೀ ಸದಾಶಿವ ಶಿವಾಚಾರ್ಯಸ್ವಾಮಿಗಳು ಸಖರಾಯಪಟ್ಟಣ)

ಸಾಕ್ಷಾದ್ವೀರಶೈವಮತಸ್ಥಾಪನ ಕರ್ತೃಗಳಾದ ಶ್ರೀ ರೇಣುಕಾದಿ ಮೂಲಾಚಾರ್ಯರ ಹಾಗೂ, ಶ್ರೀ ಪ್ರಭುಜಂಗಮಾದಿಗಳ ಹೆಸರು ಕೂತರು – ನಿಂತರು ಎದ್ದರು— ಬಿದ್ದರು ಯಾರೊಬ್ಬ ಪಂಡಿತ ಪಾಮರರ ಬಾಯಲ್ಲಿ ಬಾರದೆ "ಬಸವ ಬಸವ" ಎಂಬುದು ಮಾತ್ರ ಸುಖದುಃಖಗಳ ಲ್ಲಿಯೂ ಕೂಡ ಯಾರೊಬ್ಬ-ಪಂಡಿತ ಪಾಮರರು ಮೊದಲಾಗಿ ಸಾಮಾನ್ಯ ಎಲ್ಲ ಸ್ತ್ರೀಪುರುಷರ ಬಾಯಲ್ಲಿ ಒಡನೆ ಬರುವ ರೂಢಿಯನ್ನು ವಿಚಾರಕ್ಕೆ ತಂದುಕೊಂಡರೆ— "ಶಿವನೇ ಬಸವ, ಬಸವನೇ ಶಿವ" ನೆಂಬ ಅಭೇದ ಭಾವದಿಂದ ಶಾಸ್ತ್ರಾಧಾರ ಸಂಮತವಾಗಿ "ಬಸವ" ನಾಮವು ಪ್ರಚಾರ ದಲ್ಲಿ ಬಂದಿರಬಹುದೆಂದೂ, ಚಿನ್ನಾದ, ಚಿದ್ಬಿಂದು, ಚಿತ್ಕಲಾ ಪೆಸಂನಿ ದ ಮಂತ್ರದಲ್ಲಿ ಮಹಾ ಬೀಜಾಕ್ಷರಗಳನ್ನಾಗಿ ಪರಿಗಣಿಸಿ ಷಟ್‌ಸ್ಥಲಬ್ರಹ್ಮಿಗ ಳಾದ ಮಹಾ ಮಹಾ ಶ್ರೀಗುರುಜಂಗಮರು ಮೊದಲ್ಗೊಂಡು ಭಕ್ತ ಮಾಹೇಶ್ವರರೆಲ್ಲರೂ ದಿನದಿನದುಚಿತಕಾಲದಲ್ಲಿ ಬಸವಾಕ್ಷರತ್ರಯವನ್ನು ಜಪಿಸುವ ಸಾಂಪ್ರದಾಯ ಇರುವುದೆಂದೂ ಅದು ಶಾಸ್ತ್ರಶಿಷ್ಟಾಚಾರಾನು ಭವಕ್ಕೆ ವಿರೋಧವಾದುದಲ್ಲೆಂದೂ ಕಂಡುಬರುವುದು.

ಶ್ರೀಮರಿತೋಂಟದಾರ್ಯರು ಮನೋವಿಜಯಗ್ರಂಥದ ವ್ಯಾಖ್ಯಾ ನದಲ್ಲಿ ಬಸವಲಿಂಗ ಪದಕ್ಕೆ "ಎಲೈ ಪಶವ ಎಂದು ಸಂಬೋಧಿಸಿ ಬಸವ ಶಬ್ದಂ ಪಶುಸ ಶಬ್ದಕ್ಕೆ ತದ್ಭವಮಾಗಿ ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಪಶುಗಳ್ಗಧೀಶ್ವರತ್ವಮಂ ಸೂಚಿಸಲ್ಪಡುವುದು" ಎಂದು ಮೊದ ಲಾಗಿ ಅನೇಕ ವ್ಯಾಕರಣ ಸೂತ್ರಗಳಿ ದ ಮಂಡಿಸಿ ಬಸವ ಶಬ್ದವಾಚ್ಯನು ಪರಮಾತ್ಮನೆಂದು ಸ್ಪಷ್ಟವಾಗಿ ಹೇಳಿದ್ದಾರೆ.

(ಮನೋವಿಜಯ—ಪ್ರಕರಣ ೧.)

"ಬಕಾರೋ ಗುರುರೂಪಂಚ ಸಕಾರೋ ಲಿಂಗಮೇವ ಚ ।
ವಕಾರಶ್ಚರರೂಪಂಚ ತ್ರಿವಿಧಂ ಬಸವಾಹ್ವಯಂ ॥
ತಂ ವಂದೇ ಬಸವೇಶ್ವರಂ ಪರಶಿವಾಕಾರಂ ಪರಂ ದೈವತಂ ।
ಬಕಾರೋ ನಾದರೂಪಂಚ ಸಕಾರೋ ಬಿಂದು ರೂಪಕಃ ।
ಕಲಾರೂಪಂವಕಾರಃ ಸ್ಯಾತ್ತ್ರಿವರ್ಣಂ ಬಸವಾಕ್ಷರಂ ॥"

(ಅನಾದಿವೀರಶೈವ ಸಾರಸಂಗ್ರಹ)

" ಅವತೀರ್ಯ ದಯಾವಶ್ಯೋ ಭಗವಾನ್ ಬಸವೇಶ್ವರಃ ।
ವೀರಶೈವಮತಂ ಸ್ಥಾಪ್ಯ ಪ್ರಕಾಶನ ಮಕಾರಯುತ್ ॥
(ಶಿವತತ್ವ ರತ್ನಾಕರ)

ಬಕಾರಾಯ ಬಕಾರಾಖ್ಯ ಮಹಾಬೀಜೈಕ ಜಾಪಿನಾಂ। ಬಂಧನಾಗಾರನಾಶೈಕ ಹೇತವೇ ವೇಧಸೇ ನಮಃ ॥ ಸಕಾರಾಯ ಸಶಬ್ದಾರ್ಥ ಸ್ವರೂಪಾಯ ಸದಾತ್ಮನೇ । ಸಾಕ್ಷಿಣೇ ಸಾಕ್ಷಿರೂಪಾಣಾಂ ನಮಃ ಸಾಧೂಪಕಾರಿಣೇ॥ ವಕಾರಾಯ ವರಿಷ್ಠಾಯ ವಾಸುದೇವಾದಿ ಹೇತವೇ । ವಾಂಛಾನಾಗುರ ವಿಚ್ಛಿತ್ತಿ ಹೇತು ಭೂತಾಯ ವೈ ನಮಃ ॥
(ಸೂತಸಂಹಿತೆ)

"ಬಕಾರಸ್ತು ತ್ರಿಮೂರ್ತಿಃ ಸ್ಯಾತ್ಪೀತಂ ಸರ್ವಾರ್ಥಸಿದ್ಧಿದಂ ।
ಸಕಾರಂ ಶಕ್ತಿರೂಪಂ ಸ್ಯಾದ್ರಕ್ತಂ ಸ್ಥಿತಿಕರಂ ಭವೇತ್ ॥
ವಾರುಣ್ಯಂ ಸ್ಯಾದ್ವಕಾರಂತು ಶುಕ್ಲಾಭಂ ರೋಗನಾಶನಂ ॥"
(ವಾತುಲಾಗಮ)

"ಶಿವೋ ಬಸವೋ ಬಸವಃ ಶಿವಸ್ತಯೋರ್ಭೇದೋ
ನ ವಿದ್ಯತೇ । ಅತಸ್ತಜ್ಞಾಜಪಂ ತಿಸ್ಮಬಸವೇತ್ಯಕ್ಷರತ್ರಯಾ॥''
(ಸ್ವೋಕ್ತಿ)

ಗುರುಲಿಂಗ-ಜಂಗಮ-ಚಿನ್ನಾದ-ಚಿದ್ಬಿಂದು-ಚಿತ್ಕಲಾದಿ ಸ್ವರೂಪವೂ ಜಪಾರ್ಹವೂ ಆದ " ಬಸವಾಕ್ಷರ " ತ್ರಯವು ಬಸವನಾಮದಿಂದವತರಿಸಿ ವೀರಶೈವ ಮತೋದ್ಧಾರಂ ಗೈದ ಬಸವೇಶ್ವರನ ಪೆಸರೆಂದು ಗ್ರಹಿಸದೆ ಬ್ರಹ್ಮಾದಿಸ್ತಂಬ ಪರ್ಯಂತವಾದ ಜಗನ್ನಿಯಂತಾ ಪಶುಪತಿ ಪರಶಿವ ನಾಮವೆಂದು ಗ್ರಹಿಸುವುದೇ ಯುಕ್ತಿ ಯುಕ್ತ ಉಕ್ತಿಗಳ ಅನುಭವಾರ್ಥವೆಂದು ಸ್ವಾಭಿಮತವು.

ಆದರೆ ಇತ್ತೀಚೆಗೆ ಕೆಲಪಂಡಿತವರ್ಗ-ಾರುವರ್ಗದವರು ಬಸವನಾಮದ ವಿಷಯದಲ್ಲಿ ಇಲ್ಲದ ಸಲ್ಲದ ಕುಹಕ ಪ್ರಲಾಪಗಳನ್ನು ಮಾಡಲೆಳಸುವುದಲ್ಲದೆ ಅದನ್ನು ಮಂತ್ರಾಂತರ್ಭೂತವನ್ನಾಗಿ ಮಾಡಿ ಜಪಿಸಕೂಡದೆಂದು ಹೇಳುತ್ತಾರೆ. ಅವರು ಈ ರೀತಿ ಹೇಳುವುದು ಅವರ ಎಷ್ಟು ಜನ್ಮಾಂತರೀಯ ಪಾಪಶೇಷವೋ ನಮಗೆ ತಿಳಿಯದು.

(೨) ಕುಂಭದಲ್ಲಿ ಕುದಿವ ರೂಪು ಮುಚ್ಚುಳದಂಗವ ತೆರೆದಲ್ಲದೆ ಪಾಕದ ಸಂಗವನರಿಯಬಾರದು. ಶರೀರದ ಕುಂಭದಲ್ಲಿ ಕುದಿವ ಜೀವನ ಇಂದ್ರಿಯಂಗಳ ಹಿಂಗಿದಲ್ಲದೆ ಲಿಂಗಸಂಗಿಯಲ್ಲ, ಪ್ರಾಣಲಿಂಗಿಯಲ್ಲ. ಈ ಸುಭೇದವನರಿಯದೆ ಸುಸಂಗಿಯಲ್ಲ. ಇಂತಿವನರಿವುದಕ್ಕೆ ಪಶುಪತಿಯು ಶರಣರಲ್ಲೊಸೆದ ಸಂಗವ ಮಾಡಿ ಅರಿ. ಅಸುವ ಹರಿ. ತೂತ ತೆರೆ. ಸಂದೇಹದ ಭಾವವನರಿ. ಘನಲಿಂಗದಲ್ಲರಿದೊರಗು. ಕರಿಗೊಂಡೊರಗು, ಆತುರವೈರಿ ಮಾರೇಶ್ವರಾ.

(೩) ಗುರುವಿನಲ್ಲಿ ಗುಣವಿಲ್ಲದಿರ್ದಡೆ ಪೂಜ್ಯನಾಗಿ ಪೊಡಮಡಿ ಸಿಕೊಳಲೇಕೆ? ಲಿಂಗದಲ್ಲಿ ಲಕ್ಷಣವಿಲ್ಲದಿರ್ದಡೆ ತ್ರಿಸಂಧ್ಯಾಕಾಲದಲ್ಲಿ ಪೂಜಿಸಿ ಕೊಳಲೇಕೆ? ಜಂಗಮದಲ್ಲಿ ಜಾತಿ ಇಲ್ಲದಿರ್ದಡೆ ಹಿರಿದುಕಿರಿದೆಂದು ಹೊರಲೇತಕ್ಕೆ? ಇದನೇನ ಹೇಳುವೆ? ಗುರು ಭಾವಕ್ಕೊಳಗಾದ. ಲಿಂಗ ಲಕ್ಷಣಕ್ಕೊಳಗಾಯಿತ್ತು. ಜಂಗಮ ಜಾತಿಗೊಳಗಾದ. ಇವನೆಲ್ಲವ ಹೇಳಿ ಎನಗಿದೊಳ್ಳಿತೋ, ಹೊಲ್ಲದೋ, ಗೆಲ್ಲತನ ಬೇಡ ಆತುರ ವೈರಿಮಾರೇಶ್ವರಾ

(೪) ನಡೆವ ಕಾಲು, ಆನುವ ಕೈ, ಬೇಡುವ ಬಾಯಿ, ಸರ್ವವ ನೊಡಗೂಡುವ ಮನ ಉಡುಗಿ, ಘನಲಿಂಗದಲ್ಲಿ ತಲ್ಲೀಯವಾದವನಂಗ ಮರುಳ ಕಂಡ ಕನಸಿನಂತೆ, ಮೂಗನ ಕಾವ್ಯದಂತೆ, ಜಲಲಿಪಿಯಂತೆ, ವಾರಿಯ ಧೂಮದಂತೆ. ಇದಾರಿಗೂ ಅಸಾಧ್ಯ ಆತುರ ವೈರಿ ಮಾರೇ ಶ್ವರಾ.

(೫) ಭಕ್ತಿಯ ಭಾಂಡದಲ್ಲಿ ಸತ್ಯವೆಂಬ ಅಕ್ಕಿಯ ಹೊಯ್ದು, ನಿರ್ಮ ಲವೆಂಬ ಉದಕವನೆರೆದು, ತ್ರಿಗುಣವೆಂಬ ಮೂರೊಲೆಗುಂಡ ಸಂಬಂ ಧಿಸಿ, ಆತುರದ ಸವುದೆಯನೊಟ್ಟಿ, ಸುಡುವ ಬೆಂಕಿಯಲ್ಲಿ ಉರುಹಲಾಗಿ ಓಗರ ಬೆಂದಿತ್ತು. ಇಕ್ಕುವರಿಲ್ಲವೆ ಉಂಡು, ಪ್ರಸಾದವಿಲ್ಲದ ಪ್ರಸಾದವನೆ ನಗಿತ್ತನಾತುರವೈರಿ ಮಾರೇಶ್ವರ.

(೬) ಮಣ್ಣೆಂಬುದೇ ದೇಹ. ಹೊನ್ನೆಂಬುದೇ ಕಾಂಕ್ಷೆ. ಹೆಣ್ಣೆಂ ಬುದೇ ಸುಕರ ಸುಖಭೋಗಂಗಳು. ಅಣ್ಣ, ಇವ ಚನ್ನಾಗಿ ಹೇಳದೆ ಮಣ್ಣಮುದ್ದಿಯ ಕೈಯ್ಯಲ್ಲಿ ಕೊಟ್ಟು ನುಣ್ಣನೆ ಹೋದೆ ಆತುರವೈರಿ ಮಾರೇಶ್ವರಾ.

(೭) ಹರಿಗೋಲ ಹರಿದ ಮತ್ತೆ ಹೊಳೆ ಏನು ಮಾಡುವುದು ? ಇರಿದವನಿದ್ದಂತೆ ಕೈದೇನ ಮಾಡುವುದು ? ಎಚ್ಚವನಿದ್ದಂತೆ ಅಂಬಿಗೆ ಮುನಿವರೇ ಅಯ್ಯ? ಎನ್ನ ಚಿತ್ತದಲ್ಲಿ ತಲೆದೋರಿ ನೀನಾಡಿಸಿದಂತೆ ಆಡಿದೆ. ನೀ ನೋಡಿಸಿದಂತಾನು ನೋಡಿದೆ. ನೀ ಹೇಳಿದ ಬಿಟ್ಟಿಯ ಮಾಡಿದೆ. ನೀ ಬರಿಸಿದ ಬಳಿಯ ಬಂದೆ. ನೀನಿರಿಸಿದಲ್ಲಿ ಇದ್ದೆನಯ್ಯ. ಕುಳದವನಾದ ಮತ್ತೆ ಮಾನ್ಯದ ಒಲವರ ಎನಗೊಂದು ಗುಣವಿಲ್ಲವಯ್ಯ. ಎನ್ನ ನೆಂದಿಂಗೊಳಕೊಂಬೆಯೋ ಆತುರವೈರಿ ಮಾರೇಶ್ವರಾ?

ಇವನ ವಚನಗಳು ಎಷ್ಟು ಭಾವಭರಿತವಾದವುಗಳು ಮತ್ತು ಅರ್ಥ ಪೂರ್ಣವಾದವುಗಳೆಂಬುದು ಮೇಲಿನ ವಚನಗಳಿಂದ ಚನ್ನಾಗಿ ತಿಳಿದು ಬರುತ್ತದೆ.

ಪರಿಹಾಸದ ಮೂಲಕ ಜನತೆಯಲ್ಲಿ ಪ್ರೇಮವನ್ನುಂಟು ಮಾಡಿ, ಅವರನ್ನು ಒಲಿಯಿಸಿಕೊಂಡು ಅವರನ್ನು ಉಚ್ಚ ಸ್ಥಿತಿಗೆ ತರುವದು ಶಿವಾನುಭವದ ಒಂದು ರೀತಿಯಾಗಿದೆ. ಈ ಬಗೆಯಾಗಿ ಕೆಲವು ಶಿವಶರಣರು ವರ್ತಿಸಿದ್ದಾರೆ.

---

## ಚಾಂಗುಬಲ್ಲಯ್ಯ

ಬಸವೇಶ್ವರನು ತನ್ನ ಒಂದು ವಚನದಲ್ಲಿ "ಹೊತ್ತಾರೆ ಎದ್ದು ಅಗ್ಗವಣೆ ಪತ್ತರೆಯ ತಂದು ಹೊತ್ತು ಹೋಗದ ಮುನ್ನ ಪೂಜಿಸು ಲಿಂಗವ" ಎಂತಲೂ, ಇನ್ನೊಂದು ವಚನದಲ್ಲಿ "ಹೊತ್ತಾರೆ ಎದ್ದು ಲಿಂಗದೇವನ ದೃಷ್ಟಿಯಾರೆ ನೋಡದವನ ಸಂಸಾರವೇನವನ, ಬಾಳುವೇನವನ, ಬೀಳುವೇನವನ, ಸಂಸಾರವೇನವನ, ನಡೆಯೇನವನ, ನುಡಿಯೇನವನ, ಸಂಸಾರವೇನವನ? " ಎಂತಲೂ ಬೋಧಿಸಿದ್ದಾನೆ. ಆದುದರಿಂದ ಶಿವಾನುಭವಿಯು ಮುಂಜಾವಿನಲ್ಲಿ ಬೆಳಕು ಹರಿಯುವದರೊಳಗೆ ಎದ್ದು ಲಿಂಗಾರ್ಚನೆಯನ್ನು ಮಾಡಿ ಪರಮಾತ್ಮನ ಧ್ಯಾನದಲ್ಲಿ ತೊಡಗಬೇಕು. ಅವನು ತೀವ್ರವಾಗಿ ಹಾಸಿಗೆಯಿಂದ ಎದ್ದು ತನ್ನ ಕಾಯಕದಲ್ಲಿ ತೊಡಗಬೇಕು. ಭಕ್ತರ ಈ ಕಾರ್ಯದಲ್ಲಿ ಸಹಾಯಕನಾಗಿ ವರ್ತಿಸುವದು ಒಂದು ಕಾಯಕವಾಗಿರುತ್ತದೆ. ಇಂಥ ಕಾಯಕವನ್ನು ಚಾಂಗುಬಲ್ಲಯ್ಯನು ಕೈಕೊಂಡು ಭಕ್ತರ ಮನೆಗೆ ದಿನಾಲು ಮುಂಜಾವಿನಲ್ಲಿ ಹೋಗಿ

ಅವರನ್ನು ಎಬ್ಬಿಸುವನು. ಅವನು ಅವರ ಮನೆಯ ಬಾಗಿ ಲಲ್ಲಿ ನಿಂತು 'ಚಾಂಗುಭಲಾ' ಎಂಬ ಧ್ವನಿಯನ್ನು ಮಾಡು ವನು. 'ಚಾಂಗು' ಈ ಶಬ್ದಕ್ಕೆ ಕ್ಷೇಮ, ಸುಖವುಳ್ಳದು ಎಂಬ ಅರ್ಥ ವಿದೆ. 'ಭಲಾ' ಈ ಶಬ್ದವನ್ನು ಕಾರ್ಯದ ಉತ್ಕೃಷ್ಟತೆಯನ್ನು ಹೇಳಿ ಉತ್ತೇ ಜನ ಕೊಡುವದರಲ್ಲಿ ಉಪಯೋಗಿಸುತ್ತಾರೆ. ದಿನದ ನಿತ್ಯದ ಕೆಲಸದಲ್ಲಿ ಭಕ್ತರಿಗೆ ಉತ್ತೇಜನ ಉಂಟಾಗಲು ಈ ಶಿವಶರಣನು 'ಚಾಂಗುಭಲಾ' ಎಂಬ ಶಬ್ದಗಳನ್ನು ಉಚ್ಚರಿಸಿ ಅವರನ್ನು ಎಬ್ಬಿಸುವ ಕಾಯಕವನ್ನು ನಡಿಸು ತ್ತಿದ್ದದರಿಂದ ಅವನಿಗೆ 'ಚಾಂಗುಬಲ್ಲಯ್ಯ' ಎಂಬ ಹೆಸರು ಪ್ರಾಪ್ತವಾ ಯಿತು. ಇದಕ್ಕೆ ಭಕ್ತರು ಪ್ರೀತರಾಗಿ ಅವನಿಗೆ ಹಣವನ್ನು ಕೊಟ್ಟುದರಲ್ಲಿ ತೃಪ್ತನಾಗಿ ಉಳಿದುದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸು ವನು. ಹೀಗೆ ಆಚರಿಸುತ್ತ ಚಾಂಗುಬಲ್ಲಯ್ಯನು ಪರಮಾತ್ಮನಲ್ಲಿ ಸಾಮ ರಸ್ಯಪದವನ್ನು ಹೊಂದಿದವನಾದನು. ಹೀಗೆ ಭಕ್ತ ಸೇವೆ ಮಾಡುವದೇ ಶಿವಾನುಭವಿಯ ಕಾರ್ಯವಾಗಿದೆ.

---

## ಶಿವಭೃತ್ಯ ಮಲ್ಲಯ್ಯ

ಮಲ್ಲಯ್ಯನೆಂಬ ಶಿವಶರಣನು ತಾನು ಶಿವಭಕ್ತರ ಭೃತ್ಯರಿಗೆ ಭೃತ್ಯನೆಂದು ಭಾವಿಸಿ ಶಿವಭಕ್ತರ ಗೃಹಗಳಲ್ಲಿ ಹೋಗಿ 'ಶಿವ ಶರಣು' ಎಂದು ಧ್ವನಿ ಮಾಡುವನು. ಭಕ್ತರನ್ನು ಕಂಡರೆ ಅವರಿಗೆ ಶರಣು' ಎಂದು ನಮಸ್ಕರಿಸುವನು. ಈ ನುಡಿಯಲ್ಲಿ ಪರಮಾತ್ಮನಲ್ಲಿ ಭಕ್ತಿ, ಅರ್ಪ ಣಭಾವ, ಭೃತ್ಯಾಚಾರ, ದಾಸೋಹಭಾವ ಈ ಶ್ರೇಷ್ಠ ಶಿವಾನುಭವದ ವಿಚಾರಗಳು ಅಡಕವಾಗಿರುತ್ತವೆ. ಆದ್ದರಿಂದ ಭಕ್ತರಲ್ಲಿ 'ಶರಣು' ಎಂದು ಉಚ್ಚರಿಸಿ ಅವರಲ್ಲಿ ಶಿವಚಿಂತನೆಯನ್ನುಂಟು ಮಾಡುವ ಕಾಯಕವನ್ನು ಇವನು ಕೈಕೊಂಡನು. ಈ ಕಾರ್ಯವನ್ನು ಮಾಡುವಲ್ಲಿ ಭಕ್ತರು ಕೊಟ್ಟು ದನ್ನು ಸ್ವೀಕರಿಸಿ ಅವನು ತನ್ನ ಚರಿತಾರ್ಥವನ್ನು ಸಾಗಿಸುತ್ತಿದ್ದನು. ಹೀಗಿರುತ್ತಿರಲು ಒಂದು ದಿನ ಅವನಿಗೆ ಭಕ್ತರ ಗೃಹವು ಎಲ್ಲಿಯೂ ದೊರೆಯದೆ ಹೋಯಿತು. ಆಗ ಅವನು ಬೇರೊಂದು ಗ್ರಾಮಕ್ಕೆ ಹೋದನು. ಅಲ್ಲಿಯೂ ಅವನಿಗೆ ದೊರೆಯಲಿಲ್ಲ. ಮುಂದೆ ಅವನು

ಬೇರೊಂದು ಗ್ರಾಮಕ್ಕೆ ಹೋಗಲಾಗಿ ಅಲ್ಲಿಯೂ ದೊರೆಯದೆ ಹೋ
ಗಲು ಹೀಗೆ ಅನೇಕ ಪುರಗಳನ್ನರಸಿ ಭಕ್ತರ ಮನೆ ದೊರೆಯದೆ ಒಂದೆ
ಡೆಯಲ್ಲಿ ಬಳಲಿ ಕುಳಿತಿದ್ದಾಗ, ಶಿವನು ಅವನ ಭಕ್ತಿಗೆ ಮೆಚ್ಚಿ ಭಕ್ತ
ರೂಪಿನಿಂದ ಅವನಿದ್ದಲ್ಲಿಗೆ ಬಂದು ಅವನಿಗೆ–ನಿನ್ನ ಭಕ್ತಿಗೆ ನಾನು ಮೆಚ್ಚಿ
ದೆನು. ಕೈಲಾಸಕ್ಕೆ ಬಾರೆನಲು ಮಲ್ಲಯ್ಯನು ಅವನಿಗೆ ನಮಸ್ಕರಿಸಿ ಅವನ
ಹಿಂದೆ ಹೋಗಹತ್ತಿದನು. ಹೀಗೆ ಹೋಗಹೋಗುತ್ತ ಪರಮಾತ್ಮನು
ಅವನ ಮುಂದೆಯೇ ಬಯಲಾದನು ಮತ್ತು ಅವನೊಡನೆ ಮಲ್ಲಯ್ಯನೂ
ಬಯಲಾದನು.

ಈ ಪ್ರಕಾರ ಹಿಂದಿನ ಕಾಲದಲ್ಲಿ ಶಿವಶರಣರು ವಿವಿಧ ಕಾಯಕಗಳನ್ನು
ಕೈಕೊಂಡು ಜನಸೇವೆ ಮಾಡುತ್ತ ಸಾಮರಸ್ಯವನ್ನು ಹೊಂದಿದ್ದಾರೆ.

---

## ಲೆಂಕ ಬೊಮ್ಮಯ್ಯ

ಲೆಂಕ ಬೊಮ್ಮಯ್ಯನು ಭಕ್ತರ ಸೇವೆ ಮಾಡುವದನ್ನೇ ತನ್ನ
ಕಾಯಕವನ್ನಾಗಿ ಇಟ್ಟುಕೊಂಡಿದ್ದನು. ಅವರು ಹೇಳಿದ ಕಾರ್ಯಗ
ಳನ್ನು ಮಾಡಿ ಅವರು ಕೊಟ್ಟದ್ದನ್ನು ಸ್ವೀಕರಿಸಿ ಅದರಲ್ಲಿಯೇ ತೃಪ್ತ
ನಾಗಿರುತ್ತಿದ್ದನು. ತಾನು ಮಾಡುವ ಸೇವೆಗಾಗಿ ಅವನು ಇಂತಿಷ್ಟೇ
ತನಗೆ ಕೊಡಬೇಕೆಂದು ಯಾರನ್ನೂ ನಿರ್ಬಂಧಪಡಿಸುತ್ತಿದ್ದಿಲ್ಲ. ಇದ
ರಿಂದ ಅವನಿಗೆ 'ಲೆಂಕ ಬೊಮ್ಮಯ್ಯ' ಎಂಬ ಹೆಸರು ಪ್ರಾಪ್ತವಾ
ಯಿತು. "ಫಲಪದದ ಆಸೆ ಮಾಡಲಾಗದು ನಿನ್ನ ಕ್ರಿಯೆಯಲ್ಲಿ. ಬಯ
ಕೆಯ ಭಕ್ತಿಯು ಪೂರ್ವ ಪುರಾತನರು ಮೆಚ್ಚರು." ಎಂದು ಶಿವಶರ
ಣರ ನುಡಿಯುಂಟು. ಇದಕ್ಕನುಸರಿಸಿ ಲೆಂಕಬೊಮ್ಮಯ್ಯನು ಭಕ್ತರ
ಸೇವೆಯನ್ನು ಮಾಡುತ್ತ ಬರುತ್ತಿನು. ಇಂಥ ಸೇವೆಯು ಪಂಚಾಚಾ
ರಗಳಲ್ಲಿ ಭೃತ್ಯಾಚಾರವೆಂದನಿಕೊಳ್ಳುತ್ತದೆ.

ಹೀಗೆ ಅವನು ಆಚರಿಸುತ್ತಿರಲು ಒಂದು ದಿನ ಅವನಿಗೆ ಒಬ್ಬ
ಭಕ್ತನು ನಿನಗೆ ಸಂಬಳವನ್ನು ನಾನು ಕೊಡುತ್ತೇನೆ. ನನ್ನಲ್ಲಿರು ಎಂದು
ನುಡಿಯಲು ಅದಕ್ಕೆ ಬೊಮ್ಮಯ್ಯನು "ಶಿವಶಿವಾ, ನನಗ ಸಂಬಳ
ವೆಂಬುದುಂಟೇ? ಇದ ಕೇಳಬಾರದು" ಎಂದು ಅನ್ನುತ್ತಿರಲು ಅವನಿಗೆ
ನುಡಿದ ಈ ಶಬ್ದಗಳು ಮಸೆದಲಗಾಗಿ ತಾಗಿದಂತೆ ತಾಗಿದವು.

ಆಗ ಅವನಲ್ಲಿ ಉಂಟಾದ ಉಮ್ಮಳದ ಮೂಲಕ ಆವನು ಮರಣೋನ್ಮು ಖನಾಗಲು ಶಿವನು ಅವನ ನಡೆಗೆ ಮೆಚ್ಚಿ ಅವನನ್ನು ತನ್ನ ಹೃದಯ ದಲ್ಲಿಂಬಿಟ್ಟುಕೊಂಡನು.

ಶಿವಶರಣರು "ಮಾಡಿ ನೀಡಿ ಹೋಹೆನೆಂಬಾಗ ಕೈಲಾಸವೇನು ಕೈ ಕೂಲಿಯೇ? ಮುಂದೊಂದು ಕಲ್ಪಿಸದೆ, ಹಿಂದೊಂದು ಭಾವಿಸದೆ ಸಲೆ ಸಂದಿದ್ದಾಗಳೇ ಕೈಲಾಸ" ಎಂದು ಪ್ರತಿಫಲವನ್ನಪೇಕ್ಷಿಸದೆ ಸೇವೆ ಮಾಡು ವದನ್ನು ಹೇಳಿದ್ದಾರೆ. ಅವರು ತಾವು ಮಾಡುವದು ಕೆಲವೊಂದು ಕೈಕೂಲಿಯ ಸಲುವಾಗಿ ಎಂದು ಭಾವಿಸುವದಿಲ್ಲ. ಈ ಪ್ರಕಾರ ಲೆಂಕ ಬ್ರಹ್ಮಯ್ಯನು ಆಚರಿಸಿದ್ದಾನೆ.

---

## ಬಹುರೂಪಿ ಚೌಡಯ್ಯ.

ಕೈಲಾಸಪರ್ವತದಲ್ಲಿ ಶಿವನು ತನ್ನ ಒಡ್ಡೋಲಗದಲ್ಲಿ ಇದ್ದಾಗ್ಗೆ ಅಲ್ಲಿಗೆ ನಾರದಮುನಿಯು ಬಂದು ಭೂಲೋಕದಲ್ಲಿ ಶಿವಾನುಭವದ ನಡೆಯು ಅಳಿಯುತ್ತಿದೆ. ಶೈವಧರ್ಮಗಳು ಹೆಚ್ಚಿ, ವೀರಶೈವವು ಲಯ ವಾಗುತ್ತಿದೆ. ಈ ದುಃಸ್ಥಿತಿಯನ್ನು ತೀವ್ರ ದೂರ ಮಾಡಬೇಕು. ಅದ ಕ್ಕೋಸ್ಕರ ನಿನ್ನ ಪ್ರಮಥರಲ್ಲೊಬ್ಬನನ್ನು ಭೂಲೋಕಕ್ಕೆ ಕಳಿಸಿ ಶೈವ ಧರ್ಮಗಳಲ್ಲಿ ಪುನರ್ದೀಕ್ಷಾಕ್ರಮವನ್ನು ಕೈಕೊಳ್ಳಬೇಕು ಎಂದು ಸೂಚಿ ಸಿದನು. ಆಗ ಶಿವನು ತನ್ನ ಸುತ್ತಲಿದ್ದ ಗಣಾಧೀಶ್ವರರನ್ನು ಅವಲೋ ಕಿಸುತ್ತ, ಅವರಲ್ಲಿ ಶ್ರೀಧರ ಗಣೇಶ್ವರನನ್ನು ಈಕ್ಷಿಸಿ--ನೀನು ಭೂಲೋ ಕದಲ್ಲಿ ಅವತರಿಸಿ ಶಿವಾನುಭವದ ಮಾರ್ಗವನ್ನು ಹೆಚ್ಚಿಸಬೇಕು--ಎಂದು ಆಜ್ಞಾಪಿಸಿದನು. ಆಗ ಶ್ರೀಧರನು ಶಿವನು ಹೇಳಿದ ನಿಯೋಗವನ್ನು ಶಿರಸಾ ಮನ್ನಿಸಿ--ನಾನು ಹೋಗುವೆನು. ಆದರೆ ನೀನು ನನ್ನ ಸಹಾ ಯಕ್ಕೆ ಬೇರೆ ಗಣಾಧೀಶ್ವರರನ್ನೂ ಕೂಡ ಕಳಿಸಬೇಕು, ಎಂದು ಕೇಳಿ ಕೊಂಡನು. ಅದಕ್ಕೆ ಶಿವನು ಒಪ್ಪಿ ತನ್ನ ಗಣರಲ್ಲಿ ಎರಡು ಸಾವಿರ ಜನ ರಿಗೆ--ನೀವೆಲ್ಲರು ಭೂಲೋಕದಲ್ಲಿ ಅವತರಿಸಿ ಶ್ರೀಧರನಿಗೆ ಸಹಾಯಕ ರಾಗಿರಿ ಎಂದು ಹೇಳಿದನು. ಆಗ ಅವರೆಲ್ಲರು--ನಿನ್ನ ಆಜ್ಞೆಯಂತೆ ನಾವು ನಡೆಯುವೆವು. ನಾವು ಭೂಲೋಕದಲ್ಲಿ ಮಾನವ ಜನ್ಮವನ್ನು ತಾಳಿ ಶ್ರೀಧರನಿಗೆ ಸಹಾಯ ಮಾಡುವೆವು, ಎಂದು ಒಪ್ಪಿಕೊಂಡರು.

ಕರ್ನಾಟಕದಲ್ಲಿ ರೇಕಳಿಕೆ ಎಂಬ ಗ್ರಾಮವಿದ್ದು ಅಲ್ಲಿ ಮಗಧ ನೆಂಬ ಶೈವದ್ವಿಜನು ಇರುತ್ತಿದ್ದನು. ಅವನಿಗೆ ಜನವಶ್ಯ ಎಂಬ ಮಗನೂ ಈ ಜನವಶ್ಯನಿಗೆ ಧರ್ಮವತಿ ಎಂಬ ಹೆಂಡತಿಯೂ ಇದ್ದು ಇವರ ಉದರದಲ್ಲಿ ಶ್ರೀಧರನು ಚೌಡಯ್ಯನೆಂಬ ಹೆಸರಿನಿಂದ ಜನ್ಮ ತಾಳಿದನು. ಚೌಡಯ್ಯನು ದೊಡ್ಡವನಾದ ಬಳಿಕ ಭರತ ವಿದ್ಯೆಯಲ್ಲಿ ಅತ್ಯಂತ ಪ್ರವೀಣನಾದನು. ಅವನು ಆಡುವದು, ಹಾಡುವದು, ವಾದ್ಯ ಬಾರಿಸು ವದು, ನೃತ್ಯ, ಗಾಯನ ಈ ಮೊದಲಾದ ಕಲೆಗಳಲ್ಲಿ ಅತ್ಯಂತ ಬಲ್ಲಿದ ನೆನಿಸಿಕೊಂಡು ಬಹು ಪ್ರಸಿದ್ಧನಾದನು. ಅವನು ಹೀಗೆ ಕಳಾವಿದ ನಾಗಿ ಲೋಕದ ಜನರಲ್ಲಿ ಭಕ್ತಿಯು ನೆಲೆಗೊಳ್ಳಲೆಂದು ಅವನು ಪುರಾತನ ಕಾಲದ ಮಹಾವಿಭೂತಿಗಳ ಚರಿತ್ರೆಗಳನ್ನು ಗಾಯನ, ಆಟ ಮೊದಲಾದವು ಗಳ ಮೂಲಕ ಆಡಿ ತೋರಿಸುವನು. ಅವನಂತೆಯೇ ಎರಡು ಸಾವಿರ ಗಣಾಧೀಶ್ವರರು ದೇಶ ಮಧ್ಯದಲ್ಲಿ ಬೇರೆ ಬೇರೆ ಕಡೆಗೆ ಜನಿಸಿ ಅವರೆ ಲ್ಲರು ಭರತ ವಿದ್ಯೆಯಲ್ಲಿ ಅತ್ಯಂತ ನಿಪುಣರಾದರು.

ಹೀಗಿರುವಲ್ಲಿ ಚೌಡಯ್ಯನು ತನ್ನ ಗ್ರಾಮದಲ್ಲಿ ರೇಕನಾಥಾ ಚಾರ್ಯರೆಂಬವರಿಂದ ವೀರಶೈವ ದೀಕ್ಷೆಯನ್ನು ಹೊಂದಿ ವೀರಶೈವಾ ಚಾರಗಳನ್ನು ಅನುಸರಿಸುವವನಾದನು. ಒಂದು ಕಾಯಕವನ್ನು ಹೊಂದ ಬೇಕೆಂದು ಗುರುಗಳು ಆಜ್ಞಾಪಿಸಲಾಗಿ ಚೌಡಯ್ಯನು ಚಿತ್ರವಿಚಿತ್ರವಾದ ಬಹುರೂಪಗಳನ್ನಾಡಿ ಭಕ್ತರು ಕೊಟ್ಟದನ್ನು ಸ್ವೀಕರಿಸಿ ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತಾ, ಬಹುರೂಪಿಯ ಕಾಯಕವನ್ನು ಮಾಡುತ್ತ ಇದ್ದನು.

ಹೀಗಿರುವಲ್ಲಿ ನೀಲಗಿರಿಪರ್ವತ ಪ್ರದೇಶದಲ್ಲಿರುವ ಕೊಟ್ಟಗಿರಿ ಎಂಬ ಪಟ್ಟಣದಲ್ಲಿ ರಾಮದೇವನೆಂಬ ಅರಸನು ರಾಜ್ಯವಾಳುತ್ತಿದ್ದನು. ಅವ ನಲ್ಲಿ ಭಾಸ್ಕರಭಟ್ಟನ ಮಗ ಅಚ್ಯುತನೆಂಬವನು ಗಾನ, ನರ್ತನ ಮೊದ ಲಾದ ಕಲೆಗಳನ್ನೂ ಜಾತಿಗಾರ ವಿದ್ಯೆಯನ್ನೂ ಕಲಿತುಕೊಂಡು 'ಗಾನ ವಿದ್ಯಾ ಗಜೇಂದ್ರಸಿಂಹ' ಎಂಬ ಬಿರುದನ್ನು ಹೊಗಳಿಸಿಕೊಳ್ಳುತ್ತ ಇರು ತ್ತಿದ್ದನು. ಅದನ್ನು ಚೌಡಯ್ಯನು ಕೇಳಿ ತನ್ನ ಕಾಯಕವನ್ನು ತೋರಿ ಸುತ್ತ ಕೊಟ್ಟಗಿರಿಗೆ ಹೋದನು. ಅಲ್ಲಿ ತನ್ನ ವಿದ್ಯೆಯನ್ನು ತೋರಿಸು ತ್ತಿರಲು ಎಲ್ಲರಿಂದಲೂ ಹೊಗಳಿಸಿಕೊಳ್ಳುವವನಾದನು. ಅಚ್ಯುತನು ಅದನ್ನು ತಿಳಿದು ಅವನನ್ನು ಸೋಲಿಸಬೇಕೆಂದು ಅವನೊಡನೆ ಸ್ಪರ್ಧೆ

ಯನ್ನು ತೊಟ್ಟು ಅರಸನಿದಿರಿನಲ್ಲಿ ಹದಿನೆಂಟು ಜಾತಿ, ನೂರೊಂದು ಕುಲಗಳ ವೇಷಗಳನ್ನೆಲ್ಲ ತೊಟ್ಟು ತನ್ನ ವಿದ್ಯೆಯನ್ನು ತೋರಿಸಿದನು. ಆದರೆ ಗಾಯನ, ನರ್ತನ, ಜಾತಿಕಾರ ವಿದ್ಯೆಗಳಲ್ಲೆಲ್ಲ ಚೌಡಯ್ಯನ ಜಾಣ್ಮೆಯೇ ಹೆಚ್ಚಿತು. ಹೀಗೆ ಅಚ್ಯುತನು ಸೋಲಲಾಗಿ ಅವನು ತನ್ನ 'ವಿದ್ಯಾಗಜೇಂದ್ರಸಿಂಹ' ಎಂಬ ಬಿರುದನ್ನು ಬಿಟ್ಟುಕೊಟ್ಟು ಚೌಡಯ್ಯನಲ್ಲಿ ನಿಂತುಕೊಂಡು ಅವನ ಸೇವೆ ಮಾಡಹತ್ತಿದನು.

ಹೀಗಿರಲು ಕೆಲವ ದಿವಸಗಳಾದ ಮೇಲೆ ಯಕ್ಷನಾಥನೆಂಬ ಇನ್ನೊಬ್ಬ ಬಹುರೂಪಿಯು 'ವಿದ್ಯಾಗಜೇಂದ್ರಸಿಂಹ, ವಿದ್ಯಾಶರಭ ಭೇರುಂಡ' ಎಂಬ ಬಿರುದುಗಳನ್ನು ಹೊಗಳಿಸಿಕೊಳ್ಳುತ್ತ ತನ್ನ ಮೇಳದವರೊಡನೆ ಚೌಡಯ್ಯನಿದ್ದ ಪುರಕ್ಕೆಯೇ ಬಂದನು. ಅಲ್ಲಿ ಚೌಡಯ್ಯನ ಕೀರ್ತಿಯನ್ನು ಕೇಳಿ ಅವನನ್ನು ಸ್ಪರ್ಧಿಸಬೇಕೆಂದು, ಯಾರ ವಿದ್ಯೆಯು ಕಡಿಮೆಯಿದೆ ಎಂದು ಅರಸನ ಮುಂದೆ ಸಿದ್ಧವಾಗುತ್ತದೆಯೋ ಅವರು ಮೂರು ದಿನಗಳ ವರೆಗೆ ಕತ್ತೆಗಳನ್ನು ಕಾಯಬೇಕೆಂಬ ಪಂಥವನ್ನು ಹೂಡಿದನು. ಅದಕ್ಕೆ ಚೌಡಯ್ಯನೂ ಒಪ್ಪಿದನು. ಆಗ ಉಭಯತರು ತಮ್ಮ ತಮ್ಮ ವಿದ್ಯೆಗಳನ್ನು ಅರಸನ ಇದಿರಿಗೆ ತೋರಿಸತೊಡಗಿದರು. ಚೌಡಯ್ಯನು ಶಿವನ ೨೫ ಲೀಲೆಗಳನ್ನು ಅತ್ಯಗಾಧವಾದ ರೀತಿಯಿಂದ ನಟಿಸಿ ತೋರಿಸಿದನು. ಯಕ್ಷನಾಥನು ವಿಷ್ಣುವಿನ ಹತ್ತು ಅವತಾರಗಳನ್ನು ತೋರಿಸಿದನು. ಆದರೆ ಅವುಗಳನ್ನು ಅವನು ಸರಿಯಾಗಿ ನಟಿಸದೆ ಹೋದದ್ದರಿಂದ ಅವನು ಸೋತನು. ಆದ್ದರಿಂದ ಅವನು ಮೂರು ದಿನ ಕತ್ತೆಗಳನ್ನು ರಾಜನಲ್ಲಿ ಕಾಯಬೇಕಾಯಿತು.

ಈ ಪ್ರಕಾರ ಚೌಡಯ್ಯನು ದೇಶದಲ್ಲಿ ಪ್ರಸಿದ್ಧರಾದ ಬಹುರೂಪಿಗಳೊಡನೆ ಸ್ಪರ್ಧಿಸಿ ಜಯಶಾಲಿಯಾದದ್ದರಿಂದ ಅವನ ಕೀರ್ತಿಯು ಸುತ್ತಲೂ ಹಬ್ಬಿತು. ಚೌಡಯ್ಯನೊಡನೆ ಭೂಲೋಕದಲ್ಲಿ ಅವತರಿಸಿದ ಅಸಂಖ್ಯ ಗಣಾಧೀಶ್ವರರು ಸಹ ತಮ್ಮ ತಮ್ಮ ವಿದ್ಯೆಗಳಲ್ಲಿ ಬಲ್ಲಿದರಾಗಿದ್ದು ಅವರೆಲ್ಲರು ಚೌಡಯ್ಯನಲ್ಲಿಗೆ ಬಂದು ಸೇರಿದರು. ಚೌಡಯ್ಯನು ಅವರಿಗೆ ನಾನಾವಿಧ ರಾಗಗಳನ್ನು ಹೇಳುತ್ತ ಸಂಗೀತಕಲೆಯಲ್ಲಿ ಅವರನ್ನು ನಿಷ್ಣಾತರನ್ನಾಗಿ ಮಾಡಿದನು.

ಆದರೆ ಚೌಡಯ್ಯನ ರಾಗಗಳಲ್ಲಿ ರಾಮಕ್ರಿಯಾ ರಾಗವು ಅತ್ಯಂತ ಶ್ರೇಷ್ಠತರದ್ದಾಗಿತ್ತು. ಅದೇ ಅವನ ಪ್ರೀತಿಯ ರಾಗವಾಗಿತ್ತು. ಆ ರಾಗ

ದೇವತೆಯು ಅವನಲ್ಲಿ ಪ್ರತ್ಯಕ್ಷ ವಾಸವಾಡುತ್ತಿರುವಳೋ ಏನೋ ಎನ್ನುವಂತೆ ಆ ರಾಗವನ್ನು ಕೇಳಿದವರಿಗೆ ಭಾಸವಾಗುತ್ತಿತ್ತು. ಆ ರಾಗದಲ್ಲಿಯೇ ಅವನು ಪರಮಾತ್ಮನ ಸ್ತೋತ್ರವಮಾಡುವನು. ಇದರಿಂದ ಅದು ಅವನಿಗೆ ಲಿಂಗಪೂಜೆಯಂತೆ ಪರಿಣಮಿಸಹತ್ತಿತು.

ಹೀಗಿರುವಲ್ಲಿ ಚೌಡಯ್ಯನ ಮನಸ್ಸಿನಲ್ಲಿ ಭಕ್ತಜಂಗಮರಿಗೆ ಒಂದು ಮಹತ್ತಾದ ಗಣಪರ್ವವನ್ನು ಮಾಡಬೇಕೆಂಬ ಬಯಕೆಯು ಉಂಟಾಯಿತು. ಇದಕ್ಕೆ ಬೇಕಾದ ಹಣವು ತನ್ನಲ್ಲಿರದೆ ಹೋಗಲು ಅವನು ಅರಸನಲ್ಲಿಗೆ ಬಂದು---ನನಗೆ ೧೨ ಸಾವಿರ ವರಾಹಗಳನ್ನು ೩ ವರ್ಷದ ಅವಧಿಯನ್ನಿಟ್ಟು ಕಡವಾಗಿ ಕೊಡಬೇಕು. ಬಂದು ವೇಳೆ ಹಣವನ್ನು ಸಕಾಲದಲ್ಲಿ ತಿರುಗಿ ಕೊಡದೆ ಹೋದರೆ ೨೦ ಸಾವಿರ ವರಾಹಗಳನ್ನು ನಾನು ಕೊಡುವೆನೆಂದು ಹೇಳಿದನು. ಅದಕ್ಕೆ ಅರಸನು ಈ ಹಣಕ್ಕೋಸ್ಕರ ಯಾವುದನ್ನು ನೀನು ನನ್ನಲ್ಲಿ ಅಡವು ಇಡುವಿ ಎಂದು ಕೇಳಲು, ಅದಕ್ಕೆ ಚೌಡಯ್ಯನು---ನನ್ನ ಹತ್ತಿರ ಯಾವ ಸೊತ್ತೂ ಇಲ್ಲ. ಆದರೆ ರಾಮಕ್ರಿಯಾ ರಾಗವು ಮಾತ್ರ ನನ್ನ ಸೊತ್ತಾಗಿ ಇದೆ. ಅದನ್ನೇ ನಾನು ನಿನ್ನಲ್ಲಿ ಅಡವು ಇಡುತ್ತೇನೆ, ಎಂದು ಹೇಳಿದನು. ರಾಜನು ಆ ರಾಗವನ್ನು ನನ್ನ ಮುಂದೆ ಅಂದು ತೋರಿಸು ಎಂದು ಎನ್ನಲು ಅವನು ಅದನ್ನು ಅಂದು ತೋರಿಸಲಾಗಿ ಅರಸನು ಅತ್ಯಂತ ಸಂತುಷ್ಟನಾಗಿ ಆ ರಾಗವನ್ನು ಒತ್ತೆ ಇಟ್ಟುಕೊಳ್ಳಲು ಒಡಂಬಟ್ಟು ಚೌಡಯ್ಯನಿಗೆ ೧೨ ಸಾವಿರ ವರಾಹಗಳನ್ನು ಸಾಲವಾಗಿ ಕೊಟ್ಟನು. ಹೀಗೆ ತನಗೆ ಬಂದ ಹಣದಿಂದ ಚೌಡಯ್ಯನು ಭಕ್ತಜಂಗಮರಿಗೆ ಒಂದು ಮಹತ್ತಾದ ಪರ್ವವನ್ನು ಮಾಡಿಸಿದನು.

ಈ ಪ್ರಕಾರ ಚೌಡಯ್ಯನು ತನ್ನ ಒಂದು ಶ್ರೇಷ್ಠವಾದ ರಾಗವನ್ನು ಒತ್ತೆ ಇಟ್ಟಿದ್ದರಿಂದ ಅವನು ಅದನ್ನು ಹಾಡುವದು ನಿಂತಿತು. ಆ ರಾಗದ ಮೂಲಕವಾಗಿಯೇ ಅವನು ಪರಮಾತ್ಮನನ್ನು ದಿನಾಲು ಭಕ್ತಿಯಿಂದ ಪ್ರಾರ್ಥಿಸುವನು. ಪರಮಾತ್ಮನು ಯಾವಾಗಲೂ ಗಾನಲೋಲನು ಮತ್ತು ನಾದ ಮೂರ್ತಿಯು ಎಂದು ಪ್ರಸಿದ್ಧನಾಗಿದ್ದಾನೆ. ಆದ್ದರಿಂದ ಚೌಡಯ್ಯನ ಈ ಶ್ರೇಷ್ಠವಾದ ರಾಗವು ನಿಂತು ಹೋದದ್ದರಿಂದ ಪರಮಾತ್ಮನ ಮನಸ್ಸಿನಲ್ಲಿ ಉದ್ವಿಗ್ನತೆಯು ಉಂಟಾಯಿತು. ಆಗ

ಅವನು ಜಂಗಮರೂಪವನ್ನು ಧಾರಣಮಾಡಿಕೊಂಡು ಆ ರಾಗವನ್ನು ಕೇಳಲು ಭೂಲೋಕಕ್ಕೆ ಇಳಿದು ಚೌಡಯ್ಯನಲ್ಲಿಗೆ ಬರುವವನಾದನು.

ಪರಮಾತ್ಮನು ಚೌಡಯ್ಯನ ಮನೆಯ ಮುಂದೆ ಬಂದು ನಿಲ್ಲಲು ಚೌಡಯ್ಯನು ಅವನನ್ನು ಒಳಗೆ ಬರಮಾಡಿಕೊಂಡು ಸತ್ಕರಿಸಿ ಅವನಿಗೆ ನಿಮ್ಮ ಅಭಿಲಾಷೆ ಏನಿರುವದು ಎಂದು ಕೇಳಲು, ಅವನು ನನಗೆ ನಿನ್ನ ರಾಮಕ್ರಿಯಾರಾಗವನ್ನು ಕೇಳುವದು ಬೇಕಾಗಿದೆ, ಅದನ್ನು ನೀನು ಹಾಡಿ ತೋರಿಸು ಎಂದೆನ್ನಲು, ಚೌಡಯ್ಯನು ಅದನ್ನು ಅರಸನಲ್ಲಿ ಒತ್ತೆ ಇಟ್ಟಿದ್ದೇನೆ, ಒತ್ತೆ ಬಿಡಿಸಿಕೊಳ್ಳುವ ವರೆಗೆ ಅದನ್ನು ನಾನು ಎಲ್ಲಿಯೂ ಹಾಡಲಾರೆನು, ಎಂದು ಹೇಳಿ ನಾನು ನನ್ನ ಸಾಲವನ್ನು ತೀರಿಸಿಕೊಳುವ ವರೆಗೆ ನಿನ್ನ ಇಷ್ಟವಿದ್ದರೆ ನನ್ನಲ್ಲಿರು ಎಂದು ಹೇಳಿದನು. ಅದಕ್ಕೆ ಆ ಜಂಗಮನು ಒಪ್ಪಿ ಅವನಲ್ಲಿರಹತ್ತಿದನು.

ಈ ಜಂಗಮನ ಹೆಸರು ನಾಗಿನಾಥ ಎಂಬುದಾಗಿತ್ತು. ಅವನು ಚೌಡಯ್ಯನಲ್ಲಿ ಬರೇ ಭೋಜನವನ್ನು ಮಾಡುತ್ತ ಕುಳ್ಳಿರದೆ, ಅವನಿಗೆ ಶಿವಾನುಭವದ ಗೂಢ ತತ್ವಗಳನ್ನು ಬೋಧಿಸುವವನಾದನು. ಅವುಗಳಂತೆ ಚೌಡಯ್ಯನು ಆಚರಿಸುವವನಾದನು. ಆಗ ಚೌಡಯ್ಯನು ನಾಗಿನಾಥನು ತನ್ನ ಜ್ಞಾನಗುರುವೆಂತಲೂ ಅದಕ್ಕೂ ಮೊದಲು ತನಗೆ ದೀಕ್ಷೆಯನ್ನು ಕೊಟ್ಟ ರೇಕಿನಾಥನು ತನ್ನ ದೀಕ್ಷಾ ಗುರುವೆಂತಲೂ ಭಾವಿಸಿ, 'ರೇಕಯ್ಯ ಪ್ರಿಯನಾಗಿನಾಥಾ' ಎಂದು ಉಭಯತರ ಹೆಸರುಗಳನ್ನು ಒಂದೇ ಮುದ್ರಿಕೆಯಲ್ಲಿ ಇಟ್ಟುಕೊಂಡು ಶಿವಾನುಭವದ ತತ್ವಗಳನ್ನು ವಚನಗಳ ಮೂಲಕ ಪ್ರಕಟಮಾಡಹತ್ತಿದನು. ಇದರಿಂದ ಅವನ ಮೂಲಕ ಶಿವಾನುಭವದ ತತ್ವಗಳು ಜನರಲ್ಲೆಲ್ಲ ಭರದಿಂದ ಪ್ರಸಾರಹೊಂದಹತ್ತಿದವು. ನಾಗಿನಾಥನು ಚೌಡಯ್ಯನಿಗೆ ಕಾಯಕದ ರೀತಿಯನ್ನು ಸಹ ಉಪದೇಶಿಸಿದನು. ಅವನು ಚೌಡಯ್ಯನಿಗೆ--ನೀನು ಇನ್ನುಮೇಲೆ ಶಿವಶರಣರ ಚರಿತ್ರೆಗಳನ್ನೇ ಹೆಚ್ಚಾಗಿ ಆಡಿತೋರಿಸು. ಶೈವದ ರೀತಿಯನ್ನು ಬಿಡು. ಶಿವಶರಣರು ಆಡಿದ್ದನ್ನೂ ಮಾಡಿದ್ದನ್ನೂ ನಿನ್ನ ಬಹುರೂಪಿನ ವಿದ್ಯೆಯ ಮೂಲಕ ಆಡಹತ್ತು. ನೀನು ಇನ್ನುಮೇಲೆ ಮೊರದ ಮೇಮಯ್ಯನು ಧನವನ್ನು ಹೊರಗೆ ಬಿಸಾಡಿದ್ದನ್ನೂ, ಬಡಿಹೋರಿ ಬೊಮ್ಮಯ್ಯನು ಭಕ್ತರಿಂದ ಬಡಿಸಿಕೊಂಡದ್ದನ್ನೂ, ಶಿವನು ಕಾರಿಕಾಲಮ್ಮೆಯು

ಮುಂದೆ ಕುಣಿದಾಡಿದ್ದನ್ನೂ, ಚನ್ನಯ್ಯನೊಡನೆ ಶಿವನು ಉಂಡಿದ್ದನ್ನೂ, ಬಂಕಯ್ಯನು ಬರಡಾಕಳಿನಿಂದ ಹಾಲು ಕರೆದದ್ದನ್ನೂ, ಭೋಗಯ್ಯ ಗಳ ಹಿಂದೆ ಲಿಂಗಗಳು ಉರುಳಿ ಹೋದದ್ದನ್ನೂ, ದೇವರದಾಸಿಮಯ್ಯನಿಗೆ ಶಿವನು ತವನಿಧಿಯನ್ನು ಕೊಟ್ಟಿದ್ದನ್ನೂ, ಪಿಟ್ಟವ್ವೆಗೆ ಶಿವನು ಬಿಟ್ಟಿಯನ್ನು ಹೊತ್ತದ್ದನ್ನೂ, ಆಡಿ ತೋರಿಸೆಂದು ಬೋಧಿಸಿದನು. ಅದಕ್ಕೆ ಚೌಡ ಯ್ಯನು ಒಪ್ಪಿ, ಚಿತ್ರವಿಚಿತ್ರವಾಗಿ ಅವುಗಳನ್ನು ಆಡಿ ಜನರಿಗೆ ಬೋಧಿಸ ಹತ್ತಿದನು. ಈ ಪ್ರಕಾರ ಅವನು ಶಿವಶರಣರ ಚರಿತ್ರೆಗಳನ್ನು ಬಹು ರೂಪಿನಲ್ಲಿ ಮನೋವೇಧಕವಾಗಿ ಆಡಿತೋರಿಸಲಾಗಿ ಜನರಲ್ಲಿ ಶಿವಶರಣರ ವಿಷಯವಾಗಿ ಭಕ್ತಿಯು ಬೆಳೆಯಿತು. ಶಿವಾನುಭವವು ಹೆಚ್ಚಿತು. ಇದರಿಂದ ದೇಶದಲ್ಲಿದ್ದ ಶೈವಮತಸ್ಥರೆಲ್ಲರೂ ಪುನರ್ದೀಕ್ಷೆಯನ್ನು ಹೊಂದುವವ ರಾದರು.

ಹೀಗೆ ಶಿವಶರಣರ ವಿಷಯವಾಗಿ ಭಕ್ತಿಯು ದೇಶದಲ್ಲಿ ಹೆಚ್ಚ ಲಾಗಿ ಅವರ ಆಟಗಳನ್ನು ಆಡುವ ಚೌಡಯ್ಯನಿಗೆ ತನ್ನ ಕಾಯಕದಿಂದ ಬರುವ ಹಣವು ವೃದ್ಧಿಯಾಗುತ್ತ ಬಂದಿತು. ಆದ್ದರಿಂದ ಅರಸನಿಗೆ ತಾನು ಕೊಡಬೇಕಾಗಿದ್ದ ಹಣವನ್ನು ಸಂಗ್ರಹಿಸಲಾಗಿ ಸಕಾಲದಲ್ಲಿ ತನ್ನ ಸಾಲವನ್ನು ಹರಿದುಬಿಟ್ಟು ಅವನಲ್ಲಿ ತಾನು ಒತ್ತೆ ಇಟ್ಟ ರಾಮಕ್ರಿಯಾ ರಾಗವನ್ನು ಬಿಡಿಸಿಕೊಂಡನು.

ಆಗ ಅವನ ಜ್ಞಾನಗುರುವಾದ ನಾಗಿನಾಥನು ಅತ್ಯಂತ ಹರುಷಿ ತನಾಗಿ ಚೌಡಯ್ಯನಿಗೆ, ನಾನು ಈ ವರೆಗೆ ರಾಮಕ್ರಿಯಾರಾಗವನ್ನು ಕೇಳಲು ನಿನ್ನಲ್ಲಿ ಕಾಯ್ದುಕೊಂಡಿದ್ದೇನೆ. ಅದನ್ನು ಈಗ ನನಗೆ ಹಾಡಿ ತೋರಿಸು ಎಂದು ಹೇಳಿದನು. ಆಗ ಚೌಡಯ್ಯನು ಸಂತೋಷಬಟ್ಟು ಅದನ್ನು ಅತ್ಯುತ್ತಮ ರೀತಿಯಿಂದ ಭಕ್ತಿಭಾವಪೂರಿತನಾಗಿ ಹಾಡಿತೋರಿ ಸಲು ನಾಗಿನಾಥನು ಸಂತುಷ್ಟನಾಗಿ ಚೌಡಯ್ಯನಿಗೆ ತನ್ನ ನಿಜರೂಪ ದೋರಿ—ಇನ್ನುಮೇಲೆ ನೀನು ಭೂಲೋಕದಲ್ಲಿರಬೇಡ. ಶೈವರನ್ನು ಶಿವಾ ನುಭವಿಗಳನ್ನಾಗಿ ಮಾಡಿದೆ. ನೀನು ನನ್ನೊಡನೆ ಈಗ ಕೈಲಾಸಕ್ಕೆ ನಡೆ, ಎಂದು ಹೇಳಿದನು. ಆದರೆ ಚೌಡಯ್ಯನು—ನನಗೆ ಕೈಲಾಸವು ಬೇಡ. ಶಿವಶರಣರ ಸಾನ್ನಿಧ್ಯಕ್ಕಿಂತಲೂ ಹೆಚ್ಚಿನದು ಯಾವುದು? ನಾನು ಅವರ ಸೇವೆ ಮಾಡುತ್ತ ಭೂಲೋಕದಲ್ಲಿಯೇ ಇರುವೆನು, ಎಂದು ನುಡಿ ಯಲಾಗಿ ಪರಮೇಶ್ವರನು ಕೈಲಾಸಕ್ಕೆ ಹೊರಟುಹೋದನು.

ಬಳಿಕ ಚೌಡಯ್ಯನು ಕೊಟ್ಟಗಿರಿಯಿಂದ ಕಲ್ಯಾಣಪಟ್ಟಣಕ್ಕೆ ಬಂದು ಅಲ್ಲಿ ಬಸವಾದಿ ಪ್ರಮಥರನ್ನು ಕಂಡು ತನ್ನ ಕಾಯಕದ ರೀತಿಯನ್ನು ಅವರಿಗೆ ತಿಳಿಸಿಹೇಳಿದನು. ಅವರು ಸಂತೋಷಬಟ್ಟು ಅವನನ್ನು ಶಿವಾನು ಭವ ಮಂಟಪದಲ್ಲಿಟ್ಟುಕೊಂಡರು. ಹೀಗೆ ಚೌಡಯ್ಯನು ಶಿವಾನುಭ ವವನ್ನು ಅರಿತುಕೊಂಡು ತನ್ನ ಬಹುರೂಪಿಯ ಕಾಯಕವನ್ನು ಸುತ್ತ, ಕಲ್ಯಾಣಪಟ್ಟಣದಲ್ಲಿ ಶಿವಶರಣರ ಸೇವೆಯನ್ನು ಮಾಡುತ್ತ, ಅಲ್ಲಿಯೇ ಐಕ್ಯನಾದನು.

ಚೌಡಯ್ಯನ ಚರಿತ್ರೆಯಿಂದ ಅನೇಕ ಮಹತ್ವದ ವಿಷಯಗಳು ವಿದಿತ ವಾಗುತ್ತವೆ. ಅವನ ಕಾಲದಲ್ಲಿ ಕರ್ನಾಟಕದಲ್ಲಿ ಗಾಯನ ವಿದ್ಯೆಗೆ ಅತ್ಯಂತ ಮಹತ್ವದ ಸ್ಥಾನವು ಪ್ರಾಪ್ತವಾಗಿತ್ತೆಂದು ತೋರುತ್ತದೆ. ಇಲ್ಲಿ ಅಸಂಖ್ಯ ಗಾಯನಕಲಾವಿದರು ಪ್ರೋತ್ಸಾಹಹೊಂದಿದರು. ಶಿವಶರಣರೂ ಶಿವಾನುಭವಿಗಳೂ ಬಸವಾದಿ ಪ್ರಮಥರೂ ಗಾನವಿದ್ಯೆಯನ್ನು ಪೋಷಿ ಸುತ್ತ ತಮ್ಮ ವಚನಗಳನ್ನು ರಾಗದಿಂದ ಅನ್ನುತ್ತ ಬಂದರು. ಇದರಿಂದ ಅವರು ಇವುಗಳನ್ನು 'ಗೀತೆ'ಗಳೆಂದು ಕರೆದಿದ್ದಾರೆ. ಆಗಿನ ಕಾಲದಲ್ಲಿ ಗಾಯನಪಟುಗಳು ಬಹುರೂಪಿಯ ಕಾಯಕವು ಕೀಳತರದ್ದೆಂದು ಭಾವಿ ಸದೆ ಅದರ ಮೂಲಕ ಪುರಾಣೋಕ್ತ ಕಥೆಗಳನ್ನೂ ಶಿವಶರಣರ ಚರಿ ತ್ರೆಗಳನ್ನೂ ಜನರಿಗೆ ಆಡಿ ತೋರಿಸುತ್ತಿದ್ದರು. ಆಗಿನ ಬಹುರೂಪಿಗಳು ಈಗಿನವರಂತೆ ಕೇವಲ ಮನೋರಂಜನ ಮಾಡುವವರಾಗಿ ವಿದೂಷಕ ರಂತೆ ಆಚರಿಸುತ್ತಿದ್ದಿಲ್ಲ. ಚೌಡಯ್ಯನು ಬ್ರಾಹ್ಮಣ ಕುಲದಲ್ಲಿ ಹುಟ್ಟಿ ದವನು. ಅವನು ಮೊದಲು ಶೈವ ಮಾರ್ಗಾನುಯಾಯಿಯು. ಆದರೆ ಮುಂದೆ ಅವನು ರೇಕಿನಾಥನಿಂದ ವೀರಶೈವ ದೀಕ್ಷೆಯನ್ನು ಹೊಂದಿ ಹೆಚ್ಚಿನ ಶಿವಾನುಭವವನ್ನು ನಾಗಿನಾಥನಿಂದ ಪಡೆದವನಾಗಿ ವಚನಕಾರನಾದನು. ಅವನ ಮೂಲಕ ಬಹುಜನ ಶೈವರು ಪುನರ್ದೀಕ್ಷೆಯನ್ನು ಹೊಂದಿ ಶಿವಾನುಭವದ ಮಾರ್ಗವನ್ನು ಕೈಕೊಂಡರು. ಚೌಡಯ್ಯನು ತನ್ನ ಮೊದಲಿನ ಬ್ರಾಹ್ಮಣ ವೃತ್ತಿಯನ್ನು ಬಿಟ್ಟುಕೊಟ್ಟು ಒಂದು ಕಾಯಕ ವನ್ನು ಕೈಕೊಳ್ಳುವವನಾದನು. ಇದರಿಂದ ಅವನು ತನಗೆ ಹೀನತನವು ಪ್ರಾಪ್ತವಾಯಿತೆಂದು ಭಾವಿಸಲಿಲ್ಲ. ಇದು ಶಿವಶರಣರ ಆಚರಣೆಯ ಪರಿ ಣಾಮವಾಗಿದೆ. ಯಾಕಂದರೆ ಶಿವಾನುಭವದಲ್ಲಿ ಭಿಕ್ಷೆಗೆ ಸ್ಥಾನವಿಲ್ಲ. ಕಾಯಕಕ್ಕೆ ಅದು ಮಹತ್ವಕೊಟ್ಟಿರುತ್ತದೆ. ಒಂದು ಕಾಲದಲ್ಲಿ ಚೌಡಯ್ಯನ

ಮನಸ್ಸಿನಲ್ಲಿ ಗಣಾರಾಧನೆಯನ್ನು ಮಾಡುವ ಅಪೇಕ್ಷೆಯು ಉಂಟಾಯಿತು. ಆದರೆ ಅವನು ಅದನ್ನು ಕೊನೆಗಾಣಿಸಲು ಭಿಕ್ಷೆಬೇಡಲಿಲ್ಲ. ಅದ ಕ್ಕೋಸ್ಕರ ಅವನು ಸಾಲಮಾಡಿದರೂ ಅವನು ತನ್ನ ಕಾಯಕದಿಂದ ದುಡಿದು ಹಣವನ್ನು ಸಂಪಾದಿಸಿ ಸಾಲವನ್ನು ಮುಟ್ಟಿಸಿಬಿಟ್ಟನು. ಅವನ ಜ್ಞಾನಗುರುವಾಗಿದ್ದ ನಾಗಿನಾಥನು ಅವನ ಮನೆಯಲ್ಲಿದ್ದಾಗ ಬರೀ ಭೋಜನವನ್ನಪೇಕ್ಷಿಸಿ ಕುಳ್ಳಿರದೆ ಶಿವಾನುಭವ ಶಾಸ್ತ್ರದ ಉಚ್ಚ ತತ್ವಗ ಳನ್ನು ಚೌಡಯ್ಯನಿಗೆ ಬೋಧಿಸುತ್ತ ಬಂದನು. ಚೌಡಯ್ಯನು ತನಗೆ ಬೋಧಿಸಿದಂತೆ ಆಚರಿಸಿ ತನಗೆ ಉಂಟಾದ ಶಿವಾನುಭವವನ್ನು ವಚನ ಗಳ ಮೂಲಕ ಜನತೆಯಲ್ಲಿ ಪ್ರಸಾರ ಮಾಡಲುದ್ಯುಕ್ತನಾದನು. ಈ ರೀತಿಯಾಗಿ ಬಹುಜನ ಶಿವಶರಣರು ಬಸವೇಶ್ವರನ ಕಾಲದಲ್ಲಿ ಆಚ ರಿಸಿದ್ದರಿಂದ ವೀರಶೈವಮತವು ಇಡೀ ಪ್ರಾಂತದಲ್ಲಿ ಪಸರಿಸಿತು.

ಚೌಡಯ್ಯನು ವಚನಕಾರನಿದ್ದಾನೆ. ಅವನ ೨೫ ವಚನಗಳು ನಮ್ಮಲ್ಲಿ ಉಪಲಬ್ಧವಿರುತ್ತವೆ. ಬಹುರೂಪಿಯು ತನ್ನ ಕಾಯಕದ ರೀತಿ ಯನ್ನು ಹೇಳಿದ ಕೆಲವು ವಚನಗಳು ಅವುಗಳಲ್ಲಿವೆ. ಅವುಗಳಲ್ಲಿ ಕೆಲ ವುಗಳನ್ನು ನಾವು ಕೆಳಗೆ ಉದಹರಿಸಿದ್ದೇವೆ. ಚೌಡಯ್ಯನು ಬಸವೇಶ್ವರನ ಕಾಲದವನು. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಚೌಡಯ್ಯನು ಬಹುದಿವಸ ವಾಸಿಸಿದ್ದ ಗ್ರಾಮವು ಕೊಟ್ಟಗಿರಿ ಎಂಬುದು ಇರುತ್ತದೆ. ಈ ಹೆಸರಿನ ಗ್ರಾಮವು ಈಗ ನೀಲಗಿರಿ ಪರ್ವತ ಪ್ರದೇಶದಲ್ಲಿದೆ. ಇಲ್ಲಿಯೇ ಚೌಡಯ್ಯನು ಇದ್ದಿರಬೇಕೆಂದು ತೋರುತ್ತದೆ.

### ವಚನಗಳು.

(೧) ಷಡುಚಕ್ರದ ವಳಯದಲ್ಲಿ ನಾನಾಡುವೆ ಬಹುರೂಪ. ಕುಂಡ ಲಿಯ ಭ್ರೂಮಧ್ಯದಲ್ಲಿ ನಾನಾಡುವೆ ಬಹುರೂಪ. ಭ್ರೂಮಧ್ಯ ಮಂಡ ಲದ ಹೃದಯಕಮಲದಬ್ಜಸ್ವರದ ಮಣಿಪೂರಕದ ಮೇಲೆ ನಾನಾಡುವೆ ಬಹುರೂಪ. ಬಯಲ ಬೆರಸಿದ ಮರೀಚಿಯಂತೆ ನಾನಾಡುವೆ ಬಹು ರೂಪ. ಉರಿಯುಂಡ ಕರ್ಪುರದಂತೆ ನಾನಾಡುವೆ ಬಹುರೂಪ. ರೇಕಣ್ಣ ಪ್ರಿಯನಾಗಿನಾಥಾ, ಬಸವಣ್ಣನಿಂದಾನು ಬದುಕಿದೆನಯ್ಯಾ.

(೨) ಅಪ್ಪಾ, ಬೊಪ್ಪಾಯೆಂಬ ಚಿಕ್ಕ ಚೋಹಮಂ ತೊಟ್ಟು ಮುಖಕ್ಕೆ ಹೊತ್ತಿಗೊಂದು ಪರಿಯ ಬಚ್ಚಣೆಯನಿಕ್ಕಿ ಮತ್ತದನು ತಲೆ

ಯಲ್ಲಿ ಹೊತ್ತು ತಪ್ಪ ಹೆಜ್ಜೆಯನ್ನಿಕ್ಕಿ ಆಡುತ್ತಿದ್ದ ರೇಕಣ್ಣಪ್ರಿಯನಾಗಿ ನಾಥನಲ್ಲಿ ಹೊತ್ತುಹೋಗದ ಬಹುರೂಪವ.

(೩) ಹುಟ್ಟುವಾತ ಮದ್ದಳೆಯ ಕಟ್ಟಿದ. ನಡೆವಾತ ತಾಳವ ನೋಡಿದ. ಬಿಡುವಾತ ಶ್ರುತಿಯನೆತ್ತಿದ. 'ತತ್ಥಾ ತಿತ್ಥಿ' ಎಂಬಾಟ ಎತ್ತಲೆ ಉಳಿಯಿತ್ತು ರೇಕಣ್ಣಪ್ರಿಯನಾಗಿನಾಥಾ.

(೪) ಬಂದ ಬಹುರೂಪಿನಲ್ಲಿ ಸಂದಿಲ್ಲದೆ ಆಟವನಾಡುತ ಬಂದ ಬಂದವರ ಮೆಚ್ಚಿಸುತ್ತ ಅವರವರಂದಕ್ಕೆ ಕೊಂಡಾಡಿ ಬಂದುದ ಕೈಕೊಂಡೆ ರೇಕಣ್ಣಪ್ರಿಯನಾಗಿನಾಥನಲ್ಲಿ.

(೫) ಇನ್ನಾಡುವೆ ಜಂಗಮ ಬಹುರೂಪ. ಈ ಲೋಕಕ್ಕೆ ಬಂದಿನ್ನು ಆನು ಹೋಗೆನಯ್ಯಾ! ಇನ್ನು ಆನು ಹೋದೆನಾದರೆ ಎನಗಿದ ಠಾವಿಲ್ಲ. ಮುನ್ನ ಹೋದವರೆಲ್ಲರೂ ತಗಹಿನಲ್ಲಿ ಕುಳ್ಳಿರ್ದರು. ಆನು ಗಹನವನರಿ ತೆನಾಗಿ ಒಲ್ಲದೆ ಬಂದೆನಿಲ್ಲಿಗೆ. ಇಲ್ಲೆನ್ನೋ ಮದ್ದಳಿಗ. ಒಲ್ಲೆನೆನ್ನೋ ಕಹಳೆಕಾರ. ಬಿಂದು ಹರಿದು ನಿಂದು ಹಾಕಿರೋ ಹಣತಿಯರಿರಾ. ತಾಳ ವಿತಾಳವಾಯಿತ್ತಲ್ಲಾ! ನಾದ ಸುನಾದವಾಯಿತ್ತಲ್ಲಾ! ಕೇಳಗಾಗಿ ಶೂನ್ಯವಾಯಿತ್ತಲ್ಲಾ! ರೇಕಣ್ಣಪ್ರಿಯನಾಗಿನಾಥ ಬಸವನಿಂದ ಬದುಕಿತೀ ಲೋಕವೆಲ್ಲ.

(೬) ಆಡಿದೆನಿವರನೊಡಗೂಡಿ. ಮಾಡಿದೆ ಸರ್ವಸಂಗವ. ನಾ ನೀನೆಂಬ ಭೇದವನಳಿದು ಕೂಡಿದೆ ಕೇಡಿಲ್ಲದ ಕೂಟವ. ಆಟವಾಯಿ ತ್ತಾಗಿ, ನೋಟ ತೀರಿತ್ತು ರೇಕಣ್ಣಪ್ರಿಯನಾಗಿನಾಥನಲ್ಲಿ.

ಮೇಲಿನ ವಚನಗಳಲ್ಲಿ ಚೌಡಯ್ಯನು ತಾತ್ವಿಕಾರ್ಥವನ್ನಿಟ್ಟು ತನ್ನ ಕಾಯಕದ ರೀತಿಯನ್ನು ವಿವರಿಸಿದ್ದಾನೆ. ಕೆಳಗಿನ ವಚನದಲ್ಲಿ ಅವನು ಪುನರ್ದೀಕ್ಷೆಯ ಅವಶ್ಯಕತೆಯನ್ನು ಕುರಿತು ನುಡಿದಿದ್ದಾನೆ.

(೭) ಕಳ್ಳನ ಕಯ್ಯಲ್ಲಿ ಒಂದು ಒಳ್ಳೆಯ ರತ್ನವ ಕಂಡರೆ ಎಲ್ಲರೂ ಬಂದು ತಲೆವಿಡಿವರಯ್ಯ. ಆ ರತ್ನವ ರತ್ನದ ವ್ಯವಹಾರಿ ಕಂಡರೆ ಆರಂ ಬಾಯೆತ್ತಲಮ್ಮರು. ಅದೆಂತೆಂದೊಡೆ "ಚೋರವಿಕ್ರಯ ರತ್ನಾನಾಂ ಪುನಃ ಕ್ರಯ ವರಂತಿ ವೈ । ಶೈವದೀಕ್ಷಾ ತು ಲಿಂಗಿನಾಂ ಪುನ

ದೀಕ್ಷಾ ವಿಶೇಷತಾ" ಎಂದುದಾಗಿ ಶೈವ ಗುರುವಿನ ಕಯ್ಯಲಿ ಸಾಹಿತ್ಯ ವಾದ ಲಿಂಗವನು ವೀರಶೈವ ಗುರುವಿನ ಕಯ್ಯಲ್ಲಿ ಕೊಟ್ಟು ಮರಳಿ ಕೊಂಡಡೆ ಆತ ಇಹಲೋಕ ಪೂಜ್ಯನು, ಪರಲೋಕ ಪೂಜ್ಯನು, ನಿಮ್ಮಾಣೆ, ನಿಮ್ಮ ಪ್ರಮಥರಾಣೆ, ತಪ್ಪದು ರೇಕಣ್ಣಪ್ರಿಯ ನಾಗಿನಾಥಾ.

ಹೀಗೆ ವಚನಕಾರರ ಚರಿತ್ರೆಗಳ ಛಾಯೆಯನ್ನು ಅವರ ವಚನ ಳಲ್ಲಿ ಕಂಡು ಹಿಡಿಯಬಹುದಾಗಿದೆ.

---

## ಶಿವ ಮಾಯಿದೇವಿ.

ಶಿವಮಾಯಿದೇವಿಯು ಕಲ್ಯಾಣ ಪಟ್ಟಣದಲ್ಲಿ ಪುರಾಣ ಹೇಳುವ ಕಾಯಕವನ್ನು ಮಾಡುತ್ತಾ ಇದ್ದಳು. ಅವಳು ಶಿವಶರಣರ ಚರಿತ್ರೆ ಗಳನ್ನು ಓದಿಕೊಂಡು, ಅವುಗಳನ್ನು ದಿನಾಲು ಸ್ತ್ರೀಯರಿದ್ದಲ್ಲಿಗೆ ಹೋಗಿ ಅವರಿಗೆ ತಿಳಿಸಿ ಹೇಳುವಳು. ಹೀಗೆ ಹೇಳುವದೇ ಅವಳಿಗೆ ಕಾಯ ಕವಾಗಿತ್ತು. ಈ ಪ್ರಕಾರ ಅವಳು ತನ್ನ ಜೀವಾವಧಿಯ ವರೆಗೂ ಶಿವಶ ರಣರ ಸೇವೆ ಮಾಡುತ್ತ ತನ್ನ ಜನ್ಮವನ್ನು ಕಳೆದಳು. ಪುರಾತನ ದೇವಿ ಯರ ತ್ರಿವಿಧಿಯಲ್ಲಿ ಈಕೆಯ ಉಲ್ಲೇಖವು ಇರುವದು ಹೇಗೆಂದರೆ—

ಶಿವ ಪುರಾಣವ ನಿತ್ಯ ಶಿವಶರಣೆಯರಿಗರುಪಿ.
ಅವರಿತ್ತ ಕಾಯಕವ ಜಂಗಮರಿಗೀವ।
ಶಿವಮಾಯಿದೇವಿ ಶರಣಾಗು ॥

ಹೀಗೆ ಪುರಾಣ ಹೇಳುವದನ್ನೇ ತನ್ನ ಕಾಯಕವನ್ನಾಗಿ ಮಾಡಿ ಕೊಂಡು ತನಗೆ ದೊರಕಿದ ಹಣದಿಂದ ಶಿವಮಾಯಿದೇವಿಯು ತನ್ನ ದಾಸೋಹ ಕಾರ್ಯಗಳನ್ನು ನಡಿಸುತ್ತ ಕಲ್ಯಾಣ ಪಟ್ಟಣದಲ್ಲಿ ಇರುವವ ಳಾಗಿದ್ದಳು. ಸ್ತ್ರೀಯರಿಗೆ ಅನುರೂಪವಾದ ಕಾಯಕವು ಇದಲ್ಲವೇ ?

# ಸೂರಂಬೆ.

ವೀರಶೈವರಲ್ಲಿ ಶಿವಲೆಂಕ ಮಂಚಣ್ಣ, ಶ್ರೀಪತಿ ಪಂಡಿತಾರಾಧ್ಯ ಮತ್ತು ಮಲ್ಲಿಕಾರ್ಜುನ ಪಂಡಿತಾರಾಧ್ಯ ಇವರು ಪಂಡಿತತ್ರಯರೆಂದು ಪ್ರಸಿದ್ಧರಾಗಿದ್ದಾರೆ. ಸೂರಂಬೆಯು ಮಲ್ಲಿಕಾರ್ಜುನ ಪಂಡಿತಾರಾಧ್ಯರ ಶಿಷ್ಯಳಾಗಿ ಪೊರಾಂಡಲವೆಂಬ ಪಟ್ಟಣದಲ್ಲಿ ವಾಸಿಸುತ್ತಿದ್ದಳು. ಈ ಪಟ್ಟಣವು ಬ್ರಾಹ್ಮಣರ ಮಹತ್ವದ ಅಗ್ರಹಾರವಾಗಿತ್ತು. ಸೂರಂಬೆಯು ಬ್ರಾಹ್ಮಣ ಕುಲದಲ್ಲಿ ಜನಿಸಿದರೂ ವೀರಶೈವ ಮಾರ್ಗವನ್ನು ಅನುಸರಿಸುತ್ತ ಶಿವಾನುಭವಕ್ಕೋಸ್ಕರ ಶ್ರದ್ಧೆಯನ್ನು ವಹಿಸಿದವಳಾಗಿದ್ದಳು. ಅವಳು ವಿಭೂತಿ ರುದ್ರಾಕ್ಷಧಾರಕಳಾಗಿ ಅತ್ಯಂತ ಶುಚಿರ್ಭೂತಳಾಗಿ ವರ್ತಿಸುತ್ತಿದ್ದಳು. ಭಕ್ತಜಂಗಮರು ಯಾವ ಜಾತಿಯವರಿದ್ದರೂ ಅವರು ತನ್ನ ಮನೆಗೆ ಬಂದಲ್ಲಿ ಅವರನ್ನು ಆದರಿಸಿ ಅವರೊಡನೆ ಪ್ರಸಾದವನ್ನು ಸೇವಿಸುವಳು. ಅಂತ್ಯಜರಿದ್ದರೂ ಕೂಡ ಅವಳು ಅವರನ್ನು ಮನೆಯೊಳಗೆ ಕರೆತಂದು ಸತ್ಕರಿಸಿ ಉಪಚರಿಸುವಳು. ಅವಳ ಈ ವರ್ತನೆಯು ಪಟ್ಟಣದಲ್ಲಿಯ ಬ್ರಾಹ್ಮಣರನ್ನು ಬಹಳ ಕೆರಳಿಸಿತು. ಆಗ ಅವರು ಪಟ್ಟಣದ ಅರಸನಲ್ಲಿಗೆ ಬಂದು, ಸೂರಂಬೆಯು ಯಾವ ಜಂಗಮನಿದ್ದರೂ ಕೂಡ ಅವನ ಪಾದೋದಕ ಪ್ರಸಾದವನ್ನು ಸ್ವೀಕರಿಸುತ್ತಾಳೆ, ಅಂತ್ಯಜನಿದ್ದರೂ ಅವನನ್ನು ಸತ್ಕರಿಸಿ ಅವನ ಒಕ್ಕು ಮಿಕ್ಕಪ್ರಸಾದವನ್ನು ಸೇವಿಸುತ್ತಾಳೆ. ಇದರಿಂದ ನಮ್ಮ ಅಗ್ರಹಾರವು ಹೊಲೆಗಲಿಸಿತು. ಅವಳಿಗೆ ತಾವು ಬುದ್ಧೀ ಹೇಳಬೇಕೆಂದು ಅರಸನಿಗೆ ಬಿನ್ನವಿಸಿಕೊಂಡರು. ಆಗ ರಾಜನು ಅವರಿಗೆ–ಸೂರಂಬೆಯು ಮನೆಯಲ್ಲಿ ಅಂತ್ಯಜನನ್ನು ಸೇವಿಸುತ್ತಿದ್ದುದನ್ನು ನನಗೆ ಪ್ರತ್ಯಕ್ಷ ತೋರಿಸಿರಿ. ಆಗ ನಾನು ಅವಳಿಗೆ ಬುದ್ಧೀ ಹೇಳುತ್ತೇನೆಂದನು. ಆದ್ದರಿಂದ ಬ್ರಾಹ್ಮಣರು ಸೂರಂಬೆಗೆ ತಿಳಿಯದಂತೆ ಅವಳ ಮನೆಯ ಮೇಲೆ ಕಾವಲಿಟ್ಟು ಅವಳನ್ನು ಕಾಯುತ್ತಬಂದರು.

ಸೂರಂಬೆಗೆ ಉಂಟಾದ ಈ ಪರಿಸ್ಥಿತಿಯನ್ನು ಪರಮಾತ್ಮನು ತಿಳಿದವನಾಗಿ ತಾನೇ ಅಂತ್ಯಜನ ವೇಷವನ್ನು ಧಾರಣಮಾಡಿಕೊಂಡವನಾಗಿ ಸೂರಂಬೆಯ ಮನೆಯ ಮುಂದೆ ಬಂದು ನಿಂತುಕೊಂಡನು. ಆಗ ಅವನ ಅಂಗದ ಮೇಲೆ ಲಿಂಗವು, ಕೊರಳಲ್ಲಿ ರುದ್ರಾಕ್ಷಿಗಳು, ವಿಭೂತಿ ಧಾರಣವು ಇದ್ದುದನ್ನು ಕಂಡು ಅವಳು ಅವನನ್ನು ಭಕ್ತಿಯಿಂದ

ಮನೆಯೊಳಗೆ ಬರಮಾಡಿಕೊಂಡು ಸತ್ಕರಿಸಹತ್ತಿದಳು. ಇದನ್ನೇ ಕಾಯುತ್ತ ಕುಳಿತಿದ್ದ ಬ್ರಾಹ್ಮಣರು ಕೂಡಲೆ ಅರಸನಲ್ಲಿಗೆ ಹೋಗಿ ಅವನಿಗೆ ಇದನ್ನು ತಿಳಿಯಪಡಿಸಿದರು. ಅರಸನು ಅವರೊಡನೆ ಸೂರಂಬೆಯ ಮನೆಗೆ ಬಂದು, ಬ್ರಾಹ್ಮಣರೆಲ್ಲರೂ ಮನೆಯನ್ನು ಮುತ್ತಿಕೊಂಡಿರಲು, ಬಾಗಿಲನ್ನು ತೆರೆಯಿಸಿದನು. ಅವನು ಒಳಗೆ ಬಂದು ಅವಳಿಗೆ–ನಿನ್ನ ಮನೆಯಲ್ಲಿ ಅಂತ್ಯಜನು ಇದ್ದಾನೆಯೇ ಹೇಗೆಂದು ಪ್ರಶ್ನೆ ಮಾಡಲು, ಅದಕ್ಕೆ ಅವಳು–ನನ್ನ ಮನೆಗೆ ಬರುವವರೆಲ್ಲರೂ ಮಾಹೇಶ್ವರರು. ನಾನೊಬ್ಬ ಭಕ್ತೆ. ನನ್ನ ಮನೆಯಲ್ಲಿ ಯಾವ ಅಂತ್ಯಜನನ್ನೂ ನಾನು ಬರಮಾಡಿಕೊಳ್ಳುವದಿಲ್ಲ. ಅಂತ್ಯಜರು ಈಗ ಗೃಹದ ಹೊರಗೆ ಸುತ್ತಲೂ ಇದ್ದಾರೆ. ಅವರನ್ನು ದೂರೀಕರಿಸುತ್ತೇನೆ, ಎಂದು ಮನೆಯನ್ನು ಮುತ್ತಿಕೊಂಡಿದ್ದ ಬ್ರಾಹ್ಮಣರನ್ನು ಕುರಿತು ನುಡಿದಳು. ಆಗ ಅರಸನು ಮನೆಯ ಒಳಗೆಲ್ಲ ಹುಡಿಕಿ ನೋಡಲು ಅಲ್ಲಿ ಯಾರೂ ಇರಲಿಲ್ಲ. ಅಂತ್ಯಜನು ಮಾಯವಾಗಿದ್ದನು. ಆದರೆ ಅಂತ್ಯಜನು ಒಳಗೆ ಬಂದದ್ದನ್ನು ಕಣ್ಣಾರೆ ಕಂಡು ಮುತ್ತಿಗೆ ಹಾಕಿದ್ದ ಬ್ರಾಹ್ಮಣರು ಮನೆಯಲ್ಲಿ ಯಾರೂ ಇಲ್ಲದ್ದನ್ನು ಕಂಡು ಆಶ್ಚರ್ಯಚಕಿತರಾಗಿ ಒಳಗೆ ಬಂದ ಅಂತ್ಯಜನು ಅಂತ್ಯಜನಲ್ಲ. ಪ್ರತ್ಯಕ್ಷ ಪರಮಾತ್ಮನಿರಬೇಕೆಂದು ತಿಳಿದು, ಸೂರಂಬೆಯದೇ ನಿಜವಾದ ಭಕ್ತಿಯು, ಅವಳು ಶಿವಾನುಭವಿಯು, ನಾವೇ ತಪ್ಪುಗಾರರು ಎಂದು ತಿಳಿದವರಾಗಿ ಸೂರಂಬೆಯನ್ನು ಹೊಗಳುತ್ತ ಹೊರಟುಹೋದರು.

ಸೂರಂಬೆಗೆ ಸೂರಸಾನಮ್ಮ, ಸೂರಮ್ಮ, ಸೂರವ್ವೆ, ಎಂಬ ಹೆಸರುಗಳೂ ಇವೆ. ಪುರಾತನ ತ್ರಿವಿದಿಯಲ್ಲಿ ಆಕೆಯ ವಿಷಯವಾಗಿ ಹೇಳಿರುವದು ಏನೆಂದರೆ—

ಮಾರಾರಿಯು ಶ್ವಪಚಾಕಾರದಿಂ ಬರಲಾಗ।
ಧೀರೆ ತಾ ಕಂಡು ಶಿವನೆಂದು ನಂಬಿರ್ದ।
ಸೂರಸಾನಮ್ಮ ಶರಣಾಗು॥

ಸೂರಮ್ಮಯ ಹೆಸರು ಗಣಸಹಸ್ರದಲ್ಲಿ ಬಂದಿದೆ. ಅವಳು ಬಸವೇಶ್ವರನ ಕಾಲದಲ್ಲಿ ಇದ್ದಳು. ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಂದ ಅನುಗ್ರಹಿಸಲ್ಪಟ್ಟವಳಾದ್ದರಿಂದ ಅವಳು ಶಿವಶರಣೆಯರಲ್ಲಿ ಬಹಳ ಮಹತ್ವದ ಸ್ಥಾನವನ್ನು ಹೊಂದಿದ್ದಾಳೆ.

---

# ಶಿವಾನುಭವ

ವರ್ಷ ೧೮ | ಫೇಬ್ರುವರಿ ೧೯೪೪. | ಸಂಚಿಕೆ ೫

## ಲಿಂಗವಂತ ಧರ್ಮದ ಸರ್ವಸ್ವ

(ಅನುವಾದಕರು— ಶ್ರೀ. ವಿ. ರು. ಕೊಪ್ಪಳ ಎಂ. ಎ. ಬಿ. ಟಿ. ಧಾರವಾಡ)

(ಧಾರವಾಡ ನವಕಲ್ಯಾಣ ಮಠದ ಶ್ರೀ ಕುಮಾರ ಸ್ವಾಮಿಗಳು ಇಂಗ್ಲಿಷಿನಲ್ಲಿ ಬರೆದ ಒಂದು ವಿಮರ್ಶಾತ್ಮಕ ಲೇಖದ ಅನುವಾದವು.)

[ಹಿಂದಿನ ಸಂಚಿಕೆಯಿಂದ ಮುಂದುವರಿದು ಮುಗಿದದ್ದು.]

ವಸ್ತುಗಳ ಅರಿವು ಇಲ್ಲನೆ ವಸ್ತುಸಂಗ್ರಹಾನುಭೂತಿ ಮತ್ತು ವಸ್ತುಗ್ರಹಣ ಇವುಗಳಲ್ಲಿ ಸ್ಪಷ್ಟವಾದ ಭೇದವುಂಟು. ಪ್ಲೇಟೊ (*Plato*) ಮತ್ತು ಅರಿಸ್ಟಾಟಲ್ (*Aristotle*) ಇವರು 'ಕಣ್ಣಿನಿಂದ ಕಾಣು' 'ತಿಳಿಯಿಂದ ತಿಳಿ' 'ವಿಚಾರದಿಂದ ವಿಚಾರಿಸು' ಎಂಬ ಪದಪ್ರಯೋಗಗಳನ್ನು ಮಾಡಿರುವರು. ಇಲ್ಲಿ ಮನದ ವ್ಯವಹಾರದಿಂದ ಅರಿವು ಭಿನ್ನವಾಗಿದೆ ಎಂಬುದನ್ನು ತಿಳಿಸುವುದೇ ಅವರ ಉದ್ದೇಶವಾಗಿದೆ ಎಂದು ಹೇಳಬಹುದು. ಕೇನೋಪನಿಷತ್ತಿನಲ್ಲಿಯೂ ಸಹ

यद्वाचा नभ्युदितं येन वागभ्युद्यते
यन्मनसा न मनुते येनाहुर्मनो मतं
यच्चक्षुषा न पश्यति येन चक्षूंसि पश्यति
यच्छ्रोत्रेण न शृणोति येन श्रोत्रमिदं श्रुतं
यत्प्राणेन न प्राणिति येन प्राणः प्रणीयते
तदेव ब्रह्म त्वं विद्धि नेदं यदिदमुपासते

ಎಂಬಿವೇ ಮೊದಲಾದ ಅಚ್ಚರಿಗೊಳಿಸುವ ವಾಕ್ಯಗಳನ್ನು ಕಾಣಬಹುದು. ಪ್ರಾಚೀನ ತತ್ತ್ವಜ್ಞಾನಿಗಳಲ್ಲಿ ಪ್ಲೊಟಿನಸ್ (*Plotinus*) ಅವನು ಮೊಟ್ಟ ಮೊದಲಿಗೆ ಇಂತಹ ಭೇದವನ್ನು ತೋರಿಸಿದನು. ಮತ್ತು ಈ ವಸ್ತು ಸಂಗ್ರಹಾನುಭೂತಿಗೆ 'ಪರಾಕೊಲೊನ್‌ಥಿಸೆಸ್' (*Parakolonthesis*) ಎಂದು ಕರೆದನು. ಪರಾಕೊಲೊನ್‌ಥಿಸೆಸ್ ಇದು ಚಿತ್ಪ್ರಕಾಶದ ನೆನವನ್ನು ಮಾಡಿಕೊಡುತ್ತದೆ. "ಬುದ್ಧಿಯು ಒಂದು ವಿಷಯವಾದರೆ ಬುದ್ಧಿಗ್ರಹಿಕೆಯು ಮತ್ತೊಂದು ವಿಷಯವು. ಬುದ್ಧಿವಂತಿಕೆಯುನ್ನು ನಾವು ಯಾವಾಗಲೂ ಅರಿತರೂ ಆ ಬುದ್ಧಿವಂತಿಕೆಯನ್ನರಿಯುವೆವೆಂಬ ತಿಳಿಯು ನಮಗೆ ಯಾವಾಗಲೂ ಇರುವದಿಲ್ಲ." ಮನದ ವ್ಯವಹಾರದ ಜೊತೆಗೆ ಅರಿವು ಬೆರೆತುಕೊಂಡಿರಲೆಬೇಕೆಂಬ ಅವಶ್ಯಕತೆಯಿಲ್ಲ ಎಂಬುದನ್ನು ಮೊದಲು ಸ್ಪಷ್ಟವಾಗಿ ನಿರೂಪಿಸಿದವನು ಯುರೋಪದ ಆಧುನಿಕ ತತ್ತ್ವಜ್ಞಾನಿಯಾದ ಲಿಬ್ನಿಯು ( *Leibniz* ). "ಸ್ವಭಾವದ ಬಗೆಗೆ ಆಲೋಚಿಸುವಾಗ ಅದರ ಯಾವುದೇ ಸ್ವರೂಪವನ್ನು ಎದುರಿಗಿಟ್ಟುಕೊಳ್ಳುವ ಶಕ್ತಿಯು ವಸ್ತುತಃ ಆತ್ಮನಿಗಿದೆ. ಆತ್ಮನ ಈ ಕಾರ್ಯದಿಂದ ಯಾವುದಾದರೊಂದು ಸ್ವಭಾವವು ಯಾವುದಾದರೊಂದು ಸ್ವರೂಪವು ಅಥವಾ ಯಾವುದಾದರೊಂದು ಸತ್ವವು ವ್ಯಕ್ತವಾಗಬಹುದು. ಆದರೆ ಅದಕ್ಕೆಲ್ಲ ವಸ್ತುನಿಷ್ಠ ವಿಚಾರವೇ ಕಾರಣವು. ನಾವು ವಿಚಾರಪರರಾಗಿರಲಿ ಇಲ್ಲವೆ ಆಗದಿರಲಿ ಇದು ನಮ್ಮಲ್ಲಿ ಯಾವಾಗಲೂ ಇದ್ದೇ ಇರುತ್ತದೆ." ಈ ಮಾತುಗಳಲ್ಲಿ ಪ್ರಾಣವ್ಯಾಪಾರವೆಲ್ಲ ಮರವೆಗೊಳಗಾದುದು. ಅರಿವಿನ ಬೆಳಕು ಬಿದ್ದಾಗ ಮಾತ್ರ ಅದು ಬೆಳಗುವದು. ಆಗ ಅರಿಕೆಗೊಳ್ಳುವವನಿಗೆ ಅದರ ಅರಿವುಂಟಾಗುವದು ಎಂಬ ಅಭಿಪ್ರಾಯವಿರುತ್ತದೆ. ಈ ಸ್ವಯಂ ಪ್ರಕಾಶಿತ ಅರಿವಿಗೆ ಈ ಚಿತ್‌ಪ್ರಕಾಶಕ್ಕೆ ಜ್ಯೋತಿಲಿಂಗವೆಂದು ಹೆಸರು.

ವ್ಯಕ್ತಿ ವಿಶ್ವಗಳ—ಪಿಂಡ ಬ್ರಹ್ಮಾಂಡಗಳ-ಆತ್ಮವೆನಿಸಿದ ಜ್ಯೋತಿಲಿಂಗ ಇಷ್ಟಲಿಂಗಗಳು ಪರಸ್ಪರ ಅನನ್ಯವಾದವುಗಳು. ಆದುದರಿಂದ ಅವುಗಳಲ್ಲಿ ಪರಸ್ಪರ ಹೊಂದಿಕೆ ಇದೆ. ಪಿಂಡಗತ ಆತ್ಮನಿಗೆ ಅಂಗನೆಂದು ಹೆಸರು. ಅದು ಚಿದ್‌ರೂಪವಾಗಿಹುದು, ಶುದ್ಧವಾದ ಅರುಹಿನಿಂದ ಬೆರೆತಿಹುದು. ಬಹ್ಮಾಂಡಗತ ಆತ್ಮನಿಗೆ ಲಿಂಗವೆಂದು ಹೆಸರು. ಅದು ಸದ್‌ರೂಪವಾಗಿಹುದು, ಶುದ್ಧವಾದ ಇರುಹಿನಿಂದ ಬೆರೆತಿಹುದು. ಅಂಗ ಲಿಂಗಗಳಲ್ಲಿ ಅಭಿನ್ನತೆಯಿದೆ, ಅವು ಒಂದೆಯಾಗಿರುವವು ಎಂಬುದು

'ಅಹಂಗ್ರಹೋಪಾಸನೆ'ಯಿಂದ ಸಿದ್ಧವಾಗುವದು ನಿಚ್ಚ ಎಚ್ಚರಿಕೆಯಿಂದ ಸಾಗಿ ತೋರಿಕೆಯಲ್ಲಿಯ ಅನಂತವಾದ ಅನೇಕತ್ವದಲ್ಲಿ ಏಕತ್ವದ ಇರುವಿನ ಬಗೆಯನ್ನು ಅಳವಡಿಸಿಕೊಂಡರೆ ಅದುವೆ ಸಮರಸವೆನಿಸುವುದು. ಈ ಸಮರಸದ ಆನಂದವು ಉಪಮಾತೀತವಾಗಿಹುದು. ಆದುದರಿಂದ ಸಾಮರಸ್ಯವು ಆನಂದರೂಪವಾಗಿಹುದು. ಸಚ್ಚಿದಾನಂದದ ಪರಮಾದರ್ಶಕ್ಕೆ ಲಿಂಗವಂತ ಧರ್ಮ ಪರಿಭಾಷೆಯಲ್ಲಿ ಲಿಂಗಾಂಗ ಸಾಮರಸ್ಯವೆಂಬ ಹೆಸರಿದೆ ವ್ಯಕ್ತಿಯಲ್ಲಾಗಲಿ, ವಿಶ್ವದಲ್ಲಾಗಲಿ, ಪಿಂಡಾಂಡದಲ್ಲಾಗಲಿ ಬ್ರಹ್ಮಾಂಡದಲ್ಲಾಗಲಿ ಒಡಲುಗೊಂಡ ಆತ್ಮವು ಅನಂತವಾದ ಅವಿಭಾಜ್ಯವಾದ ಇರುಹನ್ನು ವ್ಯಕ್ತಗೊಳಿಸುವದು. ಈ ಇರುಹಿನ ಪ್ರಾಮುಖ್ಯವಾದ ಲಕ್ಷಣವು ಸ್ವಾನುಭಾವ ಜೀವಿಯ ಅನಂತವಾದ ಅವಿನಾಶಿಯಾದ ಶಕ್ತಿಯಲ್ಲಿ ವ್ಯಕ್ತಗೊಳ್ಳುವದು ಮತ್ತು ಈ ಸ್ವಾನುಭವಕ್ಕೆ ಅನಂತವಾದ ಅವಿಚ್ಛಿನ್ನವಾದ ಆನಂದಾನುಭೂತಿಯೇ ಮುಖ್ಯ ಲಕ್ಷಣವಾಗಿಹುದು. ಪರಶಿವನು ಸಚ್ಚಿದಾನಂದ ಲಕ್ಷಣ ಲಕ್ಷಿತನು; ಅವನು ಆನಂದಯುತ ಅರುಹಿನಿಂದ ಬೆರೆತ ಅನಂತವಾದ ಇರುಹಿನಲ್ಲಿ ವ್ಯಕ್ತಗೊಳ್ಳುವನು. ಬಗೆಬಗೆಯಾಗಿ ಕಂಡು ಬಗೆಬಗೆಯಾಗಿ ರೂಹಿಸಿರುವ ಅವನ ಆ ಅಪರಿಮಿತವಾದ ಆನಂದವೇ ಅಪಾರ ವಿಶ್ವವಾಗಿಹುದು—

को ह्येवान्यात् कः प्राण्यात् यदेष आकाश आनन्दो न स्यात् एषः ह्येवानन्दयाति' (२-८)

ಎಂದು ತೈತ್ತಿರೀಯ ಉಪನಿಷತ್ತು ಈ ಆನಂದವನ್ನು ಕುರಿತು ವಿವೇಚಿಸಿರುವದು. ನಮ್ಮ ಇರುಹನ್ನು ಬಳಸಿಕೊಂಡಿರುವ ಈ ವಿಶ್ವಜೀವನವು ಸ್ಪಷ್ಟವಾದ ಶಕ್ತಿಯೊಂದರ ಸೂತ್ರದಿಂದ ಸಾಗಿಹುದು. ಆದರೆ ಇದು ಸೃಷ್ಟಿ ಸ್ಥಿತಿ ಲಯಗಳ ತಾಳಮೇಳದಿಂದ ಕೂಡಿಹುದೆಂಬುದೂ ಸ್ಪಷ್ಟವಾದುದು. ಈ ತಾಳಮೇಳವು ಹಲವು ತೆರನಾಗಿ ತನ್ನನ್ನು ತಾನು ತೋರ್ಪಡಿಸುವ ಪರವಸ್ತುವಿನ ಪರಮಾನಂದದ ಲೀಲೆಯಾಗಿಹುದು. ಆದುದರಿಂದ ಚಾರ್ವಾಕರು ಹೇಳುವಂತೆ ವಿಶ್ವಗತಿಯು ಸೂತ್ರರಹಿತವಾದ ಗಲಿಬಿಲಿಯಾಗಿರದೆ ಸೂತ್ರ ಸಂಬದ್ಧವಾದ ಸುಮನೋಹರವಾದ ಗತಿಯ ಗಮಕವನ್ನು ವ್ಯಕ್ತಗೊಳಿಸುವದು. 'ಈ ಸೃಷ್ಟಿಯು ದಿವ್ಯಶಕ್ತಿಯೊಂದರ ಗೂಢವಾದ ಒಡಲಿನಲ್ಲಿ ಎಡೆವಿಡದೆ ಧ್ವನಿಗುಡುವ ಆನಂದಮಯ ದಿವ್ಯ ನೆನಹಿನಿಂದ—ಎಂದೆಂದಿಗೂ ಸರ್ವ ಸಮ್ಮತವಾದ ದಿವ್ಯ ನೆನಹಿನಿಂದ—

ಹೊರಹೊಮ್ಮಿರುವದು... ಈ ಅಖಿಲವಾದ ಸೃಷ್ಟಿಯು ಶಾಶ್ವತವಾದ ಪ್ರೇಮ ಪುತ್ಥಳಿಯ ಘನವಾದ ಲೀಲೆಯಾಗಿರುವದು. ಇದು ಪ್ರಭುವಿನ ಬದಲಾಗಿ ಬಾಳಿ ಬೆಳೆಯುವ ಪ್ರೇಮ ಆನಂದಗಳ ಸುಸ್ವರೂಪವಾಗಿ ರುವದು.’ ಆ ದೇವನ ಈ ಪ್ರೇಮ ಆನಂದಗಳಲ್ಲಿ ಪಾಲುಗಾರನಾಗಿ ಅನಂತವಾದ ಆ ಒಂದು ದಿವ್ಯ ಜೀವನದಲ್ಲಿ ಹೊಂದಿಕೆಗೊಂಡು ಸಾಗ ಬೇಕೆಂಬುದೆ ಲಿಂಗವಂತನ ಗುರಿಯಾಗಿಹುದು.

ದಿವ್ಯಾತ್ಮನ ಇರುಹು ಶುದ್ಧವಾಗಿ ಸೀಮಾತೀತವಾಗಿ ತಾನೆತಾನಾಗಿ ಇರುವದು. ಅದಕ್ಕೋಸುಗ ಅದಕ್ಕೆ ‘ಸತ್’ ಎಂದು ಹೆಸರು. ಅದು ತನ್ನ ಅರುಹಿನ ನಿಸ್ಸೀಮವಾದ ಶುದ್ಧತೆಯಿಂದ ಬಹಿರ್ಗರಿಸಿದುದೆಲ್ಲ ಸತ್ಯವೇ ಆಗಿರುವದು. ಆದು ಕಾಲ ಅವಕಾಶಗಳ ಕಟ್ಟುನಿಟ್ಟುಗಳಿಗೆ ಒಳಗಾಗಿಲ್ಲ. ತಾನೆ ತಾನಾದ ಆ ಅರುವಿನ ಇರುವು ಆನಂದದ ಆಗರ ವಾಗಿಹುದು. ವಿಶ್ವವು ಮಾತ್ರ ಕಾಲ ಅವಕಾಶಗಳ ಕಟ್ಟುನಿಟ್ಟುಗಳಿಗೆ ಒಳಗಾಗಿ ಹೊರಹೊಮ್ಮಿರುವದು ಆದರೂ ಅದರಲ್ಲಿ ಒಂದು ಗತಿಯಿದೆ, ಅದರಲ್ಲಿ ಒಂದು ಕೃತಿಯಿದೆ, ಅದರಲ್ಲಿ ಸಂಬಂಧ ಶಕ್ಯತೆಗಳಿಂದೊಡಗೂ ಡಿದ ಒಂದು ಪ್ರಗತಿಯಿದೆ. ಆದುದರಿಂದ ಅದರಲ್ಲಿ ದಿವ್ಯಜ್ಞಾನದ ದಿವ್ಯ ನೆನಹಿನ ಶಕ್ತಿಯೊಂದು ಬೆರತಿರಲೆಬೇಕು. ಮತ್ತು ಆ ಶಕ್ತಿಯೇ ತನ್ನ ಅಗಾಧವಾದ ಸಾಮರ್ಥ್ಯದಿಂದ ಮೂಲದಿಂದ ಹಲವಾಗಿ ಹೊರಹೊ ಮ್ಮುವದು. ಹಲವುಗಳಲ್ಲಿ ಪರಸ್ಪರ ಸಂಬಂಧಗಳನ್ನು ನಿಯಾಮಿಸುವದು, ಶಕ್ಯತೆಗಳನ್ನು ಕಲ್ಪಿಸಿಕೊಡುವದು, ಮತ್ತು ವಿಶ್ವಗತಿಯ ಅಚ್ಚುಗೊಳಿ ಸುವ ತಾಳಮೇಳಗಳನ್ನೂ ಸಾಗಿಸುವದು. ಇದು ‘ಸತ್’ಶಕ್ತಿಯು ಹೊರತು ಬೇರೆ ಇನ್ನಾವುದೂ ಆಗಿರದು. ಈ ಶಕ್ತಿಗೆ ವಿಮರ್ಶಶಕ್ತಿಯೆಂದೂ ಹೆಸರು. ಇದು ತನ್ನಲ್ಲಿ ಇಲ್ಲದುದನ್ನು ಎಂದೂ ರೂಪಿಸದು. ಈ ದೆಸೆಯಿಂದ ವ್ಯಕ್ತಿ ವಿಶ್ವಗಳ ಪಿಂಡಬ್ರಹ್ಮಾಂಡಗಳ ಕಟ್ಟಳೆಯು ಹೊರಗಿನಿಂದ ಹೇರಿ ದುದಲ್ಲ; ಒಳಗಿನಿಂದ ಹೊರಹೊಮ್ಮಿದುದಾಗಿದೆ. ಆದುದರಿಂದ ಪ್ರಗ ತಿಯೆಂಬುದೆಲ್ಲ ತನ್ನ ಪ್ರಗತಿಯಾಗಿಹುದು. ಮೂಲವೆಂಬುದೆಲ್ಲ ವಸ್ತು ಗಳಲ್ಲಡಗಿಹ ಸತ್ಯದ ಮೂಲವಾಗಿಹುದು. ಹಲವೆಂಬುದೆಲ್ಲ ಆ ಮೂಲದ ಮರೆಯಲ್ಲಿಹ ಬಲದಿಂದ ನಿಶ್ಚಿತವಾಗಿಹುದು. ಆದುದರಿಂದ ವಿಶ್ವದಲ್ಲಿ ಒಂದು ಹಲವುಗಳ ನಡುವೆ ಯಾವಾಗಲೂ ಒಂದು ಸ್ಥಿರವಾದ ಸಂಬಂಧ ವಿದೆ. ಒಂದು ಹಲವುಗಳಲ್ಲಿ ಮತ್ತು ಹಲವು ಹಲವುಗಳಲ್ಲಿ ಸಹ

ಅಸಂಖ್ಯವಾದ ಸಂಬಂಧಗಳಿರುವ ಸಂಭವವುಂಟು. ಈ ಸಂಬಂಧಗ ಳೆಲ್ಲ ಪರವಸ್ತುವಿನಲ್ಲಿ ನೈಜವಾಗಿ ಅಡಕಗೊಂಡಿರುವ ಆ ಶಕ್ತಿಯಿಂದ ನಿಶ್ಚಿತಗೊಳ್ಳುತ್ತವೆಂಬುದನ್ನು ಈ ಮುಂಚಿತವಾಗಿಯೇ ಅರಿತುಕೊಂಡಿದೆ. ಮೊದಮೊದಲು ಅವು ಪುರುಷರಲ್ಲಿ ಅರುಹಿನ ಸಂಬಂಧಗಳಾಗಿ ತೋರು ವವು ಆಬಳಿಕ ಅವು ಪುರುಷರಿಂದ ಪರವಸ್ತುವಿನೊಡನೆ ಅರುಹಿದ ಸಂಬಂಧ ವನ್ನು ಬೆಳಿಸಲು ಸಾಧನಗಳಾಗಿ ಬಳಕೆ ಹೊಂದುವವು. ಪರವಸ್ತು ವಿನೊಡನೆ ಅನೇಕ ಸಂಬಂಧಗಳನ್ನು ಬೆಳಿಸಿರುವ ಈ ಕ್ರಮುವೇ ಧರ್ಮದ ಮೂಲಭೂತ ಉದ್ದೇಶ ಮತ್ತು ವ್ಯವಹಾರವೆನಿಸುವದು. ಈ ಪ್ರಪಂಚ ದಲ್ಲಿ ಈ ಪ್ರಾಕೃತ ಸೃಷ್ಟಿಯಲ್ಲಿ ವ್ಯಕ್ತವಾಗಿಹ ಅನಿವಾರ್ಯವಾದ ಸತ್ಯ ವಾದ ನಿತ್ಯವಾದ ಮತ್ತು ಮಾನವನ ಆಗು ಹೋಗುಗಳನ್ನು ನಿಯಾ ಮಿಸುವ ಬಲವಾದ ಕಟ್ಟಳೆಯ ಕ್ರಮದ ದೆಸೆಯಿಂದಲೇ ಧರ್ಮಗಳೆಲ್ಲ ಸರಿ ಯಾದವುಗಳೆಂದು ಹೇಳಲಾವದು; ಲಿಂಗವಂತರ ಧರ್ಮವು ಕೂಡ ಇದಕ್ಕೆ ಅಪವಾದವಾದುದಲ್ಲ.

ಈ ಪ್ರಪಂಚದಲ್ಲಿ ತೋರಿಹ ಅನೇಕತ್ವದಲ್ಲಿಯ ಸಂಬಂಧ ಸೂತ್ರ ಗಳನ್ನರಿತು ಅಲ್ಲಿ ಪರಸ್ಪರ ಹೊಂದಿಕೆಗೊಂಡು ವ್ಯಕ್ತವಾಗಿಹ ಏಕತ್ವದ ತಿಳಿವನ್ನುಂಟುಮಾಡಿಕೊಳ್ಳಬೇಕು. ಸತ್ಯದ ನೆಲೆಗಾಣಲು ಇದುವೆ ಹಾದಿ, ಇದುವೆ ಧರ್ಮದ ಉದ್ದೇಶ ವ್ಯವಹಾರಗಳ ಒಗಟು, ಎಂದು ಇದೇ ಮಾತನ್ನು ಇನ್ನೊಂದು ವಿಧವಾಗಿ ಹೇಳಬಹುದು. ಈ ತಿಳಿವಿನಲ್ಲಿ ತರ ಗತಿಗಳಿರುವವು ಎಂಬದು ಸ್ವಾಭಾವಿಕವಾಗಿರುವದು. ಮತ್ತು ಲಿಂಗ ವಂತರಲ್ಲಿ ಷಟ್‌ಸ್ಥಲದ ಕ್ರಮಬದ್ಧವಾದ ಅನುಭವವು ಇರುವುದಾದರೂ ಸತ್ಯದ ಬಗೆಗೆ ಈ ತಿಳಿವನ್ನು ಉಂಟುಮಾಡಿಕೊಳ್ಳುವದಕ್ಕಾಗಿಯೇ ಎಂಬದು ಸಹ ಸ್ಪಷ್ಟವಾಗಿರುವದು. ಇಡಿಯ ವಿಶ್ವದಲ್ಲಿ ಈ ಏಕತ್ವದ ಆತ್ಯಂತಿಕ ಅರಿವನ್ನು ಅನುಭವಿಸಿದರೆ ಮಾತ್ರ ಆ ಆತ್ಯಂತಿಕ ಸತ್ಯದ ಆ ಆತ್ಯಂತಿಕ ಸೊಬಗಿನ ಅನುಭವವು ನಿಲುಕುವದು. ಆತ್ಯಂತಿಕ ಅರಿವು ನಾವು ಸ್ವಾಭಾವಿಕವಾಗಿ ಗ್ರಹಿಸುವ ತಿಳವಳಿಕೆ ಮತ್ತು ಅರಿವು ಇವನ್ನು ಮೀರಿಹುದು. ನಮ್ಮ ಅನುಭವಕ್ಕೆ ನಿಲುಕುವ ಸಂಗತಿಗಳ ಲ್ಲೆಲ್ಲ ಒಂದು ವಿಧವಾದ ಹೊಂದಿಕೆ ಮತ್ತು ಒಂದು ವಿಧವಾದ ಐಕ್ಯತೆ ಇರುವುದೆಂಬ ಅರಿವನ್ನು ಅಳವಡಿಸಿಕೊಳ್ಳುತ್ತ ನಡೆದಂತೆ ಸತ್ಯ ಸೌಂದ ರ್ಯಗಳ ಬಗೆಗೆ ಆ ನಮ್ಮ ತಿಳಿಯು ಸ್ಪಷ್ಟವಾಗುತ್ತ ಮತ್ತು ಸಂಪೂರ್ಣ

ವಾಗುತ್ತ ಸಾಗುವದು. ಪ್ರಗತಿಪರ ವಿಕಾಸದ ವಿಮರ್ಶೆಯಿಂದಾಗಲಿ ಇಲ್ಲವೆ ಸ್ಫುರಣಾತ್ಮಕ ತುರೀಯದ ಪ್ರಕಾಶದಿಂದಾಗಲಿ ಎಂದೆಂದಿಗೂ ಮರೆಯದಂತೆ ಈ ಸತ್ಯದ ನೆಲೆಯನ್ನು ಕಾಣಬಹುದು. ಇಲ್ಲವೆ ಅತಿ ಮಾನವ ಪರಮಾನುಭವದಲ್ಲಿ ಆನಂದಗೊಂಡು ಅನೇಕ ಪ್ರಹರಗಳ ವರೆಗೆ ಅನೇಕ ದಿವಸಗಳ ವರೆಗೆ ಈ ಸತ್ಯದ ಸೊಬಗಿನ ಕಲೆಯಲ್ಲಿ ನಿಲ್ಲಬಹುದು. ಒಮ್ಮೆ ಇಂಥ ತುರೀಯಾನಂದದ ಅನುಭವದಿಂದ ಕೆಳಗಿಳಿದಂತೆ ಆ ಭಕ್ತಿರತಿಯ ಸಂಭಾಷಣೆಯು ಹಿಂಗಿತೆಂದು ಆ ಸ್ಫುರಣೆಯ ಪ್ರವಾಹವು ಹರಿಗಡಿಯಿತೆಂದು ಅನಿಸಿದರೂ ಅದರ ನಿಜಸ್ಥಿತಿಯು ಹಾಗಿಲ್ಲ. ಒಮ್ಮೊಮ್ಮೆ ಅದು ವ್ಯಕ್ತಗೊಳ್ಳುತ್ತ, ಒಮ್ಮೊಮ್ಮೆ ಅದು ಉಲುಹುಗೊಳ್ಳುತ್ತ, ಒಮ್ಮೊಮ್ಮೆ ಗುಪ್ತಗಾಮಿನಿಯಾಗುತ್ತ ಸಾಗುವದು. ಆದರೆ ಸತ್ಯನ ತತ್ತ್ವತತಿಯು ತುರೀಯಾನುಭವಕ್ಕೇರಿ ಅಲ್ಲಿಯೇ ನಿರಂತರವಾಗಿ ನಿಲ್ಲುವದು. ಮಾನವನ ಅರಿವಿನ ವಿಕಾಸದಲ್ಲಿ ಅತ್ಯಂತಿಕ ಪರಮಾದರ್ಶವಾಗಿಹುದು. ಅದುವೆ ಸಾಮರಸ್ಯವೆನಿಸಿಹುದು. ಅಲ್ಲಿ 'ಅಂಗನ ನೆನಹು' 'ಲಿಂಗ'ದ ನೆನಹಿಗೆ ಬೆರೆತು ಹೊಂದಿಕೆಯಾಗುವದು ಮತ್ತು 'ನೀತಿ'ವಾದಕ್ಕಿಂತ 'ಇತಿ'ವಾದದಲ್ಲಿಯೇ ಆ ಸಮರಸದ ಸೊಬಗು ವ್ಯಕ್ತಗೊಳ್ಳುವದು. ಉರಿಲಿಂಗ ಪೆದ್ದಿಗಳ ವಚನವೊಂದು ಲಿಂಗವಂತ ಧರ್ಮದ ತಿರುಳನ್ನೇ ಗರ್ಭೀಕರಿಸಿಕೊಂಡಿದೆ.

'ತತ್' ಪದ ಲಿಂಗವೆಂದರುಹಿ 'ತ್ವಂ' ಪದ ಅಂಗವೆಂದರುಹಿ, 'ಅಸಿ' ಪದ ಪ್ರಾಣವೆಂದರುಹಿ, ಅಂಗವೇ ಲಿಂಗ, ಲಿಂಗವೇ ಪ್ರಾಣವೆಂದು ಶ್ರೀಗುರುವು ಇಷ್ಟಲಿಂಗವ ಕೊಟ್ಟು ದೃಷ್ಟಲಿಂಗವ ತೋರಿದ ಬಳಿಕ 'ತತ್ವಮಸಿ' ಪದ ನಿಮ್ಮ ಶರಣರು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

ಅಂತರಿಕ ಸ್ವರೂಪದ ವಿವರಣೆಯನ್ನು ವ್ಯಕ್ತಗೊಳಿಸುವ ಧರ್ಮವು ನಿಜವಾಗಿಯೂ ಅನುಭಾವ ವಿದ್ಯೆಯಾಗಿರುವದು. ಅದು ಬುದ್ಧಿಯ ಮಟ್ಟಗಳನ್ನು ಮೀರಿರ್ಪ ಅದ್ವೈತದ ಅರಿವಿನ ಏಕತಾನತೆಯನ್ನು ಸೂಚಿಸುತ್ತಿರುವದು. ಇಲ್ಲವೆ ಸ್ಪಷ್ಟಗೊಳಿಸುತ್ತಿರುವದು. ಅನುಭವಪರ ಧರ್ಮದ ಈ ಬಗೆಯನ್ನು ಕುರಿತು ಉಯಿಲಿಯಂ ಜೇಮ್ಸನು ಧಾರಾಳವಾಗಿ ನುಡಿದಿರುವನು." ಜೀವ ಪರಮರ ನಡುವಿನ ಈ ಸಾಮಾನ್ಯವಾದ ತೊಡಕುಗಳನ್ನು ಪರಿಹರಿಸಿಕೊಳ್ಳುವದೇ ಅನುಭಾವಿಗೆ ಘನತರವಾದ ಸಂಪಾದನೆಯಾಗಿರುವದು. ಅನುಭಾವಿಯು ಈ ಅವಸ್ಥೆಗಳಲ್ಲಿ ಪರಮನೊಡನೆ

ನಾವು ಬೆರೆತು ಒಂದಾಗುವದಲ್ಲದೆ ಬೆರಕೆಗೊಂಡು ಒಂದಾದ ಆ ಅರಿವೂ ನಮಗಿರುವದು. ಇದು ಅನುಭವ ಜೀವನದಲ್ಲಿ ಎಂದೆಂದಿಗೂ ಬಾಳಿ ಬಂದ ಮತ್ತು ಬೆಳಗುತ್ತಿರುವ ಪರಂಪರೆಯಾಗಿರುವದು. ದೇಶ ಕಾಲ ಮತತತ್ವ ಮೊದಲಾದವುಗಳ ಅಡೆತಡೆಗಳಿಂದ ಈ ಪರಂಪರೆಯಲ್ಲಿ ಪಲ್ಲಟ ಉಂಟಾಗದು. ಹಿಂದುಗಳ ಮತದಲ್ಲಾಗಲಿ, ಪ್ಲೇಟೊನಿಂದ ಇತ್ತೀಚಿಗ ಬೆಳೆದ ತತ್ವದಲ್ಲಾಗಲಿ, ಸೂಫಿಗಳ ಅನುಭವದಲ್ಲಾಗಲಿ, ಕ್ರೈಸ್ತರ ಪಂಥದಲ್ಲಾಗಲಿ, ವ್ಹಾಟ್‌ಮನ್ನನ ಹಾಡಿನಲ್ಲಾಗಲಿ ಪುನಃ ಪುನ: ಇದೇ ಧ್ವನಿಯು ಕೇಳಿಸುತ್ತದೆ. ಇದರಿಂದ ಅನುಭಾವಿಗಳ ಮಾತುಗಳಲ್ಲಿ ಶಾಶ್ವತವಾದ ಒಂದು ಸಮತೂಕವಿದೆ, ಸಾಮ್ಯವಿದೆ ಎಂಬುದು ಸ್ಪಷ್ಟ ವಾಗುತ್ತಿದೆ ಗುಣದೋಷ ವಿಮರ್ಶಕನೊಬ್ಬನು ಅದನ್ನು ಕುರಿತು ಆಲೋಚಿಸಿ ಮಿಕ್ಕು ಮೀರಿ ಬಗೆಗೊಳ್ಳುವನು. ಅನುಭವದ ಹೊತ್ತಿಗೆಗಳಿಗೆ ಜನ್ಮಭೂಮಿಯೂ ಇಲ್ಲ, ಜನ್ಮ ದಿನವೂ ಇಲ್ಲ. ಅವು ಸರ್ವ ಸಾಮಾನ್ಯ ವಾಗಿ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಎಲ್ಲರ ಒಪ್ಪಿಗೆಗೆ ಮಾನ್ಯವಾಗಿರತಕ್ಕವುಗಳೆಂಬುದು ಸಿದ್ಧವಾಗುತ್ತದೆ. ಜೀವ ದೇವರ, ಆತ್ಮ ಪರಮಾತ್ಮರ ಅಂಗ ಲಿಂಗಗಳ ಸಮರಸವನ್ನು ಕುರಿತು ನಿತ್ಯ ವಾಗಿ ನಿರಂತರವಾ ಹೇಳಬಯಸುವವದಾದರೆ ಮಂತ್ರಮಯವಾದ ಅವರ ಮಾತು ಅವರ್ಣನೀಯವಾದುದು. ಮತ್ತು ಅನುಭಾವದ ಅವುರವಾಣಿಗೆ ಮುಪ್ಪುಮರವೆಗಳೆಂಬುದಿಲ್ಲ.' ಷಟ್‌ಸ್ಥಲದ ಹೊದಕೆಯನ್ನಷ್ಟು ಓರೆ ಮಾಡಿದರೆ ಲಿಂಗಾಂಗ ಸಾಮರಸ್ಯವು ಶುದ್ಧವಾದ ಸತ್ಯವಾದ ಮತ್ತು ಸರುವಾದ ಅನುಭಾವವೆಂದೇ ಹೇಳಬೇಕಲ್ಲದೆ ಇನ್ನಾವ ಶಬ್ದ ಗಳಿಂದಲೂ ಅದನ್ನು ಹೆಸರಿಸಲಾಗದು. ಅದು ಸನಾತನವಾದ ಅದು ಏಕೆ ಶಾಶ್ವತವಾದ ದಿವ್ಯಜ್ಞಾನದ ಪ್ರತಿಧ್ವನಿಯೇ ಆಗಿರುವದು ಇಂತಿದು ಲಿಂಗವಂತ ಧರ್ಮದ ಆಂತರಿಕ ಸ್ವರೂಪವು.

ಧರ್ಮಕ್ಕೆ ಬಾಹ್ಯ ಸ್ವರೂಪವೂ ಇದೆಯಷ್ಟೇ! ಅದರಿಂದ ರೂಢಿಯಿಂದ ಬಂದ ಮತ್ತು ಪರಂಪರಾಗತವಾದ ನಂಬುಗೆಗಳ ಬಗೆಯು ತಿಳಿದು ಬರುವದು. ಆಂತರಿಕ ಸ್ವರೂಪದಿಂದ ಧರ್ಮದ ತಿರುಳು ತಿಳಿದರೆ ಬಾಹ್ಯ ಸ್ವರೂಪದಿಂದ ಅದರ ಆವರಣವು ಗೊತ್ತಾಗುವದು. ರೂಪಕ್ಕೆ ಬಂದ ಈ ಜಗತ್ತಿನಲ್ಲಿ ಎಲ್ಲವು ಬದಲುಗೊಳ್ಳುತ್ತಿರುವಂತೆ ಧರ್ಮದ ಈ ಆವ ರಣಗಳೂ ಸಹ ಬದಲು ಬದಲುಗೊಳ್ಳಲಿಬೇಕು. ಅತ್ಯಧಿಕವಾದ ಜ್ಞಾನದ

ವೇಗಕ್ಕನುಗುಣವಾಗಿ ಆವರಣಗಳಿಗೆ ಅವಸಾನವೂ ಉಂಟಾಗುವದು. ಹೊಸ ಧರ್ಮಗಳು ಬುದ್ ಬುದವಾಗಿ ಎದ್ದು ಹಿಂದಿನ ಧರ್ಮಗಳ ಹಳೆಯ ಗಾತ್ರಗಳನ್ನು ಹಳೆಯ ಸೂತ್ರಗಳನ್ನು ಅಂಗವಿಸಿಕೊಂಡು ಹೊಸತನ ದಲ್ಲಿ ಹೊರಹೊಮ್ಮುವವು. ಹೊಸ ಧರ್ಮಸಂಸ್ಥಾಪಕರು ಹೊಸ ಧರ್ಮೋ ಪದೇಶಕರು ಉದಯ ಹೊಂದಿ ಹೊಸ ಮಡಕೆಯಲ್ಲಿ ಹೊಸ ನೀರನ್ನೇ ಹೊಯ್ಯುವರು. ಆದರೂ ಹಳೆಯ ರೂಢಿಗಳು, ಹಳೆಯ ಆವರಣಗಳು ಹಲಕೆಲವು ಯುಗಗಳ ವರೆಗೆ ಚಲ್ಲಾಟಗೊಳ್ಳಬಹುದು; ಮತ್ತು ಹಾಗೆ ಚಲ್ಲಾಟಗೊಂಡೇ ತೀರುವವು. ಅವು ರೂಢವಾಗಿರುವ ಕಾಲದಲ್ಲಿ ಅವಕ್ಕೆ ಮಹತ್ವಾತಿಶಯವುಂಟಾಗುವದು. ಆಗ ಅವುಗಳ ಪ್ರಯೋಜ ನವೂ ಸ್ಥಿರಗೊಳ್ಳುವದು. ಮತ್ತು ಕೆಲವು ಅವಧಿಯ ವರೆಗಾದರೂ ಅವು ಗಳಿಂದ ಮಾನವನ ಅನುಭಾವದಲ್ಲಿ ಪ್ರಾಮುಖ್ಯವಾದ ಒಂದು ತತ್ವವು ಒಂದು ಗೂಢವು ವ್ಯಕ್ತವಾಗುವದು. ಈ ದೆಸೆಯಿಂದ ಅನೇಕ ವರುಷ ಗಳ ವರೆಗೆ ಅವುಗಳ ಛಲವೇ ಸಾಗುವದು. ಗೌತಮ ಬುದ್ಧನು ಬ್ರಾಹ್ಮಣ ಧರ್ಮದಲ್ಲಿ ಮತ್ತು ಮನುವಿನ ಶಾಸ್ತ್ರದಲ್ಲಿ ತಿದ್ದುಪಡೆಯನ್ನುಂಟು ಮಾಡಿ ದನು; ಆದರೂ ಕೋಟ್ಯವಧಿ ಜನರ ಮೇಲೆ ಬ್ರಾಹ್ಮಣ ಧರ್ಮದ ಪ್ರಭು ತ್ವವು ಇಂದಿಗೂ ಇದೆ. ಜ್ಯೂಧರ್ಮದಲ್ಲಿ ಮತ್ತು ಮೋಜೆಸನ ಧರ್ಮಕಟ್ಟ ಳೆಗಳಲ್ಲಿ ಕ್ರೈಸ್ತ ಧರ್ಮದಿಂದ ತಿದ್ದುಪಾಟಗಳುಂಟಾದವು. ಆದರೂ ಕೋಟ್ಯವಧಿ ಜನರು ಈಗಲೂ ಜ್ಯೂಧರ್ಮವನ್ನೇ ಅವಲಂಬಿಸಿದ್ದಾರೆ, ಮೋಜೆಸನ ಸಂಪ್ರದಾಯವನ್ನೇ ನೆಮ್ಮಿದ್ದಾರೆ. ಬಸವಣ್ಣನು ಶೈವಧರ್ಮ ವನ್ನು ಸುಧಾರಿಸಿದನು; ವರ್ಣಾಶ್ರಮ ಧರ್ಮದಲ್ಲಿ ಕ್ರಾಂತಿಯನ್ನೆಸಗಿದನು; ಆದರೂ ಶೈವಧರ್ಮವು ವರ್ಣಾಶ್ರಮ ಧರ್ಮವು, ಇಂದಿಗೂ ಕೋಟ್ಯವಧಿ ಜನರನ್ನು ಮರುಳುಗೊಳಿಸಿದೆ.

ಬುದ್ಧನು ಬೌದ್ಧಧರ್ಮ ಸಂಸ್ಥಾಪನೆಗೆಯ್ದ ದೃಷ್ಟಿಯಲ್ಲಿ, ಕ್ರೈಸ್ತನು ಕ್ರೈಸ್ತಧರ್ಮಸಂಸ್ಥಾಪನೆಗೆಯ್ದ ದೃಷ್ಟಿಯಲ್ಲಿ ಬಸವಣ್ಣನೂ ವೀರಶೈವಧರ್ಮ ಸಂಸ್ಥಾಪನೆಗೆಯ್ದನು. ಪ್ರೊಫೆಸರ ಎಂ. ಆರ್. ಸಾಖರೆ ಎಂ. ಎ. ಪಿ ಡಿ. (ಲಂಡನ್), ಅವರು ಈ ಮಾತನ್ನು ಅತಿ ಸ್ಪಷ್ಟವಾಗಿ ಅತಿ ಸ್ಫುಟವಾಗಿ, ಅತಿ ಸುಲಲಿತವಾಗಿ ಎತ್ತಿಹಿಡಿದಿದ್ದಾರೆ.

'ವೀರಶೈವಧರ್ಮ ಸಂಸ್ಥಾಪಕನಾರು?' ಎಂಬ ಪ್ರಶ್ನೆಗೆ 'ವೀರಶೈವ' ಪದದಲ್ಲಿಯೇ ಉತ್ತರವು ಹೊರಡುವಂತಿದೆ. ಕ್ರಿ. ಶ. ೧೨ನೆಯ ಶತ

ಮಾನದ ಪ್ರಾರಂಭದ ಸುಮಾರಿಗೆ ಜೈನ ಮತ್ತು ವೈಷ್ಣವ ಧರ್ಮಗಳು ಪ್ರಾಬಲ್ಯವನ್ನು ಪಡೆದಿದ್ದವು. ದಕ್ಷಿಣಭಾರತದಲ್ಲಿ ಶೈವಧರ್ಮಕ್ಕೆ ಸಂದುಕಟ್ಟಿನ ಸಮಯವು ಒದಗಿತ್ತು. ಏಳಬೇಕು, ಇಲ್ಲವೆ ಬೀಳಬೇಕು ಎಂಬ ಪ್ರಸಂಗವು ಅದಕ್ಕೊದಗಿತ್ತು. ಆದರೆ ಅದು ಬೀಳಲಿಲ್ಲ. ಏಳ್ಗೆಪಡೆಯಿತು. ೧೨ನೆಯ ಶತಮಾನವು ಅರ್ಧಗಳೆಯುವಷ್ಟರಲ್ಲಿ ವೀರನೊಬ್ಬನು ಉದಿಸಿ ಅಲ್ಪಾವಧಿಯಲ್ಲಿಯೇ ಶೈವಧರ್ಮದ ನಂಬುಗೆಯಲ್ಲಿ ಕ್ರಾಂತಿಯನ್ನುಂಟು ಮಾಡಿದನು. ಅವನ ಪ್ರಯತ್ನದಲ್ಲಿ ಪೌರುಷವಿತ್ತು; ಅವನ ಪರಾಕ್ರಮದಲ್ಲಿ ಪ್ರಭಾವವಿತ್ತು. ಶೈವಧರ್ಮವು ವರ್ಣಾಶ್ರಮಧರ್ಮದ ಬಂಧನದಿಂದ ಬಿಡುಗಡೆಯನ್ನು ಪಡೆಯಿತು; ಅದರ ಪಾಶಗಳನ್ನು ಛೇದಿಸಿತು; ಅದರ ಬಲೆಯೊಳಗಿಂದ ಪಾರಾಯಿತು. ಅದರ ಪರಿಣಾಮವಾಗಿ ವೀರಶೈವ ಧರ್ಮವು ಬೆಳಕಿಗೆ ಬಂದಿತು. ಹೀಗೆ ವೀರಶೈವ ಧರ್ಮವನ್ನು ಬೆಳಕಿಗೆ ತಂದ ವೀರನು ಆಗಿನ ಕನ್ನಡ ನಾಡಿನ ಅರಸನಿಗೆ ಮುಖ್ಯ ಮಂತ್ರಿಯಾಗಿದ್ದನು. ಅವನು ಕನ್ನಡಿಗನೂ ಆಗಿದ್ದನು. ಆದುದರಿಂದ ಈ ಹೊಸ ವೀರ ಧರ್ಮದ ಪ್ರಮಾಣ ಗ್ರಂಥಗಳು ಕನ್ನಡದಲ್ಲಿ ತಲೆದೋರಿದರೆ ಅದರಲ್ಲಿ ಆಶ್ಚರ್ಯವೇನು? ಈಗಿರುವಂತೆಯೇ ಆಗ ಕನ್ನಡನಾಡು ಹೊಸ ಧರ್ಮದ ಬೀಡಾಯಿತು. ಹೊಸ ಧರ್ಮವು ವೀರತೆಯಿಂದ ರೂಪಗೊಂಡ ಬೆಡಗುಬಿನ್ನಾಣಗಳು ಇಂತಿವೆ. ವೀರಶೈವ ಧರ್ಮವೆಂಬ ಹೆಸರನ್ನು ಅದು ಹೇಗೆ ಪಡೆಯಿತು ಎಂಬ ಮಾತಿಗೆ ಉತ್ತರವು ಇಲ್ಲಿದೆ. ಬಸವಣ್ಣನು ಸಣ್ಣದೊಂದು ರಾಜ್ಯದ ಮುಖ್ಯ ಮಂತ್ರಿಯಾಗಿದ್ದರೂ ದೊಡ್ಡದೊಂದು ಧರ್ಮದ ಅರಸನಾಗಿದ್ದನು ಎಂಬುವ ಬಗೆಯೂ ಇದರಿಂದ ಗೊತ್ತಾಗುತ್ತದೆ." (ಲಿಂಗಧಾರಣ ಚಂದ್ರಿಕೆ ಪ್ರಸ್ತಾವನೆ ಪುಟಗಳು ೪೧೫-೪೧೬).

ಲಿಂಗವಂತ ಧರ್ಮವು ಕನ್ನಡ ನಾಡಿನ ವೀರಶೈವರು ಅನುಸರಿಸಿರುವ ಮತ್ತು ಅವಲಂಬಿಸಿರುವ ಧರ್ಮವು, ಬಸವಣ್ಣನು ಈ ಹೊಸ ಧರ್ಮವನ್ನು ಸಂಸ್ಥಾಪಿಸಿದನು, ಮತ್ತು ವಚನಶಾಸ್ತ್ರವು ಈ ಹೊಸ ಲಿಂಗವಂತ ಧರ್ಮದ ತತ್ತ್ವಗಳನ್ನು ತಿಳಿಯಪಡಿಸುವ ಧರ್ಮಗ್ರಂಥವು—ಎಂಬ ಮೂರು ಮಾತುಗಳನ್ನು ಸಿದ್ಧಿಸುವದಕ್ಕಾಗಿಯೇ ಪ್ರೊಫೆಸರ ಸಾಖರೆ ಅವರ ಪರಿಶ್ರಮದ ಫಲವಾಗಿ ದೊರೆತಿದ್ದರೂ ಈ ಮೂರು ಮಾತುಗಳನ್ನು ಸಿದ್ಧಿಸುವದಕ್ಕಾಗಿಯೇ ನವಕಲ್ಯಾಣಮಠದ ಅಸ್ತಿತ್ವವುಂಟಾಗಿ ಅದು ಈ ಮುಂಚಿತವಾಗಿಯೇ ಅದಕ್ಕಾಗಿ ನಡಕಟ್ಟಿ ನಿಂತಿರುವುದೆಂಬುದನ್ನು ಅರಿತಿರಬೇಕು.

---

# ಷಟ್‌ಸ್ಥಲ ನಿಂದಕರಿಗೆ ಶಾಸನ ಮಾಡುವದು.

(ಲೇಖಕ— ಶಿವಮೂರ್ತಿ)

ಷಟ್‌ಸ್ಥಲಗಳು ವೀರಶೈವ ಮತದ ಜೀವಾಳವಾಗಿರುತ್ತವೆ. ಅವುಗಳನ್ನು ಯಾರಾದರು ಧಿಃಕ್ಕರಿಸಿ ನುಡಿದರೆ ಇಲ್ಲವೆ ಅಪಾರ್ಥ ಮಾಡಿ ಅಪಪ್ರಚಾರ ಮಾಡಿದರೆ ಕಣ್ಣು ಮುಚ್ಚಿಕೊಂಡು ಸುಮ್ಮನೆ ಕೂಡ್ರುವದು ವೀರಶೈವರ ಲಕ್ಷಣವಲ್ಲ. ಪ್ರತಿಯೊಬ್ಬನಿಗೆ ತನ್ನ ಧರ್ಮತತ್ವವನ್ನನುಸರಿಸಿ ನಡೆಯುವದಕ್ಕೆ ಸಂಪೂರ್ಣ ಸ್ವಾತಂತ್ರ್ಯವುಂಟು. ಧರ್ಮದಿಂದಲೇ ಮನುಷ್ಯನ ಜಾಗ್ರತಿ, ಧರ್ಮದಿಂದಲೇ ಪ್ರಗತಿ, ಧರ್ಮದಿಂದಲೇ ಸದ್ಗತಿಯು. ಆದ್ದರಿಂದ ಧರ್ಮದ್ರೋಹವ ಮಾಡುವದೆಂದರೆ ಧಾರ್ಮಿಕನ ಕೊಲೆ ಮಾಡಿದಂತೆಯೇ ಸರಿ. ದೇಹವನ್ನು ಕೊಲೆಮಾಡುವವರನ್ನು ಒಂದು ವೇಳೆ ಕ್ಷಮಿಸಬಹುದು. ಆದರೆ ಆತ್ಮನನ್ನು ಕೊಲೆ ಮಾಡುವವನನ್ನೆಂದಿಗೂ ಕ್ಷಮಿಸಲಾಗದು. ಕ್ರೈಸ್ತನು ಹೇಳುವದೇನಂದರೆ:— 'ನಿನ್ನ ದೇಹವನ್ನು ಕೊಂದವರು ಅಷ್ಟೇನೂ ಪಾಪಿಗಳಲ್ಲ. ಆದರೆ ನಿನ್ನ ಆತ್ಮಘಾತ ಮಾಡಿದ ದ್ರೋಹಿಗಳು ಮಹಾಪಾತಕಿಗಳು. ಅವರು ನರಕಾಗ್ನಿಯಲ್ಲಿ ಬಿದ್ದು ಬೆಂದು ಹೋಗುವರು' ಎಂಬುದಾಗಿ ಹೇಳಿದ್ದಾನೆ. ಆದ್ದರಿಂದಲೇ ಷಟ್‌ಸ್ಥಲ ನಿಂದಕರನ್ನು ಶಾಸನ ಮಾಡಬೇಕೆಂದು ಶಿವಶರಣರು ತಮ್ಮ ಆಚರಣೆಯ ವಿಧಿಗಳಲ್ಲಿ ಹೇಳಿದ್ದಾರೆ.

ಇನ್ನು ಷಟ್‌ಸ್ಥಲವೆಂದರೇನು ? ಅದಕ್ಕೆ ವೀರಶೈವರು ಅಷ್ಟೇಕೆ ಮಹತ್ವಕೊಟ್ಟಿರುವರು ? ಈ ವಿಷಯವಾಗಿ ಸ್ವಲ್ಪ ಆಲೋಚಿಸುವಾ. ಷಟ್‌ಸ್ಥಲವೆಂದರೆ ಲಿಂಗಾಂಗಸಾಮರಸ್ಯವನ್ನು ತಿಳಿಸುವ ಸಿದ್ಧಾಂತವು ಲಿಂಗದಲ್ಲಿ ಅಂಗವು ಅರ್ಥಾತ್ ಶಿವನಲ್ಲಿ ಜೀವನು ಐಕ್ಯ ಹೊಂದುವ ರಹಸ್ಯವನ್ನು ಷಟ್‌ಸ್ಥಲವು ಹೇಳಿಕೊಡುತ್ತದೆ. ಆದುದರಿಂದ ನಾವು ಇಲ್ಲಿ ಲಿಂಗವೆಂದರೇನು ? ಅಂಗವೆಂದರೇನು ? ಲಿಂಗಾಂಗಗಳು ಎಷ್ಟು ವಿಧವಾಗಿವೆ? ಅವು ಸಮರಸ ಹೊಂದುವ ಬಗೆಯೆಂತು ? ಈ ಎಲ್ಲ ಸಂಗತಿಗಳನ್ನು ಕೂಲಂಕುಷವಾಗಿ ವಿಚಾರಿಸಿದಲ್ಲಿ ಷಟ್‌ಸ್ಥಲದ ಮಹಿಮೆಯು ನಮಗೆ ತಿಳಿಯುವದು.

ಲಿಂಗವೆಂದರೆ ಪರಶಿವ ತತ್ವವು. ಅದು ಈ ಬ್ರಹ್ಮಾಂಡದಲ್ಲಿ ವ್ಯಾಪಿಸಿದಂತೆ ಪಿಂಡಾಂಡದಲ್ಲಿಯೂ ವ್ಯಾಪಿಸಿದೆ. ಬ್ರಹ್ಮಾಂಡ ಪಿಂಡಾಂಡಗಳನ್ನು ನಿರ್ಮಿಸಿದ ಪರಶಿವನು ಬ್ರಹ್ಮಾಂಡ ಪಿಂಡಾಂಡಗಳಿಗಿಂತಲೂ ಪೂರ್ವದಲ್ಲಿ ನಿರವಯ ಸ್ಥಿತಿಯಲ್ಲಿದ್ದನು. ನಿರವಯ ಸ್ಥಿತಿಯೆಂದರೆ ಏನೇನೂ ಇಲ್ಲದ ಸ್ಥಿತಿಯು. ಆ ಸ್ಥಿತಿಯು ನಿರಂಜನ, ನಿಶ್ಶೂನ್ಯ, ನಿಃಕಲವೆಂದು ಮೂರು ತರಗತಿಗಳಾಗಿ ಮುಂದುವರಿಯುತ್ತದೆ. ಕ್ರಮೇಣ ಅವುಗಳಿಗೆ ಅನುಕ್ರಮವಾಗಿ ನಿರಂಜನಲಿಂಗ, ನಿಶ್ಶೂನ್ಯಲಿಂಗ, ನಿಃಕಲ ಲಿಂಗವೆಂದೂ ಹೆಸರುಗಳಿವೆ.

ತೋಂಟದಾರ್ಯರು ಹೇಳಿರುವದೇನಂದರೆ— 'ಮುಂದೆ ಆ ನಿಃಕಲ ಶಿವತತ್ವದಲ್ಲಿ ಜ್ಞಾನಚಿತ್ತು ಉದಯವಾಯಿತ್ತು. ಆ ಚಿತ್ತಿನಿಂದ ಅಕಾರ ಉಕಾರ ಮಕಾರಗಳೆಂಬ ಅಕ್ಷರತ್ರಯಂಗಳಾದವು. ಅಕಾರವೇ ನಾದ, ಉಕಾರವೇ ಬಿಂದು, ಮಕರವೇ ಕಳೆ, ಇಂತೀ ತ್ರಿವಿಧಕ್ಕೆ ಚಿತ್ತು ತಾಯಿ. ಇಂತೀ ನಾಲ್ಕು ಒಂದಾದಲ್ಲಿ (ಚಿತ್ತು+ನಾದ+ಬಿಂದು+ಕಳೆ) ಓಂಕಾರವೆಂಬ ಪ್ರಣವೋತ್ಪತ್ತಿಯಾಯಿತ್ತು. ಆ ಓಂಕಾರವೆಂಬ ಪ್ರಣವವೇ ಅಖಂಡ ಪರಿಪೂರ್ಣಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗ ನೋಡಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ' ಮಹಾಲಿಂಗವು ಉದ್ಭವಿಸಿದಾಗ ಬ್ರಹ್ಮಾಂಡವೂ ಪಿಂಡಾಂಡವೂ ಭಾವರೂಪದಲ್ಲಿ ಪ್ರಾದುರ್ಭವಿಸುವವು ಅವು ಹೇಗೆಂಬುದನ್ನು ಮುಂದೆ ವಿವರಿಸಿದೆ

ಆ ನಿಃಕಲ ಲಿಂಗವು ತನ್ನ ಶಕ್ತಿಯ ಚಲನೆಯ ಮಾತ್ರದಿಂದ ಎರಡಾಯಿತ್ತು. ಒಂದಕ್ಕೆ ಲಿಂಗಸ್ಥಲ, ಇನ್ನೊಂದಕ್ಕೆ ಅಂಗಸ್ಥಲವೆಂಬ ಹೆಸರುಗಳು ಆ ಚಿಚ್ಛಕ್ತಿಯೂ ಅದೇ ಮೇರೆಗೆ ಎರಡುವಿಧವಾಯಿತ ಲಿಂಗಸ್ಥಲವನಾಶ್ರಯಿಸಿ ಶಕ್ತಿಯೆನಿಸಿತ್ತು, ಅಂಗಸ್ಥಲವನಾಶ್ರಯಿಸಿ ಭಕ್ತಿಯೆನಿಸಿತ್ತು. ಲಿಂಗವು ಶಕ್ತಿಯ ಆಶ್ರಯದಿಂದ ಬ್ರಹ್ಮಾಂಡದಲ್ಲಿ ಮತ್ತು ಪಿಂಡಾಂಡದಲ್ಲಿ ವಿಕಾಸವಾಗುತ್ತ ಹೋಗುವದಕ್ಕೆ ಪ್ರವೃತ್ತಿ ಮಾರ್ಗವೆನ್ನುವರು. ಅಂಗವು ಅರ್ಥಾತ್ ಬ್ರಹ್ಮಾಂಡ ಪಿಂಡಾಂಡಗಳು ಲಿಂಗದಲ್ಲಿ ಅರ್ಥಾತ್ ಪರವಸ್ತುವಿನಲ್ಲಿ ಬೆರೆತು ಹೋಗುವದಕ್ಕೆ ನಿವೃತ್ತಿಮಾರ್ಗವೆಂಬ ಹೆಸರು.

ನಿಃಕಲ ಶಿವತತ್ವವು ಮೊದಲು ಭಾವರೂಪದಲ್ಲಿ ತೋರಿತ್ತು. ಬಳಿಕ ಪ್ರಾಣರೂಪದಲ್ಲಿ ತೋರಿತ್ತು ಆ ಮೇಲೆ ಸಾಕಾರ ರೂಪದಲ್ಲಿ ಬಂದಿತ್ತು.

ಅದಕ್ಕನುಗುಣವಾಗಿ ಭಾವಲಿಂಗ, ಪ್ರಾಣಲಿಂಗ, ಇಷ್ಟಲಿಂಗಗಳೆಂದು ಹೆಸರು ಕೊಟ್ಟಿದ್ದಾರೆ. ಅದೇ ಮೇರೆಗೆ ಅಂಗವು ಅರ್ಥಾತ್ ಬ್ರಹ್ಮಾಂಡ ಪಿಂಡಾಂಡಗಳು ಯೋಗಾಂಗ, ಭೋಗಾಂಗ, ತ್ಯಾಗಾಂಗ ಅಂದರೆ ಕಾರಣ-ಸೂಕ್ಷ್ಮ-ಸ್ಥೂಲ ರೂಪಗಳಿಂದ ವ್ಯಕ್ತವಾದವು

ಈ ಭಾವ, ಪ್ರಾಣ, ಇಷ್ಟಲಿಂಗಗಳು ಕ್ರಿಯಾಭೇದದಿಂದ ಎರಡೆರಡು ತೆರನಾದವು. ಅದು ಹೇಗೆಂದರೆ ಭಾವಲಿಂಗವು ಮಹಾಲಿಂಗ ಪ್ರಸಾದ ಲಿಂಗವೆಂದೂ, ಪ್ರಾಣಲಿಂಗವು ಜಂಗಮಲಿಂಗ ಶಿವಲಿಂಗವೆಂದೂ ಇಷ್ಟಲಿಂಗವು ಗುರುಲಿಂಗ ಆಚಾರಲಿಂಗವೆಂದೂ ದ್ವಿವಿಧರೂಪ ತಾಳಿದವು.

ಅದೇ ಮೇರೆಗೆ ಆ ಶಕ್ತಿಯು ೬ ಲಿಂಗಗಳಿಗನುಗುಣವಾಗಿ, ಚಿಚ್ಛಕ್ತಿ ಆದಿಶಕ್ತಿ. ಪರಾಶಕ್ತಿ, ಜ್ಞಾನಶಕ್ತಿ, ಇಚ್ಛಾಶಕ್ತಿ, ಕ್ರಿಯಾಶಕ್ತಿಯಾಯಿತು. ಅಂದರೆ ಚಿಚ್ಛಕ್ತಿಯಿಂದ ಮಹಾಲಿಂಗ, ಆದಿಶಕ್ತಿಯಿಂದ ಪ್ರಸಾದಲಿಂಗ ಪರಾಶಕ್ತಿಯಿಂದ ಜಂಗಮಲಿಂಗ, ಜ್ಞಾನಶಕ್ತಿಯಿಂದ ಶಿವಲಿಂಗ, ಇಚ್ಛಾಶಕ್ತಿಯಿಂದ ಗುರುಲಿಂಗ, ಕ್ರಿಯಾಶಕ್ತಿಯಿಂದ ಆಚಾರಲಿಂಗಗಳುದ್ಭವಿಸಿದವು. ಬ್ರಹ್ಮಾಂಡದಲ್ಲಿ ಕಾರಣ ಶರೀರವು ಆತ್ಮ ಆಕಾಶರೂಪದಿಂದಲೂ ಸೂಕ್ಷ್ಮಶರೀರವು ವಾಯು ತೇಜಗಳ ರೂಪದಿಂದಲೂ ಸ್ಥೂಲ ಶರೀರವು ಅಪ್ ಪೃಥ್ವಿ ರೂಪದಿಂದಲೂ ಕ್ರಮೇಣ ಪ್ರಕಟವಾದವು. ಅದೇ ಮೇರೆಗೆ ಪಿಂಡಾಂಡದಲ್ಲಿ ಯೋಗಾಂಗವು (ಕಾರಣತನುವುಳ್ಳದ್ದು) ಐಕ್ಯ ಶರಣನೆಂದೂ ಭೋಗಾಂಗವು (ಸೂಕ್ಷ್ಮತನುವುಳ್ಳದ್ದು) ಪ್ರಾಣಲಿಂಗಿ ಪ್ರಸಾದಿಯೆಂದೂ ತ್ಯಾಗಾಂಗವು (ಸ್ಥೂಲತನುವುಳ್ಳದ್ದು) ಮಾಹೇಶ ಭಕ್ತನೆಂದೂ ಕ್ರಮೇಣ ವ್ಯಕ್ತಸ್ವರೂಪಕ್ಕೆ ಬಂದವು. ಇದು ನಿವೃತ್ತಿ ಮಾರ್ಗವು.

ಅಂಗವು ಲಿಂಗದಲ್ಲಿ ಬೆರೆಯುವ ಕ್ರಮವನ್ನೇ ಷಟ್‌ಸ್ಥಲವು ಬೋಧಿಸುತ್ತದೆ. ಅಂದರೆ ಪಿಂಡವು ಅಥವಾ ಜೀವನು ಶಿವನಲ್ಲಿ ಐಕ್ಯ ಹೊಂದುವ ಕ್ರಮವೇ ಲಿಂಗಾಂಗ ಸಾಮರಸ್ಯವು. ಅಂದರೆ ಭಕ್ತ, ಮಹೇಶ, ಪ್ರಸಾದಿ ಪ್ರಾಣಲಿಂಗಿ, ಶರಣ, ಐಕ್ಯ ಈ ಷಡಂಗಗಳು ಅನುಕ್ರಮವಾಗಿ ಆಚಾರ ಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ ಮಹಾ ಲಿಂಗಗಳೆಂಬ ಷಡ್ಲಿಂಗಗಳೊಡನೆ ಸಮರಸ ಹೊಂದುತ್ತ ಹೋಗುವ ಕ್ರಮವೇ ಲಿಂಗಾಂಗ ಸಾಮರಸ್ಯವು. ಇದೇ ನಿವೃತ್ತಿಮಾರ್ಗವು. ಅಂಗನು (ಆತ್ಮನು) ಲಿಂಗದಲ್ಲಿ ಬೆರೆಯಬೇಕಾದರೆ ಆಯಾಯ ಲಿಂಗಗಳಿಗನು

ಸರಿಸಿ ಶ್ರದ್ಧಾ, ನಿಷ್ಠಾ, ಅವಧಾನ, ಅನುಭಾವ, ಆನಂದ, ಸಾಮರಸಗ ಳೆಂಬ ಷಡ್ವಿಧ ಭಕ್ತಿಗಳನ್ನಾಚರಿಸಬೇಕಾಗುತ್ತದೆ. ಆದ್ದರಿಂದ ವೀರಶೈ ವರಿಗೆ ಈ ವಿಶಿಷ್ಟಾರ್ಥವುಳ್ಳ ಭಕ್ತಿಯೇ ಪ್ರಾಮುಖ್ಯವಲ್ಲದೆ ಅಷ್ಟಾಂಗ ಯೋಗಗಳು ಪ್ರಾಮುಖ್ಯವಲ್ಲ. ಷಟ್ ಚಕ್ರಗಳಲ್ಲಿ ಜೀವವು ಸಂಚರಿಸು ತ್ತದೆಂದು ಯೋಗ ಮಾರ್ಗಿಗಳು ಹೇಳುವಂತೆ ವೀರಶೈವರು ಹೇಳುವ ದಿಲ್ಲ. ಪ್ರಾಣವು ಆತ್ಮದಿಂದ ಭಿನ್ನವಾಗಿರುತ್ತದೆ. ವೀರಶೈವ ಮತದಲ್ಲಿ ಅಂಗವು (ಆತ್ಮವು) ಆಯಾಯ ಚಕ್ರಗಳಲ್ಲಿ ನೆಲೆಗೊಂಡ ಲಿಂಗಗಳೊ ಡನೆ ವಿವಿಧ ಭಕ್ತಿಯಿಂದ ರಮಿಸುವದು. ನಮಗೆ ಆಸನ ಪ್ರಾಣಾ ಯಾಮ ಪ್ರತ್ಯಾಹಾರಾದಿ ಯೋಗಾಂಗಗಳು ಮುಖ್ಯವಲ್ಲ. ಆದರೆ ಶ್ರದ್ಧಾ ನಿಷ್ಠಾದಿ ಭಕ್ತಿಗಳು ಪ್ರಾಮುಖ್ಯವಾಗಿರುತ್ತವೆ. ಪ್ರಾಣವೇ ಲಿಂಗವಲ್ಲ. ವೇದಾಂತಿಗಳು ಶಿವಜೀವೈಕ್ಯವೆಂದು ಹೇಳವಾಗ ಶಿವನಿಗೆ ವಿಶ್ವರೂಪಿ ಪರಮಾತ್ಮನೆಂದೂ ಜೀವಕ್ಕೆ ದೇಹ ವ್ಯಾಪಿ ಆತ್ಮವೆಂದೂ ತಿಳಿದು ಶಿವ ಜೀವೈಕ್ಯವನ್ನು ಬೋಧಿಸುತ್ತಾರೆ. ಆದರೆ ವೀರಶೈವ ಮತದಲ್ಲಿ ಶಿವತತ್ವವು ಲಿಂಗರೂಪಾಗಿ ಭಾವದಲ್ಲಿ ಪ್ರಾಣದಲ್ಲಿ ದೇಹದಲ್ಲಿ ನೆಲಿಸಿ ಭಾವಲಿಂಗ ಪ್ರಾಣಲಿಂಗ ಇಷ್ಟಲಿಂಗವೆಂದೆನಿಸಿಕೊಂಡಿದೆ.

'ಅಂಗದ ಮೇಲೆ ಸಾಕಾರವಿಡಿದು ಮಂತ್ರಾಹ್ವಾನಗಳಿಂದ ಅಷ್ಟ ವಿಧಾರ್ಚನೆ ಷೋಡಶೋಪಚಾರಂಗಳಲ್ಲಿ ವ್ಯಾಪಿಸಿಕೊಂಡಿಪ್ಪುದು ಇಷ್ಟ ಲಿಂಗ. ಆ ಇಷ್ಟಲಿಂಗಕ್ಕೆ ಆಶ್ರಯವಾಗಿ ಚತುರ್ದಶ ಇಂದ್ರಿಯಂಗ ಳಲ್ಲಿ ತನ್ಮುಖವಾಗಿ ಸರ್ವೇಂದ್ರಿಯಂಗಳಿಗೆ ಚೈತನ್ಯವಾಗಿ ಪ್ರಾಣದಲ್ಲಿ ಪರಿಪೂರ್ಣವಾಗಿಪ್ಪುದು ಪ್ರಾಣಲಿಂಗ. ಆ ಪ್ರಾಣಲಿಂಗಕ್ಕೆ ಆದಿಯಾಗಿ ಭಾವ ಭ್ರಮುಗಳು ನಷ್ಟವಾಗಿ ಭಾವಬ್ರಹ್ಮವೆಂಬ ಭೇದವಿಲ್ಲದೆ ಸನ್ನಿ ಹಿತಭಾವದಿಂದಿಪ್ಪುದು ಭಾವಲಿಂಗ.' ಆದುದರಿಂದ ಪ್ರಾಣಲಿಂಗಕ್ಕೆ ಭಾವ ಲಿಂಗವೇ ಆಧಾರ. ಇಷ್ಟಲಿಂಗಕ್ಕೆ ಪ್ರಾಣಲಿಂಗವೇ ಆಧಾರ ಭಾವವನ್ನು ಬಿಟ್ಟು ಪ್ರಾಣವಿಲ್ಲ. ಪ್ರಾಣವನ್ನು ಬಿಟ್ಟು ಇಷ್ಟವಿಲ್ಲ. ಆದ್ದರಿಂದ ಪ್ರಾಣ ಲಿಂಗವೇ ಇಷ್ಟಭಾವಗಳಿಗೆ ಆಧಾರವಾಗಿದೆ ಎಂದು ಕೆಲವರು ತಿಳಿಯು ತ್ತಿದ್ದು ಅದು ಸರಿಯಾದುದಲ್ಲ. ಶ್ರೀಗುರುವು ತನ್ನ ಆಧ್ಯಾತ್ಮ ಶಕ್ತಿ ಯಿಂದ ಶಿಷ್ಯನ ಮಸ್ತಕದೊಳಗಿರುವ ಭಾವಲಿಂಗವನ್ನು ಹೃದಯದಲ್ಲಿ ಪ್ರಾಣಲಿಂಗವಾಗಿರಿಸಿ ಆ ಪ್ರಾಣಲಿಂಗವನ್ನು ಶಿಷ್ಯನ ಕರಸ್ಥಲಕ್ಕೆ ಕೊಡು ತ್ತಾನೆಂದು ದೀಕ್ಷಾವಿಧಾನವು ಹೇಳುತ್ತದೆ. ಲಿಂಗವು ವಸ್ತುತಃ ಒಂದೇ ಇದ್ದರೂ ಅವಸ್ಥಾ ಭೇದದಿಂದ ೩ ವಿಧವಾಗಿದೆ. ಹಣ್ಣು ಒಂದೇ ಇದ್ದರೂ

ತೊಗಟೆ ಪಿಂಡ ರಸ ಎಂದು ಮೂರು ವಿಧದಲ್ಲಿ ಕಾಣುವಂತೆ ಆ ಒಂದೇ ಪರವಸ್ತುವು ಸ್ಥೂಲ ಶರೀರದಲ್ಲಿ ಇಷ್ಟಲಿಂಗ ರೂಪಾಗಿಯೂ ಸೂಕ್ಷ್ಮ ಶರೀರದಲ್ಲಿ ಪ್ರಾಣಲಿಂಗರೂಪಾಗಿಯೂ ಕಾರಣಶರೀರದಲ್ಲಿ ಭಾವಲಿಂಗ ರೂಪಾಗಿಯೂ ತೋರುತ್ತಿದೆ. ಇಷ್ಟವನ್ನು ಬಿಟ್ಟು ಪ್ರಾಣವಿಲ್ಲ, ಪ್ರಾಣ ವನ್ನು ಬಿಟ್ಟು ಭಾವವಿಲ್ಲ.

ಷಟ್‌ಸ್ಥಲದಲ್ಲಿ ಕಂಡುಬರುವದು ಶಿವಯೋಗವು. ಅಷ್ಟಾಂಗಯೋ ಗವಲ್ಲ. ಅಷ್ಟಾಂಗ ಯೋಗವೇ ಮಹತ್ವವಾಗಿದ್ದರೆ ಇಷ್ಟಲಿಂಗದ ಅವಶ್ಯ ಕತೆಯೇ ಇರಲಿಲ್ಲ, ಬರೇ ಪ್ರಾಣವನ್ನು ಎಲ್ಲ ಚಕ್ರಗಳಲ್ಲಿ ತಿರುಗಿಸಿ ಬಿಟ್ಟು ಸಮಾಧಿಸುಖವನ್ನನುಭವಿಸಬೇಕಾಗಿತ್ತು. ಆದರೆ ವೀರಶೈವರು ಇಷ್ಟಲಿಂಗವನ್ನು ಭಕ್ತಿ ಹೊರಸೂಸಿ ಮನವುಕ್ಕಿ ಷೋಡಶೋಪಚಾರ ಗಳಿಂದ ಪೂಜಿಸಿ ಅದನ್ನೇ ಮನದಲ್ಲಿ ಧ್ಯಾನಿಸಿ ಅದರಲ್ಲಿಯೇ ಮೈಮ ರೆದು ಸಮಾಧಿ ಸ್ಥಿತಿಯನ್ನು ಪಡೆಯುವರು. ಇದೇ ಶಿವಯೋಗವು.

ಆರು ಚಕ್ರಗಳಲ್ಲಿ ೬ ಲಿಂಗಗಳನ್ನು ಪ್ರತಿಷ್ಠೆಗೊಳಿಸುವದು ಯೋಗ ಮಾರ್ಗವಲ್ಲ. ಅದು ಭಕ್ತಿ ಮಾರ್ಗದ ಒಂದು ವಿಧವು. ಅದು ಹೇಗೆಂ ದರೆ 'ಘ್ರಾಣದಲ್ಲಿ ಆಚಾರಲಿಂಗವ ಸಂಬಂಧಿಸಿ ಜಿಹ್ವೆಯಲ್ಲಿ ಗುರು ಲಿಂಗವ ಸಂಬಂಧಿಸಿ ತ್ವಕ್ಕಿನಲ್ಲಿ ಜಂಗಮಲಿಂಗವ ಸಂಬಂಧಿಸಿ ಶ್ರೋತ್ರ ದಲ್ಲಿ ಪ್ರಸಾದ ಲಿಂಗವ ಸ್ವಾಯತವ ಮಾಡಿ ಭಾವದಲ್ಲಿ ಮಹಾಲಿಂ ಗವ ಮೂರ್ತಿಗೊಳಿಸಿ ಬ್ರಹ್ಮದಲ್ಲಿರ್ಪ ಪರಿಪೂರ್ಣಲಿಂಗವು ಸರ್ವಾಂಗ ದಲ್ಲಿ ಸ್ವಾಯತವಾಗಲು ಅಂಗಸಂಗವೆಲ್ಲ ಲಿಂಗಸಂಗವಯ್ಯಾ ಮಹಾ ಗುರುಶಿವಸಿದ್ಧೇಶ್ವರಪ್ರಭುವೇ.' ಎಂಬ ವಚನವಿದ್ದು ಈ ವಚನದಿಂದ ನಮಗೆ ಕಂಡುಬರುವದೇನಂದರೆ ಆಯಾಯ ಭಕ್ತಿಯ ಬಲದಿಂದ ನಮ್ಮ ಸರ್ವೇಂದ್ರಿಯಂಗಳ ದುಷ್ಟ ಪ್ರವೃತ್ತಿಯನ್ನು ನಾಶಗೊಳಿಸಿ ಅವುಗಳನ್ನು ಉದಾತ್ತ ಗೊಳಿಸುವದೇ ಪ್ರಾಮುಖ್ಯವಲ್ಲದೆ ಇಂದ್ರಿಯಗಳಲ್ಲಿ ಪ್ರಾಣವನ್ನು ಓಡಾಡಿಸಿ ದಣಿದು ಮೈಮರೆತು ಬಿಡುವದಲ್ಲ.

'ವೀರಶೈವ ಮತದಲ್ಲಿ ಷಟ್‌ಸ್ಥಲಗಳನ್ನು ಸಾಧಿಸಿಕೊಳ್ಳುವವರು ಸಾಧಕರು. ಸಹಸ್ರಾರ ಶಿಖಾಪಶ್ಚಿಮ ಚಕ್ರಗಳಲ್ಲಿ ಪ್ರಾಣವನ್ನು ತಿರು ಗಿಸಿ ಮೈಮರೆದು ಸಮಾಧಿ ಸ್ಥಿತಿಯನ್ನು ಹೊಂದುವವರು ಸಿದ್ಧರು' ಈ ರೀತಿಯಾಗಿ ಹೇಳುವದುಂಟು. ಆದರೆ ಹೀಗೆ ಎಲ್ಲಿಯೂ ಹೇಳಿಲ್ಲ. ಐಕ್ಯಸ್ಥ

ಲಕ್ಕೆ ಸಮಾಧಿಯ ಪರಾಕಷ್ಠೆಯು ತೀರಿ ಲಿಂಗಾಂಗಗಳು ಸಮರಸ ಹೊಂದುತ್ತಿರಲು ಐಕ್ಯಸ್ಥಲದ ಮುಂದೆ ಮತ್ತಾವ ಸ್ಥಲದಲ್ಲಿ ಅಡಿಯಿಡ ಲಿಕ್ಕೆ ಸಿದ್ಧನಿಗೆ ಅವಕಾಶವುಂಟು? ಶರಣ ಸ್ಥಲದ ವರೆಗೂ ಸಾಧಕ ತ್ವವು ನಡೆಯುತ್ತಿದ್ದು ಐಕ್ಯಸ್ಥಲದಲ್ಲಿ ಪರಿಪೂರ್ಣವಾದ ಸಿದ್ಧಾವಸ್ಥೆಯು ಪ್ರಾಪ್ತವಾಗುತ್ತದೆ. ಐಕ್ಯಸ್ಥಲದ ಮುಂದೆ ಬೇರೆ ಅವಸ್ಥೆಯೇ ಇರಲಾರದು. ಶರಣಸ್ಥಲದಲ್ಲಿ ಸತಿಪತಿಭಾವವಿರುವದರಿಂದ ಸತಿಪತಿಗಳ ಸಂಯೋಗ ವಿಯೋಗದಂತೆ ಶರಣನಿಗೆ ಕೆಲಕಾಲ ಸಮಾಧಿ ಸುಖವು ದೊರೆತು ಸಮಾಧಿಯಿಳಿದ ಬಳಿಕ ಬಾಹ್ಯ ಜಗತ್ತಿನ ವ್ಯವಹಾರವು ಸಾಗುವದು. ಆದರೆ ಐಕ್ಯಸ್ಥಲದಲ್ಲಿ ನಿರಂತರವಾದ ಸಮಾಧಿಸ್ಥಿತಿಯು ಪ್ರಾಪ್ತವಾಗು ತ್ತದೆ. ಅದು ಹೇಳಲಿಕ್ಕೆ ಬಾರದಂಥ ಶೂನ್ಯಸ್ಥಿತಿಗೂ ಹೋಗಿ ಮುಟ್ಟಿ ಬಿಡುತ್ತದೆ. ಲಿಂಗೈಕ್ಯನೇ ಸಿದ್ಧನು. ಅಲ್ಲಿಗೇನೇ ಷಟ್‌ಸ್ಥಲದ ಕೊನೆಯ ಮೆಟ್ಟಲು ಮುಗಿಯುತ್ತದೆ. ವಿಶುದ್ಧಿ ಚಕ್ರದಲ್ಲಿರುವ ಮಹಾಲಿಂಗದೊ ಳಗೆ ಅಂಗನು ಬೆರೆದರೆ ಐಕ್ಯಸ್ಥಲದ ಆರಂಭ. ಪಶ್ಚಿಮ ಚಕ್ರದಲ್ಲಿರುವ ನಿರಂಜನ ಲಿಂಗ ಬೆರೆದಲ್ಲಿ ಅದೇ ಐಕ್ಯಸ್ಥಲದ ಕೊನೆ.

ಸಕಲವಾದ ಇಷ್ಟಲಿಂಗವನ್ನು ಅಂತಃಕರಣ ಉಕ್ಕಿ ಬಾಹ್ಯದಲ್ಲಿ ಪೂಜಿಸಿ ಆ ಇಷ್ಟವನ್ನೇ ಮನದಲ್ಲಿ ಧ್ಯಾನಿಸಲು ಅದೇ ಸಕಲ ನಿಃಕಲ ವಾದ ಪ್ರಾಣಲಿಂಗೋಪಾಸನೆಯು. ಆ ಪ್ರಾಣಲಿಂಗೋಪಾಸನೆಯಲ್ಲಿ ಮೈಮರೆದು ನಿರ್ವಿಕಲ್ಪ ಸಮಾಧಿಯನ್ನು ಹೊಂದುವದೇ ನಿಃಕಲವಾದ ಭಾವಲಿಂಗೋಪಾಸನೆಯು. ಇದೇ ಷಟ್‌ಸ್ಥಲವು ತೋರಿಸುವ ಜ್ಞಾನ ಪ್ರಕಾಶವು. ಇಂಥ ಜ್ಞಾನಪ್ರಕಾಶವನ್ನು ನಂದಿಸಲು ಯಾರಾದರೂ ಪ್ರಯತ್ನಿಸಿದರೆ ನಾವು ಅಂಧಕಾರದಲ್ಲಿ ಕೊಳೆಯುವ ಪ್ರಸಂಗಬರ ಬಹುದಲ್ಲವೇ? ಅಂತೆಯೇ ಷಟ್‌ಸ್ಥಲದ್ರೋಹಿಗಳನ್ನು ಶಿಕ್ಷಿಸಬೇಕೆಂಬುದೇ ವೀರಶೈವರಲ್ಲಿ ಲನೆಯ ಆಚಾರವು ಸಾರುತ್ತದೆ. ಈ ವ್ರತವನ್ನು ಪಾಲಿ ಸುವವನು ವೀರಮಾಹೇಶ್ವರನೆನಿಸುವನು. ಆದುದರಿಂದ ನಮ್ಮ ಹೆಂಡರು ಮಕ್ಕಳು ಹೊಲಮನೆಗಳಿಗಿಂತಲೂ ನಮ್ಮ ಸ್ವಂತ ಜೀವಕ್ಕಿಂತಲೂ ಹೆಚ್ಚು ಅಮೌಲ್ಯವಾದ ಷಟ್‌ಸ್ಥಲ ಜ್ಞಾನವನ್ನು ಕಾಪಾಡುವದೂ ಆದಕ್ಕೆ ದ್ರೋಹ ಮಾಡುವ ವ್ಯಕ್ತಿಯ ಶಾಸನ ಮಾಡುವದೂ ವೀರ ಶೈವನ ಕರ್ತವ್ಯವಾಗಿರುತ್ತದೆ,

# ಸ್ತುತಿಪಂಚಕ.

ತೆರೆಯು ಜನವ ಪೊರೆಯಲೆಂದು
ಗುರುಕುವರಾರ ದೇವನಂದು
ವೀರ-ಜನನಿಯುದರದಲ್ಲಿ
ಜನುವು ತಾಳ್ದನು;
ಪರಮವೀರಶೈವನೆನಿಸಿ
ಜಗದಿ ಬಾಳ್ದನು ॥೧॥

ವೀರಶೈವರವುಲ ಕೀರ್ತಿ
ಧರೆಯತಲದಿ ಬೆಳಗಲೆಂದು
ಭರದಿ ಕಾಯ-ಕಷ್ಟದಿಂದ
ನಿರುತ ದುಡಿದನು;
'ಧೀರಚರವರೇಣ್ಯನೆ'ಂದು
ಜಸವ ಪಡೆದನು ॥೨॥

ಧರ್ಮದಿಂದಲೆಮಗೆ ಸುಖವು
ಧರ್ಮದಿಂದಲೆಮಗೆ ಜಸವು
ಧರ್ಮದಿಂದ ಭೋಗ-ಭಾಗ್ಯ
ವೆಲ್ಲ ದೊರೆವುದು;
ಧರ್ಮಪ್ರಾಣಿಯಾಗಿ ಬಾಳಿ,
ಬದುಕಿರೆಂದನು ॥೩॥

'ತತ್ತ್ವಮಸಿ' ಪದದ ಗೂಢ
ತತ್ತ್ವವನ್ನು ಜನಕೆ ತಿಳುಹಿ
ಸತ್ವಶಾಲಿಯಾಗಿ ಜಗದಿ
ಬೆಳಗುತಿರ್ದನು;
ಸತ್ಯಶೈವಕಾಂತಿಯಿಂದ
ಹೊಳೆಯುತಿರ್ದನು ॥೪॥

'ನಾಡಿನುದಯಕಾಗಿ ಮರಳಿ
ಬೇಡಿ, ಬರುವೆನೆಂದು' ನುಡಿದು,
ಕೂಡಿ ಲಿಂಗದಲ್ಲಿ ತನ್ನ
ತನುವ ಬಿಟ್ಟನು;
ಆಡಿದಂತೆ ಮಾಡಿ ಕೀರ್ತಿ-
ಕವಚ ತೊಟ್ಟನು ॥೫॥

—ಸ್ವಾಮಿ ಶಿವಯೋಗಿ.

# ಶಿವಾನುಭವ

| ವರ್ಷ ೧೮ | ಜಾನೇವಾರಿ ೧೯೪೪. | ಸಂಚಿಕೆ ೪ |
|---|---|---|

## ಶಿವಾನುಭವ ಕೇಂದ್ರ ಸಭೆ.

ಶಿವಾನುಭವ ಪತ್ರಿಕೆಯ ಮೂಲಕ ಆದ ಕಾರ್ಯಗಳನ್ನು ಬಹು ಜನರು ಸ್ತುತಿಸುತ್ತಲಿದ್ದುದಕ್ಕೆ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ. ಆದರೆ ಅವರಲ್ಲನೇಕರು ಈ ವಿಷಯದ ಬಗ್ಗೆ ಮಾಡತಕ್ಕ ಕಾರ್ಯಗಳು ಮುಗಿದಿರುತ್ತವೆಂದು ಭಾವಿಸಿ ತಮ್ಮ ಬರವಣಿಗೆಗಳನ್ನು ನಮಗೆ ಬರೆಯುತ್ತಿರುವದು ಕಂಡುಬರುತ್ತದೆ. ಈ ವರೆಗೆ ಶಿವಾನುಭವದ ವಿಷಯವಾಗಿ ೫೦—೬೦ ಮಹತ್ವದ ಗ್ರಂಥಗಳು ಪ್ರಕಟವಾಗಿರುವದೇನೋ ನಿಜವು. ಆದರೆ ಇಷ್ಟರಿಂದಲೇ ಈ ಕಾರ್ಯವು ಕೊನೆಗಂಡಿತೆಂದು ಯಾರಾದರೂ ತಿಳಿದಿದ್ದರೆ ಅದು ತಪ್ಪಾದದ್ದಿದ್ದು ನಾವು ಮಾಡತಕ್ಕ ಮಹತ್ವದ ಕಾರ್ಯಗಳು ಇನ್ನು ಮುಂದೆಯೇ ಇರುತ್ತವೆಂದು ನಾವು ಅವರಿಗೆ ನಮ್ರಪೂರ್ವಕವಾಗಿ ಹೇಳಬಯಸುತ್ತೇವೆ.

ಶಿವಾನುಭವದ ತತ್ವಗಳ ತಿಳುವಳಿಕೆಯು ಇನ್ನೂ ಸಮಾಜದಲ್ಲಿ ಸಾಕಷ್ಟು ಪಸರಿಸಿರುವದಿಲ್ಲಾದ್ದರಿಂದ ಅವುಗಳ ಬಗ್ಗೆ ಅನೇಕ ಬಗೆಯ ತಪ್ಪು ಅಭಿಪ್ರಾಯಗಳು ಉತ್ಪನ್ನವಾಗಹತ್ತಿರುತ್ತವೆ. ಆದ್ದರಿಂದ ಅವುಗಳನ್ನು ಶಕ್ಯವಿದ್ದಷ್ಟರಮಟ್ಟಿಗೆ ದೂರಮಾಡುವದು ಅತ್ಯವಶ್ಯಕವಿದ್ದು ಈ ವಿಷಯದ ಪರಿಚಯವಿದ್ದವರ ಒಂದು ಚಿಕ್ಕ ಸಭೆಯನ್ನು ಒಂದೆಡೆಗೆ ಸೇರಿಸಿ ಮತಭೇದವಿದ್ದ ವಿಷಯಗಳನ್ನು ಮತ್ತು ಶಿವಾನುಭವದ ಇತರ ತತ್ವ ವಿಷಯಗಳನ್ನು ಚರ್ಚಿಸಬೇಕೆಂದು ಕೆಲ ಮಹನೀಯರ

ಸೂಚನೆಗಳು ನಮ್ಮ ಕಡೆಗೆ ಬಂದಿರುತ್ತವೆ. ಆದ್ದರಿಂದ ನಾವು ಇಂಥ ಸಭೆಯನ್ನು ಮಾರ್ಚ ಅಥವಾ ಎಪ್ರೆಲ ತಿಂಗಳಲ್ಲಿ ಒಂದು ಅನುಕೂಲ ಸ್ಥಳದಲ್ಲಿ ಕರೆಯಬೇಕೆಂದು ಯೋಚಿಸಿದ್ದೇವೆ. ಈ ಸಭೆಗೆ ಶಿವಾನುಭವದ ವಿಷಯಗಳ ಬಗ್ಗೆ ಮೇಲಿಂದ ಮೇಲೆ ಪತ್ರಿಕೆಗಳಿಗೆ ಲೇಖಗಳನ್ನು ಬರೆಯುತ್ತ ಬಂದಂಥವರು ಮತ್ತು ಈ ವಿಷಯವನ್ನು ಬಲ್ಲಂಥ ಇತರರು ಆಹ್ವಾನಿಸಲ್ಪಡುವರು. ಈ ಸಭೆಯಲ್ಲಿ ಅಂಗವಹಿಸಬೇಕೆಂದು ಅಪೇಕ್ಷಿಸುವವರೂ ಕೂಡ ನಮಗೆ ಹಾಗೆ ತಿಳಿಸಿದಲ್ಲಿ ಅವರಿಗೂ ಆಮಂತ್ರಣಗಳು ಕಳಿಸಿಕೊಡಲ್ಪಡುವವು. ಸಭೆಯಲ್ಲಿ ಚರ್ಚಿಸತಕ್ಕ ವಿಷಯಗಳನ್ನು ಸಿದ್ಧಪಡಿಸುವದು ಅವಶ್ಯವಿದ್ದು ಈ ಬಗ್ಗೆ ಯಾರಿಗಾದರೂ ಸೂಚನೆಗಳನ್ನು ಮಾಡುವದಿದ್ದರೆ ಅವರು ಅವುಗಳನ್ನು ಫೇಬ್ರುವರಿ ೧೫ನೇ ತಾರೀಖಿನ ಒಳಗಾಗಿ ನಮಗೆ ತಿಳಿಸಬೇಕೆಂತಲೂ ನಮ್ಮ ವಿನಂತಿ ಇದೆ.

**ಸಂಪಾದಕ-ಶಿವಾನುಭವ.**

---

## ಶಕ್ತಿ.

(ಲೇಖಕರು:— ಶ್ರೀಯುತ ಸಿ. ನಾ. ಮಹಾಂತಣ್ಣವರ ಹುನ್ನೂರು.)

ಸೃಷ್ಟಿಕರ್ತನಿಂದ ನಿರ್ಮಿತವಾದ ಸೃಷ್ಟಪದಾರ್ಥಗಳನ್ನು ದೃಷ್ಟಿಸಲು ಅಟ್ಟಹಾಸದಿಂದ ಮೆರೆಯುವ ಭವ್ಯವಾದ ಬೆಟ್ಟಗಳೂ ಕಟ್ಟಡವಿಗಳೂ ಮಹಾಸಾಗರಗಳೂ ಸಮುದ್ರಗಳೂ ಸರೋವರಗಳೂ ಸೃಷ್ಟಿಯ ಹೊಟ್ಟೆಯೊಳಗಿನ ಜ್ವಾಲಾಮುಖಿಗಳೂ ಖನಿಜಗಳೂ ಕಲ್ಲುಗಳೂ ಮಣ್ಣೂ ಬಹುವಿಧವಾದ ಬಣ್ಣಗಳಿಂದಲೂ ಆಕಾರದಿಂದಲೂ ಕಂಗೊಳಿಸುವವು. ಇದಲ್ಲದೆ ಉದ್ಭಿಜ ಅಂಡಜ ಪಿಂಡಜ ಜರಾಯುಜಗಳು ಹುಟ್ಟಿಹುಟ್ಟಿ, ಬೆಳೆಬೆಳೆದು, ಇದ್ದಿದ್ದು, ಸವೆಸವೆದು ಕಡೆಗೆ ನಾಶಹೊಂದುವ ಅವ್ಯಾಹತವಾದ ಕ್ರಿಯೆಯು ದೃಷ್ಟಿಗೋಚರವಾಗುತ್ತದೆ. ಮತ್ತು ಭೂದೇವಿಯನ್ನು ಆಚ್ಛಾದಿಸಿದ ವಾತಾವರಣವನ್ನೂ ಅದರಲ್ಲಿಯ ವಿದ್ಯುತ್ತನ್ನೂ ಆಕಾಶಮಂಡಲದಲ್ಲಿಯ ಸೂರ್ಯಚಂದ್ರನಕ್ಷತ್ರಾದಿಗಳನ್ನೂ ಅವುಗಳ ಕ್ರಿಯೆಗಳನ್ನೂ ಕಂಡುಹಿಡಿಯಲು ಪರಮಾತ್ಮನ ಅಗಾಧವಾದ

ಅನಂತವಾದ ಅಪಾರವಾದ ಅಸಾಧ್ಯವಾದ ಅನುಪಮವಾದ ಅಚಿಂತ್ಯ ವಾದ ಅಶಕ್ಯವಾದ ಅದ್ಭುತವಾದ ಅವಿರಳವಾದ ಶಕ್ತಿಯು ಸೃಷ್ಟಿಮಯ ವಾಗಿರುವದೆಂಬುದು ಸ್ಪಷ್ಟವಾಗುತ್ತದೆ. ಬರಿಗಣ್ಣಿಗೆ ಕಂಡುಬರುವ ಈ ಬಹಿಃಸೃಷ್ಟಿಯನ್ನೂ ಸೂಕ್ಷ್ಮದೃಷ್ಟಿಗೋಚರವಾದ ಅಂತಃಸೃಷ್ಟಿಯನ್ನೂ ಕುರಿತು ವಿವೇಚಿಸಿದ ವಿವೇಕಿಗಳು "ಶಕ್ತಿಶ್ಚ ಶಕ್ತಿಮಾಂಶ್ಚೈವ"ವೆಂದೂ "ಶಿವಶಕ್ತಿವಿಲಾಸ"ವೆಂದೂ "ಪುರುಷಪ್ರಕೃತಿ"ಯೆಂದೂ "ಅರ್ಧನಾರೀಶ್ವರ ವಿಬ"ವೆಂದೂ "ಲಿಂಗಾಂಗ"ವೆಂದೂ ಅನ್ನುವದುಂಟು.

ಅಂಗಸಾಧನೆಯಿಂದಲೂ ಬುದ್ಧಿಸಾಮರ್ಥ್ಯದಿಂದಲೂ ಒಬ್ಬ ವ್ಯಕ್ತಿಯು ಶಕ್ತಿವಂತನಾಗಿ ಯುಕ್ತಿವಂತನಾಗಿ ರಾಜ್ಯಗಳಿಸಿ ರಾಜನಾಗಬಲ್ಲನು. ಅಡವಿಯೊಳಗಿನ ಕಾಡುಮೃಗಗಳಲ್ಲಿಯೂ ಸಿಂಹವು ಸಹ ತನಗೆ ದೇವರು ಪಾಲಿಸಿದ ಶಕ್ತಿಯಿಂದ ವನರಾಜನೆಂದೆನಿಸಿಕೊಳ್ಳಬಲ್ಲದು. ವ್ಯವಹಾರ ದಲ್ಲಿ ಒಬ್ಬಾನೊಬ್ಬ ವ್ಯಕ್ತಿಯು ಬುದ್ಧಿಬಲದಿಂದ ಕೋಟ್ಯವಧಿ ದ್ರವ್ಯವುಳ್ಳ ಸಾಹುಕಾರನಾಗಬಲ್ಲನು. ಇದರಂತೆ ಸಾಹಿತ್ಯ ಸಂಗೀತ ಕಲೆಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಒಬ್ಬೊಬ್ಬರು ಪ್ರವೀಣರಾಗಬಲ್ಲರು. ಸೃಷ್ಟಿಶಾಸ್ತ್ರಜ್ಞರು ವಿಮಾನ ರೇಡಿಯೋ ಸಿನೇಮಾ ಮುಂತಾದ ಯಂತ್ರಗಳನ್ನು ತಮ್ಮ ಬುದ್ಧಿ ಸಾಮರ್ಥ್ಯದಿಂದ ರಚಿಸಬಲ್ಲರು. ಇವೆಲ್ಲ ಲೌಕಿಕ ಶಕ್ತಿಗಳೆಂದೇ ಹೇಳಬಹುದು.

ಆದರೆ ಯೋಗಿಗಳಲ್ಲಿ ತಮ್ಮ ಶಿವಯೋಗಸಾಮರ್ಥ್ಯದಿಂದ ಅನೇಕ ಪವಾಡಗಳನ್ನು ಮಾಡಿದ್ದನ್ನು ನೋಡಬಹುದು. ಅವರು ಜಗದಾದಿ ಬೀಜವನ್ನು ಕಂಡುಹಿಡಿದು ಜಗದೀಶನನ್ನು ತಮ್ಮಲ್ಲಿಯೇ ಜ್ಞಾನದೃಷ್ಟಿ ಯಿಂದ ನೋಡಿ ಆ ಜಗದೀಶನ ಸಂವಿದಾತ್ಮಕ ಶಕ್ತಿಯನ್ನೂ ಆ ಶಕ್ತಿಯ ರೂಪಕ್ರಿಯಾದಿಗಳನ್ನು ಅರಿತು ಆಚರಿಸಿ ಷಟ್‌ಸ್ಥಲ ವಿಚಾರದಲ್ಲಿ ಷಡ್ ಲಿಂಗಗಳಿಗೆ ಅಂಗವಾದ ಷಟ್‌ಶಕ್ತಿಗಳನ್ನು ಶಿವಾನುಭಾವದಿಂದ ಶಿವಾನು ಭವಮಂಟಪದಲ್ಲಿ ವಿವರಿಸಬಲ್ಲರು. ಇದುವೇ ಅಲೌಕಿಕ ಶಕ್ತಿಯು, ಇದುವೇ ಪಾರಮಾರ್ಥಿಕ ಶಕ್ತಿಯು.

ಒಕ್ಕಲಿಗನು ಕಡಲೇ ಬಿತ್ತುವ ಕಾಲದಲ್ಲಿ ಹದ ಮಾಡಿದ ಭೂಮಿ ಯೊಳಗೆ ಮಳೆಯಾಗಲು ಕಡಲೇ ಬೀಜಗಳನ್ನು ಬಿತ್ತುವನಷ್ಟೇ! ಬಿತ್ತಿದ್ದ ರಲ್ಲಿ ಹುಳಹತ್ತದ ಜೊಳ್ಳಿರದ ಪುಷ್ಟವಾದ ಬೀಜಗಳೇ ನಾಟುವವು. ಪುಷ್ಟವಾದ ಬೀಜದಲ್ಲಿ ಸಸಿದೋರುವ ಸರ್ವದ್ರವ್ಯಸಂಗ್ರಹವೂ ಅಥವಾ

ಬೀಜಾಂಡವೂ ಬೀಜ ಶಕ್ತಿಯೂ ಗೂಢವಾಗಿ ಇರುವವೆಂಬದು ಸ್ಪಷ್ಟವು. ಹದಮಾಡಿದ ಹಸಿಭೂಮಿಯೊಳಗಿನ ನೀರಿನ ಸಂಪರ್ಕದಿಂದ ಕಡಲೆಯ ಬೀಜವು ಆನಂದದಿಂದ ಮೊದಲು ಉಬ್ಬುವದು. ಅಂದರೆ ಅದರಲ್ಲಿಯ ಬೀಜಶಕ್ತಿಯ ಪ್ರಕಾಶವು ವಿಕಸಿತವಾಗುವದು. ಬಳಿಕ ಪ್ರಕಾಶದಲ್ಲಿ ವಾಯು ಶಕ್ತಿಯು ಒಡಗೂಡಿ ಮೊಳಕೆಯನ್ನು ಮುಂದುವರಿಸುವ ಅಗ್ನಿ ಜಲಾಂಶಗಳ ಸಹಾಯದಿಂದ ಮೊಳಕೆಯು ಮೂಡುವದು. ಮೊಳಕೆ ಯೊಡೆದು ನೆಲದಿಂದ ಮೇಲೆ ಬರಲು ಹಸುಗೂಸಿನಂತಿರುವ ಸಸಿಯು ತಲೆದೋರುವದು. ಇವೆಲ್ಲ ಕ್ರಿಯೆಗಳು ಪುರುಷಪ್ರಕೃತಿಗಳಿಂದ ಅಥವಾ ಶಿವಶಕ್ತಿಗಳಿಂದ ಉಂಟಾದವುಗಳು.

"ಏಕಮೇವಾದ್ವಿತೀಯ ಬ್ರಹ್ಮ ಎಂಬ ಶ್ರುತಿಗನುಸಾರವಾಗಿ ಶಿವನು ತನ್ನ ಲೀಲೆಗಾಗಿ ತನ್ನಲ್ಲುಂಟಾದ ನೆನಹಿನಿಂದ ಚಿತ್ತು ಉದ್ಭವಿಸಿ" ಬಳಿಕ ಚಿನ್ನಾದ ಚಿದ್ಬಿಂದು ಚಿತ್ಕಳೆಗಳಲ್ಲಿ ಮೂಲಚಿತ್ತು ಬೆರಿಬೆರೆದು ನಾಮ ರೂಪಕ್ರಿಯೆಗಳಿಂದೊಡಗೂಡಿದ ಈ ಸೃಷ್ಟಿಯು ನಿರ್ಮಿತವಾಗಿದೆಯೆಂದು ಶಿವಾನುಭವವು ಸಾರುತ್ತದೆ. ಶಿವಶರಣರ ವಚನದಂತೆ ಶಿವಶಕ್ತಿಗಳೆಂಬ ಎರಡು ಶಬ್ದಗಳಿಂದ ಮೇಲೆ ಹೇಳಿದ ಶ್ರುತಿಪ್ರಮಾಣಕ್ಕೆ ಕುಂದುಬಾರದು. ಕಡಲೆಯಲ್ಲಿ ಎರಡು ಬೇಳೆಗಳು ಬೇರೆದೋರಿದರೂ ಕಡಲೆಯೊಂದತ್ವಕ್ಕೆ ಬಾಧೆ ಬರದು. ಇದರಂತೆ ಪ್ರಕಾಶ-ಕಿರಣ, ಬೆಲ್ಲ-ರುಚಿ, ಸಾಸಿರಕುಂಭ ದೊಳಗೆ ತೋರುವ ಸೂರ್ಯಬಿಂಬಗಳು ದೃಷ್ಟಾಂತಗಳೆಂದು ಹೇಳುವ ಅವಶ್ಯವಿಲ್ಲ.

ನೀರು ಮಣ್ಣು ಬೀಜಗಳ ಅಂತರ್ಭೂತವಾದ ಪ್ರಕಾಶಕ ಮತ್ತು ಪ್ರಕಾಶಗಳ ಕೂಟ, ಕೂಟಕ್ರಿಯೆಯಿಂದಾದ ಏಕತ್ವ, ಏಕತ್ವವನ್ನು ಮುಂದುವರಿಸುವ ಶಕ್ತಿ, ಏಕವೇ ವಿಕಸಿತವಾಗುವ ಇಚ್ಛೆ, ಒಡಮೂಡುವ ಜ್ಞಾನ, ಕಡೆಗೆ ಸಸಿಯಾದ ಕ್ರಿಯೆಗಳನ್ನು ಮನದಂದರೆ ಶಕ್ತಿಗಳಲ್ಲಿ ಚಿಚ್ಛಕ್ತಿ ಪರಾಶಕ್ತಿ ಆದಿಶಕ್ತಿ ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗ ಳೆಂದು ೬ ಶಕ್ತಿಗಳು ಕಂಡುಬರುವವು. ಬೀಜ ಮಣ್ಣು ನೀರು ಈ ಮೂರು ಸ್ಪಷ್ಟಪದಾರ್ಥಗಳಿದ್ದು ಅವುಗಳಲ್ಲಿ ನಿಗೂಢವಾದ ಪರಪ್ರಕಾಶ ಕಿರಣಶಕ್ತಿಯೇ ಚಿಚ್ಛಕ್ತಿಯು. ಆ ಮೂರು ಪದಾರ್ಥಗಳ ಕಿರಣಶಕ್ತಿ ಗಳ ಸಂಕಲನಶಕ್ತಿಯೇ ಪರಾಶಕ್ತಿಯು. ಸಂಕಲನ ಕ್ರಿಯೆಗೆ ಸಹಾಯ ವಾದ ಶಕ್ತಿಯೇ ಆದಿಶಕ್ತಿಯು. ಸಂಕಲನವಾಗಿ ರೂಪಗೊಳ್ಳುವ ಆತು

ರವೇ ಇಚ್ಛಾಶಕ್ತಿಯು, ಸಸಿಯಾಗುವ ಸ್ಥಿತ್ಯಂತರದ ಪ್ರಭಾವವೇ ಜ್ಞಾನ ಶಕ್ತಿಯು, ಸಸಿರೂಪ ತಾಳುವ ಕ್ರಿಯೆಯೇ ಕ್ರಿಯಾಶಕ್ತಿಯು.

ದೈಯಲ್ಲಿ ಎಣ್ಣೆ ಇರುವ ವರೆಗೆ ಜೀವಿಗಳು ಸತೇಜವಾಗಿ ತಮ್ಮ ಕರ್ತವ್ಯವನ್ನು ಕಡೆಗಾಣಿಸುವವು. ಎಣ್ಣೆ ತೀರಿದಂತೆ ಸವೆದು ಸಣ್ಣ ಗುತ್ತ ಸಾಗಿ ಕಡೆಗೆ ಮಣ್ಣುಪಾಲಾಗುವವು. ಇದರಂತೆ ಕಟ್ಟಿಗೆಯಂಥ ನಿರ್ಜೀವ ಪದಾರ್ಥಗಳಾದರೂ ನಿಗೂಢವಾದ ಎಣ್ಣೆಯ ಅಂಶದಿಂದಲೇ ಉರಿಯುವವು. ಹುಳಹತ್ತಿ ಲಡ್ಡುಹಾಯಿದ ಕಟ್ಟಿಗೆಯು ಉರಿಯದು. ಹಣ್ಣಾಗಲಿ ಎಲೆಯಾಗಲಿ ಜೀವಿಯಾಗಲಿ ಅದರಲ್ಲಿ ಸತ್ವ ಇರುವ ವರೆಗೆ ಮಾತ್ರ ಸತೇಜವಾಗಿ ಪ್ರಫುಲ್ಲಿತವಾಗಿ ತೋರುವದು. ಬರೀ ಸ್ಟೋವಿನಲ್ಲಿ ಕಲ್ಲೆಣ್ಣೆಯನ್ನು ಹಾಕಿ ಅದಕ್ಕೆ ಸಂಸ್ಪರ್ಶನದ ಸ್ಪಿರಿಟಿನ ದೀವಿಗೆಯಿಂದ ಉಗಿಯ ಶಕ್ತಿಯು ಬರುವಂತೆ ಪಂಪು ಹೊಡೆಯಲು ಗ್ಯಾಸವು ಹೊರ ಬೀಳುವದು. ಗ್ಯಾಸಕ್ಕೆ ದೀವಿಗೆಯ ಸಂಪರ್ಕವಾಗಲು ಉರಿಯೇಳು ವದು. ಆ ಪ್ರಕಾರದ ಶಕ್ತಿಯೇ ಚಿಚ್ಛಕ್ತಿಯು. ಗ್ಯಾಸದ ಶಕ್ತಿಯೇ ಪರಾ ಶಕ್ತಿಯು. ಅದರಲ್ಲಿಯ ಒತ್ತುವಿಕೆಯೇ ಆದಿಶಕ್ತಿಯು. ಸುಡುವ ಗುಣವೇ ಇಚ್ಛಾಶಕ್ತಿಯು. ಎಣ್ಣೆಯ ಸತ್ವವೇ ಜ್ಞಾನಶಕ್ತಿಯು. ಎಣ್ಣೆಯ ಕ್ರಿಯೆಯೇ ಕ್ರಿಯಾಶಕ್ತಿಯು.

ಚಿಚ್ಛಕ್ತಿರೂಪವಾದ ಮಹಾತಾಯಿಯು ತನ್ನ ಮೂರನೇ ವರ್ಷದ ಬಾಲಕನಿಗೆ ಮುಂಜಾನೆ ಮೈದೊಳೆದು ಬಟ್ಟೆಯನ್ನುಹಾಕಿ ಹೊಟ್ಟೆಗೆ ಮೊಲೆ ಹಾಲು ಊಡಿಸಿ ಆಡಲು ಹೊರಗೆ ಕಳಿಸಿದಳು. ಆ ಬಾಲಕನು ನೆರೆ ಹೊರೆಯ ಮಕ್ಕಳ ಕೂಡ ಬಹಳ ಹೊತ್ತಿನ ವರೆಗೆ ಆಡಿದರೂ ಆಟದ ಭರದಲ್ಲಿ ಹೊಟ್ಟೆ ಹಸಿದದ್ದು ನೆನಪಿಗೆ ಬರಲಿಲ್ಲ. ಇತ್ತ ತಾಯಿಯು ಮನೆಗೆಲಸದಲ್ಲಿ ಮಗ್ನಳಾಗಿ ಮಗನನ್ನು ಮರೆತಳು. ೩—೪ ತಾಸು ಆಗ ಬಂದಿತು. ಆಗ ತಾಯಿಯ ಕೈಕೆಲಸ ಮುಗಿದು ಮಗನ ಅರುಹು ಉಂಟಾಗಿ ಮೊಲೆಹಾಲು ಚಿಮ್ಮಹತ್ತಿದವು. ಅತ್ತ ಮಗನಿಗೆ ಆಟ ಸಾಕಾಗಿ ಹೊಟ್ಟೆಯ ಹಸಿವೂ ತಾಯಿಯ ಹಂಬಲವೂ ಒಮ್ಮೆಲೇ ಆಗಿ ಓಡುತ್ತ ಮನೆಯ ಹಾದೀ ಹಿಡಿದನು. ತಾಯಿಯ ಕಡೆಗೆ ಹೋದ ಕೂಡಲೇ ತಾಯಿಯು ಅತ್ಯಂತವಾಗಿ ಹಿಗ್ಗಿ ಮುದ್ದುಮಗನ ಹಸಿವಿನ ನಿಸ್ತೇಜ ಮುಖವನ್ನು ನೋಡಿ ಅಪ್ಪಿ ಆಲಿಂಗಿಸಿ ಮನದಣಿ ಮೊಲೆ ಯುಣಿಸಿದಳು. ಆ ಬಾಲಕನು ತೃಪ್ತಿಹೊಂದಿ ಸತೇಜನಾದನು.

ಈ ಸಂದರ್ಭದಲ್ಲಿ ಬಾಲಕನಿಗೆ ಆಟದ ಆಸಕ್ತಿಯಲ್ಲಿ ಹೊಟ್ಟೆಗೆ ಕೊಟ್ಟು ಕಾಪಾಡುವ ತಾಯಿಯ ಬಿಂಬ ಪ್ರಕಾಶವು ಭಾವ ತುಂಬ ಬಿಂಬಿಸಿದ ಶಕ್ತಿಯೇ ಚಿಚ್ಛಕ್ತಿಯು. ನನ್ನ ತಾಯಿ ಎಂಬ ಅಭಿಮಾನ ವಹಿಸಿ ಮನೆತನಕ ಓಡುವ ಕ್ರಿಯೆಯೇ ಕ್ರಿಯಾಶಕ್ತಿಯು. ಇನೇ ಬಾಲ ಕರ ತಾಯಿಯ ಹತ್ತರ ಓಡದೆ ತನ್ನ ತಾಯಿಯ ಹತ್ತರ ಹೋಗುವ ಜ್ಞಾನವೇ ಜ್ಞಾನಶಕ್ತಿಯು. ಅವನಲ್ಲಿ ಉಂಟಾದ ಬಲವಾದ ಇಚ್ಛೆಯೇ ಇಚ್ಛಾಶಕ್ತಿಯು. ತಾಯಿಯನ್ನು ಅಪ್ಪಿಕೊಳ್ಳುವದೇ ಆದಿಶಕ್ತಿಯು. ಈರ್ವ ರಲ್ಲಿರುವ ಪ್ರೇಮಭಾವವೂ ಭಾವವಿಕಸಿತ ಮುದ್ದು ಸದ್ದುಗಳೇ ಪರಾ ಶಕ್ತಿಯು. ಅಪ್ಪಿ ಆಲಿಂಗಿಸಿ ಅಮೃತ ರಸವನೀಂಟುವ ಶಕ್ತಿಯೇ ಚಿಚ್ಛ ಕ್ತಿಯು.

ಒಟ್ಟಿನಲ್ಲಿ ಕರಣಶಕ್ತಿ, ಧರ್ಮೇಂದ್ರಿಯ ಶಕ್ತಿ, ಕರ್ಮೇಂದ್ರಿಯ ಶಕ್ತಿ ಗಳೇ ಭಾವ ಪ್ರಾಣ ಇಷ್ಟಲಿಂಗಗಳ ಶಕ್ತಿಗಳೆಂದೂ ಅವುಗಳ ಕೇಂದ್ರಸ್ಥಾ ನಗಳು ಪಶ್ಚಿಮ ಶಿಖಾ ಬ್ರಹ್ಮರಂಧ್ರಸ್ಥಳಗಳೆಂದೂ ಅಲ್ಲಿ ಪ್ರಭಾವಿಸುವ ಲಿಂಗ ಗಳೇ ನಿರಂಜನ ನಿಶ್ಶೂನ್ಯ ನಿಃಕಲಗಳೆಂದೂ ಅವುಗಳ ಶಕ್ತಿಗಳು ಕ್ರಮ ದಿಂದ ನಿರವಯ ನಿಭ್ರಾಂತ ಅನಾಮಯಗಳೆಂದೂ ಶಿವಶರಣರು ಸಿದ್ಧಿ ಸಿದ್ದಾರೆ.

ಶ್ರದ್ಧಾಭಕ್ತಿಯಿಂದ ಆಚಾರ ಲಿಂಗವ ಅಳವಡಿಸಿಕೊಳ್ಳಲು ಕ್ರಿಯಾ ಶಕ್ತಿಯೂ ನೈಷ್ಠಿಕಾಭಕ್ತಿಯಿಂದ ಗುರುಲಿಂಗವ ಅಳವಡಿಸಿಕೊಳ್ಳಲು ಜ್ಞಾನಶಕ್ತಿಯೂ ಅವಧಾನಭಕ್ತಿಯಿಂದ ಶಿವಲಿಂಗವ ಅಳವಡಿಸಿಕೊಳ್ಳಲು ಇಚ್ಛಾಶಕ್ತಿಯೂ ಅನುಭಾವಭಕ್ತಿಯಿಂದ ಜಂಗಮಲಿಂಗವ ಅಳವಡಿಸಿ ಕೊಳ್ಳಲು ಪರಾಶಕ್ತಿಯೂ ಸಮರಸಭಕ್ತಿಯಿಂದ ಮಹಾಲಿಂಗವ ಅಳ ವಡಿಸಿಕೊಳ್ಳಲು ಚಿಚ್ಛಕ್ತಿಯೂ ಅವಶ್ಯವಾದವುಗಳೆಂದು ಶಿವಾನುಭವಿಗ ಳಿಗೆ ಹೇಳಲೇಬೇಡ.

ಈ ಆರು ಭಕ್ತಿಗಳಿಂದ ಆರು ಲಿಂಗವ ಆರು ಶಕ್ತಿಗಳಿಂದ ಅಳವ ಡಿಸಿಕೊಂಡಂತೆ ತ್ರಿವಿಧಭಕ್ತಿಗಳಿಂದ ತ್ರಿವಿಧಲಿಂಗಗಳ ಅಳವಡಿಸಿಕೊಳ್ಳಲು ನಿರವಯ, ನಿಭ್ರಾಂತ, ಅನಾಮಯಗಳೆಂಬ ತ್ರಿವಿಧ ಶಕ್ತಿಗಳ ಅವಶ್ಯ ವಿದೆ. ಈ ತ್ರಿವಿಧ ಶಕ್ತಿಗಳ ಏಕೀಕರಣವೇ ಒಂದೇ ಒಂದಾದ ಬಿಂದು ಶಕ್ತಿಯು. ಈ ಶಕ್ತಿಯೊಳಡಗಿದ ಜ್ಯೋತಿರ್ಲಿಂಗದೊಳು ನಿಂದು ನಿಜ ಸುಖದೊಳಿರುವಾತನೇ ಅಚ್ಚಶರಣನು.

ಸೃಷ್ಟಿಮಯವಾದ ಶಕ್ತಿಯೊಳು ಶಿವಾತ್ಮವು ಕಾರಮೇಘದ ಮಿಂಚಿನಂತೆ ಉಸುರಿನೊಳಗಿನ ಚೈತನ್ಯದಂತೆ ನನೆಯೊಳಗಣ ಪರಿಮಳದಂತೆ ಕ್ಷೀರದೊಳಗಿನ ಘೃತದಂತೆ ಅಡಗಿದರೂ ಶಿವನು "ಶಕ್ತಿರಹಿತನೆಂಬ ಸಿದ್ಧಾಂತವನ್ನು ಶಕ್ತಿಮುಖದಿಂದ ಅರಿದು ಶಕ್ತಿಸಂಗಿಗಳಾಗಿ ಶಕ್ತಿಸಂಗವನ್ನು ಶಕ್ತಿಮಂತ್ರದಿಂದ ಭಂಗಿಸಿ ಪರಮವಿರತರಾಗಿ ಪರಮಶಕ್ತಿಸುಖದೊಳಿರುವ ಅನುವರಿತು ಆಚರಿಸುತ ಶಕ್ತಿರೂಪವಾದ ಜಗತ್ತನ್ನೇ ಮರೆತು ಶಿವಸಾಯುಜ್ಯರಾಗಿ ಶಿವಯೋಗಿಗಳೆನಿಸಿ ಪರಮಯೋಗಿಗಳಾಗಿ ಪರತರಾನಂದಮಯರೆನಿಸಿ ಶಿವಶಕ್ತಿ ಶಿವಭಕ್ತಿ ಶಿವಾಸಕ್ತಿಗಳಿಂದ ಲಿಂಗಾಂಗಸಾಮರಸ್ಯಭಾವಿಗಳಾಗಿ ಶಕ್ತಿಯಿಂ ಜನಿಸಿ ಶಕ್ತಿಯಿಂ ತೊನಿಸಿ ಶಕ್ತಿಯಿಂದೊಡನಾಡಿ ಶಕ್ತಿಯಿಂ ದೂರಾಗಿ ಪಾರಾಗುವ ಶಕ್ತಿವಿಶಿಷ್ಟಾದ್ವೈತಮಾರ್ಗಿಗಳ ಮತವೇ ಶಿವಶರಣರಲ್ಲದೆ ಇನ್ನಾರದು?

---

## ಹಿಂದೂ ಹಬ್ಬಗಳಲ್ಲಿ ಶಿವಾನುಭವದ ತಿರುಳು.

(ಲೇಖಕ:— ಶ್ರೀಯುತ ಮೂರುಸಾವಿರಪ್ಪ ಸಾದರಹಳ್ಳಿ ಮು. ಹುಬ್ಬಳ್ಳಿ.)

ಹಿಂದೂ ಧರ್ಮದಲ್ಲಿ ಅನೇಕ ಹಬ್ಬಗಳು ಕಾಲಕಾಲಕ್ಕೆ ಬರುತ್ತವೆ. ಅವುಗಳಲ್ಲಿ ನಾವು ಶಿವಾನುಭವದ ತಿರುಳನ್ನು ಕಾಣಬಹುದು. ಈ ಹಬ್ಬಗಳಲ್ಲಿ ಮಹಾನವಮಿಯು ಬಹು ಶ್ರೇಷ್ಠವಾದದ್ದು ಅದು ಎಲ್ಲ ಸಮಾಜದವರಿಂದಲೂ ದೊಡ್ಡ ಹಬ್ಬವಾಗಿ ಆಚರಿಸಲ್ಪಡುತ್ತದೆ. ಇದರಲ್ಲಿ ಅಶ್ವಿನ ಶುದ್ಧ ಪ್ರತಿಪದೆಯ ದಿವಸ ಸೀಮೋಲ್ಲಂಘನವನ್ನು ಮಾಡುವ ರೂಢಿಯುಂಟು ಈ ಹಬ್ಬದ ಯಥಾರ್ಥ ಜ್ಞಾನವನ್ನು ಮಾಡಿಕೊಡುವದೇ ಈ ಲೇಖನದ ಉದ್ದೇಶವಾಗಿದೆ.

ಘಟಸ್ಥಾಪನೆ— ಘಟ ಅಂದರೆ ಶರೀರ (ದೇಹ)ದಲ್ಲಿ, ಘಟದೊಡೆಯನಾದ ಪರಮಾತ್ಮನನ್ನು ಸ್ಥಾಪನೆ ಮಾಡುವದಾಗಿದೆ. ಜಗತ್ತಿನ ಸಕಲ ವ್ಯವಹಾರವು ಆ ಪರಮಾತ್ಮನ ಆಧೀನದಲ್ಲಿ ಹೇಗೆ ನಡೆಯುವದೋ ಅದರಂತೆ ಈ ದೇಹದ ಚಲನ ವಲನ ಕ್ರಿಯೆಗಳ ಸಹ ಆ

ಪರಮಾತ್ಮನ ಅಧೀನದಲ್ಲಿ ನಡೆಯುವಂತೆ ಮಾಡುವದೇ ಈ ಸ್ಫಟಿಕಸ್ಥಾ
ಪನೆಯ ಉದ್ದೇಶವಾಗಿದೆ.

ಇನ್ನು ಲಿಂಗಾಂಗಿಗಳಾದ ನಾವು ಹುಟ್ಟಿದ ಕೂಡಲೇ ಆ ಪರ
ಶಿವನ ರೂಪಾದ ಲಿಂಗವನ್ನು ಅಂಗಕ್ಕೆ ಸಂಬಂಧಿಸಿಕೊಂಡ ಬಳಿಕ
ಅದನ್ನು ಅವ ಕಾರಣದಿಂದಲೂ ತ್ಯಜಿಸತಕ್ಕದ್ದಲ್ಲವೆಂಬುವದು ಸಿದ್ಧಾಂತ
ವದೆ.

"ಆಹ್ವಾನವಿಲ್ಲ ಪ್ರಾಣಲಿಂಗವಾಗಿ, ವಿಸರ್ಜನವಿಲ್ಲ ಆ ಲಿಂಗ ನೆಲೆ
ಗೊಂಡಿಪ್ಪುದಾಗಿ, ಆಹ್ವಾನ ವಿಸರ್ಜನೆ ಇಲ್ಲದ ಪರಿ ಬೇರೆ, ಅಂಗ
ಸಂಗವೆ ಲಿಂಗ, ಲಿಂಗ ಸಂಗವೆ ಮನ, ಕೂಡಲ ಚನ್ನಸಂಗನ ಶರಣ
ಸುಯಿಧಾನಿ" ಎಂದು ಚನ್ನಬಸವ ತಂದೆಗಳು ಚನ್ನಾಗಿ ನುಡಿದಿರು
ವರು. ಆದರೆ ಶಿವಶರಣರ ಅನುಭಾವವೆತ್ತ, ನಮ್ಮ ನಡೆ ಎತ್ತ ಸಾಗಿ
ದೆಂಬುದನ್ನು ಸೂಜ್ಞರಾದಂಥವರು ವಿಚಾರಿಸತಕ್ಕದ್ದು. ಶೈವ ಸಿದ್ಧಾಂತಿ
ಗಳಂತೆ ಒಮ್ಮೆ ಸ್ಥಾಪಿಸುವದೂ, ಅನಂತರ ಆ ದೇವನನ್ನು ನನ್ನಂಥವ
ನಲ್ಲಿ ಇರುವದುಚಿತವಲ್ಲೆಂದು ಭಾವಿಸಿ ಅದನ್ನು ಬಾವಿಯಲ್ಲಿ ನೂಕು
ವದೂ, ಲಿಂಗವಂತರಾದ ನಮಗೆ ಯೋಗ್ಯವಲ್ಲ.

ನಂದಾದೀವಿಗೆ—ಅಂದರೆ ದೀಪವು ನಂದದಂತೆ ಹಗಲಿರುಳೂ ಕಾಯು
ವದೆಂದು ತಿಳಿದು ಬರುತ್ತದೆ. ತತ್ವಜ್ಞಾನಿಗಳು ಜ್ಯೋತಿಗೂ ಜ್ಞಾನಕ್ಕೂ
ಓಲು ಕೊಟ್ಟಿರುವರು. ಅದರಂತೆ ನಮ್ಮ ದೇಹದ ಕ್ರಿಯೆಗಳು ಸರಿ
ಯಾಗಿ ನಡೆಯಬೇಕಾದರೆ ಜ್ಞಾನವು ಬೇಕಲ್ಲವೆ! ಜ್ಞಾನವಿಲ್ಲದ ದೇಹವು
ವ್ಯರ್ಥವೆಂದು ತಿಳಿದು ಅಂತಪ್ಪ ಜ್ಞಾನಜ್ಯೋತಿಯನ್ನು ಪಡೆದುಕೊಂಡು
ಅದನ್ನು ನಂದದ ಹಾಗೆ ಕಾಪಾಡುವದೇ ನಂದಾದೀವಿಗೆಯ ಕ್ರತುವು.

ಈ ಶಿವಜ್ಞಾನವನ್ನು ಬಲ್ಲಂಥ ಮಹಾನುಭಾವಿಗಳಿಂದ ಪಡೆದು
ಕೊಂಡು ಅದು ನಂದದ ಹಾಗೆ ಕಾಪಾಡುವದೇ ಲಿಂಗಾಂಗಿಗಳ ಧರ್ಮ,
ಶಿವಶರಣರ ಮಾರ್ಗ. ಅದಕಾರಣ ಪಡೆದುಕೊಳ್ಳುವ (ಕರುಣಪ್ರಸಾದ)
ರೂಢಿಯುಂಟು.

"ಬಸವಣ್ಣನ ಭಕ್ತಿ, ಚನ್ನಬಸವಣ್ಣನ ಜ್ಞಾನ, ಮಡಿವಾಳಯ್ಯನ
ನಿಷ್ಠೆ, ಪ್ರಭುದೇವರ ಜಂಗಮಸ್ಥಲ, ಅಜಗಣ್ಣನ ಐಕ್ಯಸ್ಥಲ, ನಿಜಗುಣನ
ಆರೂಢಸ್ಥಲ, ಸಿದ್ಧರಾಮಯ್ಯನ ಸಮಾಧಿಸ್ಥಲ, ಇಂತಿವರ ಕರುಣಪ್ರಸಾದ

ವೆನಗಾಯಿತ್ತು ಚನ್ನಮಲ್ಲಿಕಾರ್ಜುನ" ಎಂದು ನಿಜವೈರಾಗ್ಯ ಮೂರ್ತಿ ಯಾದ ಅಕ್ಕನವರು ತಮ್ಮ ವಚನದಲ್ಲಿ ಯಾರಲ್ಲಿ ಯಾವ ಶ್ರೇಷ್ಠ ಗುಣಗಳಿರುವವೋ ಅವುಗಳನ್ನು ನಾನು ಪಡೆದುಕೊಂಡೆನೆಂದು ಹೃದಯಂಗಮವಾಗಿ ಚಿತ್ರಿಸಿರುವರು. ಇದುವೆ ನಿಜವಾದ ಪಡೆದುಕೊಳ್ಳುವ ರೀತಿಯು.

"ಒಳಗೆ ತೊಳೆಯಲರಿಯದೆ, ಹೊರಗೆ ತೊಳೆತೊಳೆದು ಕುಡಿಯುತ್ತಿದ್ದಾರೆ ಪಾದೋದಕ ಪ್ರಸಾದವ. ಬಂದ ಭವದಲ್ಲಿ ಮುಳುಗುತಿದ್ದವರಿಗೇನೆಂಬೆನಯ್ಯ ಗುಹೇಶ್ವರಾ" ಎಂಬಂತೆ ಸಮಾಜವು ನಿಜಾನುಭವವಿಲ್ಲದೆ ರೂಢಿಯ ದಾಸ್ಯತ್ವದಲ್ಲಿರುವದು.

"ನಂದುವವು ಸಕಲ ಮಠಂಗಳ ನಂದಾದೀವಿಗೆಯು, ಕುಂದದೆ ಕಲ್ಯಾಣ ಕಟುಕಗೇರಿಯಾಯಿತು." ಎಲ್ಲ ಮಠಮಾನ್ಯಗಳಲ್ಲಿಯ ನಂದಾದೀವಿಗೆಯು ಅಂದರೆ ಶಿವಜ್ಞಾನವನ್ನು ಕೊಡುವಂಥ ಜ್ಯೋತಿಯು ನಂದಿಹೋಗುವದೆಂದೂ ಆದರಿಂದ ಕಲ್ಯಾಣದ ನಡೆಯುಳ್ಳ ಲಿಂಗಾಂಗಿಗಳ ಧರ್ಮ ಹದಗೆಟ್ಟು ಕಟುಕರ ಪಾಲಾಗುವದೆಂದೂ ಕಾಲಜ್ಞಾನದಲ್ಲಿ ಹೇಳಿರುವಂತೆ, ಎಲ್ಲ ಮಠಮಾನ್ಯಗಳಲ್ಲಿ ಅರಿವೆಂಬ ಜ್ಯೋತಿಯು ಹಾರಿಹೋಗಿ ಹೊರಗಿನ ಕುರುಹಾದ ಈ ನಂದಾದೀಪವು ಕಂಗೊಳಿಸಲಿಕ್ಕೆ ಹತ್ತಿದೆಂದರೆ ತಪ್ಪೇನು? ಈ ಶಿವಜ್ಞಾನವು ಮಾಯವಾದ ಬಳಿಕ ಸಮಾಜವು ಹೀನ ದೆಸೆಯಲ್ಲಿ ಬಾಳುವದು ಸಹಜ. ಇಂತಪ್ಪ ಶಿವಜ್ಞಾನವು ನಮಗೆ ದೊರೆಯಬೇಕಾದರೆ ಶಿವಾನುಭವದಿಂದ. ಅದುಕಾರಣ ನಾವೆಲ್ಲರೂ ನಮ್ಮ ನಮ್ಮ ಊರಿನಲ್ಲಿ ಓಣಿಗಳಲ್ಲಿ ಮನೆಮನೆಗಳಲ್ಲಿ ತಪ್ಪದೆ ಶಿವಾನುಭವವನ್ನು ನಡೆಯಿಸಿ ನಮ್ಮ ಆತ್ಮೋದ್ಧಾರವನ್ನು ನಾವೇ ಮಾಡಿಕೊಳ್ಳತಕ್ಕದ್ದು. "ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು, ಬೇರೆ ಮತ್ತೊಬ್ಬರ ಕಡೆಯಿಂದ ಮಾಡಿಸಬಹುದೇ?" ಎಂದು ಕರುಣಿಗಳರಸನಾದ ಬಸವೇಶ್ವರನು ಬೋಧಿಸಿರುವನು. ಈ ಶಿವಾನುಭವವನ್ನು ನಡೆಯಿಸಬೇಕಾದರೆ ಒಂದು ಸಂಘವು ಅವಶ್ಯಕ. ಅದುಕಾರಣ ಶಿವಾನುಭವ ಸಂಘಗಳನ್ನು ಎಲ್ಲೆಲ್ಲಿಯೂ ಸ್ಥಾಪಿಸಿ ಲಿಂಗಾಂಗಿಗಳ ಘಟಸ್ಥಾಪನೆಯನ್ನು ಮಾಡೋಣ.

ಇದರಲ್ಲಿ ನಾವೆಲ್ಲರೂ ಒಂದೆಡೆಗೆ ಕೂಡುವದರಿಂದ ಒಬ್ಬರಿಂದೊಬ್ಬರ ಪರಿಚಯವು ಆಗಿ ಒಬ್ಬರ ಹಿತಾಹಿತಗಳು ಒಬ್ಬರಿಗೆ ಹೊಳೆಯು

ಹತ್ತಿ ಒಬ್ಬರ ಸುಖದುಃಖಗಳು ಒಬ್ಬರಿಗೆ ತಿಳಿಯಹತ್ತಿ ಸಮಾಜವು ಬೇಗನೆ ಸುಧಾರಿಸುವದರಲ್ಲಿ ಏನೂ ಸಂದೇಹವಿಲ್ಲ. ನಾವು ಒಬ್ಬರ ನ್ನೊಬ್ಬರು ದೂರ ನೋಡುತ್ತ ಹೋದರೆ, ಪರಸ್ಪರ ಸ್ನೇಹವೂ ಹಿತ ಸಂಬಂಧಾದಿಗಳೂ ಬೆಳೆಯುವದು ಅಸಾಧ್ಯವು. ಏಕೆಂದರೆ,

"ಎಡೆಗೆ ಬಾರದಾತ ಅಡಿಗೆಗೆ ದೂರ, ಅಡಿಗೆಗೆ ದೂರಾದಾತ ಮನೆಗೆ ದೂರ, ಮನೆಗೆ ದೂರಾದಾತ ಮನಕ್ಕೆ ದೂರ, ಇತ್ಯಾದಿ" ಹೀಗೆ ಒಬ್ಬರಿಗೊಬ್ಬರು ದೂರಾಗುತ್ತ ಹೋಗುವೆವು. ಶಿವಾನುಭವ ವಿಲ್ಲದೆ ಸಮಾಜಕ್ಕೆ ತರಣೋಪಾಯವೇ ಇಲ್ಲವೆಂದು ನಿಃಸಂದೇಹವಾಗಿ ಹೇಳಬಹುದು. ಇಂಥ ಶಿವಾನುಭವದ ಮೂಲಕ ಶ್ರೀಶಿವಶರಣರ ವಚನಾಮೃತವನ್ನು ಸೇವಿಸಿದರೆ ಇಹಲೋಕವೇ ಸ್ವರ್ಗವಾಗಿ ಜೀವ ಪ್ರಪಂಚವೇ ಶಿವಪ್ರಪಂಚವಾಗಿ ಮನೆಯೇ ಮಠವಾಗಿ, ಜೀವನೇ ದೇವ ನಾಗಿ, ಪರಿಣಮಿಸುವದೆಂಬುದನ್ನು ಖಂಡಿತವಾಗಿ ಹೇಳದಿರಲಾರೆನು.

ಮಹಾನುಭಾವಿಗಳಾದ ಶ್ರೀಶಿವಶರಣರು ತಮ್ಮ ವಚನಗಳಲ್ಲಿ ವಿಶ್ವ ವ್ಯಾಪ್ತಿಯುಳ್ಳ ನಮ್ಮ ಧರ್ಮದ ತಿರುಳನ್ನು ಅಚ್ಚಗನ್ನಡದಲ್ಲಿ ಉಚ್ಚತರದ ಅನುಭವವನ್ನು ನಿಚ್ಚಳವಾಗಿ ಬಿಚ್ಚಿ ಬೈಲಿಗೆಳೆದಿರುವರಲ್ಲದೆ ಆತ್ಮಸ್ವಾತಂತ್ರ್ಯ, ಸ್ತ್ರೀಯರ ಸ್ಥಾನ, ಸಮತಾಭಾವ, ಬಂಧುಪ್ರೇಮವನ್ನು ವ್ಯಕ್ತಮಾ ಡಿರುವರು. ಇವುಗಳನ್ನು ಮರೆತುಬಿಟ್ಟ ಕಾರಣದಿಂದಲೇ ಸಮಾಜವು ದುರ್ದೆಸೆಗೆ ಪಾತ್ರವಾಗಿರುವದು. ವಚನಗಳನ್ನು ತಿಳಿದುಕೊಳ್ಳಲು ನಾವು ಪಂಡಿತರಾಗಬೇಕಿಲ್ಲ, ವಿದ್ವಾಂಸರಾಗಬೇಕಿಲ್ಲ. ಶ್ರೀ ಶಿವಶರಣರಲ್ಲಿ ನಂಬು ಗೆಯನ್ನಿಟ್ಟು ಪ್ರತಿದಿನ ತಪ್ಪದೆ ಇವುಗಳನ್ನು ಓದಿದರೆ ಸಾಕು. ಒಬ್ಬ ಜ್ಞಾನವುಳ್ಳ ಗುರುವು ಬಂದು ಉಪದೇಶ ಮಾಡಿದಂತೆ ಬೋಧಿಸುವವು. ಈ ಬೋಧವಾದ ಜ್ಞಾನವನ್ನು ನಂದದ ಹಾಗೆ ಕಾಪಾಡಿ ನಿಜವಾದ ನಂದಾ ದೀವಿಗೆಯನ್ನು ಸ್ಥಿರಪಡಿಸುವದು ನಮ್ಮ ಕರ್ತವ್ಯವು.

ಸೀಮೋಲ್ಲಂಘನ — ಮೇಲಿನ ಶಿವಜ್ಞಾನವನ್ನು ಪಡೆದಂಥ ಆತ್ಮ ನಲ್ಲಿ ಪರಮಾತ್ಮನ ಕಳೆಯು ಒಡಮೂಡಿ ದೇಹಭಾವವನ್ನು ಸಹಜ ವಾಗಿ ಉಲ್ಲಂಘಿಸಿ ಶಿವಭಾವಿಯಾಗಿ ಉಳಿಯಹತ್ತುವನು. ಇದುವೇ ಸೀಮೋಲ್ಲಂಘನ. ಅರ್ಥಾತ್ ಜೀವಗುಣವೆಂಬ ಸೀಮೆಯನ್ನು ಉಲ್ಲಂಘಿಸಿ ಪರಮನ ಗುಣವೆಂಬ ಸೀಮೆಯಲ್ಲಿ ಉಳಿಯುವದೇ ನಿಜವಾದ ಸೀಮೋ ಲ್ಲಂಘನವು.

"ಬನ್ನಿಯು ಕೊಟ್ಟು ಬಣ್ಣದ ಮಾತುಗಳನ್ನಾಡಿ ನಾವೂ ನೀವು ಬಂಗಾರದಂತಿರಬೇಕೆನ್ನುವ ಅಣ್ಣಗಳೇ, ನೀವು ಕೇಳಿರಯ್ಯ? ಸುವರ್ಣವು ಸಕಲರಿಗೆ ಹೇಗೆ ಪ್ರೇಮಮಯವಾಗಿದೆಯೋ ಅದರಂತೆ ನೀವು ಸಕಲರಿಗೂ ಬೇಕಾಗಿ ಬಾಳದಲೆ ಜಾತಿಗೊಂದು ಎಲೆಯನ್ನು ತಂದು ನೀತಿಯು ತಿಳಿಯದಲೆ ಮಾತಿನ ಮಾಲೆಯು ನುಡಿದು ಅಂಗಗುಣಗಳ ನೇತಿಗಳಿಯದೆ ಬಂಗಾರದಂತೆ ಹೇಗಾಗುವಿರಣ್ಣಾ. ಇಂಥ ಅರಿಯ ಎಲೆಯು ಕೊಟ್ಟು ಅರಿವುಗೇಡಿಗಳಾಗದಲೆ ವಚನಗಳನ್ನು ಬರೆದಂಥ ಓಲೆಯುಗರಿಯನ್ನು ಕೊಟ್ಟು ಅರುಹುಳ್ಳವರಾಗಿರೆಂದ ನಮ್ಮ ಧೀರ ಕುಮಾರಗುರುವರ." ಇಂಥ ಬನ್ನಿಯನ್ನು ಕೊಟ್ಟು ಮಹಾನವಮಿಯನ್ನು ಮಾಡಬೇಕಲ್ಲದೆ ರೂಢಿಯ ದಾಸರಾಗಿ ಬಾಳುವದಕ್ಕಿಂತಲೂ ವೃಡಶರಣರ ಆಳಾಗಿ ಬಾಳುವದು ಲೇಸು.

---

## ಸುಭಾಷಿತಗಳು.

(ಲೇಖಕ:— ಶ್ರೀಯುತ ಜಿ. ಎಸ್. ಕನ್ನೂರು.)

(೧) ಎರಡನೆಯವರನ್ನು ಹೀಯಾಳಿಸಿ ಅವರ ಅಂತಃಕರಣಕ್ಕೆ ವ್ಯಥೆ ಕೊಡುವದು, ಮರ್ಮಭೇದಕ ಶಬ್ದಶಲ್ಯಗಳಿಂದ ಇರಿಯುವದು, ಕಠೋರ ಶಬ್ದಗಳೆಂಬ ಖಡ್ಗದಿಂದ ಪ್ರಹರಿಸುವದು, ಈ ದೋಷಗಳು ತಮ್ಮಿಂದ ಅಲ್ಪ ಪ್ರಮಾಣದಲ್ಲಿಯೂ ಘಟಿಸದಂತೆ ಎಲ್ಲ ವ್ಯವಹಾರಗಳಲ್ಲಿ ಜಾಗರೂಕರಾಗಿರತಕ್ಕದ್ದು.

ಏನೂ ತೊಂದರೆಯಿಲ್ಲದೆ ಪ್ರೋತ್ಸಾಹನ ಪಡೆಯುವ ಪರನಿಂದೆಯು ಎಲ್ಲಕ್ಕೂ ಹೆಚ್ಚಿನ ವಾಗ್ದೋಷವಿರುತ್ತದೆ. ವಿಶೇಷತಃ ತನ್ನ ಸ್ನೇಹಿತರ ಸಹವಾಸದಲ್ಲಿರುವಾಗ್ಗೆ ಈ ವಿಷಯಕ್ಕೆ ಜಪ್ಪಿಸತಕ್ಕದ್ದು.

ಆತ್ಮಸ್ತುತಿ ಆತ್ಮಪೌರುಷಗಳನ್ನು ಹೇಳಿಕೊಳ್ಳಬಾರದು. ನೀಚಸ್ತುತಿ ಅಥವಾ ಅನ್ಯರ ಅವಾಸ್ತವ ಸ್ತುತಿಯನ್ನೂ ಕೂಡ ಮಾಡತಕ್ಕದ್ದಲ್ಲ. ಇಂಥ ಸ್ತುತಿಯು ದೋಷವು ನಿಂದೆಯದ್ದೇ ಬಳಗ ಇರುತ್ತದೆ.

ಅನ್ಯರ ದೋಷಗಳನ್ನು ಅವರ ಹಿಂದೆ ಆಡುವುದರಿಂದ ಯಾರಿಗೆ ಉಪಕಾರ ಮಾಡಿದಂತಾಯಿತು? ಯಾರಿಗೂ ಇಲ್ಲವಾದರೆ ದೋಷೋ

ಚ್ಚಾರಿಯು ಯಾವುದೋ ಒಂದು ಅತಿ ಮಹತ್ವದ ಕಾರ್ಯ ಮಾಡುವವನ ಸೋಗು ತರುವ ಕಾರಣವೇನು? ಮತ್ತು ನಿಂದೆ ಮಾಡುವದು, ಮಾಡಿಯೂ ತಾನು ನಿರ್ದೋಷಿಯೆಂದು ಉದ್ದುದ್ದ ಬಾಯಿತೆರೆದು ಹೇಳಿಕೊಳ್ಳುವದು ಇದಾದರೂ ಏಕೆ?

(೨) ಕರ್ತವ್ಯ ಪರಾಙ್ಮುಖತೆಗೆ ಕುಂಟ ನೆವಗಳನ್ನು ಹುಡುಕುತ್ತಿದ್ದಾನೆ! ಯಾವಾಗಲೂ ಬೆಳಗ್ಗೆ ತಿರುಗಾಡಲಿಕ್ಕೆ ಹೋಗುವ ಇಲ್ಲವೇ ಧ್ಯಾನ ಮಾಡುವ ಸುಸುಖ ಕಾರ್ಯಕ್ಕೆ ಕೂಡ ದುರ್ಲಂಘ್ಯ ವಿಘ್ನಗಳೆಷ್ಟು ನೋಡಿರಿ! 'ಅಲಾರಂ ಆಗಲಿಲ್ಲ' 'ಸಂಗಡಿಗನು ಬರಲಿಲ್ಲ' 'ಹವೆ ಕೆಟ್ಟುಬಿಟ್ಟಿರುವದು' 'ರಾತ್ರಿ ನಿದ್ರೆ ಬರಲಿಲ್ಲ.' 'ಬೇರೆ ಕೆಲಸ ಬಂದಿತು.' 'ಹುಗುಳು ಜಡ್ಡು ಆಯಿತು' ಮುಂತಾಗಿ ದೊಡ್ಡ ನೆಪಗಳನ್ನೇ ಹೇಳುತ್ತ ತನ್ನ ಬಿಟ್ಟೇ ಬೇಸರಿಕೆಗೆ ಕಾರಣ ತೋರಿಸಿ ಪಾರಾಗುವದರಲ್ಲಿಯೇ ಬುದ್ಧಿಯು ಎಲ್ಲ ಚುರುಕುತನವನ್ನು ತೋರಿಸುತ್ತಾನೆ!

(೩) ಮಿತ್ರರು ಆಪ್ತೇಷ್ಟರು ಹಾಗೂ ಜನರನ್ನು ನಿಮ್ಮ ಧ್ಯೇಯ ಸಾಧನೆಗೆ ಅಡ್ಡವಾಗಲಾರದಂತೆ ಯೋಜಿಸಲು ಬರಲಾರದೇ? ಅವರನ್ನು ಸೌಮ್ಯಶಬ್ದಗಳಿಂದ ಬೀಳ್ಕೊಡಲಿಕ್ಕೆ ಮೆತ್ತನ್ನ ನಾಲಿಗೆಯಿಲ್ಲವೇ? ಅವರು ಕರೆದೆಡೆಗೆ ಹೋಗಲಾರದೆಯೂ ಅವರ ಬಗ್ಗೆ ಇದ್ದ ನಿಮ್ಮ ನಿಷ್ಕಪಟ ಪ್ರೇಮವನ್ನು ವ್ಯಕ್ತಮಾಡಲಿಕ್ಕೆ ಕೈಗಳಲ್ಲಿ ಮಣಿತವಿರುವದಿಲ್ಲವೇ? ಕರ್ತವ್ಯವನ್ನು ಸ್ವಲ್ಪದರಲ್ಲಿ ಹೇಳಿ 'ಕೇವಲ ಅಷ್ಟಕ್ಕಾಗಿ ನಿಮ್ಮ ಪ್ರೀತಿಯ ಕರೆಗೆ ಕೂಡ ಹೋಕಾರ ಒಪ್ಪಿಗೆ ಕೊಡಲು ಅವಕಾಶವಿಲ್ಲದಾಗಿದೆ.' ಎಂದು ಕ್ಷಮೆ ಯಾಚಿಸಿದರೆ ಆಗಲಿಕ್ಕಿಲ್ಲವೇ? ಅಥವಾ ನಿಜವಾದ ಕಾರಣವನ್ನು ಅವರೆದುರಿಗೆ ಹೇಳುವದು ಅಪ್ರಸ್ತುತವಾಗುತ್ತಿದ್ದರೆ ತನ್ನ ಉದ್ಯೋಗದ, ಹಿರಿಯರ ಆಜ್ಞೆಯು, ಪ್ರಕೃತಿಯು, ನಿದ್ದೆಯು, ಇಲ್ಲವೆ ಕೊನೆಗೆ 'ತನ್ನ ಖೋಡಿ ಸ್ವಭಾವ'ದ ಕಾರಣ ಹೇಳಿಯಾದರೂ ಉಳಿಯಲಿಕ್ಕೆ ಆಸ್ಪದ ವಿಲ್ಲವೋ? ಇದೆ, ಸಂಪೂರ್ಣವಾಗಿ ಇದೆ. ಪ್ರಸಂಗಕ್ಕೆ ನೆವ ಹೇಗೆ ಹೇಳಬೇಕು, ಎಂಬದನ್ನು ಯಾರಿಗೂ ಕಲಿಸಲಿಕ್ಕೆ ಬೇಡ. ಆದರೆ ಮೊದಲು ಮೈಯುಳಿಸಿಕೊಳ್ಳಲಿಕ್ಕೆ ಹಾಗೆ ಮಾಡುತ್ತಿದ್ದಿ. ಈಗ ಕರ್ತವ್ಯದಿಂದ ಉಳಿಯುವದಕ್ಕಾಗಿ ಹಾಗೆ ಯುಕ್ತಿಯನ್ನು ಯೋಜಿಸು!

# ಲಿಂಗವಂತ ಧರ್ಮಸಾರ ಸರ್ವಸ್ವ.

(ಅನುವಾದಕರು:— ಶ್ರೀ. ಪೀ. ರು. ಕೊಪ್ಪಳ ಎಂ. ಏ., ಬಿ. ಟಿ. ಧಾರವಾಡ.)

(ಧಾರವಾಡ ನವಕಲ್ಯಾಣಮಠದ ಶ್ರೀಕುಮಾರಸ್ವಾಮಿಗಳು ಇಂಗ್ಲಿಷನಲ್ಲಿ ಬರೆದ ಒಂದು ವಿಮರ್ಶಾತ್ಮಕ ಲೇಖದ ಅನುವಾದವು )

[ಹಿಂದಿನ ಸಂಚಿಕೆಯಿಂದ ಮುಂದೆ ಸಾಗಿದ್ದು.]

## ಜ್ಯೋತಿರ್ಲಿಂಗ.

ಈ ಮೇರೆಗೆ ಕ್ರಮಬದ್ಧವಾದ ವಿಶ್ವದ ದೃಷ್ಟಿಯಿಂದ ಇಷ್ಟಲಿಂಗದ ಸತ್ಯಸ್ವರೂಪವನ್ನರಿತು ಈಗ ವ್ಯಕ್ತಿಗತ ಪ್ರಾಣದ ದೃಷ್ಟಿಯಿಂದ ಜ್ಯೋತಿರ್ಲಿಂಗದ ನಿತ್ಯನಿಲವನ್ನಳೆಯಲು ಸಾಗುವಾ. ಮಾನವನು ಅರುಹಿನಿಂದ ಕೂಡಿದವನು; ಆದುದರಿಂದ ಪ್ರಾಣವ್ಯವಹಾರದ ನಿಜವಾದ ವಿವೇಚನೆಯು ಅವನ ಇರವಿನಲ್ಲಿಯೇ ಸುರುವಾಗುವದು. ಆದರೆ ಮಾನವನ ಸ್ವಭಾವಧರ್ಮವನ್ನರಿಯಲು ಬಯಸುವವರು ಮೊದಲು ಅವನ ಅರುಹಿನ ಬಗೆಯನ್ನರಿತುಕೊಳ್ಳುವದು ಅತ್ಯವಶ್ಯವು. ಯಾಕಂದರೆ ಆ ಅರುಹಿನ ಸತ್ಯತೆಯು ಮಾನವ ಜೀವನಕ್ಕೆ ಒರೆಗಲ್ಲಾಗಿರುವದು. ಇಂದ್ರಿಯಗಳ ಬಳಕೆಯಿಂದುಂಟಾಗುವ ತಿಳಿವಳಿಕೆಯು ಕ್ರಮವು ಪ್ರಾಣಿಮಾತ್ರಕ್ಕೆಲ್ಲ ಸಾಮಾನ್ಯವಾಗಿರುವದು. ಮಾನವನಿಗೆ ಈ ಇಂದ್ರಿಯಗಳ ಬಳಕೆಯಿಂದುಂಟಾಗುವ ತಿಳಿವಳಿಕೆಯು ಜೊತೆಗೆ ತನ್ನಲ್ಲಿ ಉಂಟಾಗುವ ಮಾರ್ಪಾಟದ ಅರಿವು ಇರುವದು. ಇನ್ನುಳಿದ ಪ್ರಾಣಿಗಳಿಗೆ ಇಂತಹ ಅರಿವು ಇರುವದಿಲ್ಲ. ಆದುದರಿಂದ ಮಾನವನ ಅರಿವು ನಿಜವಾಗಿ ಅವನ ನಿಚ್ಚ ಎಚ್ಚರಿಕೆಯ ವಿಷಯವಾಗಿರುವದು. ಮಾನವನ ಅನುಭಾವವೆಲ್ಲ ದೇಹದ ಇಲ್ಲವೆ ಪ್ರಾಣದ ಸಂಗತಿಗಳಿಗೆ-ಘಟನೆಗಳಿಗೆ ಸಂಬಂಧಿಸಿರುವದು ಮಾತ್ರವಲ್ಲ, ಅದು ಇಂತಹ ಸಂಗತಿಗಳ ಅಥವಾ ಇಂತಹ ಘಟನೆಗಳ ಅರಿಕೆಯ ವಿಷಯವೂ ಆಗಿರುವದು. ಆದುದರಿಂದ ನಾವು ಅನುಭವಿಸಿಕೊಳ್ಳುವದು ಬರಿಯ ವಸ್ತು ಸ್ಥಿತಿಯನ್ನಷ್ಟೇ ಅಲ್ಲ, ಅರಿತ ವಸ್ತುಸ್ಥಿತಿಯ ಇರುವನ್ನೂ ಅನುಭವಿಸಬೇಕಾಗುವದು. ಹಾಗೆ ಅರಿತ ವಸ್ತುಸ್ಥಿತಿಯಿಂದ

ಜ್ಞಾತೃ ಜ್ಞೇಯ ಸಂಬಂಧವಾದ ಸ್ವಾನುಭಾವದಲ್ಲಿ ತೋರುವ ತರಗತಿಗಳಲ್ಲಿ ಸಮನ್ವಯ ತತ್ವವೊಂದಿರುವದೆಂಬುದು ಧ್ವನಿತವಾಗುತ್ತದೆ. ಕಾಶ್ಮೀರ ಶೈವದ ಪ್ರತ್ಯಭಿಜ್ಞಾ ದರ್ಶನವು ಈ ಮಾತನ್ನು ಅತಿ ಸ್ಪಷ್ಟವಾಗಿ ಸಿದ್ಧಗೊಳಿಸುತ್ತದೆ. ವಿಕಾಸವಾದದ ಕಲ್ಪನೆಯಲ್ಲಿ ನಿಗೂಹನ ಶಕ್ತಿಯ ಬಗೆಯು ಅಡಗಿರುವಂತೆ ಜ್ಞಾನದಲ್ಲಿ ಪ್ರತ್ಯಭಿಜ್ಞಾನವೂ ಅಡಗಿಕೊಂಡಿದೆ. ಆದುದರಿಂದ ಮಾನವನು ವಸ್ತುವೊಂದನ್ನು ಅರಿಯುವ ಸಾಹಸದಲ್ಲಿ ತನ್ನ ನಿಜಸ್ಥಿತಿಯನ್ನೂ ಅರಿತುಕೊಳ್ಳುವನು ಎಂಬುದು ಸ್ಪಷ್ಟವಾಗುವದು. ಅಂದರೆ ಭೌತ ಸಂಗತಿಗಳಿಗೆ ಇಲ್ಲವೆ ಪ್ರಾಣವ್ಯಾಪಾರಕ್ಕೆ ಸಂಬಂಧಿಸಿರುವ ವಿಷಯವನ್ನು ಅರಿತುಕೊಳ್ಳುವ ಕಾರ್ಯದಲ್ಲಿ ಮಾನವನು ತನ್ನ ಅಂದರೆ ತನ್ನ ಆತ್ಮದ ಜ್ಞಾನವನ್ನೇ ಮಾಡಿಕೊಳ್ಳುವನು ಎಂದು ಹೇಳಬೇಕು. ಅರುಹಿನ ಜೀವಿಯಾದ ಮಾನವನ ಅಚ್ಚ ಅರುಹಿನ ಈ ಗೌಪ್ಯ ಕಾರಣವಾದದಿಂದ (ನ್ಯಾಯದಿಂದ) ಅವನಿಗೆ ಜ್ಞಾತಾ ಎಂದು ಹಿಂದೂ ತತ್ತ್ವಜ್ಞಾನವು ಹೆಸರಿಸುತ್ತದೆ. ಯಾಕಂದರೆ ಅವನು ಮನ ಇಂದ್ರಿಯ ನರನಾಡಿಗಳ ವ್ಯವಹಾರಗಳ ಜ್ಞಾನವನ್ನು, ಅಷ್ಟೇ ಏಕೆ? ಆತ್ಮನೆಂದೆನಿಸಿಕೊಂಬ ಪ್ರತ್ಯಕ್ಷ ತನ್ನ ವ್ಯವಹಾರಗಳ ಜ್ಞಾನವನ್ನೂ ಸಹ ಮಾಡಿಕೊಳ್ಳುತ್ತಾನೆ.

ನಮ್ಮ ವಿಷಯವಾಗಿ ನಮಗಿರುವ ತಿಳಿಗೆ, ನಮ್ಮ ಅನುಭಾವದ ವಿಷಯವಾಗಿ ನಮಗಿರುವ ತಿಳಿಗೆ ಮತ್ತು ನಮ್ಮ ಅಂತರಿಂದ್ರಿಯದ— ನಮ್ಮ ಆತ್ಮದ ವಿಷಯವಾಗಿ ನಮಗಿರುವ ತಿಳಿಗೆ ಸ್ಟವುಟನು ಅರಿವು ಎಂದು ಕರೆಯುತ್ತಾನೆ. ಕಣ್ಣಿಗೆ ಭೌತಪದಾರ್ಥಗಳನ್ನು ಕಾಣುವ ಶಕ್ತಿಯಿರುವಂತೆ ಈ ಅರಿವಿಗೆ ಮನ ಮತ್ತು ಅದರ ವ್ಯವಹಾರವನ್ನು ಕಾಣುವ ಶಕ್ತಿಯಿರುತ್ತದೆ. ಆದರೆ ಫಾದರ ಮಾಹೆರನು ಮನದ ವ್ಯವಹಾರವನ್ನು ಇಲ್ಲವೆ ಆ ಮನದ ವ್ಯವಹಾರವಿರುವ ಆ ಮನಕ್ಕಿಂತ ಭಿನ್ನವಾದ ಬೇರೊಂದು ಒಡವೆಯನ್ನು ಕುರಿತು ಆ ಮನಕ್ಕಿರುವ ಸಮ್ಯಕ್ ಮತ್ತು ಸದ್ಯ ಜ್ಞಾನವೇ ಅರಿವು ಎಂದು ಹೇಳುತ್ತಾನೆ; ಅಥವಾ ಭಾವನಾ ಪ್ರಧಾನವಾಗಿ ಇಲ್ಲವೆ ಸಂಕಲ್ಪಮಾತ್ರವಾಗಿ ಕಾಣುವ ಜ್ಞಾನಕ್ಕೆ ಅರಿವು ಎಂದು ಕರೆಯದೆ ಸುಜ್ಞಾನಸಾಮರ್ಥ್ಯವೇ ಅರಿವು ಎಂದು ಇನ್ನೊಂದು ವಿಧವಾಗಿ ಹೇಳಬಹುದು. ಮನಶ್ಶಾಸ್ತ್ರಕಾರರಾದ ಸ್ಟವುಟನಾಗಲಿ ಮಾಹೆರನಾಗಲಿ ಅರಿವನ್ನು ಕುರಿತು ಹೇಳುವ ವ್ಯಾಖ್ಯೆಗಳು 'ಸ್ವಯಂ ಪ್ರಕಾಶ

ಯುತ ಸಂವಿತ್'' ಎಂದು ಅರಿವಿಗೆ ಭಾರತೀಯರು ಹೇಳುವ ಮಾತಿಗೆ ಹೊಂದಿಕೆಯಾಗುತ್ತದೆ. ಕಲ್ಪನೆ ಭಾವನೆ ಬಯಕೆ ಇವೆಲ್ಲ ಮನದ ವ್ಯವಹಾರಗಳು; ಅರಿವಿನ ಬೆಳಕು ಇವಕ್ಕೆ ಬಿದ್ದಿರಲಿ ಬೀಳದಿರಲಿ ಮನೋಧರ್ಮಕ್ಕನುಗುಣವಾಗಿ ಇವೆಲ್ಲ ಜರುಗತಕ್ಕವುಗಳೇ! ಸಾಮಾನ್ಯ ವಾದ ಪ್ರಾಣವ್ಯಾಪಾರದ ಅನುಭಾವದಲ್ಲಿ ಈ ಅರಿವಿನ ಬೆಳಕು ವಿಂಗ ಡಿಸಲಿಕ್ಕೆ ಬಾರದಂತೆ ಮನದ ವ್ಯವಹಾರದೊಡನೆ ಬೆರೆತುಕೊಂಡಿರುತ್ತದೆ. ಒಂದು ಕ್ಷಣಹೊತ್ತು ಮನವನ್ನು ಬೇರ್ಪಡಿಸಿ, ಮನದ ವ್ಯವಹಾರಗ ಳನ್ನೂ ಬದಿಗಿರಿಸಿ ನೋಡಿದಾಗ ಮಾತ್ರ ಅರಿವಿನ ಬೆಳಕು ಎಂತಹ ದಿದೆ ಎಂಬುದು ತಿಳಿಯುವದು. ಈ ನಿರ್ಮಲವಾದ ಅರಿವಿಗೆ 'ಚಿತ್'' ಎಂದು ಹೆಸರು. ಉಯಿಲಿಯಂ ಜೇಮ್ಸನು ಕರೆಯುವ ವ್ಯಕ್ತಿಗತ ಮಲಿನವಾದ ತಿಳಿಗೆ ಅಥವಾ ಮರವೆಗೆ ಈ ಹೆಸರು ಒಪ್ಪುವದಿಲ್ಲ. ಶುದ್ಧವಾದ ಅರಿವು ಮತ್ತು ಅಶುದ್ಧವಾದ ಮರವು ಇವುಗಳಲ್ಲಿ ಉಯಿಲಿಯಂ ಜೇಮ್ಸನು ವಿಂಗಡಿಕೆಯನ್ನು ತೋರಿಸಿರುವದು ನ್ಯಾಯವಾಗಿಯೇ ಇದೆ. ಆದರೆ ಅವನ ವಿಚಾರವು ವ್ಯಾವಹಾರಿಕ ದೃಷ್ಟಿಯಿಂದ (*Pragmatism*) ಮುಸುಕಾಗಿರುವದರಿಂದ ಅರಿವು ಸತತವಾಗಿ ಹರಿಯುವ ಪ್ರವಾಹದಂತಿದೆ ಎಂದು ಅವನು ತಿಳಿಯುತ್ತಾನೆ. ಅದು ಪಲ್ಲಟಗೊಳ್ಳದ ಪ್ರಶಾಂತವಾದ ಪ್ರಕಾಶವೆಂಬ ತಿಳಿಯು ಅವನಿಗಿಲ್ಲ. ಅರಿವಿಗೆ ಆತ್ಮನೆಂದೂ ಹೆಸರು. ಅದಕ್ಕೆ ಶಾರೀರಿಕ ಮತ್ತು ಮಾನಸಿಕ ವ್ಯವಹಾರಗಳನ್ನು ಪ್ರಕಾಶಗೊಳಿ ಸುವ ಸ್ವಭಾವ ಸಿದ್ಧವಾದ ಸಾಮರ್ಥ್ಯವಿರುತ್ತದೆ. ಈ ಸಾಮರ್ಥ್ಯವಿಲ್ಲದಿರೆ ಆ ವ್ಯವಹಾರಗಳೆಲ್ಲ ಮರವೆಗೊಳಗಾಗುವವು. ಮಾನವನ ಮನಸ್ಸು ಸೂಕ್ಷ್ಮದ್ರವ್ಯದಿಂದ ಕೂಡಿದ ಒಂದು ಇಂದ್ರಿಯವಾಗಿಹುದು. ಅದು ಪ್ರಾಕೃತವೆನಿಸಿಹುದು. ಅದು ಅಪ್ರಾಕೃತವೂ ಅಲ್ಲ, ಅಧ್ಯಾತ್ಮಮಯವೂ ಅಲ್ಲ. ಸಂವೇದನೆ ಸ್ಪರ್ಶಜ್ಞಾನ ಸಂಕಲ್ಪ ಇವೇ ಮೊದಲಾದವುಗಳು ವ್ಯಕ್ತಿಗತ ಅವಸ್ಥೆಗಳೆಂದು ಪಾಶ್ಚಿಮಾತ್ಯ ತತ್ತ್ವಜ್ಞಾನಿಗಳು ಹೇಳುತ್ತಾರೆ. ಅಂತೆಯೇ ಅವು ಅದ್ರವ್ಯಗಳೆಂದು ಅವರು ತಿಳಿಯುತ್ತಾರೆ. ಭಾರತೀಯ ತತ್ವಜ್ಞಾನವು ಅವುಗಳಲ್ಲಿ ಎರಡು ಸಂಗತಿಗಳನ್ನು ಕಂಡಿರುತ್ತದೆ. (೧) ಅಂತರಂಗದ ಮಾನಸಿಕ ಪ್ರವೃತ್ತಿ (೨) ಈ ಪ್ರವೃತ್ತಿಯನ್ನು ಪ್ರಕಾ ಶಿಸುವ ಅರಿವಿನ ನೆರವು. ಈ ಎರಡರಲ್ಲಿ ಮೊದಲನೆಯದು ಪ್ರಾಕೃತ ವರ್ಗದಲ್ಲಿ ಎರಡನೆಯದು ಅಪ್ರಾಕೃತ ವರ್ಗದಲ್ಲಿ ಸಮಾವೇಶವಾಗುತ್ತಿದೆ. ಮನಸ್ಸಿನ ಪ್ರವೃತ್ತಿಗಳಲ್ಲಿ ಅನೇಕ ತೆರನುಂಟು. ಸಾಂಖ್ಯರು ಮನಸ್ಸಿಗೆ

ಒಂದು ಸ್ವತಂತ್ರವಾದ ಪ್ರಪಂಚವಿದೆ ಎಂದು ಹೇಳಿರುವರು. ವೈಶೇಷಿಕರು ಅದೊಂದು ಕೇವಲ ಲಕ್ಷವನ್ನೂರಲು ತಕ್ಕುದಾದ ಇಂದ್ರಿಯುವೆಂದಿರುವರು. ಭಾರತೀಯ ದರ್ಶನಗಳಲ್ಲಿ ಬಹುಭಾಗವು ಮನಸ್ಸು ಒಂದು ಪ್ರಾಕೃತ ದ್ರವ್ಯವೆಂದೇ ಹೇಳುತ್ತಿದೆ. ಅದೊಂದು ಅಂತರಿಂದ್ರಿಯವಿರುವುದರಿಂದ ಕಲ್ಪನೆಗೆ ನಿಲುಕದ ವಿಷಯುವಾಗಿ ಬಿಡುವದದು. ಆದುದರಿಂದ ಅದು ಪ್ರಾಕೃತ ದ್ರವ್ಯವೆಂಬುದನ್ನು ಕಂಡುಕೊಳ್ಳುವದು ಬಲು ತೊಂದರೆಯು ಕೆಲಸವಾಗುವದು. ನಮ್ಮ ನರನಾಡಿಗಳು ಕಾರ್ಯಪ್ರವೃತ್ತವಾಗಲು ಆ ಕಾರ್ಯದ ಜೊತೆಗೆ ನಮ್ಮ ಅರಿವೂ ಬೆರೆತುಕೊಳ್ಳುತ್ತದೆ. ಆದರೆ ವಿಚಾರದಲ್ಲಿಯಾದರೂ ನರನಾಡಿಗಳ ಕಾರ್ಯದಿಂದ ಅರಿವನ್ನು ಬೇರ್ಪಡಿಸಬಹುದು. ಮತ್ತು ಈ ಕಾರ್ಯವು ಪ್ರಕೃತಿಯು ಒಂದು ವೈಚಿತ್ರ್ಯವೆಂಬುದನ್ನು ಮನಗಾಣಬಹುದು. ಆದರೆ ಮನದ ವ್ಯಾಪಾರಗಳ ಮೂಲಕವಾಗಿಯೇ ಅದರ ಕಾರ್ಯಗಳನ್ನು ಕಂಡುಕೊಳ್ಳಬಹುದಾದುದರಿಂದ ಮತ್ತು ಈ ವ್ಯಾಪಾರಗಳ ಜೊತೆಗೆ ತನ್ನ ಸ್ವಂತ ಅರಿವಿನ ಬೆಳಕು ಬೆರೆತುಕೊಂಡಿರುವುದರಿಂದ ಮನದ ಕಾರ್ಯ ಮತ್ತು ಅರಿವಿನ ಬಗೆ ಹಾಗು ಇವುಗಳ ವಿಂಗಡಿಕೆ ಇಲ್ಲವೆ ಇವುಗಳ ಹಿರಿದುಕಿರಿದುಗಳನ್ನು ಗ್ರಹಿಸುವದು ಬಲು ಕಷ್ಟದ ಹೋರೆಯಾಗುವದು.

(ಮುಂದೆ ಸಾಗುವದು.)

# ಬಸವೇಶ್ವರನ ವಿಶ್ವಸಂದೇಶ

ಲೇ॥- ಶ್ರೀ ಭೋಗಿಶೆಟ್ಟಿ ಜೂಗಪ್ಪನವರು ಎಂ. ಎ.; ಐ. ಎ. ಎಸ್.



೧೨ನೆಯ ಶತಮಾನದಲ್ಲಿ ಮಹಾ ಧರ್ಮಕ್ರಾಂತಿ ನಡೆದಿತ್ತೆಂಬದು ಚರಿತ್ರ ವಿದಿತ. ವೈದಿಕ, ಬೌದ್ಧ, ಜೈನ ಧರ್ಮಗಳ ಕಾದಾಟ, ತಿಕ್ಕಾಟ ತೀವ್ರವಾಗಿ ನಡೆದಿತ್ತು. ಚಾರ್ವಾಕ ವಿಷಯಸುಖಾನಂದ ತತ್ವ ಹರಡಿತ್ತು. ಆಸ್ತಿಕತ್ವವು ನಾಶವಾಗಿ, ನಾಸ್ತಿಕತ್ವವು ಪ್ರಭಲವಾಗಿತ್ತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಸರ್ವಧರ್ಮಗಳ ಸತ್ಯಾರ್ಥ ತತ್ವವನ್ನು ಸಮನ್ವಯ ಮಾಡುವ ಭಾರ ಕನ್ನಡ ನಾಡಿನ ಮೇಲೆ ಬಿತ್ತು. ಧರ್ಮಕಾಮಿಗಳು, ಕರ್ಮವೀರರಾದ ಕನ್ನಡಿಗರು, ಎಷ್ಟು ಚಂದವಾಗಿ, ಅಂದವಾಗಿ, ಮುಚ್ಚು ಮರೆಯಿಲ್ಲದೆ ಕೇಳಿದೊಡನೆ ಎಲ್ಲರಿಗೂ ಅರ್ಥವಾಗಿ ಮನ ಮುಟ್ಟುವಂತೆ ಮುತ್ತಿನಂತಹ ಮುದ್ದು ಮಾತುಗಳಿಂದ ವಿಶ್ವಸಮ್ಮತವಾದ ತತ್ವವನ್ನು ಬೋಧಿಸಿದರು! ಜನ ಜಾಗೃತಿಗೋಸುಗ ತಮ್ಮ ತಾಯಿನುಡಿಯಲ್ಲಿ ವಿಶ್ವಪ್ರೇಮ ಗಾನವನ್ನು ಮಾಡಿ ಕನ್ನಡ ನುಡಿಯ ಸೊಬಗು, ಸಿಂಗಾರ, ಬಿಕ್ಕಟ್ಟು, ಮಾಧುರ್ಯ, ನಾವೀನ್ಯ ಗಳನ್ನು ಹೊರಚಿಮ್ಮಿದರು. ನಮ್ಮ ದುರದೃಷ್ಟದಿಂದ, ವಚನ ವಾಙ್ಮಯ, ಕೆಲಕಾಲ ಅಡಗಿ ಹೋಗಿತ್ತು. ಪುನಃ ನಮ್ಮ ಸುದೈವದಿಂದ ರಾವ ಬಹಾದ್ದೂರ ಶ್ರೀ. ಹಳಕಟ್ಟಿ ಅವರು ಬಹಳ ಪ್ರಯಾಸಪಟ್ಟು ಮಠಗಳಲ್ಲಿ ಗೆದ್ದಲು ಪಾಲಾಗಿದ್ದ ತಾಳೆಯ ಗರಿಗಳ ಪ್ರತಿಗಳನ್ನು ಶೇಖರಿಸಿ ಪರಿ ಶೋಧಿಸಿ, ಪರಿಷ್ಕರಿಸಿ ತಮ್ಮ "ಶಿವಾನುಭವ" ಪತ್ರಿಕೆಯಲ್ಲಿ ವಚನಗಳನ್ನು ಪ್ರಕಟಿಸುತ್ತಾ ಬಂದರು. ಕನ್ನಡಿಗರ ಪುಣ್ಯ ಫಲಿಸಿತು. ಸಿರಿಗನ್ನಡ ದೇವಿ ಸಾಕ್ಷಾತ್ಕಾರವಾದಳು. ಕನ್ನಡಿಗರು ವಚನ ಕನ್ನಡಿಯಲ್ಲಿ ತಮ್ಮ ದಿವ್ಯ ನಿಜರೂಪವನ್ನು ಕಂಡರು. ಅಭಿಜ್ಞಾನಿಗಳಾದರು. ಶ್ರೀ. ಶ್ರೀನಿವಾಸ ಮೂರ್ತಿಗಳು "ವಚನ ಧರ್ಮಸಾರ" ದಲ್ಲಿ ವಚನದ ಮಹತ್ವವನ್ನು ಒರೆಗಲ್ಲಿಗೆ ಒರೆದು, ತೀಡಿ, ತುಲನಮಾಡಿ, ವಚನಧರ್ಮ ವಿಶ್ವಧರ್ಮವೆಂದು ಸಾರಿರುವರು. ಶ್ರೀ. ರಂಗನಾಥ ದಿವಾಕರರು ವಚನಶಾಸ್ತ್ರದ ಉಜ್ವಲ ತತ್ವಗಳನ್ನು ಉಪನಿಷತ್ತುಗಳಿಗೆ ಸಮವೆಂದು ಬಣ್ಣಿಸಿರುವರು. ಶ್ರೀ. ಲಕ್ಷ್ಮಣರಾಯ ಹೊಯಿಸಳರು "ವಚನ ಬಸವನ ಮೊಲ್ಲೆ ಸರಗಿಯು!

ಸುಚಿಯು ಸುರಭಿಯು। ಸುಲಭವೋಹಕ। ವಚನಜ್ಞಾನದ ಸುಧೆಯು ಕ್ಷೀರವು। ವಚನ ಚೇತನ ಜ್ಯೋತಿಯು" ಎಂದು ಕೊಂಡಾಡಿರುವರು. ಶ್ರೀ. ಆಲೂರು ವೆಂಕಟರಾಯರು" ಬಸವಣ್ಣನವರು ಭಾಷಾಜನಕರೆಂದು ವಚನ ಸಾಹಿತ್ಯದ ಹೆಚ್ಚಳವನ್ನು ನುಡಿದಿರುವರು. ರೆವರೆಂಡು ಚನ್ನಪ್ಪ ಉತ್ತಂಗಿ ಅವರು "ಅನುಭವ ಮಂಟಪ" ವಚನ ಸಾಹಿತ್ಯ ವಿಷಯವಾಗಿ ಉಜ್ವಲವಾದ ಲೇಖನಗಳನ್ನು ಬರೆದಿರುವರು.

"ಕಾಯ-ನಿತ್ತೊಡೆ ಒಲ್ಲೆ, ಸಿರಿಯನಿತ್ತೊಡೆ ಒಲ್ಲೆ, ಹಿರಿದಪ್ಪ ರಾಜ್ಯವ ನಿತ್ತೊಡೆ ಒಲ್ಲೆ, ನಿಮ್ಮ ಶರಣರ ಸೂಳ್ನುಡಿಯು ಒಂದರಗಳಿಗೆ ಇತ್ತೊಡೆ ನಿನ್ನ ನಿತ್ತೆ ಕಾಣಾ ರಾಮನಾಥಾ" ಎಂದು ಜ್ಞಾನಿಗಳೇ ಹಿಗ್ಗಿ ಹಂಬಲಿಸಿರುವರು. ವಚನಗಳನ್ನು ಧರ್ಮ ಪಿಪಾಸುಗಳು, ಕರ್ಮಯೋಗಿಗಳು, ನೀತಿ ವಿಷ್ಯಾವಿಮರ್ಶಕರು, ಸಾಹಿತಿಗಳು ಈ ರೀತಿಯಾಗಿ ಬಣ್ಣಿಸಲು ಕಾರಣವೇನು? ವಚನಗಳು ದೊಡ್ಡ ಷಟ್ಪದಿಗಳ ಕಾವ್ಯವಲ್ಲ! ವಿಷಯಾನಂದವನ್ನುಂಟು ಮಾಡುವ ಕಥೆಗಳಲ್ಲ! ವಚನಗಳು ಪುಂಡರಾಲಿಪ ಕಥೆಗಳಲ್ಲ. ಭಾವಕರು, ಭಕ್ತರು, ಬಲ್ಲಿದರು ಕೇಳುವ ಉಪನಿಷತ್ತುಗಳು; ಜ್ಞಾನಸಾಧನೆಯ ಮೆಟ್ಟಿಲುಗಳು. ಲೋಕ ಕಲ್ಯಾಣದ ಸೂತ್ರಗಳು! ಶ್ರೀ ಬಸವಣ್ಣನವರು ಧರ್ಮ ಸಂಶೋಧನೆ ಮಾಡಲು ಕಲ್ಯಾಣ ಪಟ್ಟಣದಲ್ಲಿ ಸ್ಥಾಪಿಸಿದ "ಅನುಭವ ಮಂಟಪ" ದಲ್ಲಿ ಆತ್ಮ ಆತ್ಮ ಮಥನಿಸಿ, ಕುಲ, ಮತ, ವೃತ್ತಿ. ಸ್ತ್ರೀ, ಪುರುಷ ಭೇದ ತೊರೆದು ಕಾಶ್ಮೀರ, ವಂಗ, ಕಳಿಂಗ, ಆಂಧ್ರ, ತಮಿಳ, ಗುಜರಾತು ಎಲ್ಲ ಪ್ರಾಂತಗಳಿಂದ ಬಂದ ಸತ್ಯಶರಣರು, ಅನುಭವಿಗಳು, ಧರ್ಮಬೋಧನೆಮಾಡಿ ನುಡಿದಂತೆ ನಡೆದು ನಿರ್ಜೀವವಾಗಿದ್ದ ಧರ್ಮಕ್ಕೆ ಜೀವಕಳೆಯು ತುಂಬಿ ಸಾರಿದ ವಿಶ್ವಪ್ರೇಮ ಸಂದೇಶವು ವಿಶ್ವಮೋಹಕವಲ್ಲದಿಪ್ಪುದೆ! ವಿಶ್ವಸಮ್ಮತವಲ್ಲದಿಪ್ಪುದೆ!

ವಚನಗಳ ಸಂದೇಶವನ್ನು ಒಂದೇ ಮಾತಿನಲ್ಲಿ ಹೇಳುವದಾದರ ಅದು ಇದೆ: "ದಯವಿಲ್ಲದ ಧರ್ಮ ಅದು ಏವುದಯ್ಯ? ದಯವೇ ಧರ್ಮದ ಮೂಲವಯ್ಯ; ದಯವೇ ಬೇಕು ಸಕಲ ಪ್ರಾಣಿಗಳಲ್ಲಿ"; "ಕಾಯಕವೇ ಕೈಲಾಸ" ವೆಂದು ಬಣ್ಣಿಸಿ (Work is Worship) ಎಲ್ಲ ಕೈ ಕಸುಬುಗಳ ಸಾಮಾನ್ಯ ಜನರನ್ನು ಮನ್ನಿಸಿದರು. ಕುಲ, ಮತಗಳ ವರ್ಗವನ್ನು ಮುರಿದಿಕ್ಕಿ ಗುಣಕ್ಕೆ ಸತ್ಕ್ರಿಯಾಚರಣೆಗೆ ಪ್ರಥಮ

ಸ್ಥಾನವನ್ನು ಕೊಟ್ಟು ಸಮತಾ ತತ್ವವನ್ನು ಬಸವಣ್ಣನವರು ತಮ್ಮ ವಿಶ್ವ ಹೃದಯದಿಂದ "ಉತ್ತಮ ಕುಲದಲ್ಲಿ ಹುಟ್ಟಿದನೆಂಬ ಕಷ್ಟತರದ ಹೊರೆ ಹೊರಿಸದಿರಯ್ಯ", "ಎನಗಿಂತ ಕಿರಿಯರಿಲ್ಲ, ಶಿವಶರಣರಿಗಿಂತ ಹಿರಿಯರಿಲ್ಲ" "ಶ್ವಪಚನಾದರು ಶಿವಭಕ್ತನೆ ಕುಲಜ", "ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ನಮ್ಮ ಕೂಡಲ ಸಂಗಮನ ಶರಣರೆ ಕುಲಜರು" ಎಂದು ನುಡಿದು, ನುಡಿದಂತೆ ನಡೆದು ಲೋಕ ಪೂಜ್ಯರಾಗಿರುವರು.

ನಂಬಲರಿಯದೆ, ನಂಬದೆ ನಾಸ್ತಿಕರಾದ ವಿತರ್ಕವಾದಿಗಳ ಹೃದಯದಲ್ಲಿ ನಂಬಿಕೆ ಒಡೆದು ಮೂಡುವಂತೆ "ನಂಬಿ ಕರೆದರೆ ಓ ಎಂದು ಓಡಿಬಾರನೆ ಶಿವನು" ಎಂದು ಬಸವಣ್ಣ ಢಣಾಢಂಗುರವಾಗಿ ಸಾರಿ ಆಸ್ತಿಕ ತತ್ವವನ್ನು ತೋರಿದ ದೈವ ಭಕ್ತ ಭಕ್ತಿ ಭಂಡಾರಿಯಾಗಿ" ವಚನದಲ್ಲಿ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ, ಕಿವಿಯಲ್ಲಿ ನಿಮ್ಮ ಕೀರ್ತಿ ತುಂಬಿ, ಮನದಲ್ಲಿ ನಿಮ್ಮ ನೆನಹು ತುಂಬಿ, ಕೂಡಲ ಸಂಗಮದೇವ, ನಿಮ್ಮ ಚರಣ ಕಮಲದೊಳಗಾನು, ತುಂಬಿ" ಎಂದು ಮೃದುಮಧುರವಾದ ಸಾಹಿತ್ಯ ಸಂಗೀತಗಳ ಶೃತಿಗೂಡಿಸಿ ಹೃದಯ ವೀಣೆಯ ನುಡಿಸಿ ಭಕ್ತಿಸುಧೆಯನ್ನು ಎಲ್ಲರ ಮನದಲ್ಲಿ ತುಂಬಿ ತುಂಬಿದ ಬಸವಣ್ಣ "ಭಕ್ತಿ ಎಂಬ ಪೃಥ್ವಿಯ ಮೇಲೆ, ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು. ಲಿಂಗವೆಂಬ ಎಲೆಯಮೇಲೆ ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿ ಎಂಬ ಹಣ್ಣು ಕೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ, ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ" ಎಂದು ಮೋಕ್ಷಾನುಭವ ಪಡೆದ ಜ್ಞಾನಯೋಗಿ ಬಸವಣ್ಣ.

ಈ ಲೋಕವು 'ಮಿಥ್ಯ' 'ಮಾಯಾ' ಎಂದು ಹೇಳುವ ವೇದಾಂತಗಳಿಗೆ "ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" "ದೇವಲೋಕ ಮರ್ತ್ಯ ಲೋಕವೆಂಬುದು ಬೇರಿಲ್ಲ ಕಾಣಿರೋ; ಸತ್ಯವ ನುಡಿವುದೇ ದೇವಲೋಕ; ಮಿಥ್ಯವ ನುಡಿಯುವುದೇ ಮರ್ತ್ಯಲೋಕ; ಆಚಾರವೇ ಸ್ವರ್ಗ; ಅನಾಚಾರವೇ ನರಕ" ಎಂದು ಜೀವನದ ನೀತಿ, ರೀತಿ, ಸೌಂದರ್ಯವನ್ನು ಸಾರಿದರು. ಹುಟ್ಟು ಕುರುಡ

ಮೂಢಾಚಾರಗಳನ್ನು ನೋಡಿ "ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು, ದಿಟನಾಗರ ಕಂಡರೆ ಕೊಲ್ಲೆಂಬರಯ್ಯ, ಉಂಬ ಜಂಗಮ ಬಂದರೆ ನಡೆ ಎಂಬರು, ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯಾ" ಎಂದು ಹೀಯಾಳಿಸಿ ಜ್ಞಾನಬೋಧೆ ಮಾಡಿದರು.

"ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನೆಲ್ಲರ ನೊಂದೆಯೆಂಬೆ" ಎಂದು ಅಂತ್ಯಜರ ಉದ್ಧಾರಕ್ಕಾಗಿ ಆತ್ಮಾರ್ಪಣೆ ಮಾಡಿ "ನ್ಯಾಯ ನಿಷ್ಠುರ, ದಾಕ್ಷಿಣ್ಯಪರ ನಾನಲ್ಲ, ಲೋಕ ವಿರೋಧಿ, ಶರಣ ನಾರಿಗಂಜುವನಲ್ಲ, ಕೂಡಲಸಂಗಮದೇವರ ರಾಜತೇಜದಲ್ಲಿಪ್ಪನಾಗಿ" "ನಾಳೆ ಬರುವದು ನಮಗಿಂದು ಬರಲಿ" ಎಂದು ನುಡಿದು ಅಭಯ ತತ್ವದ ಮಹತ್ವ ತೋರಿದ ಮಹಾತ್ಮ ಬಸವಣ್ಣ.

ಆಂಧ್ರ ಕವಿಪುಂಗವ ಶ್ರೀ ಪಾಲ್ಕುರಿಕೆ ಸೋಮನಾಥನು ಬಸವ ತತ್ವದ ಮಹತ್ವಕ್ಕೆ ತಲೆಬಾಗಿ ತೆಲುಗಿನಲ್ಲಿ ಬಸವಪುರಾಣವನ್ನು ಮೊತ್ತ ಮೊದಲು ಬರೆದು ತೆಲುಗು ದೇಶದಲ್ಲೆಲ್ಲ ಕನ್ನಡ ಕರ್ಮಯೋಗಿಯ ಮಹಿಮೆಯನ್ನು ಸಾರಿದುದು ಕನ್ನಡಿಗರು ಹೆಮ್ಮೆಪಡತಕ್ಕ ವಿಷಯ ವಲ್ಲವೆ!

ಆತ್ಮಸಾಕ್ಷಾತ್ಕಾರ ಪಥವು, ಆತ್ಮವಿದ್ಯಾ ತತ್ವಗಳು ಈ ವಚನ ಗಳಲ್ಲಿ ಥಳಥಳಿಸುತ್ತವೆ. "ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ, ಶರೀರದೊಳಗಾತ್ಮನ ಕಾಣದಂತಿರಿಸಿದೆ, ನೀ ಬೆರಸುವ ಭೇದಕ್ಕೆ ಬೆರಗಾದೆನೈ ರಾಮನಾಥಾ."

"ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ ಶಬ್ದದೊಳಗಣ ನಿಶ್ಯಬ್ದದಂತೆ. ಗುಹೇಶ್ವರಾ ನಿಮ್ಮ ಶರಣ ಸಂಬಂಧ."

"ನೆಲದ ಮರೆಯ ನಿಧಾನದಂತೆ, ಮುಗಿಲ ಮರೆಯಲಡಗಿರ್ದ ಮರೀಚನಂತೆ, ಕಂಗಳ ಮರೆಯಲಡಗಿರ್ದ ಬೆಳಕಿನಂತೆ, ಗುಹೇಶ್ವರಾ ನಿಮ್ಮ ನಿಲವು.

"ಕಲ್ಲ ದೇವರು ದೇವರಲ್ಲ, ಪಂಚಲೋಹದಲ್ಲಿ ಮಾಡುವ ದೇವರು ದೇವರಲ್ಲ, ಸೇತು ರಾಮೇಶ್ವರ, ಗೋಕರ್ಣ, ಕಾಶಿ, ಕೇದಾರ ಮೊದ ಲಾದ ಅಷ್ಟಾಷಷ್ಟಿ ಕೋಟಿ ಪುಣ್ಯ ತೀರ್ಥಂಗಳು ಇಹ ದೇವರು ದೇವ ರಲ್ಲ, ತನ್ನ ತಾನರಿದು ತಾನಾರೆಂದು ತಿಳಿದೊಡೆ ತಾನೆ ದೇವ ನೋಡ"

ವಚನಗಳಲ್ಲಿ ಕನ್ನಡ ನುಡಿಯ ತೇಜವು ನಾವೀನ್ಯವು ಮಿನುಗುತ್ತಿವೆ. ವಚನಗಳಲ್ಲಿ ತತ್ವ ರತ್ನಗಳು ಥಳಥಳಿಸುತ್ತವೆ. ಸಾಧುವೃತ್ತಿಯು ಸೊನೆಯು ಸುರಿಯುತ್ತಿದೆ. ವಚನಗಳು ಲೋಕ ಕಲ್ಯಾಣಗೋಸುಗ ಕನ್ನಡಿಗರು ತಮ್ಮ ವಿಶ್ವವಾಣಿಯಿಂದ ಹಾಡಿದ ಗೀತಾಂಜಲಿ ವಚನಗಳಲ್ಲಿ ಅನುಭವದ ಅಚ್ಚು ಅಚಲವಾಗಿದೆ. ಆಚಾರದ ಕೆಚ್ಚು ಕಂಗೊಳಿಸುತ್ತಿದೆ. ವಚನಗಳು ಸಾಹಿತಿಗಳಿಗೆ ಸಾಹಿತ್ಯ, ನೀತಿ, ಧರ್ಮ ಶಾಸ್ತ್ರಜ್ಞರಿಗೆ ನೀತಿಶಾಸ್ತ್ರ, ಅನುಭವಗಳಿಗೆ ಆತ್ಮವಿದ್ಯಾದರ್ಪಣ.

ಈ ಮಹಾ ವಚನಗಳಿಗಿಂತ ಹೆಚ್ಚಿನ ಧರ್ಮ, ನೀತಿ, ಸತ್ಯ ವಿಶ್ವ ಪ್ರೇಮ ಸಂದೇಶ ಮತ್ತೆನ್ನೆಲ್ಲಿಹುದು ?

೮೦೦ ವರ್ಷಗಳ ಹಿಂದೆ ಶ್ರೀ ಬಸವೇಶ್ವರನು ವಿಜಾಪುರ ಪಟ್ಟಣಕ್ಕೆ ಆಗ್ನೇಯವಾಗಿ ೨೫ ಮೈಲು ದೂರದಲ್ಲಿ ಈಗಲೂ ಬಸವನ ಬಾಗೇವಾಡಿಯೆಂದು ವ್ಯವಹರಿಸಲ್ಪಡುವ ಊರಿನಲ್ಲಿ ಉತ್ತಮ ಬ್ರಾಹ್ಮಣ ವಂಶಸ್ಥರಾದ ಮಾದರಸ, ಮಾದಲಾಂಬಿಕೆ ಇವರು ಮೂರು ವರ್ಷದಿಂದ ಅನುಷ್ಠಾನ ಮಾಡುತ್ತಲಿದ್ದ ನಂದೀಶ್ವರನ ವ್ರತ ಫಲಿತವಾಗಿ ಇವರಿಗೆ ಜನಿಸಿ ಜಾತವೇದ ಮಹಾ ಮುನಿಗಳಿಂದ ಉಪದೇಶವನ್ನು ಪಡೆದು ಉಪನಯನ ಯಜ್ಞಾದಿಗಳಿಂದ ಸಂಸ್ಕಾರವಾದುದೆಂದು ಖಂಡಿಸಿ ವೀರಶೈವ ದೀಕ್ಷೆಯನ್ನು ಪಡೆದು ಲೋಕಕಲ್ಯಾಣಕ್ಕೋಸ್ಕರ ( ಗ್ರೀಕ್ ದೇಶದಲ್ಲಿ ಸಾಕ್ರೆಟೀಸ್‌ನು ಜನರೊಡನೆ ಕಲೆತು ಮಾತನಾಡಿ, ಸತ್ಯ, ಧರ್ಮ ಪ್ರಚಾರ ಮಾಡಿದಂತೆ,) ಬಸವಣ್ಣ ಜನರೊಡನೆ ಅವರ ಕೃತ್ರಿಮ ಮೂಢವಿಶ್ವಾಸಗಳ ವಿಷಯ ತಿರಸ್ಕರಿಸಿ ಅವನ್ನು ನಾಶಮಾಡಿ ವಿದ್ಯಾ ಜ್ಞಾನದಾನವನ್ನು ಮಾಡಿ ಎಲ್ಲರಿಗೂ ವೀರಶೈವ ದೀಕ್ಷೆ ಕೊಡುತ್ತಾ, ಮಾಂಸಾಹಾರ, ಮದ್ಯಪಾನ ನಿಷೇಧ, ಅಸ್ಪೃಶ್ಯತಾ ನಿವಾರಣೆ, ಸರ್ವ ಸಮತಾ ತತ್ವವನ್ನು ಲೋಕದಲ್ಲಿ ಬೀರಿ ಜನ ಜಾಗ್ರತೆಮಾಡಿ, ವಿಶ್ವಖ್ಯಾತಿ ಪಡೆದ ಅನುಭವ ಮಂಟಪ ಸ್ಥಾಪನಾಚಾರ್ಯನಾಗಿ ಭಕ್ತಿ, ಪ್ರೇಮ, ಧರ್ಮ, ಆತ್ಮವಿದ್ಯಾ ಪ್ರಚಾರ ಮಾಡಿದನು. ಬಿಜ್ಜಳನ ಪ್ರಧಾನಿಯಾಗಿ ಅನೇಕ ಪವಾಡಗಳನ್ನು ಮಾಡಿ ತನ್ನ ಭಕ್ತಿ ಮಹತ್ವವನ್ನು ಪ್ರಸಿದ್ಧ ಮಾಡಿದ ಭಕ್ತಿ ಭಾಂಡಾರಿ ಬಸವಣ್ಣ !

ವೃದ್ಧ ಮೂಢಾಚಾರ ಗ್ರಹಸ್ಥರು ಬಿಜ್ಜಳನ ರಾಜ್ಯನಲ್ಲಿ ಬಸವಣ್ಣನು ಎಂತಹ ವರ್ಣ ಸಂಕರವನ್ನು ಮಾಡಿದನೆಂದು ಮಹಾ ಗೊಂದಲವನ್ನು ಅಲ್ಲಲ್ಲಿ ಕೋಲಾಹಲವನ್ನು ಮಾಡಲು, ಹೆದರದೆ ಮೂಢ ಕರ್ಮಠಾಚಾರ್ಯರು ತಂದ ಆರೋಪಣೆಯನ್ನು ಖಂಡಿಸಿ, ವೀರಶೈವ ದೀಕ್ಷೆಯನ್ನು ಪಡೆದ ನಂತರ ಪೂರ್ವಾಶ್ರಮದ ಭೇದಗಳಿಲ್ಲ. "ಪುರುಷ ಮುಟ್ಟಿದ ಲೋಹವು ಚಿನ್ನವಯ್ಯಾ! ಕಬ್ಬಿಣವೆಂದೆನ್ನುವಿರೋ" ಎಂದು ಹುಸ್ಕು, ಜಾತಿಭೇದಗಳನ್ನು ಖಂಡಿಸಿ ತಾನು ಮಾಡಿದ ವಿವಾಹವು ಕೇವಲ ಧರ್ಮ ಸಮ್ಮತವೆಂದು ದೃಢಪಡಿಸಿದ. ಆದರೆ ಬಿಜ್ಜಳನು ಮೂಢ ಕರ್ಮಠಾಚಾರ್ಯರ ಒತ್ತಾಯಕ್ಕೆ ತುತ್ತಾಗಿ ಮಾದರಸ, ಹರಳಯ್ಯ ವಧೂವರಸರನ್ನು ಎಳೆಹೂಟೆ ನೇಗಿಲಿಗೆ ಹಾಕಿ ಮರಣ ಶಿಕ್ಷೆಯನ್ನು ವಿಧಿಸಿದನು. ಬಹಳ ಕಠಿಣತರವಾದ, ಅಧರ್ಮ ಅನ್ಯಾಯವಾದ ಮರಣ ದಂಡನೆಯನ್ನು ನಡೆಸಿದುದು ವೀರಶೈವ ಉಗ್ರ ಪಕ್ಷದವರನ್ನು ರೇಗಿಸಿ, ಪ್ರಕೋಪಗೊಳಿಸಿತು. ಬಸವಣ್ಣನವರ ಅಹಿಂಸಾ ತತ್ವ ಬೋಧೆಯನ್ನು ಅಲ್ಲಗಳಿಸಿ, ಬಿಜ್ಜಳನನ್ನೇ ಅರಮನೆಯಲ್ಲಿ ಜಗದೇವ ಬೊಮ್ಮರಸರು ಕೊಲೆ ಮಾಡಿದರು. ಕಲ್ಯಾಣ ಪಟ್ಟಣದಲ್ಲಿ ಹಾಹಾಕಾರ ಹುಟ್ಟಿತು. ಬಿಜ್ಜಳ ರಾಜನ ದಂಡು ವೀರಶೈವರನ್ನೆಲ್ಲ ಹಿಂಸೆ ಮಾಡಲು ತೊಡಗಿತು. ಕಲ್ಯಾಣ ಪಟ್ಟಣವೇ ನಾಶವಾಯಿತು. ಬಸವಣ್ಣನವರು ಈ ಹಿಂಸಾಕಾಂಡ ಚಿತ್ರವನ್ನು ನೋಡದ ಮುನ್ನ ಕೂಡಲ ಸಂಗಮದಲ್ಲಿ ಐಕ್ಯರಾದರು. ಇಂಥಾ ಸಮಯದಲ್ಲಿ ಸಹ ಹೆದರದೆ ತಮ್ಮ ಅಭಯ ತತ್ವವನ್ನು "ನಾಳೆ ಬಪ್ಪುದು ನಮಗಿಂದೇ ಬರಲಿ! ನ್ಯಾಯ ನಿಷ್ಠುರ! ದಾಕ್ಷಿಣ್ಯಪರ ನಾನಲ್ಲ! ಲೋಕವಿರೋಧಿ! ಶರಣ ನಾರಿಗಂಜುವನಲ್ಲ" ಎಂದು ಘಂಟಾಘೋಷವಾಗಿ ಸಾರಿ ಆತ್ಮಾರ್ಪಣೆ ಮಾಡಿದ ಮಹಾತ್ಮ ಬಸವಣ್ಣ ಗೀತೆಯಲ್ಲಿ ಹೇಳದಂತೆ "ಅಭಯಂಸತ್ಯ ಸಂಶುದ್ಧಿ ಜ್ಞಾನಯೋಗ ವ್ಯವಸ್ಥಿತಿ" ಯೆಂಬ ತತ್ವವನ್ನು ಆಚರಿಸಿ ಅಭಯ ಸಂಪತ್ತನ್ನು ಸಾಧಿಸಿದ ಧೀಶಾಲಿ ಬಸವಣ್ಣ! "ದಯವೇ ಧರ್ಮದ ಮೂಲವಯ್ಯಾ। ದಯವೇ ಬೇಕು ಸಕಲ ಪ್ರಾಣಿಗಳಲ್ಲಿ. ಕಳಬೇಡ, ಕೊಲಬೇಡ, ಮುನಿಯಬೇಡ. ಅನ್ಯರಿಗೆ ಅಸಹ್ಯ ಪಡಬೇಡ. ತನ್ನ ಬಣ್ಣಿಸಲು ಬೇಡ, ಇದಿರ ಹಳಿಯಲು ಬೇಡ ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ ಎಂದು ಸಾರಿದ ನೀತಿ ವಿಜ್ಞಾನ ಕೋವಿದ ಬಸವಣ್ಣ! ಸರ್ವಜೀವ ದಯಾಪರ ನಾದರೆ ಕೂಡಲಸಂಗಮ ದೇವನು ಕೈಲಾಸದಿಂದ

ಬಂದು ಎತ್ತಿಕೊಳ್ಳದಿಪ್ಪನೇ ಎಂದು ವಿಶ್ವತೋಮುಖವಾಗಿ ನುಡಿದು ವಿಶ್ವಾತ್ಮಕ ಸಕಲ ಜೀವಿದಯಾ ಪಾರಂ ಬಸವಣ್ಣ!

ಪೂಜ್ಯ ಬಾಪೂಜಿ ಈ ೨೦ನೆ ಶತಮಾನದಲ್ಲಿ ಹೇಳಿದ ನಿರ್ಮಾಣ ಕಾರ್ಯಕ್ರಮ ಸೂತ್ರಗಳೆಲ್ಲವನ್ನೂ ಬಸವಣ್ಣನವರು ೮೦೦ ವರ್ಷಗಳ ಹಿಂದೆ ೧೨ನೆಯ ಶತಮಾನದಲ್ಲಿಯೇ ಆಚರಿಸಿ, ಸಾಧಿಸಿದರು. ನಾವಿಂದು ಪುನಃ ಪುನಃ ನೆನೆಪಿಗೆ ತಂದುಕೊಂಡು ಆ ತತ್ವವನ್ನು ಆಚರಿಸಲು, ಪ್ರಯತ್ನ ಪಡುವದು ಅವಶ್ಯವು.

ಶ್ರೀ ಬಸವೇಶ್ವರನ ವಿಶ್ವಪ್ರೇಮ, ತತ್ವ "ಕಾಯಕವೇ ಕೈಲಾಸ" ವೆಂಬುವ ದೀಕ್ಷೆ, ಅಭಯತತ್ವ, ಭಕ್ತಿ, ಪ್ರೇಮ ಧರ್ಮ ಸಾಮ್ರಾಜ್ಯ ಸ್ಥಾಪನೆಗಾಗಿ, ಜನರ ಹೃದಯವನಾವರಿಸಿ ವಿಶ್ವಶಾಂತಿ, ಸೌಭಾಗ್ಯ, ಸೌಖ್ಯಗಳಿಗೋಸುಗ, ತನು, ಮನ, ಧನಗಳನ್ನರ್ಪಿಸಿ ದುಡಿಯಲು ಜನರನ್ನು ಹುರಿದುಂಬಿಸಲಿ. ಜಯ ಬಸವೇಶ, ಭಕ್ತಜನ ಭಾಗ್ಯ ಶುಭೋದಯ ಶರಣಾಗತರಕ್ಷಕ ವೀರಶೈವ ನಿರ್ಣಯ ಪರಮಾವತಾರ ಜಗದಾದಿದೇಶಿಕ ಪುರಾತನ ಪುಂಗವ ಶಾಂಭವೈ ಪುರಾಶ್ರಯ ಜಯದೇವ ಜಯ ಸೋಮನಾಥಜಯಾನಿರತಂ ಶಿವಾಧವಾ."

# ಜಂಗಮದಲ್ಲಿ ಜಾತಿಯಾನರಸ

( ಲೇಖಕ:- ಶ್ರೀ. ಕಲ್ಯಾಣಪ್ಪಾ ಬ್ಯಾಳಿ ಬಿ. ಎ. ಹುನಗುಂದ )



ಹಂಪೆಯ ಹರೀಶ್ವರ ಕವಿಯು 'ಬಸವರಾಜ ದೇವರ ರಗಳೆ' ಯಲ್ಲಿ ಬಸವಣ್ಣನವರ ಪೇರ್ಮೆಯನ್ನು ಬಣ್ಣಿಸುವಾಗ ಬಸವೇಶನು "ಜಂಗಮದಲ್ಲಿ ಜಾತಿಯನ್ನರಸ" ಎಂದು ಹೇಳಿದ್ದಾನೆ. ಇದರ ಅರ್ಥವೇನು? ಜಂಗಮವೆಂಬುದು ಜಾತಿಯಲ್ಲ. ಅದು ಒಂದು ಸ್ಥಲ ಮೆಟ್ಟಿಲು ಅಥವಾ ಅಧಿಕಾರ. ಆ ಗೌರವವನ್ನು ಪಡೆದವನು ಯಾವದೇ ಜಾತಿಯವನಿದ್ದರೂ ಅವನು ಜಂಗಮನ. ಅರ್ಥಾತ್ ಮಡಿವಾಳ ಮಾಚಯ್ಯ, ಮೇದಾರ ಕೇತಯ್ಯ, ಮೊಳಿಗರ ಹರಳಯ್ಯ ಅಂಬಿಗರ ಚೌಡಯ್ಯ, ಡೋಹರ ಕಕ್ಕಯ್ಯ, ದೇವರ ದಾಸಿಮಯ್ಯ, ಹಡಪದ ಅಪ್ಪಯ್ಯ ಇತ್ಯಾದಿ ಭಿನ್ನ ಭಿನ್ನ ಜಾತಿಯ ಮಹಾಮಹಿಮರು ಗುರುಕಾರುಣ್ಯದಿಂದ ದೀಕ್ಷೆ ಹೊಂದಿ ವೀರಶೈವರಾಗಿ ಷಟ್‌ಸ್ಥಲ ಜ್ಞಾನ ಸಂಪನ್ನರಾದ್ದರಿಂದ ಜಂಗಮರೆನಿಸಿಕೊಂಡರು. ಪರಮ ಪೂಜ್ಯರಾದ ಇಂಥ ಜಂಗಮರ ಪೂರ್ವ ಜಾತಿಯನ್ನು ನಾನು ಎತ್ತಿ ಆಡಲಾರೆನು. ಅವರು ನನಗೆ ಪೂಜ್ಯರು. ಎಂಬುದೇ ಬಸವಣ್ಣನವರ ಇಂಗಿತಾರ್ಥ. ಇದು ಬಸವಣ್ಣನವರ ಜಾತ್ಯತೀತವಾದ ಅತ್ಯಂತ ವಿಶಾಲ ದೃಷ್ಟಿ. ಜಗತ್ತಿನ ವಿಭೂತಿಗಳೆಲ್ಲ ಒಸೆದು ಅಕುದೆನ್ನುವ ತತ್ವ. ಆದರೆ ಜಂಗಮತ್ವವನ್ನು ಒಂದು ವಿಶಿಷ್ಟವಾದ ಅಯ್ಯನವರೆನಿಸಿ ಕೊಳ್ಳುವ ಜಾತಿ ಗೇನೇ ಮೀಸಲಾಗಿರಿಸುವದು ಸಂಕುಚಿತ ದೃಷ್ಟಿ. ಉದಾರವಾದ ವೀರಶೈವ ಮತಕ್ಕೆ ದೊಡ್ಡ ಕಲಂಕ. ವೀರಶೈವ ಮತವು ಜಾತಿ ಸಂಕೋಲೆಗಳಿಂದ ಬಿಗಿಯಲ್ಪಡದೆ ಮುಕ್ಷುಗಳಾದ ಮಹನೀಯರಿಗೆ ಮುಮುಕ್ತ ದ್ವಾರವಾಗಿದೆ. ಜಂಗಮತ್ವವನ್ನು ಒಂದು ಜಾತಿಗೆ ಅಂಟಿಸುವದು ಅಜ್ಞಾನದ ಕುರುಹು.

ಈಗ ಸಮಾಜದಲ್ಲಿ ಭಕ್ತವರ್ಗ, ಮಹೇಶವರ್ಗಗಳೆಂಬೆರಡು ವರ್ಗಗಳು ರೂಢಿಯಲ್ಲಿ ಕಂಡು ಬರುತ್ತಿರುವವಲ್ಲ! ಮಹೇಶವರ್ಗಕ್ಕೆ ಜಂಗಮರೆನ್ನುವರು. ಭಕ್ತವರ್ಗಕ್ಕೆ ಜಂಗಮರೆನ್ನುವದಿಲ್ಲ. ಈ ರೂಢಿಯು ಹೇಗೆ ಎಂದು ಪ್ರಚಲಿತವಾಯಿತು? ಎಂಬ ಶಂಕೆಯು ಉದ್ಭೂತವಾಗುತ್ತದೆ. ಇದಕ್ಕೆ ಸಮಾಧಾನವೇನು? (೧) ಮೇಲ್ಕಾಣಿಸಿದ ಭಿನ್ನ ಭಿನ್ನ ಜಾತಿ

ಚಂದಿಮರಸನನ್ನೂ ನಿಜಗುಣನನ್ನೂ ೧೫ನೇ ಶತಮಾನದಲ್ಲಿ ಆಗಿ ಹೋದ 'ಘನಲಿಂಗನು' ತನ್ನ ವಚನದಲ್ಲಿ ಮಹತ್ವಿಕರಲ್ಲಿ ಎಣಿಸಿ ಅವರನ್ನು ಸ್ತುತಿಸಿರುತ್ತಾನೆ. ಅದು ಹೇಗೆಂದರೆಃ —

" ನಿಜಗುಣ ಚಂದಿಮರಸನು ಕರಸ್ಥಲದ ನಾಗಿದೇವರೊಳಗಾದ ಎಲ್ಲ ವಿರಕ್ತರು ಆವ ಕ್ರಿಯೆಯಲ್ಲಿ ಆಚರಿಸಿ ಲಿಂಗೈಕ್ಯರಾದರೆಂದು ಕೆಟ್ಟು ನುಡಿವ ಭವ ಹೇತುಗಳು ನೀವು ಕೇಳಿರೋ- ಅವರು ತುಂಬಿದ ತೊರೆಯ ಸಂಭ್ರಮದಿಂದ ಹಾಯಿದರು. ಶಕ್ತಿಯು ಮುಂದೆ ಹಾಲು ಬೋನ ಹಣ್ಣು ಕಜ್ಜಾಯನಿಕ್ಕಿರಲು ಆ ಶಕ್ತಿಯು ಮಾತನಾಡಿಸಿ ಉಂಡರು... ..." ಇತ್ಯಾದಿ. ಚಂದಿಮರಸನು ತನ್ನ ವಚನಗಳಲ್ಲಿ ನಿಜಗುಣನು ತನ್ನ ಗುರುವೆಂದು ಅತ್ಯಂತ ಭಕ್ತಿಯಿಂದ ಹೇಳಿಕೊಂಡಿದ್ದಾನೆ. (ಚಂದಿಮರಸನ ವಚನಗಳು — ವಚನ ನಂ॥ ೧೨, ೧೩, ೨೩, ೨೬, ೪೦, ೪೫, ಇವುಗಗಳನ್ನು ನೋಡಿರಿ).

ಬಸವೇಶ್ವರನು ತನ್ನ ವಚನದಲ್ಲಿ 'ಕೂಡಲ ಸಂಗಮದೇವ ನಿಮಗೆಂದಟ್ಟಿಡಿಗೆಯ ನೀಡ ಕಲಿಸಿದಾತ ಕೆಂಭಾವಿಯ ಭೋಗಯ್ಯ' (೧) ಎಂದು ಉಲ್ಲೇಖಿಸಿರುವದರಿಂದ ಕೆಂಭಾವಿಯ ಭೋಗಣ್ಣ, ಚಂದಿಮರಸು ಮತ್ತು ನಿಜಗುಣ ಇವರೆಲ್ಲರು ಅವನಕಿಂತಲೂ ಸ್ವಲ್ಪ ಕಾಲ ಮೊದಲಿನವರಿರಬೇಕೆಂದು ತೋರುತ್ತದೆ.

---

## ನಿಜಗುಣ.

ನಿಜಗುಣನು ಕೆಂಭಾವಿಯ ಚಂದಿಮರಸನ ಗುರುವಾಗಿದ್ದನು. ನಿಜಗುಣನ ಗ್ರಾಮವು ಚಿಮ್ಮಲಿಗೆಯಾಗಿದ್ದರಿಂದ ಚಂದಿಮರಸನು ಅವನ ಸಾನ್ನಿಧ್ಯವನ್ನಪೇಕ್ಷಿಸಿ ಅವನ ಬಳಿಗೆಯೇ ಬಂದು ವಾಸವಾಗಿದ್ದನು. ಅವನು ತನ್ನ ವಚನಗಳಲ್ಲಿ ನಿಜಗುಣನ ಅಂತರ್ಜ್ಞಾನ, ಅವನ ಅರಿವು, ಅವನ ಯೋಗ ಇವುಗಳ ಸ್ವರೂಪನ್ನು ಬಹಳ ಹೊಗಳಿದ್ದಾನೆ (ಚಂದಿಮರಸನ ವಚನಗಳು ೧೨, ೧೩, ೨೩, ೨೬, ೪೦, ೪೫, ಇವುಗಳನ್ನು

---

(೧) ಹೊಸ ಪದ್ಧತಿಯ ಬಸವೇಶ್ವರನ ವಚನಗಳು ವಚನ ನಂ. ೬೪೪

ನೋಡಿರಿ). ನಿಜಗುಣನು ಶಿವಯೋಗದ ಸ್ವರೂಪವನ್ನು ಚನ್ನಾಗಿ ಬಲ್ಲವನಾಗಿದ್ದನು. ಆದರೆ ಅವನು ಪಾತಂಜಲ ಯೋಗದಲ್ಲಿ ಹೇಳಿದಂತೆ ಯೋಗವೆಂದರೆ ಚಿತ್ತವೃತ್ತಿ ನಿರೋಧವೆಂದು ಹೇಳಿಲ್ಲ. ಅಥವಾ ಹಠಯೋಗಿಗಳಂತೆ ಅವನು ದೇಹವನ್ನು ಕ್ಲೇಶಗೊಳಿಸುವ ಸಾಧನಗಳನ್ನು ಸಮರ್ಥಿಸಿಲ್ಲ. ಅವನು ತನ್ನ ವಚನಗಳಲ್ಲಿ ಅಂಗ, ಲಿಂಗ, ಇವುಗಳಲ್ಲಿಯ ಭಿನ್ನತ್ವವನ್ನಳಿಯುವದೇಯೋಗವು, ಈ ಭಿನ್ನತೆಯು ಹೋಗಿಸಾಮರಸ್ಯವಾಗಬೇಕು, ಇದರಿಂದ ಅಂಗ ಗುಣಗಳು ದೂರಾಗುವವು ಮತ್ತು ಸಂದೇಹವು ಅಳಿಯುವದು, ಜಗತ್ತು ಇದು ಒಂದು ಕುರುಹು ಮಾತ್ರ ಇದ್ದು ಇದೂ ಹೊರಟು ಹೋಗಿ ನಿಜವು ಉಳಿಯುವದು ಎಂದು ಹೇಳುತ್ತಾನೆ. ನಿಜಗುಣನ ಅಭಿಪ್ರಾಯದ ಪ್ರಕಾರ ಯೋಗವು ಹೀಗೆ ಇದ್ದುದರಿಂದ ಗುರು ಶಿಷ್ಯ ಎಂಬ ಭಿನ್ನಭಾವವು ಸಹ ಹೊರಟು ಹೋಗುತ್ತದೆ. ಅವನು ಒಬ್ಬ ಹೆಚ್ಚಿನ ತರಗತಿಯ ವಚನಕಾರನಾಗಿದ್ದು ಅವನ ವಚನಗಳು ಎಂಟು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳಲ್ಲಿ ಮೇಲಿನ ಅಭಿಪ್ರಾಯಗಳಿರುತ್ತವೆ. ಘನಲಿಂಗನು ತನ್ನ ೨೦ನೇ ವಚನದಲ್ಲಿ ಇವನನ್ನು ಕುರಿತು ಉಲ್ಲೇಖಿಸಿರುವನು. ಈ ಪ್ರಕಾರ ನಿಜಗುಣನು ಉಚ್ಚ ಪ್ರತಿಯ ಸ್ಥಿತಿಯನ್ನು ಹೊಂದಿ ಚಿಮ್ಮಲಗಿಯಲ್ಲಿಯೇ ಐಕ್ಯವಾದನು. ಅವನು ಐಕ್ಯಹೊಂದಿದ ಸ್ಥಳದಲ್ಲಿ 'ನಿಜಗುಣೇಶ್ವರ ಲಿಂಗ' ಎಂಬ ಹೆಸರಿನ ದೇವಸ್ಥಾನವು ಉಂಟಾಯಿತು. ನಿಜಗುಣನ ಹೆಸರು ಗಣ ಸಹಸ್ರದಲ್ಲಿ ಬಂದಿರುತ್ತದೆ.

## ನಿಜಗುಣನ ಕೆಲವು ವಚನಗಳು

(೧) ಅಂಗಲಿಂಗವೆಂಬನ್ನಕ್ಕ ಯೋಗಪೂಜೆ. ಪುಣ್ಯಕ್ಕೆ ಬೀಜ. ಆತ್ಮನನರಿದಿಹೆನೆಂಬನ್ನಕ್ಕ ಉಭಯದೊಡಲಾಯಿತ್ತು. ಉಭಯದ ಗಜಬಜೆಯಲ್ಲಿ ಸಿಲುಕದೆ ನಿಂದ ನಿಜಗುಣಯೋಗಿ.

(೨) ಬಂದಲ್ಲಿ ನಿಂದು ಕಂಡು ಸಂದೇಹವಳಿದ ಮತ್ತೆ ಬೇರಂದವ ಕೇಳುವುದಕ್ಕೆ ಕಂಗಳ ಸೂತಕಕ್ಕೆ ಇಂಬಿಲ್ಲ. ಆ ಉಭಯದಂಗದ ಸಂಗವ ಮರೆದಲ್ಲಿ ನಿಜಗುಣಯೋಗಿಯ ಯೋಗ.

# ಎಡೆಮಠದ ನಾಗಿದೇವ

ಬಸವೇಶ್ವರನ ಕಾಲದಲ್ಲಿ ಕರ್ನಾಟಕ ದೇಶ ಮತ್ತು ತಮಿಳು ದೇಶ ಇವುಗಳಲ್ಲಿಯು ಶಿವಶರಣರಲ್ಲಿ ಪರಸ್ಪರ ಸ್ನೇಹ ಸಂಬಂಧಗಳು ವಿಶೇಷವಾಗಿದ್ದವು. ತಮಿಳು ದೇಶದ ಶಿವಶರಣರು ಕರ್ನಾಟಕಕ್ಕೂ ಕರ್ನಾಟಕದಲ್ಲಿಯು ಶಿವಶರಣರು ತಮಿಳು ದೇಶಕ್ಕೂ ಹೋಗಿಬರುವದು ವಾಡಿಕೆಯಾಗಿತ್ತು. ಎಡೆಮಠದ ನಾಗಿದೇವನು ಚೋಳ ಮಂಡಲದಲ್ಲಿರುವ ಕಾಂಚೀ ಪಟ್ಟಣದಲ್ಲಿ ವಾಸಮಾಡುತ್ತಿದ್ದನು. ಚೋಳ ರಾಜರಿಗೂ ಕರ್ನಾಟಕದ ರಾಜರಿಗೂ ಆಗಿಂದಾಗ್ಗೆ ಯುದ್ಧಗಳು ನಡೆಯುತ್ತಿದ್ದವು. ಚೋಳ ರಾಜನು ತನಗೆ ಕೊಡತಕ್ಕ ಕಪ್ಪವು ಬಾರದ್ದಕ್ಕೆ ಬಿಜ್ಜಳನು ಚತುರಂಗ ಬಲ ಸಮೇತವಾಗಿ ಆವನ ರಾಜಧಾನಿಯಾದ ಕಾಂಚೀ ಪಟ್ಟಣದ ಮೇಲೆ ದಾಳೀ ಮಾಡಿದನು. ಆವನೊಡನೆ ಬಸವೇಶ್ವರನೂ ಹೋಗಿರಲು ಅಲ್ಲಿ ಬಿಜ್ಜಳನ ದಂಡು ಬಿಡಾರ ಬಿಟ್ಟಾಗ್ಗೆ ಪಟ್ಟಣದ ಹೊರವಳಯದಿಂದ ಅರ್ಧಕೋಶ ದೂರ ಎಡೆಯು ಮಠದ ನಾಗಿದೇವನು ಶಿವಭಕ್ತಿ ಸಂಪನ್ನನಾಗಿ ಏಕಾಂತದಲ್ಲಿ ವಾಸಮಾಡುತ್ತಿರುವುದನ್ನು ಬಸವೇಶ್ವರನು ತಿಳಿದು ಅವನ ದರ್ಶನವನ್ನು ತೆಗೆದುಕೊಂಡು ಅವನಲ್ಲಿ ಏಳು ದಿನಗಳವರೆಗೆ ಭಕ್ತಿಯನ್ನು ಮಾಡಿದನು. ಮತ್ತು ತಿರುಗಿಬರುವಾಗ್ಗೆ ಅವನನ್ನೊಡಗೊಂಡು ಕರ್ನಾಟಕಕ್ಕೆ ಬಂದನು. ಈ ಪ್ರಕಾರ ಬಸವೇಶ್ವರನು ಬೇರೆ ಬೇರೆ ದೇಶಗಳಲ್ಲಿ ವಾಸವಾಗಿದ್ದ ಪ್ರಸಿದ್ಧ ಶಿವಾನುಭವಿಗಳನ್ನು ತನ್ನಲ್ಲಿಗೆ ಬರಮಾಡಿಕೊಂಡು ವೀರಶೈವ ಧರ್ಮ ಪ್ರಸಾರ ಕಾರ್ಯ ಮಾಡಿದ್ದಾನೆ. ಎಡೆಮಠದ ನಾಗಿದೇವನು ಅತ್ಯಂತ ಪ್ರಸಿದ್ಧನಾಗಿದ್ದು ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

---

# ಮಸಣಮ್ಮ.

ಮಸಣಮ್ಮನು ಎಡೆಮಠದ ನಾಗಿದೇವನ ಹೆಂಡತಿಯು. ನಾಗಿದೇವನು ಕಾಂಚೀ ಪಟ್ಟಣದಲ್ಲಿದ್ದಾಗ್ಗೆ ಬಿಜ್ಜಳನು ಚೋಳ ರಾಜನ ಈ ರಾಜಧಾನಿಯ ಮೇಲೆ ದಂಡೆತ್ತಿ ಹೋಗಿರಲು ಆವನೊಡನೆ ಹೋಗಿದ್ದ ಬಸವೇಶ್ವರನು ಶಿವಭಕ್ತನಾದ ನಾಗಿದೇವನನ್ನು ಅಲ್ಲಿರುವದನ್ನು ತಿಳಿದು

ಅವನನ್ನೂ ಅವನ ಹೆಂಡತಿಯಾದ ಮುಸಣಮ್ಮನನ್ನೂ ತನ್ನೊಡನೆ ಕರ್ನಾಟಕಕ್ಕೆ ಕರೆದುಕೊಂಡು ಬಂದನು. ಮುಸಣಮ್ಮನು ಅತ್ಯಂತ ಜ್ಞಾನಿಯಾಗಿ ವಚನಕಾರಳಾಗಿದ್ದಾಳೆ. ನಮಗೆ ದೊರೆದ ಅವಳ ಒಂದು ವಚನವನ್ನು ನಾವು ಕೆಳಗೆ ಉದಹರಿಸಿದ್ದೇವೆ. ಆಕೆಯು ಮುದ್ರಿಕೆಯು 'ನಿಜಗುಣೇಶ್ವರ ಲಿಂಗ' ಎಂದು ಇರುತ್ತದೆ; ಇದರಿಂದ ಈಕೆಯು ನಿಜಗುಣನನ್ನು ಬಹಳ ಪೂಜ್ಯಭಾವದಿಂದ ಕಾಣುತ್ತಿದ್ದಳೆಂದು ತೋರುತ್ತದೆ. ನಿಜಗುಣನು ಸಮಾಧಿಸ್ಥನಾದ ಬಳಿಕ ಅವನ ಸಮಾಧಿಗೆ 'ನಿಜಗುಣೇಶ್ವರ ಲಿಂಗ' ಎಂಬ ಹೆಸರಿದ್ದದರಿಂದ ವಚನಕಾರರ ಪದ್ಧತಿಯಂತೆ ಅದನ್ನೇ ಮುಸಣಮ್ಮನು ತನ್ನ ಮುದ್ರಿಕೆಯಾಗಿಟ್ಟುಕೊಂಡು ತನ್ನ ವಚನಗಳನ್ನು ರಚಿಸಿದ್ದಾಳೆ.

ನಾಗಿದೇವನು ಮತ್ತು ಮುಸಣಮ್ಮನು ಬಸವೇಶ್ವರನ ಸಮಕಾಲೀನರು. ಅವರ ಪೂರ್ವದಲ್ಲಿಯೇ ನಿಜಗುಣನು ತೀರಿಕೊಂಡಿದ್ದನು. ಆದ್ದರಿಂದ ನಿಜಗುಣ, ಅವನ ಶಿಷ್ಯನಾದ ಚಂದಿಮರಸು ಮತ್ತು ಭೋಗಣ್ಣ ಇವರೆಲ್ಲರೂ ಬಸವೇಶ್ವರನಕಿಂತಲೂ ಮೊದಲಿನವರಾಗಿರಬೇಕು. ಈ ಮಹಾನುಭಾವರೆಲ್ಲರು ಉತ್ತರ ಕರ್ನಾಟಕ ಭಾಗದಲ್ಲಿ ಶಿವಾನುಭವದ ಕೃತ್ಯಗಳನ್ನೆಸಗುತ್ತ ಪ್ರಸಿದ್ಧಿಗೆ ಬಂದಿದ್ದಾರೆ.

## ಮುಸಣಮ್ಮನ ವಚನ

(೧) 'ಕಾಗೆಯು ನಾಯು ತಿಂದವರಿಲ್ಲ. ವ್ರತಭ್ರಷ್ಟನ ಕೂಡಿದವರಿಲ್ಲ. ನಾಯಿಂಗೆ ನಾರಂಗವಪ್ಪುದೇ? ಲೋಕದ ನರಂಗೆ ವ್ರತವಪ್ಪುದೇ ಶಿವಬೀಜಕ್ಕಲ್ಲದೆ ನೀವೇ ಸಾಕ್ಷಿಯಾಗಿ ನಿಜಗುಣೇಶ್ವರಲಿಂಗದಲ್ಲಿ?'

ಮುಸಣಮ್ಮನ ಗಂಡನಾದ ಎಡೆಮಠದ ನಾಗಿದೇವನು ತನಗೆ ಭವಿಸಂಪರ್ಕವಾಗಬಾರದೆಂದು ಕಾಂಚೀ ಪಟ್ಟಣದಿಂದ ಅರ್ಧಕೋಶ ದೂರ ವಾಸವಾಗಿದ್ದನು. ಇದೇ ಅವನ ವ್ರತವಾಗಿತ್ತು. ಆದ್ದರಿಂದ ಅವನ ಹೆಂಡತಿಯೂ ಕೂಡ ಒಂದು ವ್ರತವನ್ನು ಸ್ವೀಕರಿಸಿದ ಬಳಿಕ ಅದನ್ನು ಎಂದೂ ಬಿಡಕೂಡದೆಂದು ಅವಳು ತನ್ನ ಈ ವಚನದಲ್ಲಿ ಹೇಳಿದ್ದಾಳೆ.

ಬಸವೇಶ್ವರನು ತನ್ನ ತಂದೆಯ ಮನೆಯನ್ನು ಬಿಟ್ಟುಕೊಟ್ಟು ಸಂಗಮ ಗ್ರಾಮಕ್ಕೆ ಹೋದ ಬಳಿಕ ಧರ್ಮೋಪದೇಶ ಮಾಡುವ ಕಾರ್ಯ

ವಲ್ಲಿ ತೊಡಗಿದವನಾದನು. ಆ ಕಾಲದಲ್ಲಿ ಬಿಜ್ಜಳನ ತಂದೆಯಾದ ಪೆರ್ಮಾ
ಡಿಯೂ ಅವನ ತರುವಾಯ ಬಿಜ್ಜಳನೂ ಚಾಲುಕ್ಯ ರಾಜನಿಗೆ ಮಾಂಡ
ಲಿಕರಾಗಿ ವಿಜಾಪುರ ಜಿಲ್ಲೆಯ ಉತ್ತರ ಭಾಗದ ಮುಖ್ಯ ರಾಜಧಾ
ನಿಯಾದ ಮಂಗಳವಾಡದಲ್ಲಿ ಆಳುತ್ತಿದ್ದರು. ಮುಂದೆ ಬಸವೇಶ್ವರನು
ಬಿಜ್ಜಳನಲ್ಲಿ ಒಂದು ನೌಕರಿಯನ್ನುಪಡೆದನು. ತರುವಾಯ ಬಿಜ್ಜಳನು
ಬನವಾಸಿ ಶಿವಮೊಗ್ಗೆ ಭಾಗಗಳಲ್ಲಿ ಮಂಡಲಾಧೀಶ್ವರನಾಗಲು ಅವ
ನೊಂದಿಗೆ ಬಸವೇಶ್ವರನೂ ಹೋಗಿ ಅಲ್ಲಿ ಧರ್ಮೋಪದೇಶ ಮಾಡುತ್ತ
ಸಂಚರಿಸಿದ್ದಾನೆ. ಅಲ್ಲಿಯೇ ಅವನು ಪ್ರಭುದೇವರ ಗುರುವಾದ ಅನು
ಮಿಷಯ್ಯನನ್ನು ಕಂಡು ಅವನಿಗೆ ವೀರಶೈವ ದೀಕ್ಷೆಯನ್ನು ಕೊಟ್ಟಿರು
ತ್ತಾನೆ. ಈ ಕಾಲದಲ್ಲಿ ಚಾಳುಕ್ಯ ರಾಜನು ಚೋಳ ರಾಜರ ಕೂಡ
ಆಗಿಂದಾಗ್ಗೆ ಯುದ್ಧಗಳನ್ನೆಸಗಬೇಕಾಗುತ್ತಿತ್ತು. ಆಗ ಅವನ ಸೇನಾನಾ
ಯಕನಾದ ಬಿಜ್ಜಳನು ಕಾಂಚೀ ಪಟ್ಟಣಕ್ಕೆ ದಾಳಿ ಇಟ್ಟ ಕಾಲದಲ್ಲಿ ಅವ
ನೊಂದಿಗೆ ಬಸವೇಶ್ವರನೂ ಹೋಗಿದ್ದು ಅಲ್ಲಿ ನಾಗಿದೇವ ಮತ್ತು ಅವನ
ಹೆಂಡತಿ ಮಸಣಮ್ಮ ಇವರನ್ನು ಕಂಡು ತಾನಿದ್ದ ಪ್ರದೇಶ ಎಂದರೆ ವಿಜಾ
ಪುರ ಜಿಲ್ಲೆಯ ಉತ್ತರ ಭಾಗದಲ್ಲಿ ಕೃಷ್ಣೆಯ ದಂಡೆಯಲ್ಲಿಟ್ಟು ಅವರನ್ನು
ಸನ್ಮಾನಿಸಿದ್ದು ಈ ಕಥೆಯಿಂದ ತಿಳಿದುಬರುತ್ತದೆ.

---

## ಸಕಳೇಶ ಮಾದರಸ

ಕರ್ನಾಟಕದಲ್ಲಿ ಕಲ್ಲುಕುರಿಕೆ ಎಂಬ ಪಟ್ಟಣವಿದ್ದು ಅಲ್ಲಿ ಮಲ್ಲಿ
ಕಾರ್ಜುನನೆಂಬ ವೀರಶೈವ ರಾಜನು ಆಳುತ್ತಿದ್ದನು. ಅವನು ಕೆಲವು
ದಿನ ರಾಜ್ಯಭಾರ ಮಾಡಿದ ಬಳಿಕ ಅವನಲ್ಲಿ ಈ ರಾಜ್ಯವು ನಾಯಿಗೆ
ಸರಿ ಎಂಬ ಭಾವವು ಉಂಟಾಗಿ ವೈರಾಗ್ಯಶೀಲನಾಗಿ ತನ್ನ ಮಗ
ನಾದ ಸಕಳೇಶ ಮಾದರಸನಿಗೆ ಪಟ್ಟಗಟ್ಟಿ ತಾನು ಶ್ರೀಶೈಲ ಪರ್ವತಕ್ಕೆ
ಹೋದನು.

ಸಕಳೇಶ ಮಾದರಸನಾದರೂ ಅತ್ಯಂತ ಭಕ್ತಿ ಭಾವವುಳ್ಳವನಾಗಿ
ರಾಜ್ಯವನ್ನು ಪರಿಪಾಲಿಸುವವನಾದನು. ಅವನು ಕೆಲವು ವರ್ಷ ಅರ
ಸುತನ ಮಾಡುತ್ತಿರಲು ಅವನು ತನ್ನ ತಂದೆಯು ವಿರತಿಭಾವವನ್ನು

ಹೊಂದಿ ರಾಜ್ಯಪದವನ್ನು ಬಿಟ್ಟುಕೊಟ್ಟು ಹೋದನೆಂಬುದನ್ನು ಲಕ್ಷಿಸಿ ಅವನಲ್ಲಿಯೂ ವೈರಾಗ್ಯವು ಉಂಟಾಗಿ ಅವನಂತೆಯೇ ಪಾರಮಾರ್ಥಿಕ ಸುಖವನ್ನು ಹೊಂದಬೇಕೆಂದು ಅಪೇಕ್ಷಿಸಿ ತನ್ನ ಹೆಂಡತಿ ಮತ್ತು ತನ್ನ ಮಗ ಇವರೊಡನೆ ಶ್ರೀಶೈಲ ಪರ್ವತಕ್ಕೆ ತೆರಳುವವನಾದನು.

ಆಗ ಅವನಿಗೆ ಮಾರ್ಗದಲ್ಲಿ 'ಅಂಬೆ' ಎಂಬ ಪುರವು ಹತ್ತಲು ಅಲ್ಲಿಯ ಜನರು ಸಕಳೇಶನ ನಿಷ್ಠೆಗೆ ಪ್ರೀತರಾಗಿ, ಅವರು ಅವನನ್ನು ಮುಂದೆ ಹೋಗಗೊಡದೆ, ಅದೇ ಗ್ರಾಮದಲ್ಲಿ ನಿಲ್ಲಿಸಿಕೊಂಡರು. ಅಲ್ಲಿಯುವರೆಲ್ಲರೂ ಸಕಳೇಶನು ತಮ್ಮ ಗುರುವೆಂತಲೇ ಭಾವಿಸಿ ಅವನೊಡನೆ ಪೂಜ್ಯ ಭಾವದಿಂದ ನಡೆಯಹತ್ತಿದರು. ಅವನಾದರೂ ಅಲ್ಲಿಯವರ ಭಕ್ತಿಗೆ ಪ್ರೀತನಾಗಿ ಅಲ್ಲಿಯೇ ಉಳಿದನು. ಅವನು ಈ ಗ್ರಾಮದಲ್ಲಿರುವಾಗ್ಗೆ ಜನರ ದೀಕ್ಷಾದಿ ಕಾರ್ಯಗಳನ್ನು ನೆರವೇರಿಸುತ್ತ ಪೂಜಾರ್ಚನಾದಿಗಳನ್ನು ಸಂಭ್ರಮದಿಂದ ಎಸಗುತ್ತ ಅಲ್ಲಿ ವಾಸಮಾಡಹತ್ತಿದನು. ಇದರಲ್ಲಿ ಅವನು ತಾನು ಮೊದಲು ರಾಜವೈಭವಗಳೊಡನೆ ಹೇಗೆ ಕಾಲಕಳೆಯುತ್ತಿದ್ದನೋ, ಹಾಗೆಯೇ ಶಿವಲಿಂಗಾರ್ಚನಾದಿಗಳನ್ನು ಮಾಡುವಲ್ಲಿಯೂ ಅತ್ಯಂತ ವೈಭವದಿಂದ ಅವುಗಳನ್ನು ಮಾಡಲು ಪ್ರೀತಿಯುಳ್ಳವನಾದನು. ಅಂದರೆ ಪೂಜಾ ಕಾಲದಲ್ಲಿ ಅನೇಕ ವಿವಿಧೋಪಚಾರಗಳು, ಅನೇಕ ತರದ ಪುಷ್ಪಗಳು, ಧೂಪದೀಪಾದಿಗಳು, ತರತರದ ಸಂಗೀತಗಳು, ವಾದ್ಯಗಳು, ಇವುಗಳೆಲ್ಲ ಬಹು ಅಟ್ಟಹಾಸದಿಂದ ಮೆರೆಯುವಂತೆ ಮಾಡುತ್ತಿದ್ದನು. ಹೀಗೆ ಅವನ ಕ್ರಿಯೆಗಳು ಸಂಭ್ರಮದಿಂದ ನಡೆಯಹತ್ತಿದ್ದರಿಂದ ಅವನ ಶಿಷ್ಯ ಸಮುದಾಯವೂ ಹೆಚ್ಚುತ್ತಲೇ ಬಂದಿತು. ಬಹು ಜನರು ಅವನನ್ನು ತಮ್ಮ ಗೃಹಕ್ಕೆ ಕರೆದುಕೊಂಡು ಹೋಗಿ ಅವನ ಪಾದತೀರ್ಥವನ್ನು ಸ್ವೀಕರಿಸಹತ್ತಿದರು. ಅಂಥ ಸಮಯದಲ್ಲಿ ಸಕಳೇಶ್ವರನು ತನ್ನ ನಿತ್ಯ ಶಿವಪೂಜೆಯ ಸಾಧನಕ್ಕೆಂದು ೧೨ ವರಹಗಳನ್ನು ಅವರಿಂದ ತೆಗೆದುಕೊಂಡು ಅವುಗಳನ್ನೆಲ್ಲ ಅವನು ತನ್ನ ಪೂಜಾರ್ಚನಾದಿಗಳಲ್ಲಿ ವಿನಿಯೋಗಿಸುತ್ತಿದ್ದನು. ಒಂದು ವೇಳೆ ಯಾರಾದರೂ ಕಡಿಮೆ ಹಣ ಕೊಡಲು ಇಚ್ಛಿಸಿದರೆ ಅವರ ಮನೆಗೆ ಅವನು ಹೋಗುತ್ತಿರಲಿಲ್ಲ.

ಹೀಗಿರಲು ಒಂದು ದಿನ ಒಬ್ಬ ಬಡ ಭಕ್ತನು ಸಕಳೇಶ ಮಾದರಸನನ್ನು ತನ್ನ ಮನೆಗೆ ಕರೆತಂದಿರಲು ಮಾದರಸನು ಅವನಿಗೆ ೧೨ ವರಹ

ಕೊಡಬೇಕೆಂದು ಕೇಳಲು, ಆ ಭಕ್ತನಲ್ಲಿ ಅಷ್ಟು ಹಣವಿರಲಿಲ್ಲ. ಆಗ ಆ ಭಕ್ತನು ತನ್ನ ಮನಸ್ಸಿನಲ್ಲಿ 'ನನಗೆ ಧನವಿದ್ದರೆ ಕೃತಾರ್ಥನಾಗುತ್ತಿದ್ದೆನಲ್ಲಾ! ಗುರು ಹೋಗದ ಮನೆ ಅರಣ್ಯ. ಈಗ ಏನು ಮಾಡಲಿ?' ಎಂದು ಚಿಂತಿಸುತ್ತ ಕುಳಿತಿರಲು, ಅವನ ಮಗಳಾದ ಮಾದರಸಿಯು ಇದನ್ನು ತಿಳಿದು, ಅವಳು ತನ್ನ ತಂದೆಗೆ ಹೇಳಿದ್ದು 'ನನ್ನನ್ನು ನೀನು ಧನವುಳ್ಳವರಲ್ಲಿ ಒತ್ತೆ ಇಡು. ಹೀಗೆ ಬಂದ ಹಣದಿಂದ ಗುರು ಸೇವೆಯನ್ನು ಮಾಡು' ಎಂದು ಸೂಚಿಸಲು, ಅವಳ ತಂದೆಯು ಹಾಗೆಯೇ ಆಗಲೆಂದು ಅವಳನ್ನು ಒಬ್ಬ ಸಾಹುಕಾರನಲ್ಲಿ ಒತ್ತೆ ಇಟ್ಟು, ಹಣವನ್ನು ತಂದು ಗುರುವನ್ನು ಸೇವಿಸತೊಡಗಿದನು.

ಈ ಸಂಗತಿಯು ಸಕಳೇಶ ಮಾದರಸನಿಗೆ ತಿಳಿದಿದ್ದರೂ ಅವನು ಅಂಥ ಹಣವನ್ನು ಸ್ವೀಕರಿಸಿ ತನ್ನ ಪೂಜಾದಿಕಾರ್ಯಗಳನ್ನು ನೆರವೇರಿಸಹತ್ತಿದನು. ಮುಂದೆ ಪೂಜಾ ಕಾಲದಲ್ಲಿ ತನ್ನ ಲಿಂಗಕ್ಕೆ ಧೂಪಾರತಿಯನ್ನು ಎತ್ತುತ್ತಿರುವಾಗ್ಗೆ, ಅದರಿಂದ ಪ್ರಕಾಶಹೊಂದಿದ ಆ ಲಿಂಗದಲ್ಲಿ ಒತ್ತೆಯಾಗಿ ಹೋಗಿದ್ದ ಆ ಭಕ್ತನ ಮಗಳ ರೂಪು ಸುಳಿಸುಳಿದು ತೋರಹತ್ತಿತು! ಈ ಅದ್ಭುತವನ್ನು ಕಂಡ ಕೂಡಲೆ ಅವನು ಅತ್ಯಂತ ಭೀತಿಗೊಂಡನು ಮತ್ತು ಕೂಡಲೇ ಅವನಿಗೆ ಅತ್ಯಂತ ಪಶ್ಚಾತ್ತಾಪವಾಯಿತು. ಆಗ ಅವನ ಮನಸ್ಸು ಕುಂದಿದವನಾಗಿ, ತಲೆವಾಗಿ 'ಅಕಟಕಟಾ, ನಾನು ಮಾಡುವ ಈ ಪೂಜೆ ಶಿವಭಕ್ತರ ಮಕ್ಕಳನ್ನು ಮಾರಿಸುವ ತೆರನಾಯಿತೇ? ಪರರನ್ನು ಬಾಧಿಸುವಂತಾಯಿತೇ' ಎಂದಂದು 'ರಾಜಭೋಗವನ್ನು ನಾನು ಬಿಟ್ಟೆನು, ಇನ್ನುಮೇಲೆ ನನಗೆ ಈ ಶಿವಪೂಜಾ ಭೋಗವು ಒದಗಿತು. ಇದು ಬೇಡ' ಎಂದಂದು ಶ್ರೀಶೈಲದಲ್ಲಿ ಶಿವಯೋಗಿ ಮಲ್ಲರಸನೆಂಬ ಶಿವಾನುಭವಿಯು ಇದ್ದಾನೆ, ಅವನಿಂದ ಉಪದೇಶವನ್ನು ಹೊಂದುವೆನು ಎಂದು ತಾನಿದ್ದ 'ಅಂಬೆ' ಗ್ರಾಮವನ್ನು ಬಿಟ್ಟುಕೊಟ್ಟು ಪರ್ವತಾಶ್ರಯಕ್ಕೆ ತೆರಳಿದನು.

ಅಲ್ಲಿಗೆ ಅವನು ಹೋಗುವ ಮುಂದೆ ಅವನು ತನ್ನ ಮಗನಾದ ಮಾಯಿದೇವನನ್ನು ಕರೆದು ನೀನು ಇಲ್ಲಿಯೇ ಇದ್ದು ರಾಜ್ಯ ಭಾರವನ್ನು ಮಾಡು, ನಿನ್ನಿಂದ ಒಬ್ಬ ಕಾರಣಿಕನಾದ ಪುಣ್ಯ ಪುರುಷನು ಹುಟ್ಟು

ವನು,[೧] ಅವನು ವೀರಶೈವ ಮತವನ್ನು ಉದ್ಧರಿಸುವನು ಎಂದು ಹೇಳಿ ತನ್ನ ರಾಜ್ಯಭಾರವನ್ನು ಅವನಿಗೆ ಒಪ್ಪಿಸಿ ತಾನು ಪರ್ವತಕ್ಕೆ ಹೋದನು.

ಅವನು ಅಲ್ಲಿಗೆ ಹೋದ ಬಳಿಕ ಶಿವಯೋಗಿ ಮಲ್ಲರಸನನ್ನು ಕಂಡು ಉಗ್ರ ತಪಸ್ಸನ್ನು ಆಚರಿಸಬೇಕೆಂಬ ತನ್ನ ಮನದ ಬಯಕೆಯನ್ನು ಅವನಿಗೆ ಹೇಳಲು ಅದಕ್ಕೆ ಆ ಶಿವಯೋಗಿಯು — 'ಏನು ಮಾದರಸಯ್ಯ, ಲಿಂಗಾರ್ಚನೆಯನ್ನು ಬಿಟ್ಟು ಕೊಟ್ಟು ಈ ಕಟ್ಟಡವಿಗೆ ಏಕೆ ಬಂದೆ? ಇಲ್ಲಿಯ ಕಷ್ಟಗಳಿಗೆ ನೀನು ಒಳಗಾಗದೆ ಪಟ್ಟಣದಲ್ಲಿದ್ದುಕೊಂಡು ಮೊದಲಿನಂತೆ ಶಿವಪೂಜೆಯನ್ನು ಮಾಡು, ನಿನ್ನ ನಿಜ ಭಕ್ತಿಯನ್ನು ಜಗತ್ತಿನಲ್ಲಿ ಮೆರೆ,' ಎಂದು ಉಪಹಾಸ ಮಾಡಿ ನುಡಿಯಲು ಅದಕ್ಕೆ ಸಕಳೇಶ ಮಾದರಸನು- 'ಇಲ್ಲಿಯ ಮುನಿಗಳಂತೆ ನಾನು ತಪಸ್ಸು ಮಾಡಲು ಬಂದಿದ್ದೇನೆ. ನನಗೆ ಲಿಂಗಪೂಜೆಯು ಸಾಕಾಯಿತು. ನಾನು ಇಲ್ಲಿಯೇ ಇರುವೆನು' ಎಂದು ನಿರ್ಧಾರವಾಗಿ ಹೇಳಲು ಹಾಗೆಯೇ ಆಗಲೆಂದು ಶಿವಯೋಗಿ ಮಲ್ಲರಸನು ಅವನಿಗೆ ತಿಳಿಸಲು ಮಾದರಸನು ಅರಣ್ಯದಲ್ಲಿ ಉಗ್ರ ತಪಸ್ಸನ್ನು ಆಚರಿಸಲು ಆರಂಭಿಸಿದನು.

ಕೆಲವು ದಿವಸಗಳಾದ ಮೇಲೆ ಮಲ್ಲರಸನು ಅವನ ಮೂಢತನವು ಅವನಿಗೆ ತಿಳಿಯಬೇಕೆಂದು ಒಂದು ಕಪಟೋಪಾಯವನ್ನು ಯೋಜಿಸಿದನು. ಅವನು ಒಬ್ಬ ಕುರುಬನ ವೇಷವನ್ನು ಧಾರಣ ಮಾಡಿ ಹೆಗಲಲ್ಲಿ ಬಗಲಲ್ಲಿ ಕುರಿಗಳು, ಕಟವಾಯಲ್ಲಿ ಸುರಿವ ಜೊಲ್ಲು, ಡೊಂಕು ತೋಳು, ಕೈಯ್ಯಲ್ಲಿ ಕವಣೆಗಲ್ಲು, 'ಹೋ ಹೋ' ಎನ್ನುತ್ತ ಬೀರ ಮೈಲಾರದೇವನ ಹಾಡನ್ನು ಹಾಡುತ್ತ, ಕೂಗುತ್ತ, ಸಕಳೇಶ ಮಾದರಸನಿದ್ದ ಮರದಡಿಗೆ ಬಂದು ನಿಂತನು. ಆಗ ಅಲ್ಲಿ ಸಕಳೇಶನು ಕಣ್ಣು ಮುಚ್ಚಿಕೊಂಡು ಅಧ್ಯಾತ್ಮ ಸುಖದ ಸುಷುಪ್ತಿಯಲ್ಲಿ ಮರೆತು ಹೋಗಿದ್ದನು. ಆದರೆ ಆ ಕುರುಬನು ಸಕಳೇಶ ಮಾದರಸನ ಆ ನಿಷ್ಪತ್ತಿಯನ್ನು ನಿಂದಿಸುತ್ತ, ಅವನಿಗೆ ಇದೆಂತಹ ತಪವು! ಇದನ್ನು ಬಿಡು, ನನ್ನ ಆಡುಗಳ ಮೇಲೆ ಹಾಡು, ಎಂದೆನ್ನುತ್ತ ಗಿಡವನ್ನೇರಿ ಅದರ ಎಲೆಗಳನ್ನು ಅವನ ಮೇಲೆ ಸುರಿಸುತ್ತ ಅವನ ಶಾಂತಿಯನ್ನು ಭಂಗ ಮಾಡಿದನು. ಆಗ ಸಕಳೇಶ ಮಾದರಸನು ಕಣ್ಣು ತೆರೆದು ಅವ

---

೧ ಕೆರೆಯ ಪದ್ಮರಸ




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೦೦—೦

ಸಂಪುಟ ೧೮] ಫೆಬ್ರುವರಿ. ೧೯೪೪. [ಸಂಚಿಕೆ ೫

## ವಿಷಯಾನುಕ್ರಮಣಿಕೆ.

# ಶಿವಾನುಭವ

| ವರ್ಷ ೧೮ | ಅಕ್ಟೋಬರ ೧೯೪೩. | ಸಂಚಿಕೆ ೧ |
| --- | --- | --- |

## ಪ್ರಕಾಶಮಯ ಜೀವನ.

ಲೇ:— ರಾ॥ ರಾ॥ ಚನ್ನಮಲ್ಲಪ್ಪ ಹಲಸಂಗಿ (ಮಧುರಚನ್ನ).

"ನಿಮ್ಮ ಇಚ್ಛೆ ಹಾಗೂ ಪರಮೇಶ್ವರನ ಇಚ್ಛೆ ಇವೆರಡರಲ್ಲಿ ಎಷ್ಟು ಭೇದವಿರತಕ್ಕದ್ದಲ್ಲ, ನಿಮ್ಮಲ್ಲಿ ಆತನ ಪ್ರೇರಣೆಯ ಹೊರತಾಗಿ ಬೇರೆ ಇನ್ನಾವ ಸಂಕಲ್ಪವೂ ಪ್ರಕಟವಾಗಬಾರದು, ಹಾಗೂ ಆತನ ಚಿನ್ಮಯ ಕರ್ಮವಲ್ಲದ ಇನ್ನಾವ ಕರ್ಮವೂ ನಿಮ್ಮೊಳಗೆ ಹಾಗೂ ನಿಮ್ಮಿಂದ ನೆರವೇರಬಾರದು."

— ಶ್ರೀ ಅರವಿಂದರು.
("ಮಾತಾ" ಗ್ರಂಥದಲ್ಲಿ.)

ಇದಕ್ಕೆ ಸಾಧನವು ಸಮರ್ಪಣ ಅದು ಹೀಗೆ:—

"ಪ್ರಭೋ, ನನ್ನ ಸಕಲ ವಿಚಾರಗಳೆಲ್ಲ ನಿನ್ನವೇ, ನನ್ನ ಸಕಲ ಊರ್ಮಿಗಳೂ, ನನ್ನ ಹೃದಯದ ಸಕಲ ಭಾವನೆಗಳೂ, ನನ್ನ ಸಮಸ್ತ ಇಂದ್ರಿಯಜನ್ಯ ಅನುಭೂತಿಗಳೂ, ನನ್ನ ಪ್ರಾಣದ ಸರ್ವ ಕ್ರಿಯೆಗಳೂ, ನನ್ನ ದೇಹದ ಅಣುಪರಮಾಣುಗಳೂ, ಒಂದೊಂದು ಬಿಂದುವೂ ನಿನ್ನವೇ ಇವೆ. ಸರ್ವಾಂಶದಿಂದಲೂ ಸರ್ವ ಪ್ರಕಾರದಿಂದಲೂ ನಾನು ನಿನ್ನವಳು, ಸಂಪೂರ್ಣವಾಗಿ ನಿನ್ನವಳು."

— ಶ್ರೀಮಾತಾಜಿಯವರು.
(ಒಂದು ವಚನದಿಂದ.)

ಮೇಲ್ಕಾಣಿಸಿದ ಎರಡು ದಿವ್ಯ ತತ್ವಗಳಿಂದ ನಮ್ಮ ಆತ್ಮಕಲ್ಯಾಣ ವನ್ನು ಬೇಕಾದಷ್ಟು ಮಾಡಿಕೊಳ್ಳಲಿಕ್ಕೆ ಬರುವಂತಿದೆ.

ಪುರಾತನ ಶಾಸ್ತ್ರಗಳಲ್ಲಿ ಇದಕ್ಕೆ ಪೂರಕವಾಗುವ ಮಾತುಗಳು ಎಲ್ಲೆಡೆಯಲ್ಲಿ ಲಭಿಸಬಲ್ಲವಾದುದರಿಂದ **ನೂರೊಂದು ಸ್ಥಲದ** ತತ್ವಗಳಲ್ಲಿ ಈ ವಿಷಯವನ್ನು ಕುರಿತು ಎಲ್ಲಿ ಹೇಗೆ ಚರ್ಚಿಸಲಾಗಿದೆಯೆಂಬುದನ್ನು ವಿವರಿಸುವೆನು.

೯೦, ೯೧ ಹಾಗೂ ೯೨ ನೆಯ ಸ್ಥಲಗಳಲ್ಲಿ ಕ್ರಿಯಾಪ್ರಕಾಶನ, ಭಾವಪ್ರಕಾಶನ, ಜ್ಞಾನಪ್ರಕಾಶನಗಳು ಹೇಗೆ ಘಟಿಸುವವೆಂಬುದರ ವರ್ಣನೆಯು ಶಿವಶರಣರ ಶಾಸ್ತ್ರಗಳಲ್ಲಿ ಹೀಗೆ ಇದೆ, ಹೇಗೆಂದರೆ:—

"ಶಿವಭಾವದಲ್ಲಿ ಸ್ಥಿರಗೊಂಡ ನಿರ್ಲಿಪ್ತನಾದ ಮಹಾತ್ಮನಲ್ಲಿ ಯಾವ ಯಾವ ಭಾವಗಳು ಉತ್ಪನ್ನವಾಗುವವೋ ಅವೆಲ್ಲವುಗಳು ಶಿವಾತ್ಮಕವಾಗಿರುವವು ......ಜ್ಞಾನಪ್ರತಿಬಂಧಕಗಳೆಲ್ಲ ಕಳಚಿ ಹೋದ ಕೇವಲಾತ್ಮಾನುಭಾವಿಗೆ ಎಲ್ಲೆಲ್ಲಿ ಇಂದ್ರಿಯಾಸಕ್ತಿಯುಂಟಾಗುವದೋ ಅಲ್ಲಲ್ಲೆಲ್ಲ ಶಿವಾಸಕ್ತಿಯೇ ತೋರುವದು. ರಾಗದ್ವೇಷಾದಿ ಭಾವನೆಗಳೇ ಸಂಸಾರ ಕ್ಲೇಶಕ್ಕೆ ಕಾರಣಗಳಷ್ಟೆ? ಅವುಗಳು ಎಲ್ಲಿ ಉಪಶಮನ ಹೊಂದಿರುವವೋ ಅಲ್ಲಿ ಉದಯಿಸುವ ಭಾವಗಳು ಶಿವಾತ್ಮಕವಾಗಿರುತ್ತವೆ."

—ಸಿದ್ಧಾಂತಶಿಖಾಮಣಿ.

ಇನ್ನು ೬೬, ೬೭ ಮತ್ತು ೬೮ ನೆಯ ಸ್ಥಲಗಳಲ್ಲಿ ಕಾಯಾರ್ಪಿತ, ಕರಣಾರ್ಪಿತ, ಭಾವಾರ್ಪಿತಗಳನ್ನು ಕುರಿತು ಹೇಗೆ ಬಣ್ಣಿಸಲಾಗಿದೆಯೆಂದರೆ:—

"ಯಾವಾಗ ಯೋಗಿಯು ತನ್ನ ದೇಹವನ್ನು ಪರಮಾತ್ಮನಿಗೆ ಅರ್ಪಿಸುವನೋ ಆಗ ಅವನು ಪ್ರತ್ಯಕ್ಷ ಶಿವರೂಪನೇ ಆಗುವನೆಂಬುದರಲ್ಲಿ ಸಂಶಯವಿಲ್ಲ..........ದರ್ಶನ ಸ್ಪರ್ಶನಾದಿಗಳಿಂದಲೂ, ಘ್ರಾಣನ ಶ್ರವಣಾದಿಗಳಿಂ ದಲೂ ಅನುಭವಿಸಿದ ಸುಖಗಳನ್ನೆಲ್ಲ ಪರಮೇಶ್ವರನಿಗೆ ಅರ್ಪಿಸಬೇಕು.......ಅಹಂಕಾರ ಮದೋದ್ರಿಕ್ತವಾದ ಅಂತಃಕರಣವೆಂಬ ಮದ್ದಾನೆಯನ್ನು ಪರಮಾತ್ಮನೆಂಬ ಗೂಟಕ್ಕೆ ಕಟ್ಟಿಹಾಕಿದವನೇ ಧೀರನು,

ಅವನೇ ಕೊನೆ ಮುಟ್ಟತಕ್ಕವನು......ಸಕಲೇಂದ್ರಿಯಗಳನ್ನೂ, ಭೋಗ ಸಾಧನವಾದ ಶರೀರವನ್ನೂ ಈಶ್ವರ ಪೂಜಾಭಾವದಿಂದ ಕಾಣುವವನು, ಮುಕ್ತಿಯನ್ನು ಪಡೆಯುವನು......ಚಿತ್ತಸ್ಥವಾದ ಸಕಲಾರ್ಥಗಳನ್ನೂ, ಮನದಲ್ಲಿ ಮಾಡುವ ಸಕಲ ಮನನಗಳನ್ನೂ ಸಾಕ್ಷಾತ್ ಪರಮೇಶ್ವರ ನಿಗೆ ಅರ್ಪಿಸುವದೇ ಭಾವಾರ್ಪಣವೆನಿಸುವದು......ಸರ್ವ ಕರ್ಮಗ ಳನ್ನು ಈಶ್ವರಾರ್ಚನನೆಂತಲೂ, ಸರ್ವ ವಚನಗಳನ್ನು ಆತನ ಸ್ತೋತ್ರ ವೆಂತಲೂ ಸರ್ವದಾ ಭಾವಿಸುವವನಿಗೆ ಕರ್ಮಬಂಧನವೆಲ್ಲಿಯದು? "

— ಸಿದ್ಧಾಂತಶಿಖಾಮಣಿ.

ಆದರೆ ಇವೆರಡು ಹಿರಿತತ್ವಗಳಿಗೆ ಪುಷ್ಟಿಕೊಡುವ ಹಲವು ಮಾತು ಗಳುಂಟು. ಅವುಗಳಲ್ಲಿ ಒಂದೆರಡು ಮಾತುಗಳನ್ನು ಇಲ್ಲಿ ಉಲ್ಲೇಖಿಸ ಲಾಗುವದು. ಅವು ಯಾವವೆಂದರೆ:—

"ಕೆಲವರು ಆಂತರಿಕ ಅನುಭವಕ್ಕೇ ಮಹತ್ವಕೊಟ್ಟು ಬಾಹ್ಯಿಕ ಕರ್ಮಗಳಿಗೆ ಅಲಕ್ಷ್ಯ ಮಾಡುತ್ತಾರೆ. ಅದರಿಂದ ಅವರು ತೂಕ ತಪ್ಪಿ ದವರೂ ಏಕ ಪಕ್ಷಾವಲಂಬಿಗಳೂ ಆಗುತ್ತಾರೆ. ಇನ್ನು ಕೆಲವು ಜನರು ಬಾಹ್ಯಿಕ ಕಾರ್ಯಕಲಾಪಕ್ಕೇ ಮಹತ್ವಕೊಟ್ಟು, ಆಂತರಿಕ ಅನುಭವ ಗಳನ್ನು ಅಲಕ್ಷಿಸುತ್ತಾರೆ, ಅದರಿಂದ ಇವರೂ ತೂಕತಪ್ಪಿದವರೂ ಏಕ ಪಕ್ಷಾವಲಂಬಿಗಳೂ ಆಗುತ್ತಾರೆ. ಆಂತರಿಕ ಅನುಭವ ಹಾಗೂ ಬಾಹ್ಯ ಕಾರ್ಯ ಇವೆರಡನ್ನೂ ಸಮನಾಗಿ ಭಾವಿಸಿ ಈಶ್ವರಾರ್ಪಣ ಬುದ್ಧಿ ಯಿಂದ ಎರಡನ್ನೂ ಮಾಡಬೇಕು."

—ಶ್ರೀಅರವಿಂದರು.

("ಯೋಗ ಪ್ರದೀಪ"ದಿಂದ)

ಇದಕ್ಕೆ ಪೂರಕವಾಗುವ ಮಾತುಗಳು ನೂರೊಂದು ಸ್ಥಳಗಳಲ್ಲಿ ಹೇಗೆ ವರ್ಣಿಸಲ್ಪಟ್ಟಿರುವವೆಂದರೆ:—

೫೪, ೫೫ ಹಾಗೂ ೫೬ ನೆಯ ಸ್ಥಲಗಳಾದ ಕ್ರಿಯಾಗಮ, ಭಾವಾ ಗಮ, ಜ್ಞಾನಾಗಮ ಸ್ಥಲಗಳಲ್ಲಿ ಯೋಗಿಗೆ ಕೃತಿ, ಭಾವನೆ, ವಿಚಾರ ಇವೆಲ್ಲವುಗಳ ಅನುಶೀಲನವು ಆವಶ್ಯಕವೆಂದು ವರ್ಣಿಸಿರುವುದು ಹೇಗೆಂದರೆ:—

"ಅರಣಿಗಳನ್ನು (ಬನ್ನಿಯ ಕಟ್ಟಿಗೆಗಳನ್ನು) ಒಂದರಮೇಲೊಂದಿಟ್ಟು ಮಥಿಸಿದ ಹೊರತು ಅಗ್ನಿಯು ಹೇಗೆ ಪ್ರಕಾಶಿಸುವದಿಲ್ಲವೋ ಹಾಗೆ ಕ್ರಿಯಾಮಥನವಿಲ್ಲದಿದ್ದರೆ ಒಳಗಿರುವ ಪರಮಾತ್ಮನು ಪ್ರಕಾಶಿಸುವದಿಲ್ಲ ......(ಅದರಂತೆ)

ಕೇವಲ ಕರ್ಮಮಾತ್ರದಿಂದ ಶತಕೋಟಿ ಜನ್ಮಗಳಾದರೂ ಆತ್ಮನಿಗೆ ಮೋಕ್ಷ ಲಭವಾಗುವದಿಲ್ಲ. ಆದ್ದರಿಂದ ಮುಕ್ತಿಗೆ ಜ್ಞಾನವೇ ಕಾರಣವು....

ಕುರುಡ ಮತ್ತು ಕುಂಟನ ಹಾಗೆ ಜ್ಞಾನ ಮತ್ತು ಕರ್ಮ ಇವೆರಡೂ ಪರಸ್ಪರ ಸಾಪೇಕ್ಷಿಕಗಳಾಗಿವೆ. ಆದ್ದರಿಂದ ಫಲೋತ್ಪತ್ತಿಯ ವಿಷಯದಲ್ಲಿ ಅನಾಸಕ್ತನಾಗಿ ಅವೆರಡನ್ನೂ ಆಚರಿಸಲಿಕ್ಕೆ ಬೇಕು. ×

ವಿಧಿಯಿದು; ಪರಮೇಶ್ವರ ನಿರ್ದಿಷ್ಟವಿದು. ಆದ್ದರಿಂದ ವಿಚಕ್ಷಣನಾದವನು ಶಿವಾರಾಧನ ಬುದ್ಧಿಯಿಂದಲೇ ವಿಹಿತ ಕರ್ಮದಲ್ಲಿ ನಿರತನಾಗಿರತಕ್ಕದ್ದು."

— ಸಿದ್ಧಾಂತಶಿಖಾಮಣಿ.

ಇನ್ನು ಸಮತೆ ಇತ್ಯಾದಿಗಳ ವಿಷಯದಲ್ಲಿ ಸ್ವಯಲಿಂಗ, ಚರಲಿಂಗ, ಪರಲಿಂಗವೆಂಬ ಸ್ಥಲಗಳಲ್ಲಿ (೫೧, ೫೨, ೫೩) ವಿವರವಾಗಿ ಹೇಳಿದೆ. ಅದು ಹೇಗೆಂದರೆಃ—

"ಕಾಮಕ್ರೋಧಾದಿಗಳಿಂದ ಬಿಡಲ್ಪಟ್ಟವನೂ, ಶಾಂತಿದಾಂತಿಗಳಿಂದ ಕೂಡಿದವನೂ, ಸರ್ವತ್ರ ಶಿವಬುದ್ಧಿಯುಳ್ಳವನೂ ಆದ ಯೋಗಿಯು ಸಮಬುದ್ಧಿಯಿಂದೊಡಗೂಡಿ ಸಂಚರಿಸುವನು. ಇದು ಮುಖ್ಯ ಇದು ಹೀನವೆಂಬ ಆಲೋಚನೆಯಿಲ್ಲದೆ ಸಕಲವೂ ಶಿವಾತ್ಮಕವೆಂದು ಭಾವಿಸುತ್ತ ಯೋಗಿಯು ಸಂಚರಿಸುವನು. ಸನ್ಮಾನದಲ್ಲಿ ಪ್ರೀತಿಯಿಲ್ಲದೆ, ಅವಮಾನದಲ್ಲಿ ವ್ಯಥೆಯಿಲ್ಲದೆ ಸರ್ವೋಚ್ಚ ಪದಾರೂಢನಾಗಿ ಯೋಗಿಯು ಸ್ವಾತ್ಮಸ್ಥಿತನಾಗಿ ಸಂಚರಿಸುವನು."

— ಸಿದ್ಧಾಂತಶಿಖಾಮಣಿ.

---

× ಅಂಧ ಪಂಗುವದನ್ಯೋನ್ಯ ಸಾಪೇಕ್ಷೇ ಜ್ಞಾನಕರ್ಮಣೀ । ಫಲೋತ್ಪತ್ತೌ ವಿರಕ್ತಸ್ತು ತಸ್ಮಾತ್ತದ್ದ್ವಯಮಾಚರೇತ್ ॥

—ಸಿದ್ಧಾಂತಶಿಖಾಮಣಿ ೧೬—೧೦.

## ಕೊನೆಯ ಮಾತು.

"ಈ ಸ್ಥಿತಿಯು ಯಾವಾಗ ಪೂರ್ಣವಾಗುವದೋ ಆಗ ಜ್ಞಾನವೂ ಸಂಕಲ್ಪವೂ ಕರ್ಮವೂ ಪೂರ್ಣತಾಪ್ರಾಪ್ತವಾಗುವವು, ಸಹಜವಾಗುವವು, ಜ್ಯೋತಿರ್ಮಯವಾಗುವವು, ಸ್ವತಃ ಸ್ಫೂರ್ತವೂ ದೋಷರಹಿತವೂ ಆಗುವವು. ಪರಮಾತ್ಮನಿಂದಲೇ ಅವುಗಳ ಪ್ರವಾಹವು ಹರಿಯತೊಡಗುವದು, ಸನಾತನ ಪರಮಾತ್ಮನದೇ ಅದು ದಿವ್ಯ ಶಾಶ್ವತ ಕರ್ಮವಾಗುವದು."

—ಯೋಗೀಶ್ವರ ಶ್ರೀಅರವಿಂದರು.

( "ಮಾತಾ" ಗ್ರಂಥದಿಂದ. )

"ಸರ್ವವೂ ಸುವರ್ಣ, ಸುವರ್ಣ, ಸುವರ್ಣ. ಸುವರ್ಣಮಯ ಜ್ಯೋತಿಯ ಪ್ರವಾಹವು ಹರಿಗಡಿಯದ ಹೊನಲಾಗಿ ಹರಿದು ಬಂತು. ಅದರೊಡನೆ ಧುಮುಕಿ ಬಂದ ಜ್ಞಾನವಿದು. ದೇವತೆಗಳ ಪಥವು ಸೂರ್ಯಪ್ರಭೆಯಿಂದ ದೇದೀಪ್ಯಮಾನವಾದುದು. ಅಲ್ಲಿ ಬಿಕ್ಕಟ್ಟುಗಳ ವಾಸ್ತವಿಕತೆಯೇ ಮಾಯವಾಗಿ ಹೋಗುವದು."

"ಪರಮೇಶ್ವರನ ಇಚ್ಛಾನುಸಾರವಾಗಿ ನಮ್ಮ ಇಚ್ಛೆ ಇರಬೇಕು. ಇದೇ ಪರಮರಹಸ್ಯ.

—ಶ್ರೀಮಾತಾಜಿಯವರು.

( "ಮಾತೃವಾಣಿ"ಯಿಂದ. )

ನೂರೊಂದು ಸ್ಥಲಗಳ ಅನುಶೀಲನದಿಂದಲೂ ಶ್ರೀ ಅರವಿಂದರ ವಿಜ್ಞಾನಪಥಕ್ಕೆ ನಮ್ಮಲ್ಲಿ ಪ್ರವೃತ್ತಿಯುಂಟಾಗಿ ನವಯುಗದ ಯೋಗಕ್ಕೆ ನಮ್ಮೊಳಗೆ ಕರೆಯುಂಟಾಗದಿರಲಾರದೆಂದು ನಂಬಿದ್ದೇನೆ.

[ಟಿಪ್ಪಣಿಃ— 'ಸಿದ್ಧಾಂತಶಿಖಾಮಣಿ'ಯಲ್ಲಿ ಹೇಳಿದಂತೆ—

ಕೇವಲ ಪರಮೇಶ್ವರಾಸಕ್ತನೂ, ಸಮತಾಬುದ್ಧಿ ವಿಶಿಷ್ಟನೂ ಆದ ಸ್ವಯಚರಪರನೆಂಬವನು (೫೧, ೫೨, ೫೩), ಕೃತಿ, ಭಾವ, ವಿಚಾರಗಳ ಅಗತ್ಯವನ್ನರಿತು (೫೪, ೫೫, ೫೬), ಸಕಾಯನಾಗಿದ್ದರೂ ಅಕಾಯನೂ ಪರಕಾಯನೂ ಆಗಿ (೫೭, ೫೮, ೫೯), ಲೋಕಸಂಗ್ರಹಕ್ಕಾಗಿ

ಅರಿತಂತೆ ಆಚರಿಸತೊಡಗುವನು (೬೦, ೬೧, ೬೨). ಲೋಕದಲ್ಲಿ ಹಾಗೆ ಆಚರಿಸುವುದು ಕರ್ತವ್ಯವೆಂದು ಮಾತ್ರ ಹಾಗೆ ವರ್ತಿಸುವನೇ ವಿನಾ ಸ್ವಪ್ರಯೋಜನಕ್ಕಲ್ಲ (೬೩, ೬೪, ೬೫). ಅದರಿಂದ ಅವನ ಕೃತಿ, ಭಾವ ಮತ್ತು ವಿಚಾರ ಇವೆಲ್ಲ ಪರಮೇಶ್ವರನಿಗೆ ಸಂಪೂರ್ಣ ವಾಗಿ ಸಮರ್ಪಿತವಾಗುವವು (೬೬, ೬೭, ೬೮). ಅದರಿಂದ ಸದ್ಗುರು ಲಾಭವಾಗುವದು (೬೯, ೭೦, ೭೧). ಹಾಗೂ ತನ್ನೊಳಗಿರುವ ಜೀವಾತ್ಮ, ಅಂತರಾತ್ಮ, ಪರಮಾತ್ಮರ ಅಂದರೆ ಕ್ಷರ, ಅಕ್ಷರ, ಪುರುಷೋತ್ತಮರ ನೆಲೆ ತಿಳಿಯುವದು (೭೨, ೭೩, ೭೪) ಅದರ ಪ್ರಭಾವದಿಂದ ದೇಹ ಪ್ರಾಣ ಮನಗಳೆಲ್ಲ ಶಾಂತದಶಾ ಪ್ರಾಪ್ತವಾಗುವವು. ಇದಕ್ಕೇ ನಿರ್ದೇಹ, ನಿರ್ಭಾವ ಮುಂತಾದುದಾಗಿ ಅಂದಿದ್ದಾರೆ (೭೫, ೭೬, ೭೭). ಈ ಶಾಂತಿಕಲೆಯ ಪರಿಣಾಮದಿಂದ ಸಮಸ್ತ ಬ್ರಹ್ಮಾಂಡದ ಆದಿಯೂ ಅಂತ್ಯವೂ ಆಶ್ರಯವೂ ಪರಮಾತ್ಮನೇ ಎಂಬ ಜ್ಞಾನೋದಯವಾಗು ವದು (೭೮, ೭೯, ೮೦). ಅದರಿಂದ ಪರಮಾತ್ಮನ ಆನಂದ ಕಲೆಯು ಅನುಭವವಾಗಲು (೮೧, ೮೨, ೮೩) ಕ್ರಿಯಾ, ಭಾವ, ವಿಚಾರಗಳು ನಡೆದಿದ್ದರೂ ನಡೆದಿಲ್ಲವೋ ಏನೋ ಅನ್ನುವಷ್ಟು ಅವು ಸಹಜ ಸ್ಥಿತಿಗೆ ಬರುವವು (೮೪, ೮೫, ೮೬). ಹೀಗೆ ನಿಷ್ಪತ್ತಿ ಲಾಭವಾದು ದರ ಫಲದಿಂದ ತನ್ನಲ್ಲಿಯೂ, ಚರಾಚರ ಸಕಲ ಭೂತಗಳಲ್ಲಿಯೂ ಹಾಗೂ ಸಮಸ್ತ ವಿಶ್ವದಲ್ಲಿಯೂ ಆಕಾಶದಂತೆ ಸರ್ವವ್ಯಾಪಿಯಾದ ಆತ್ಮನ ಅನುಭವವಾಗುವದು (೮೭ ಪಿಂಡಾಕಾಶ, ೮೮ ಬಿಂದ್ವಾಕಾಶ, ೮೯ ಮಹಾಕಾಶ.) ಇದರ ಅನಂತರವೇ ಕೃತಿ-ಭಾವ-ವಿಚಾರಗಳೆಲ್ಲ ಶಿವ ಮಯವಾಗಿ ಪ್ರಕಾಶಮಾನವಾಗುವವು (೯೦ ಕ್ರಿಯಾಪ್ರಕಾಶನ, ೯೧ ಭಾವಪ್ರಕಾಶನ, ೯೨ ಜ್ಞಾನಪ್ರಕಾಶನ). ನೂರೊಂದುಸ್ಥಲದ ಮಾರ್ಗ ವಿದು (ಹೀಗೆಂದು ನನ್ನ "ಕಲ್ಪನೆ").

ಇಂದು ನಾವು ಬೇಡುತ್ತಿರುವುದು "ಲಯ"ವಲ್ಲ, "ನಿರ್ವಾಣ" ವಲ್ಲ, "ಜ್ಞಾನಶೂನ್ಯಸ್ಥಲ" ವಲ್ಲ. ನಮಗೆ ಬೇಕಾದುದು ಯಾವುದೆಂದರೆ— ಕ್ರಿಯಾಪ್ರಕಾಶನ, " " ಭಾವಪ್ರಕಾಶನ, "ಜ್ಞಾನಪ್ರಕಾಶನ" ಇದು ತಾನೆ. ಓಂ].

# ಶರಣರನ್ನು ಸಂತೋಷಗೊಳಿಸುವದು.

(ಲೇ — ಶಿವಮೂರ್ತಿ.)

ಶರಣರನ್ನು ಸಂತೋಷಗೊಳಿಸುವದೇ ಆರನೆಯ ಆಚಾರ. ಶರಣರನ್ನು ಹೇಗೆ ಸಂತೋಷಗೊಳಿಸಬೇಕು ? ಮನೋವಾಕ್ಕಾಯ ಕರ್ಮಗಳಿಂದ ಸಂತೈಸಬೇಕು. ಮನಸ್ಸಿನಿಂದ ಸಂತೈಸುವದೆಂದರೆ ಶರಣರ ಬಗ್ಗೆ ಪ್ರೇಮ ಭಕ್ತಿ ವಿನಯಗಳನ್ನು ತಾಳುವದು. ಅವರ ಸಹವಾಸಕ್ಕೆ ಹಂಬಲಿಸುವದು. ವಾಕ್ಕಿನಿಂದ ಸಂತೈಸುವದೆಂದರೆ ಅವರ ಗೂಡ ಮೃದು ಮಧುರ ವಿನಯವುಳ್ಳ ಮಾತುಗಳನ್ನಾಡುವದು. ಅವರಿಗೆ ಬಿರುಸು ಮಾತುಗಳನ್ನಾಗಲಿ ಸರಸ ನುಡಿಗಳನ್ನಾಗಲಿ ನಿಂದೆ ಟೀಕೆಗಳನ್ನಾಗಲಿ ಆಡದಿರುವದು. ಕಾಯಕದಿಂದ ಅವರನ್ನು ಸಂತೋಷಗೊಳಿಸುವದೆಂದರೆ ಅವರಿಗೆ ಆದರ ಸತ್ಕಾರ ಸೇವೆಗಳನ್ನು ಆನಂದವುಕ್ಕಿ ಮಾಡುವದು. ಕರ್ಮದಿಂದ ಅವರನ್ನು ಸಂತಸಗೊಳಿಸುವದೆಂದರೆ ಅವರು ಆಡಿದ ನುಡಿಗಳಂತೆ ನಾವು ವರ್ತಿಸುವದಲ್ಲದೆ ಜನತೆಯಲ್ಲಿ ಅವರ ನುಡಿಗಳನ್ನು ಪ್ರಸಾರ ಮಾಡಿ ಅವರ ಎಲ್ಲೆಯನ್ನು ಮೇಲಕ್ಕೇರಿಸುವದು.

ಶರಣರು ಪರಸ್ಪರರೊಡನೆ ಪ್ರೇಮ ಭಕ್ತಿ ವಿನಯಗಳಿಂದಲೇ ನಡೆದುಕೊಂಡಿರುವರೇ ವಿನಾ, ಅಹಂಕಾರ ಸೊಕ್ಕು ಉದ್ಧಟತನಗಳಿಂದ ವರ್ತಿಸಿಲ್ಲ. ಪೂಜ್ಯರಾದವರ ಮುಂದೆ ಯಾರು ತಾವು ಹೆಚ್ಚಿನವರೆಂದು ಜಂಭ ಕೊಚ್ಚಿ ಕೊಳ್ಳುವರೋ ಅವರೆಂದಿಗೂ ದೊಡ್ಡವರಾಗಲಾರರು. ದೊಡ್ಡಸ್ತನವು ಕರ್ತೃತ್ವ ಶಕ್ತಿಯಿಂದಲೂ ವಿನಯ ಭಕ್ತಿಗಳಿಂದಲೂ ಬರುತ್ತದಲ್ಲದೆ ವೈಸೊಕ್ಕಿನಿಂದಾಗಲಿ ಆಲಸ್ಯತನದಿಂದಾಗಲಿ ಬರಲಾರದು. ಶರಣರು ಕರ್ತೃತ್ವ ಶಾಲಿಗಳು ಮತ್ತು ವಿನಯಶೀಲರು. ಅಂತೆಯೇ ದೊಡ್ಡವರೆನಿಸಿ ಬಾಳಿದರು. ಈ ವಿಷಯದಲ್ಲಿ ಬಸವಣ್ಣನವರು ಅಪ್ಪಣೆಕೊಡಿಸುವದೇನಂದರೆ “ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಾರಿಲ್ಲ. ನಿಮ್ಮ ಪಾದ ಸಾಕ್ಷಿ. ಎನ್ನ ಮನ ಸಾಕ್ಷಿ ಕೂಡಲಸಂಗಮದೇವಾ ಎನಗಿದೇ ದಿಬ್ಯ” ಮತ್ತು “ಮಾವಿನಕಾಯಿಯೊಳಗೊಂದು ಎಕ್ಕೆಯಕಾಯಿ ನಾನಯ್ಯಾ. ಆನು ಭಕ್ತನೆಂಬೆನೆ ಶರ

ಣರ ಮುಂದೆ ನಾಚಿಕೆಯಿಲ್ಲದೆ? ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಯ್ಯಾ?''. ಮತ್ತು "ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೇ? ಸಂಗನ ಶರಣರಿಗೆ ಆನು ಸರಿಯೇ ಹೇಳಾ ಕೂಡಲಸಂಗಮದೇವಾ." ಈ ವಚನಗಳಿಂದ ಬಸವಣ್ಣನವರಲ್ಲಿ ಶರಣರ ಬಗ್ಗೆ ಎಷ್ಟು ಪ್ರೇಮ ಭಕ್ತಿ ವಿನಯಗಳಿದ್ದವೆಂಬುದು ಸ್ಪಷ್ಟವಾಗುತ್ತಿದೆ. ಇಂಥ ವಿನಯಶೀಲನಾದ ಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂದು ಶರಣರೆಲ್ಲ ಆತನನ್ನು ಹೊಗಳಿ ಎತ್ತಿ ಹಿಡಿದರು. ಆದರೆ ಅದೇ ಬಸವಣ್ಣನು ನಾನು ಮಂತ್ರಿ, ನಾನು ಭಕ್ತ, ನಾನು ಜ್ಞಾನಿ, ನನ್ನ ಸಮಾನರಾರು? ಎಂದು ತನ್ನ ಬೆನ್ನು ತಾನು ಚಪ್ಪರಿಸಿಕೊಂಡು ನಡೆದಿದ್ದರೆ ಅವನೆಷ್ಟು ಮಾತ್ರವೂ ಬೆಳಕಿಗೆ ಬರುತ್ತಿದ್ದಿಲ್ಲ ಆದುದರಿಂದ ಶರಣರು ಶರಣರೊಡನೆ ಭಕ್ತಿ ವಿನಯಗಳಿಂದಲೇ ವರ್ತಿಸಬೇಕು. ಅಂದರೆ ಅವರು ಸಂತುಷ್ಟರಾಗುವರು.

ಶರಣರ ಸಹವಾಸವು ದೊಡ್ಡದು. ಅವರ ಸಹವಾಸದಿಂದ ನಮ್ಮ ಮನಸ್ಸಿನ ಹೊಲಸು ತೊಳೆದು ನಾವು ನಿರ್ಮಲಾತ್ಮರಾಗುತ್ತೇವೆ. ಯೋಗ್ಯರಾದ ಜನರು ತಮ್ಮ ಸಹವಾಸಕ್ಕೆ ಸೇರಿದರೆ ಶರಣರಿಗೆ ಸಂತೋಷವಾಗುತ್ತದೆ. ಬಸವಣ್ಣನವರು ಅಪ್ಪಣೆಕೊಡಿಸುವದೇನೆಂದರೆ "ಅಯ್ಯಾ ಶರಣರ ಸಂಗವೆನಗೆ ಪರಮ ಸುಖವಯ್ಯಾ. ಶರಣರ ಅಗಲಿಕೆಯೆನ್ನ ಪ್ರಾಣವಿಯೋಗವಯ್ಯಾ ಕೂಡಲಸಂಗಮದೇವಾ". ಮತ್ತು ಸಾರಸಜ್ಜನರ ಸಂಗ ಲೇಸು ಕಂಡಯ್ಯಾ. ದುರುಳ ದುರ್ಜನರ ಸಂಗವದು ಭಂಗವಯ್ಯಾ. ಸಂಗವೆರಡುಂಟು ಒಂದು ಬಿಡುವದು. ಮತ್ತೊಂದು ಹಿಡಿವುದು. ಹಿಡಿ ನಮ್ಮ ಮಂಗಳ ಮೂರ್ತಿ ಕೂಡಲಸಂಗನ ಶರಣರ ಸಂಗವ". ಶರಣರು ಶರಣರೊಡನೆ ಸಹವಾಸ ಬೆಳಿಸಿ ಸಂತುಷ್ಟರಾಗಿ ಪರಸ್ಪರ ಸ್ನೇಹ ಸಹಕಾರಗಳಿಂದ ಸಂಘಟನೆಯನ್ನುಂಟುಮಾಡಿಕೊಂಡು ಜಗಹಿತಾರ್ಥದ ತತ್ವಗಳನ್ನು ಚರ್ಚಿಸಿ ಪ್ರಕಟಿಸಿದರು. ಪರಸ್ಪರ ಸಹವಾಸ ಸ್ನೇಹಗಳಿಂದ ಸಂತುಷ್ಟಿಯು ಬೆಳೆಯುವದಲ್ಲದೆ ಮಹತ್ವದ ಕಾರ್ಯಗಳೂ ಜರಗುವವೆಂಬುದು ಶಿವಶರಣರ ಜೀವನದ ಮೇಲಿಂದ ನಮಗೆ ತೋರಿಬರುತ್ತಿದೆ.

ಶರಣರು ಪರಸ್ಪರ ಬೆಲ್ಲದಂಥ ಮಾತುಗಳನ್ನಾಡುವರು. ಅಂತಹ ಮೆಲು ಮಾತು ಚೆಲು ನುಡಿಗಳೇ ಶರಣರಿಗೆ ಮೆಚ್ಚುಗೆಗಳು. ಅವರಿಗೆ 'ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದೊಡೆ ನರಕ'. ಮೃದು ವಚನಂಗಳೇ ಸಕಲ ಜಪಂಗಳು. ಮೃದು ವಚನಂಗಳೇ ಸಕಲ ತಪಂಗಳು. ಕೈಯಿಂದ ಕೆಲಸ ಮಾಡಿ ಕೊಡುವದಾಗದಿದ್ದರೂ ಬಾಯಿಂದ ನಾಲ್ಕು ಬೆಲ್ಲದಂಥ ಮಾತುಗಳನ್ನಾದರೂ ಆಡಬಾರದೇ? ಎಂದು ಬಸವಣ್ಣನವರು ಹೀಗೆ ಉಪದೇಶಿಸಿದ್ದಾರೆ. "ಬನ್ನಿ, ಬನ್ನಿರಿ ಹದುಳವಿದ್ದಿರಿ ಎಂದರೆ ನಿಮ್ಮ ಸಿರಿ ಹಾರಿ ಹೋಹುದೇ? ಕುಳ್ಳಿರಿ ಎಂದರೆ ನೆಲ ಉರುಳಿ ಹೋಹುದೇ? ಒಡನೆ ನುಡಿದರೆ ಶಿರ ಹೊಟ್ಟೆ ಒಡೆಯುವುದೇ? ಕೊಡಲಿಲ್ಲದಿರ್ದಡೆ ಗುಣವಿಲ್ಲದಿರ್ದರೆ ಮೂಗ ಕೊಯ್ಯದೆ ಮಾಣ್ಬನೇ ನಮ್ಮ ಕೂಡಲಸಂಗಮದೇವಾ?" ಎಂದು ಮೃದು ಮಾತುಗಳ ಅವಶ್ಯಕತೆಯನ್ನು ಹೇಳಿದ್ದಾರೆ. ಶರಣರನ್ನು ಸಂತೋಷಗೊಳಿಸಲು ಮೃದು ಮಧುರವಾದ ಮಾತುಗಳನ್ನೇ ಆಡಬೇಕು.

ಪ್ರೀತಿಯಿಂದ ಪ್ರೀತಿಯು ಬೆಳೆಯುತ್ತದೆ. ಶರಣರು ಒಬ್ಬರಿಗೊಬ್ಬರು ಪ್ರೀತಿಯಿಂದ ನಡಕೊಂಡು ತಮ್ಮ ಸಂತೋಷವನ್ನು ಬೆಳಸಿಕೊಂಡರು. "ದದಾತಿ ಪ್ರತಿಗೃಹ್ಣಾತಿ ಗುಹ್ಯಮಾಖ್ಯಾತಿ ಪೃಚ್ಛತಿ। ಭುಂಕ್ತೇ ಭೋಜಯತೇ ಚೈವ ಷಡ್ವಿಧಂ ಪ್ರೀತಿ ಲಕ್ಷಣಂ॥" ಎಂಬ ನೀತಿವಾಕ್ಯವುಂಟು. ಅಂದರೆ ಪರಸ್ಪರರು ಕೊಡಬೇಕು—ಕೊಳಬೇಕು; ಗುಟ್ಟಿನ ಮಾತು ಹೇಳಬೇಕು—ಕೇಳಬೇಕು, ಉಣಬೇಕು—ಉಣಿಸಬೇಕು. ಈ ಆರು ಪ್ರಕಾರಗಳು ಪ್ರೀತಿಯ ಲಕ್ಷಣವೆಂದು ಹೇಳಿದ್ದಾರೆ. ಶರಣರು ಈ ಎಲ್ಲ ಪ್ರಕಾರಗಳಿಂದಲೂ ತಮ್ಮೊಳಗೆ ಮೈತ್ರಿಯನ್ನು ಬೆಳಸಿಕೊಂಡು ಸಂತುಷ್ಟರಾಗಿ ಬಾಳಿದರು.

ಶರಣರಿಗೆ ನಾವು ಮೈಸೊಕ್ಕಿನಿಂದ ಬಿರುನುಡಿಗಳನ್ನಾಗಲಿ ಕುಚೋದ್ಯವನ್ನಾಗಲಿ ಆಡಿದರೆ ಅವರು ನೊಂದುಕೊಳ್ಳುವರು. ಅವರ ನೋವೇ ನಮಗೆ ಮುಳುವಾಗುತ್ತದೆ. ಈ ವಿಷಯದಲ್ಲಿ ಬಸವಣ್ಣನವರು ಅಪ್ಪಣೆಕೊಡಿಸಿರುವದೇನಂದರೆ— "ಹಾವಿನ ಹೆಡೆಯ ಕೊಂಡು ಕೆನ್ನೆಯ ತುರಿಸಿಕೊಂಬಂತೆ, ಉರಿಯ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕು ಬಿಡಿಸುವಂತೆ, ಹುಲಿಯಮೀಸೆಯ ಹಿಡಿದು ಉಯ್ಯಾಲೆಯನಾಡುವಂತೆ ಕೂಡಲಸಂಗನ ಶರಣರೊಡನೆ ಮರೆದು ಸರಸವಾಡಿದರೆ ಸುಣ್ಣದಕಲ್ಲು ಮಡಲಲ್ಲಿ ಕಟ್ಟಿಕೊಂಡು ಮಡುವಿನಲ್ಲಿ ಬಿದ್ದಂತೆ" ಶರಣರು ಬೆಂಕಿ

ಯಂಥವರು. ಅವರೊಡನೆ ಹುಡುಗಾಟ ತರವಲ್ಲ. ಅವರು ಕೋಪಿಸಿದರೆ ಶಪಿಸಲೂ ಬಲ್ಲರು. ಸಂತುಷ್ಟರಾದರೆ ಅನುಗ್ರಹಿಸಲೂ ಬಲ್ಲರು. ಆದುದರಿಂದ ಅವರೊಡನೆ ವಿನಯದಿಂದ ವರ್ತಿಸಿ ಅವರ ಅನುಗ್ರಹಕ್ಕೆ ಪಾತ್ರರಾಗುವದೇ ವಿಹಿತ.

ಶರಣರ ಮನೆಗೆ ಶರಣರು ಬಂದರೆ ಅವರ ಕುಲ ಉದ್ಯೋಗಗಳನ್ನೆಣಿಸದೆ ಪ್ರೇಮಪೂರ್ವಕವಾಗಿ ಅವರಿಗೆ ಸ್ವಾಗತವಿತ್ತು ಆದರದಿಂದ ಅವರಿಗೆ ಮಿಷ್ಟಾನ್ನಭೋಜನ ಧನವಸ್ತ್ರಗಳಿಂದ ಸಂತೈಸುತ್ತಿದ್ದರು. ಶಿವಶರಣರಲ್ಲಿ ಶಿವನು ಜಾಗ್ರತವಾಗಿರುವದರಿಂದ ಶರಣರ ತೃಪ್ತಿಯೇ ಶಿವನ ತೃಪ್ತಿಯೆಂದು ಸತ್ಕರಿಸುತ್ತಿದ್ದರು. "ಶಿವಯೋಗಿನಿ ಸಂತೃಪ್ತೇ ತೃಪ್ತೇಭವತಿ ಶಂಕರಃ । ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಂ"॥ ಶಿವಯೋಗಿಯು ತೃಪ್ತನಾದರೆ ಶಂಕರನು ತೃಪ್ತನಾಗುವನು. ಶಂಕರನು ತುಷ್ಟನಾದರೆ ಚರಾಚರ ವಿಶ್ವವೇ ಸಂತುಷ್ಟಿಹೊಂದುವದು. ಶರಣರು ಮನೆಗೆ ಬರಬೇಕೆಂದು ಬಸವಣ್ಣನವರು ಹರುಷವುಕ್ಕಿ ನುಡಿಯುವದೇನಂದರೆ "ಎಡದ ಕೈಯಲಿ ಹಾಲು ಬಟ್ಟಲು ಬಲದ ಕೈಯ್ಯಲ್ಲಿ ಓಜುಗಟ್ಟಿಗೆ ಹಿಡಿದು ಓಲಯಿಸುವೆನು. ಆವಾಗ ಬಂದಿಹರೋ ನನ್ನ ಶರಣರು." ಇದಲ್ಲದೆ "ಸೂರ್ಯನ ಉದಯ ತಾವರೆಗೆ ಜೀವಾಳ. ಚಂದ್ರಮನ ಉದಯ ನೈದಿಲೆಗೆ ಜೀವಾಳ. ಒಲಿದ ಠಾವಿನಲ್ಲಿ ನೋಟವೇ ಜೀವಾಳ. ಕೂಡಲಸಂಗನ ಶರಣರ ಬರವೆನಗೆ ಪ್ರಾಣ ಜೀವಾಳವಯ್ಯಾ" ಎಂದು ಬಸವಣ್ಣನವರು ಹಾಡಿಕೊಂಡಿರುವರು. ಇದಲ್ಲದೆ "ಹೊಲಬುಗೆಟ್ಟ ಶಿಶು ತನ್ನ ತಾಯನರಸುವಂತೆ, ಬಟ್ಟೆತಪ್ಪಿದ ಕರು ತನ್ನ ಹಿಂಡನರಸುವಂತೆ, ಬಯಸುತ್ತಿರ್ದೆನಯ್ಯಾ ನಿಮ್ಮ ಶರಣರ ಬರವನು. ದಿನಕರನುದಯಕ್ಕೆ ಕಮಲವಿಕಸಿತವಾದಂತೆ ಎನಗೆ ನಿಮ್ಮ ಶರಣರ ಬರವು ಕೂಡಲಸಂಗಮದೇವಾ" ಎಂದು ಶರಣರಾಗಮನಕ್ಕೆ ಹಂಬಲಿಸಿದ್ದಾರೆ. ಇದೂ ಅಲ್ಲದೆ "ಇಂದೆನ್ನಮನೆಗೆ ಪ್ರಮಥರು ಬಂದರೆ ಗುಡಿ ತೋರಣವ ಕಟ್ಟಿ ಷಡುಸಮ್ಮಾರ್ಜನೆಯ ಮಾಡಿ ರಂಗವಾಲೆಯನಿಕ್ಕಿ ಉಘೆ, ಚಾಂಗು, ಭಲಾ ಎಂಬೆ" ಎಂದು ತಮ್ಮ ಆನಂದೋದ್ಗಾರಗಳನ್ನು ವ್ಯಕ್ತಪಡಿಸಿದ್ದಾರೆ. ಇದೇ ರೀತಿಯಾಗಿ ನಾವಾದರೂ ಶರಣರನ್ನು ಸತ್ಕರಿಸಿ ಸಂತುಷ್ಟರನ್ನಾಗಿ ಮಾಡಬೇಕು.

ಶರಣರ ಸೇವೆಗೆ ಬೇಕಾದ ರೂಪವನ್ನಾದರೂ ನಾನು ತೊಟ್ಟೇನೆಂದು ದೇವರ ದಾಸಿಮಯ್ಯನವರು ಒಳ್ಳೇ ಅಭಿಮಾನದಿಂದ ಹೇಳಿ

ಕೊಂಡಿದ್ದಾರೆ. "ಎತ್ತಪ್ಪೆ ಶರಣಂಗೆ ತೊತ್ತಪ್ಪೆ ಶರಣಂಗೆ ಭೃತ್ಯನಾಗಿ ಸದ್ಭಕ್ತರ ಮನೆಯ ಬಾಗಿಲ ಕಾಯ್ದಿಪ್ಪ ಸೊಣಗನಪ್ಪೆ, ಕರ್ತಾರ ನಿನಗೆ ಕರವೆತ್ತಿ ಪೊಡಮಡುವ ಭಕ್ತರ ಮನೆಯ ಹಿತ್ತಲಬೇಲಿಯಾಗಿಪ್ಪೆನೈ ರಾಮನಾಥಾ."

ಶ್ರೀಮದಥಣಿ ಶಿವಯೋಗಿಗಳಿಗೆ ಶರಣರ ಸೇವೆಯ ಹಂಬಲ ಬಹಳ. ಕನಸು ಮನಸಿನಲ್ಲಿಯೂ ಸಹ ಅವರು ಶರಣರ ಸೇವೆ ಮಾಡಿ ಸಂತುಷ್ಟಿಗೊಳಿಸುತ್ತಿದ್ದರು. ಅವರು ಸೇವೆಯ ವಿಷಯವಾಗಿ ಹಾಡಿಕೊಂಡಿರುವುವೇನಂದರೆ–

ಮಡಿವಾಳ ತಂದೆಗಳ ಬಟ್ಟೆಗಳ ನಾನೊಗೆವೆ
ಹಡಪದಪ್ಪಣ್ಣಗಳ ಕ್ಷೌರವನು ನಾ ಗೈವೆ
ಘೋರ ಕಕ್ಕಯ್ಯಂಗೆ ತೊಗಲ ಹದಮಾಡಿಡುವೆ
ವೀರ ಹರಳೇಶಂಗೆ ಜೋಡನಾ ಮಾಡಿಡುವೆ
ಮಾರಯ್ಯ ತಂದೆಗಳ ಕಟ್ಟಿಗೆಯ ನಾ ಹೊರುವೆ
ಧೀರ ಕೇತಯ್ಯಗಳ ಬುಟ್ಟಿಯನು ನಾ ಮಾಳ್ಪೆ
ನುಲಿಯ ಚಂದಯ್ಯಗಳ ಹಗ್ಗಕಣ್ಣಿಯ ಗೈವೆ
ಸಲೆಮಾದರಾ ಚೆನ್ನಗಂಬಲಿಯ ಮಾಡಿಡುವೆ
ಶಿವದಾಸಿಮಯ್ಯಗಳ ಬಟ್ಟೆಗಳನಾ ನೆಯ್ವೆ
ತವೆ ಶಂಕರಯ್ಯಗಳ ಕಪನಿಯನು ನಾ ಹೊಲಿವೆ
ಅಮುಗಿ ಸಿದ್ಧೇಶ್ವರಗೆ ಕಂಬಳಿಯ ನಾ ನೆಯ್ವೆ
ನಮಿಸಿ ಮರುಳೇಶಂಗೆ ಪಾಕಮಂ ನಾ ಗೈವೆ
ಕುಂಬಾರ ಗುಂಡಯ್ಯಗಾಂ ಮಡಿಕೆಯಂ ಗೈವೆ
ಸಂಭ್ರಮದಿ ಪ್ರಭುವಿಂಗೆ ಮದ್ದಳೆಯ ಬಾರಿಸುವೆ
ಆವಾವ ಕಾಯಕವ ಮಾಡಿದೊಡು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ.

ಇದಲ್ಲದೆ ಶಿವಯೋಗಿಗಳು ಇನ್ನೂ ಅನೇಕ ರೀತಿಯಾಗಿ ಶರಣರ ಸೇವೆ ಮಾಡೇನೆಂಬ ಹಂಬಲವನ್ನು ಈ ರೀತಿಯಾಗಿ ತೋರಿಸಿದ್ದಾರೆ.-

ಮುದದಿ ಶರಣರ ಪಾದಪದ್ಮವನೊತ್ತುವೆನು
ನದಿಯಲ್ಲಿ ಮಿಂದವರ ಬಟ್ಟೆಗಳ ತೊಳೆಯುವೆನು

ಸರಸದಿಂ ಲಿಂಗಾರ್ಚನೆಗೆ ಪತ್ರಿಪುಷ್ಪಗಳ
ವಿರುಪಗಂಧವ ಧೂಪ ದೀಪ ನೈವೇದ್ಯಗಳ
ನೆರೆತೀವಿತಂದು ನಾ ಮುಂದಿಳುಪೆ ಬಸವೇಶ
ಮೆರೆವ ಗದ್ದುಗೆ ಹಾಕಿ ಕುಳ್ಳಿರಿಪೆ ಬಸವೇಶ.
ಅವರ ತಂಬಿಗೆ ತಾಲಿ ತಾಬಂಡಿಗಳ ಬೆಳಗಿ
ತವಕದಿಂ ತಂದಿಡುವೆ ಪ್ರೇಮದಿಂ ನಾ ತೊಳಗಿ
ಅವರ ಮನೆಯಂಗಣದ ಕಸವುಡುಗಿ ಸಾರಿಸುವೆ
ಅವರ ಹಾಸಿಗೆ ಹೊದಿಕೆಗಳ ನಾನು ಸಾವರಿಪೆ
ಅವರು ಮೆಟ್ಟುವ ಪಾದುಕೆಗಳೊರಸಿ ನಾನಿಡುವೆ
ಅವರ ಮನೆ ಬಾಗಿಲವ ಕಾಯ್ದು ನಾಂ ಜೀವಿಸುವೆ.

ಶರಣರು ಮಹಾನುಭಾವಿಗಳು, ದಿವ್ಯಜ್ಞಾನಿಗಳು, ತತ್ವವೇತ್ತರು, ನುಡಿದಂತೆ ನಡೆದು ಜಗತ್ತಿಗೆ ಮಾರ್ಗ ತೋರಿಸಿಕೊಟ್ಟ ಮಹನೀಯರು. ನಾವು ಅವರ ವಚನಗಳನ್ನು ಚೆನ್ನಾಗಿ ಅರಿತುಕೊಂಡು ಅದರಂತೆ ಆಚರಿಸಿದರೆ ಶರಣರು ಸಂತುಷ್ಟರಾಗುವರು. ಶರಣರ ವಚನಗಳು ಸಜೀವವಾಗಿವೆ. ಅವುಗಳಲ್ಲಿ ಮನುಷ್ಯನ ಮನೋವಿಕಾರಗಳನ್ನು ಮಾರ್ಪಡಿಸುವ ಸಾಮರ್ಥ್ಯವುಂಟು. ಅವುಗಳ ವ್ಯಾಸಂಗಕ್ಕೆ ನಾವು ತೊಡಗಿದರೆ ನಮಗೆ ಗೊತ್ತಾಗದೆ ನಮ್ಮ ಮನಪ್ರವೃತ್ತಿಯು ಸುಧಾರಿಸುತ್ತ ಹೋಗುವದು. ಈಗಿನ ಯಾಂತ್ರಿಕ ಯುಗದಲ್ಲಿ ಯಾರ ಮನಸ್ಸಿಗೂ ಸುಖಸಮಾಧಾನವಿಲ್ಲ. ಯುದ್ಧ, ಬಡತನ, ಬರಗಾಲ, ರೋಗಾದಿಗಳಿಂದ ಜಗತ್ತು ತಲ್ಲಣಗೊಳ್ಳುತ್ತಿರುವದು. ಇಂಥ ದುರ್ಧರ ಪ್ರಸಂಗದಲ್ಲಿ ನಮಗೇನಾದರೂ ಶಾಂತಿ ದೊರೆಯುತ್ತಿದ್ದರೆ ಅದು ವಚನಗಳಿಂದಲೇ ಎಂದು ಧಾರಾಳವಾಗಿ ಹೇಳಬಹುದು. ಅಂಥ ದಿವ್ಯವಚನಗಳ ಸವಿಯನ್ನು ನಾವು ಉಣ್ಣುವದಲ್ಲದೆ ಅನ್ಯ ಜನತೆಗೆ ಅದನ್ನು ಒದಗಿಸಿಕೊಟ್ಟರೆ ನಮ್ಮ ಕಲ್ಯಾಣವಾಗುವದಲ್ಲದೆ ಶಿವಶರಣರಿಗೆ ಸಂತೋಷವೂ ಆಗುವದು. ಶರಣರು ವಚನಗಳನ್ನು ಬರೆದಿಟ್ಟದ್ದು ತಮ್ಮ ಮೇಲ್ಮೆಯನ್ನು ತೋರ್ಪಡಿಸಲಿಕ್ಕಲ್ಲ. ಜನರನ್ನುದ್ಧಾರ ಮಾಡುವದಕ್ಕಾಗಿ. ಅವುಗಳಿಂದ ಜನರು ನಿಜವಾಗಿ ಉದ್ಧಾರವಾದರೆ ಶರಣರಿಗೆ ಸಂತೋಷವಾಗದಿರುವದೇ ?

# ಕ್ರಿಯೆಯಿಂದ ಆತ್ಮವಿಕಾಸವು.

ಮನುಷ್ಯನು ಯಾವಾಗಲೂ ಅನೇಕ ತೆರದ ಒಲವುಗಳಿಗೆ ಒಳಪಟ್ಟು ಕಾರ್ಯ ಮಾಡುವದುಂಟು. ಆದರೆ ಅವನು ಹೀಗೆ ಒಳಗಾಗದೆ ಕೆಲವೊಂದು ನಿಶ್ಚಿತ ಧ್ಯೇಯವನ್ನಿಟ್ಟುಕೊಂಡು ಶಾಂತಚಿತ್ತನಾಗಿ ಸಮಾಧಾನದಿಂದ ಸಮತೋಲ ಬುದ್ಧಿಯಿಂದ ಕಾರ್ಯ ಮಾಡಬೇಕು. ಇದಕ್ಕೆ ಬಲವಾದ ಆತ್ಮಸಂಯಮನವು ಬೇಕು. ಹೀಗೆ ಅವನು ತನ್ನ ಕಾರ್ಯಗಳನ್ನು ಮಾಡಿದ್ದಾದರೆ ಅವನು ಈ ಪ್ರಪಂಚದಲ್ಲಿ ಯಶಸ್ಸನ್ನು ಸಂಪಾದಿಸುವದು ನಿಶ್ಚಯವು.

ಮನುಷ್ಯನು ಯಾವಾಗಲೂ ವಿಕಾರವಶನಾಗಿ ಕಾರ್ಯ ಮಾಡುವದುಂಟು. ಅವನಲ್ಲಿ ಭಯಗಳು ತುಂಬಿರುತ್ತವೆ. ಸಂಶಯಗಳಿರುತ್ತವೆ. ಅವುಗಳಿಗೆ ಅವನು ಒಳಗಾಗಿ ನಡೆದಲ್ಲಿ ಅವನ ವರ್ಚಸ್ಸು ಜನರಲ್ಲಿ ಏನೂ ಉಳಿಯಲಾರದು. ಅವನಲ್ಲಿ ಆತ್ಮಸಂಯಮನವು ಇಲ್ಲದ್ದರ ಪರಿಣಾಮವು ಇದಾಗಿದೆ.

ಕೆಲವರು ಐಷಆರಾಮಿಯಲ್ಲಿ, ಕೆಲವರು ಸೋಮಾರಿತನದಲ್ಲಿ ಕೆಲವರು ಆಟನೋಟಗಳಲ್ಲಿ, ಕೆಲವರು ಸ್ತ್ರೀ ಲಂಪಟತನದಲ್ಲಿ, ಕೆಲವರು ವ್ಯಸನಗಳಲ್ಲಿ, ಕೆಲವರು ಇನ್ನೂ ಅನೇಕ ತರದ ವ್ಯಾಮೋಹಗಳಲ್ಲಿ ಮುಳುಗಿರುತ್ತಾರೆ. ಕೆಲವರು ಅಲ್ಪ ಕಾರಣಗಳಿಗೋಸ್ಕರ ಕ್ಷಣಕ್ಷಣಕ್ಕೆ ಸಿಟ್ಟಿಗೇಳುತ್ತಾರೆ. ಇಲ್ಲವೆ ಅಂಜಿಕೆಯಿಂದ ಕೆಲಸದಲ್ಲಿ ಹಿಂಜರಿಯುತ್ತಾರೆ. ಕೆಲವರು ತಮ್ಮಿಂದೇನೂ ಆಗದೆಂದು ಹತಾಶರಾಗಿರುತ್ತಾರೆ. ಬೇರೆ ಕೆಲವರು ಮಹತ್ವಾಕಾಂಕ್ಷಿಗಳಾಗಿ ತಮಗೆ ಅಸಾಧ್ಯವಾದ ಕೆಲಸಗಳಲ್ಲಿ ತೊಡಗಿರುತ್ತಾರೆ. ಇಂಥವರಿಂದ ಕಾರ್ಯಗಳಾಗಲಾವು. ಆತ್ಮಸಂಯಮನವಿಲ್ಲದ್ದೇ ಈ ಸ್ಥಿತಿಗೆ ಕಾರಣವು.

ಆತ್ಮಸಂಯಮನವಿಲ್ಲದ ಮೂಲಕ ರಾಷ್ಟ್ರಗಳಲ್ಲಿ ದಂಗೆಗಳೂ, ಅಂತಸ್ಥಕಲಹಗಳೂ, ಕ್ರಾಂತಿಗಳೂ ಆಗಿಂದಾಗ್ಗೆ ಉಂಟಾಗುತ್ತವೆ. ಅವುಗಳಲ್ಲಿಯು ಜನರು ವಿಕಾರವಶರಾಗಿ ಆಚರಿಸುತ್ತಿದ್ದರ ಪರಿಣಾಮವು ಇದಾ

ಗಿದೆ. ಬ್ರಿಟಿಶ ಜನಾಂಗದಲ್ಲಿ ಈ ರೀತಿಯ ವರ್ತನೆಯು ಬಹು ಕಡಿಮೆ ಇರುತ್ತದೆ. ಅವರಲ್ಲಿ ಕ್ರಾಂತಿಗಳಿಲ್ಲ. ರಾಜಕೀಯ ಪಕ್ಷಗಳ ಹೋರಾಟಗಳಿಲ್ಲ. ರಾಜ್ಯದಲ್ಲಿ ಅವ್ಯವಸ್ಥೆ ಇಲ್ಲ. ಅವರು ಗುಂಪುಗೂಡಿದಲ್ಲಿ ಕಾದಾಟಗಳು ಕಂಡುಬರುವದಿಲ್ಲ. ಅಲ್ಲಿಯ ಎಲ್ಲ ವರ್ಗದವರಲ್ಲಿ ತಾಳ್ಮೆ, ಸಹನಶೀಲತೆ, ಪರಸ್ಪರ ಸಹಕಾರ, ಸಹಾನುಭೂತಿ ಇವುಗಳು ಕಂಡು ಬರುತ್ತವೆ. ಸಾಮಾನ್ಯ ಜನರಲ್ಲಿ ಸಹ ಇದು ತೋರಿಬರುತ್ತದೆ. ಆತ್ಮಸಂಯಮನವಿದ್ದದ್ದರ ಪರಿಣಾಮವು ಇದಾಗಿರುತ್ತದೆ. ಆದ್ದರಿಂದಲೇ ಅವರ ಸಾಮ್ರಾಜ್ಯವು ಇಡೀ ಪೃಥ್ವಿಯಲ್ಲೆಲ್ಲ ವ್ಯಾಪಿಸಿರುತ್ತದೆ. ಅವರಲ್ಲಿಯಷ್ಟು ಸಮತೋಲ ವರ್ತನೆಯು ಫ್ರಾನ್ಸ, ಅಮೇರಿಕ ಇಂಥ ಸುಧಾರಿಸಿದ ರಾಷ್ಟ್ರಗಳಲ್ಲಿ ಸಹ ತೋರುವದಿಲ್ಲ. ಈ ರಾಜ್ಯಗಳಲ್ಲಿ ಯಾವಾಗಲೂ ರಾಜಕೀಯ ಕ್ರಾಂತಿಗಳು, ಹೊಡೆದಾಟಗಳು, ದರೋಡೆಖೋರರ ಚಲ್ಲಾಟಗಳು ಇದ್ದೇ ಇರುತ್ತವೆ.

ಆತ್ಮಸಂಯಮನವೆಂದರೆ ಬುದ್ಧಿಯ ಗತಿಯನ್ನು ಮಂದ ಮಾಡುವದಲ್ಲ. ಆದರೆ ಅದರ ಶಕ್ತಿಯನ್ನು ಬಲಿಸುವದಿರುತ್ತದೆ. ಈ ಬಗೆಯಾಗಿ ಆತ್ಮಸಂಯಮನವಿದ್ದರೆ ಬುದ್ಧಿಯಲ್ಲಿ ಅಂದರೆ ಮಿದುಳಿನಲ್ಲಿ ಸುವ್ಯವಸ್ಥೆ ಇರುತ್ತದೆ. ಅದರಲ್ಲಿ ಗೊಂದಲಗಳೇಳುವದಿಲ್ಲ. ಅನೇಕರು ಧ್ಯಾನಾಸಕ್ತರಾದಲ್ಲಿ ಆತ್ಮಸಂಯಮನ ಶಕ್ತಿಯು ಹೆಚ್ಚುವದೆಂದು ತಿಳಿಯುತ್ತಾರೆ. ಇದರಂತೆಯೇ ಓದುಗೂಳಿಗಳು ಬರೇ ಪುಸ್ತಕಗಳನ್ನು ಓದುದರಿಂದ ಶಕ್ತಿಯು ಬಲಪಡುವದೆಂದು ತಿಳಿದಿರುತ್ತಾರೆ. ಇದು ತಪ್ಪಾದದ್ದು. ಮಿದುಳನ್ನು ಬರೀ ಧ್ಯಾನದಲ್ಲಿ ತೊಡಗಿಸುವದರಿಂದ ಅಥವಾ ವಿಷಯಗ್ರಹಣ ಮಾಡುವದಕ್ಕೆ ಮಾತ್ರ ಅದನ್ನು ಹಚ್ಚುವದರಿಂದ ಅದರ ಶಕ್ತಿಯು ಬೆಳೆಯಲಾರದು. ಯಾಕಂದರೆ ಉದ್ದೇಶ ಅಥವಾ ಧ್ಯೇಯಗಳು ಅದಕ್ಕಿರುವದಿಲ್ಲ. ಇವಿಲ್ಲದಿದ್ದರೆ ಅದರ ವಿಕಾಸವು ಉಂಟಾಗಲಾರದು.

ಅನೇಕರು ತಾವು ಅನುಷ್ಠಾನ ಮಾಡುವೆವೆಂದು ನಿರ್ಜನ ಪ್ರದೇಶಗಳಲ್ಲಿ ಹೋಗಿ ಕೇವಲ ಧ್ಯಾನಾಸಕ್ತರಾಗಿ ಕಾಲಕಳೆಯುವದುಂಟು. ಇವರು ಅಲ್ಲಿ ಜನರ ಸಂಬಂಧವನ್ನಿಟ್ಟುಕೊಳ್ಳದೆ ಏಕಾಂತವಾಸಿಗಳಾಗಿರುತ್ತಾರೆ. ಆದರೆ ಬಸವಾದಿ ಪ್ರಮಥರು ಮತ್ತು ಶಿವಶರಣರು ಈ ಪದ್ಧತಿಯನ್ನು ತಿರಸ್ಕರಿಸಿದ್ದಾರೆ. ಅವರು ಮನುಷ್ಯನು ಕೆಲವೊಂದು

ಉದ್ಯೋಗ ಅಥವಾ ಕಾಯಕವನ್ನು ಮಾಡಲೇಬೇಕೆಂದು ಉಪದೇಶಿಸಿದ್ದಾರೆ. ಈ ತತ್ವವನ್ನು ಪಾಲಿಸುವದರಿಂದ ಮನುಷ್ಯನ ಬುದ್ಧಿಶಕ್ತಿಯು ಬೆಳೆಯುತ್ತ ಹೋಗುತ್ತದೆ.

ಕ್ರಿಯೆಯಿಂದಲೇ ಬುದ್ಧಿಶಕ್ತಿಯು ಬೆಳೆಯುತ್ತಿದೆ. ನಿಷ್ಕ್ರಿಯೆಯಿಂದ ಅದು ಮಂದವಾಗುತ್ತ ಹೋಗುತ್ತದೆ. ಕುದುರೆಯನ್ನು ಬರೀ ಲಾಯದಲ್ಲಿ ಕಟ್ಟಿ ಮೇಯಿಸುವದರಿಂದ ಅದು ಶರ್ಯತ್ತನ್ನು ಎಂದೂ ಜಯಿಸಲಾರದು. ಸವಾರಿಮಾಡುವವನು ಅದನ್ನು ಲಾಯದಿಂದ ಹೊರಗೆ ತೆಗೆದು, ಅದರ ಮೇಲೆ ಥಡಿಹಾಕಿ ತನ್ನ ಅಂಕಿತದಲ್ಲಿಟ್ಟುಕೊಂಡು ಅದನ್ನು ಓಡಿಸಬೇಕಾಗುತ್ತದೆ. ಅದರಂತೆಯೇ ಬುದ್ಧಿಯ ಉಪಯೋಗ ಮಾಡಬೇಕಾಗುತ್ತದೆ. ನಮ್ಮ ದೇಶದಲ್ಲಿ ಯೋಗಾಭ್ಯಾಸಿಗಳು ಕೆಲವು ಸಾಧನಗಳನ್ನು ಮಾಡುತ್ತ ತಟಸ್ಥವೃತ್ತಿಯುಳ್ಳವರಾಗಿ ವೇಳೆಗಳೆಯುತ್ತಾರೆ. ಈ ವೃತ್ತಿಯಿಂದ ಮನುಷ್ಯನು ವಿಕಾಸಹೊಂದುತ್ತಾನೆಂದು ಅವರು ತಿಳಿಯುವದುಂಟು. ಆದರೆ ಯಾವ ವಿಚಾರಗಳು ರಚನಾತ್ಮಕವೂ ಉತ್ಪಾದಕವೂ ಇರುತ್ತವೆಯೋ ಅವುಗಳಿಂದಲೇ ಬುದ್ಧಿಯು ವಿಕಾಸಹೊಂದುತ್ತದೆ. ಕಾಯಕದಲ್ಲಿ ಮನುಷ್ಯನು ಈ ರೀತಿಯಾಗಿ ತನ್ನ ಬುದ್ಧಿಯನ್ನು ಪ್ರತಿನಿಮಿಷ ಉಪಯೋಗಿಸಬೇಕು. ಅದರಿಂದ ಅದರ ಶಕ್ತಿಯು ಬೆಳೆಯುತ್ತಲೇ ಹೋಗುತ್ತದೆ.

ಪ್ರತಿಯೊಬ್ಬ ಮನುಷ್ಯನಲ್ಲಿ ಅಪರಿಮಿತ ಶಕ್ತಿಯು ಯಾವಾಗಲೂ ಇರುತ್ತದೆ. ಆದರೆ ಅವನು ತನ್ನ ಪ್ರಯತ್ನದಿಂದ ಅದನ್ನು ಹೊರಗೆಡುವುವದಿಲ್ಲ. ಎಲ್ಲರೂ ಯಂತ್ರಗಳಂತೆ ನಿತ್ಯದ ಕ್ರಮದಂತೆ ಕಾರ್ಯ ಮಾಡುತ್ತ ಹೋಗುತ್ತಾರೆ. ದಿನಗೂಲಿಮಾಡುವವನಾಗಲಿ ಇಲ್ಲವೆ ಮಹತ್ವದ ಉದ್ಯೋಗ ಮಾಡುವವನಾಗಲಿ ಎಲ್ಲರೂ ದಿನಾಲು ಮಾಡುತ್ತಿರುವದನ್ನೇ ಮಾಡುತ್ತ ಹೋಗುತ್ತಾರೆ. ಇದರಿಂದ ಅವರಲ್ಲಿ ವಿಕಾಸವು ತೋರಿಬರುವದಿಲ್ಲ.

ಆದ್ದರಿಂದ ಯಾರಿದ್ದರೂ ಕೂಡ ಬೆಳಿಗ್ಗೆ ಎದ್ದ ಕೂಡಲೆ ತಾವು ಮಾಡುವ ಅಥವಾ ಮಾಡಬೇಕಾದ ಕಾರ್ಯಗಳನ್ನು ಆಳವಾಗಿ ವಿಚಾರ ಮಾಡಬೇಕು ತನ್ನ ಸುತ್ತಲಿನ ಜಗತ್ತಿನಲ್ಲಿ ಏನೇನುನಡೆದಿದೆಂಬುದನ್ನು ಲಕ್ಷವಿಟ್ಟು ನೋಡಬೇಕು. ಜಗತ್ತೆಂಬುದು ಒಂದು ನಾಟಕದಂತಿದೆ.

ಈ ನಾಟಕದಲ್ಲಿಯ ದೃಶ್ಯಗಳನ್ನು ಮತ್ತು ಪಾತ್ರಗಳನ್ನು ಅವನು ಸಹಾನುಭೂತಿಯುಳ್ಳವನಾಗಿ ಲಕ್ಷಿಸಬೇಕು. ತನ್ನ ಕೆಲಸದ ಪ್ರತಿಯೊಂದು ಶಾಖೆಯ ವಿಷಯವಾಗಿ ಪ್ರೀತಿಯಿಂದ ಮತ್ತು ಉತ್ಸುಕತೆಯಿಂದ ನಿರೀಕ್ಷಣೆ ಮಾಡಬೇಕು.

ಆದರೆ ಜನರು ತಾವು ಮಾಡುವ ಉದ್ಯೋಗವನ್ನು ಬೇಸರಿಕೆಯಿಂದ ಮಾಡುವದುಂಟು. ತಮ್ಮ ಕಚೇರಿ, ತಮ್ಮ ಅಂಗಡಿ, ತಮ್ಮ ಕಾರಖಾನೆಗೆ ಹೋಗಬೇಕಾದರೆ ಮನಸ್ಸಿನಲ್ಲಿ ಬೇಸರಪಟ್ಟುಕೊಂಡು ಹೋಗುತ್ತಾರೆ. ಅವರು ಹಿಂದಿನ ದಿನ ಮಾಡಿದ್ದನ್ನೇ ಮುಂದಿನ ದಿನ ಮಾಡುತ್ತ ಹೋಗುತ್ತಾರೆ. ಇದರಿಂದ ಅವರಲ್ಲಿ ಆತ್ಮವಿಕಾಸವು ಉಂಟಾಗಲಾರದು.

ಈ ರೀತಿಯಲ್ಲಿರುವಾಗ ಇಂಥವರಲ್ಲೊಬ್ಬನು ಕೆಲವೊಂದು ಸ್ಫೂರ್ತಿದಾಯಕ ಗ್ರಂಥವನ್ನು ಓದುತ್ತಾನೆ. ಅಥವಾ ಭಾಷಣವನ್ನು ಕೇಳುತ್ತಾನೆ. ಇಲ್ಲವೆ ಅವನಿಗೆ ಒಂದು ಬಿಕ್ಕಟ್ಟಿನ ಪ್ರಸಂಗವು ಬರುತ್ತದೆ. ಆಗ ಅವನು ಹೊಸ ಮನುಷ್ಯನಂತೆ ವರ್ತಿಸಹತ್ತುತ್ತಾನೆ. ಅವನು ತನ್ನದರ ಬಗ್ಗೆ ಆಳವಾಗಿ ವಿಚಾರಮಾಡಹತ್ತುತ್ತಾನೆ. ಆಗ ಅವನಿಗೆ ಉದಯಕಾಲವು ಪ್ರಾಪ್ತವಾಯಿತೆಂದು ತಿಳಿಯಬೇಕು.

ಧಾರ್ಮಿಕ ಪುರುಷರಲ್ಲಿ ಈ ರೀತಿಯು ಆಗಿಂದಾಗ್ಗೆ ತೋರಿಬರುತ್ತದೆ. ಅವರಲ್ಲಿ ಒಬ್ಬರು ಆರಂಭದಲ್ಲಿ ವ್ಯಸನದಲ್ಲಿ ಸಿಲ್ಕಿಕೊಂಡಿದ್ದು ಅವನು ಕೆಲವೊಂದು ಕಾರಣದ ಮೂಲಕ ತನ್ನ ಪೂರ್ವವೃತ್ತಿಯನ್ನು ಬಿಟ್ಟುಕೊಟ್ಟು ಉಚ್ಚತೆರದ ಧಾರ್ಮಿಕ ವೃತ್ತಿಯನ್ನು ಸ್ವೀಕರಿಸುತ್ತಾನೆ. ಇದೊಂದು ಅವನ ಪುನರ್ಜನ್ಮವೆಂದು ಹೇಳಬೇಕು.

ಹೇಗೆ ಧಾರ್ಮಿಕ ಜೀವನದಲ್ಲಿ ಇದು ಕಾಣಬರುತ್ತದೆಯೋ ಹಾಗೆಯೇ ವ್ಯವಹಾರಿಕ ಜೀವನದಲ್ಲಿಯೂ ಇದು ಕಂಡು ಬರುತ್ತದೆ. ಆಗ ಅವನಲ್ಲಿ ಮಂದವೃತ್ತಿಯು ತೊಲಗಿ ಹೋಗುತ್ತದೆ. ಅವನಲ್ಲಿ ಒಂದು ಉದ್ದೇಶವು ತಲೆದೋರುತ್ತದೆ. ಆತ್ಮಸಂಯಮನವು ಬೆಳೆಯುತ್ತದೆ. ಆಗ ಅವನು ಭವ್ಯವಾದ, ಉಚ್ಚತರವಾದ ಯಶೋಮಂದಿರವನ್ನು ಪ್ರವೇಶಮಾಡಹತ್ತುವನು.

ಈ ಯಶೋಮಂದಿರಕ್ಕೆ ಹೋಗುವ ಈ ದಾರಿಯು ಆರಂಭದಲ್ಲಿ ಕಷ್ಟಕರವಾಗಿ ತೋರಬಹುದು. ಯಾಕಂದರೆ ಅವನಲ್ಲಿರುವ ರೂಢಿ

ಗಳನ್ನು ಮತ್ತು ಮನೋವೃತ್ತಿಗಳನ್ನು ದೂರ ಮಾಡುವದು ಬಿಕ್ಕಟ್ಟಿನ ದಿರುತ್ತದೆ. ಅವನು ತನ್ನಲ್ಲಿ ಹೊಸ ಪದ್ಧತಿಗಳನ್ನು ಉಂಟುಮಾಡಿ ಕೊಳ್ಳಬೇಕಾಗುತ್ತದೆ. ಇವು ತೀವ್ರ ಬರುವದಿಲ್ಲ. ಆದರೆ ಆತ್ಮಸಂಯಮನದಿಂದ ಅವುಗಳನ್ನು ಉಂಟು ಮಾಡಿಕೊಳ್ಳಲು ಶಕ್ಯವಿದೆ. ಕೆಲವು ಕಾಲದ ಮೇಲೆ ಅವು ತನ್ನಲ್ಲಿ ರೂಢಿಗಳಾಗಿ ಪರಿಣಮಿಸುತ್ತವೆ. ಆದ್ದರಿಂದ ಮೊದಲಿಗೆ ಇಚ್ಛೆಯು ಬೇಕು. ಈ ಇಚ್ಛೆಯು ಪ್ರಬಲವಾದ ಹಾಗೆ ನಿಶ್ಚಯವು ಅವನಲ್ಲಿ ಉಂಟಾಗುತ್ತದೆ. ಮುಂದೆ ಇದರಿಂದ ಯೋಗ್ಯ ಕ್ರಿಯೆಗಳಾಗುತ್ತ ಹೋಗುತ್ತವೆ.

ಆದರೆ ಕೆಲವರು ಅಂಜಿಕೆ, ಅವಿಶ್ವಾಸ ಇವುಗಳಿಗೆ ಒಳಗಾಗಿ ಸ್ವತಂತ್ರವಾಗಿ ಕಾರ್ಯ ಮಾಡಲು ಹಿಂಜರಿಯುತ್ತಾರೆ. ತಮಗೆ ಕಾಣುವ ಒಬ್ಬ ದೊಡ್ಡ ಮನುಷ್ಯನು ಒಬ್ಬ ಅಲೌಕಿಕ ಮನುಷ್ಯನೆಂಬ ತಿಳುವಳಿಕೆಯು ಇವರಲ್ಲಿ ಇರುತ್ತದೆ. ತಾನು ಕಡಿಮೆ ತರಗತಿಯುವನೆಂಬ ವಿಚಾರವು ಇರುತ್ತದೆ. ಇದರಿಂದ ಇಂಥವರು ಯಾವಾಗಲೂ ಕಡಿಮೆತರಗತಿಯುವರಾಗಿಯೇ ಉಳಿಯುತ್ತಾರೆ.

ಆದರೆ ಕೆಲವು ಜನರಲ್ಲಿ ಕೆಲವೊಂದು ವಿಶೇಷ ಕಾರಣದ ಮೂಲಕ ಧೈರ್ಯವು ಉಂಟಾಗುತ್ತದೆ. ಆಗ ಅವರ ಮಿದುಳಿನಲ್ಲಿ ಹೊಸ ರಚನೆಯೇ ಆದಂತೆ ಭಾಸವಾಗುತ್ತದೆ. ಆಗ 'ನಾವು ಅದನ್ನು ಮಾಡಬಲ್ಲೆವು' ಎಂಬ ವಿಶ್ವಾಸವು ಅವರಲ್ಲಿ ಬಲಿಯುತ್ತಿದೆ. ಇದು ಆತ್ಮವಿಕಾಸದ ಪರಿಣಾಮವು. ಇದು ಕ್ರಿಯೆಗೆ ಸಾಧನವು.

ತನ್ನನ್ನು ತಾನು ಅರಿತುಕೊಳ್ಳುವದೆಂದರೆ ಇದೇ ಇರುತ್ತದೆ. ಆಗ ಅವನು ತನ್ನ ಪ್ರಪಂಚವೆಂಬ ನಾವೆಯ ಚುಕ್ಕಾಣಿಯನ್ನು ಹಿಡಿದು ತನ್ನ ಧ್ಯೇಯದತ್ತ ಅದನ್ನು ನಡಿಸುತ್ತ ಹೋಗುತ್ತಾನೆ. ಆಗ ಅವನಿಗೆ ತನ್ನ ಯಶೋಮಂದಿರದ ಬಾಗಿಲು ಕಾಣಹತ್ತುವದು.

ಈ ನಾಟಕದಲ್ಲಿಯ ದೃಶ್ಯಗಳನ್ನು ಮತ್ತು ಪಾತ್ರಗಳನ್ನು ಅವನು ಸಹಾನುಭೂತಿಯುಳ್ಳವನಾಗಿ ಲಕ್ಷಿಸಬೇಕು. ತನ್ನ ಕೆಲಸದ ಪ್ರತಿಯೊಂದು ಶಾಖೆಯ ವಿಷಯವಾಗಿ ಪ್ರೀತಿಯಿಂದ ಮತ್ತು ಉತ್ಸುಕತೆಯಿಂದ ನಿರೀಕ್ಷಣೆ ಮಾಡಬೇಕು.

ಆದರೆ ಜನರು ತಾವು ಮಾಡುವ ಉದ್ಯೋಗವನ್ನು ಬೇಸರಿಕೆಯಿಂದ ಮಾಡುವದುಂಟು. ತಮ್ಮ ಕಚೇರಿ, ತಮ್ಮ ಅಂಗಡಿ, ತಮ್ಮ ಕಾರಖಾನೆಗೆ ಹೋಗಬೇಕಾದರೆ ಮನಸ್ಸಿನಲ್ಲಿ ಬೇಸರಪಟ್ಟುಕೊಂಡು ಹೋಗುತ್ತಾರೆ. ಅವರು ಹಿಂದಿನ ದಿನ ಮಾಡಿದ್ದನ್ನೇ ಮುಂದಿನ ದಿನ ಮಾಡುತ್ತ ಹೋಗುತ್ತಾರೆ. ಇದರಿಂದ ಅವರಲ್ಲಿ ಆತ್ಮವಿಕಾಸವು ಉಂಟಾಗಲಾರದು.

ಈ ರೀತಿಯುಲ್ಲಿರುವಾಗ ಇಂಥವರಲ್ಲೊಬ್ಬನು ಕೆಲವೊಂದು ಸ್ಫೂರ್ತಿದಾಯಕ ಗ್ರಂಥವನ್ನು ಓದುತ್ತಾನೆ. ಅಥವಾ ಭಾಷಣವನ್ನು ಕೇಳುತ್ತಾನೆ. ಇಲ್ಲವೆ ಅವನಿಗೆ ಒಂದು ಬಿಕ್ಕಟ್ಟಿನ ಪ್ರಸಂಗವು ಬರುತ್ತದೆ. ಆಗ ಅವನು ಹೊಸ ಮನುಷ್ಯನಂತೆ ವರ್ತಿಸಹತ್ತುತ್ತಾನೆ. ಅವನು ತನ್ನದರ ಬಗ್ಗೆ ಆಳವಾಗಿ ವಿಚಾರಮಾಡಹತ್ತುತ್ತಾನೆ. ಆಗ ಅವನಿಗೆ ಉದಯಕಾಲವು ಪ್ರಾಪ್ತವಾಯಿತೆಂದು ತಿಳಿಯಬೇಕು.

ಧಾರ್ಮಿಕ ಪುರುಷರಲ್ಲಿ ಈ ರೀತಿಯು ಆಗಿಂದಾಗ್ಗೆ ತೋರಿಬರುತ್ತದೆ. ಅವರಲ್ಲಿ ಒಬ್ಬರು ಆರಂಭದಲ್ಲಿ ವ್ಯಸನದಲ್ಲಿ ಸಿಲ್ಕಿಕೊಂಡಿದ್ದು ಅವನು ಕೆಲವೊಂದು ಕಾರಣದ ಮೂಲಕ ತನ್ನ ಪೂರ್ವವೃತ್ತಿಯನ್ನು ಬಿಟ್ಟುಕೊಟ್ಟು ಉಚ್ಚತರದ ಧಾರ್ಮಿಕ ವೃತ್ತಿಯನ್ನು ಸ್ವೀಕರಿಸುತ್ತಾನೆ. ಇದೊಂದು ಅವನ ಪುನರ್ಜನ್ಮವೆಂದು ಹೇಳಬೇಕು.

ಹೇಗೆ ಧಾರ್ಮಿಕ ಜೀವನದಲ್ಲಿ ಇದು ಕಾಣಬರುತ್ತದೆಯೋ ಹಾಗೆಯೇ ವ್ಯವಹಾರಿಕ ಜೀವನದಲ್ಲಿಯೂ ಇದು ಕಂಡು ಬರುತ್ತದೆ. ಆಗ ಅವನಲ್ಲಿ ಮಂದವೃತ್ತಿಯು ತೊಲಗಿ ಹೋಗುತ್ತದೆ. ಅವನಲ್ಲಿ ಒಂದು ಉದ್ದೇಶವು ತಲೆದೋರುತ್ತದೆ. ಆತ್ಮಸಂಯಮನವು ಬೆಳೆಯುತ್ತದೆ. ಆಗ ಅವನು ಭವ್ಯವಾದ, ಉಚ್ಚತರವಾದ ಯಶೋಮಂದಿರವನ್ನು ಪ್ರವೇಶಮಾಡಹತ್ತುವನು.

ಈ ಯಶೋಮಂದಿರಕ್ಕೆ ಹೋಗುವ ಈ ದಾರಿಯು ಆರಂಭದಲ್ಲಿ ಕಷ್ಟಕರವಾಗಿ ತೋರಬಹುದು. ಯಾಕಂದರೆ ಅವನಲ್ಲಿರುವ ರೂಢಿ

ಗಳನ್ನು ಮತ್ತು ಮನೋವೃತ್ತಿಗಳನ್ನು ದೂರ ಮಾಡುವದು ಬಿಕ್ಕಟ್ಟಿನ ದಿರುತ್ತದೆ. ಅವನು ತನ್ನಲ್ಲಿ ಹೊಸ ಪದ್ಧತಿಗಳನ್ನು ಉಂಟುಮಾಡಿ ಕೊಳ್ಳಬೇಕಾಗುತ್ತದೆ. ಇವು ತೀವ್ರ ಬರುವದಿಲ್ಲ. ಆದರೆ ಆತ್ಮಸಂಯ ಮನದಿಂದ ಅವುಗಳನ್ನು ಉಂಟು ಮಾಡಿಕೊಳ್ಳಲು ಶಕ್ಯವಿದೆ. ಕೆಲವು ಕಾಲದ ಮೇಲೆ ಅವು ತನ್ನಲ್ಲಿ ರೂಢಿಗಳಾಗಿ ಪರಿಣಮಿಸುತ್ತವೆ. ಆದ್ದ ರಿಂದ ಮೊದಲಿಗೆ ಇಚ್ಛೆಯು ಬೇಕು. ಈ ಇಚ್ಛೆಯು ಪ್ರಬಲವಾದ ಹಾಗೆ ನಿಶ್ಚಯವು ಅವನಲ್ಲಿ ಉಂಟಾಗುತ್ತದೆ. ಮುಂದೆ ಇದರಿಂದ ಯೋಗ್ಯ ಕ್ರಿಯೆಗಳಾಗುತ್ತ ಹೋಗುತ್ತವೆ.

ಆದರೆ ಕೆಲವರು ಅಂಜಿಕೆ, ಅವಿಶ್ವಾಸ ಇವುಗಳಿಗೆ ಒಳಗಾಗಿ ಸ್ವತಂತ್ರವಾಗಿ ಕಾರ್ಯ ಮಾಡಲು ಹಿಂಜರಿಯುತ್ತಾರೆ. ತಮಗೆ ಕಾಣುವ ಒಬ್ಬ ದೊಡ್ಡ ಮನುಷ್ಯನು ಒಬ್ಬ ಅಲೌಕಿಕ ಮನುಷ್ಯ ನೆಂಬ ತಿಳುವಳಿಕೆಯು ಇವರಲ್ಲಿ ಇರುತ್ತದೆ. ತಾನು ಕಡಿಮೆ ತರಗತಿಯವನೆಂಬ ವಿಚಾರವು ಇರುತ್ತದೆ. ಇದರಿಂದ ಇಂಥವರು ಯಾವಾಗಲೂ ಕಡಿಮೆತರಗತಿಯವರಾಗಿಯೇ ಉಳಿಯುತ್ತಾರೆ.

ಆದರೆ ಕೆಲವು ಜನರಲ್ಲಿ ಕೆಲವೊಂದು ವಿಶೇಷ ಕಾರಣದ ಮೂಲಕ ಧೈರ್ಯವು ಉಂಟಾಗುತ್ತದೆ. ಆಗ ಅವರ ಮಿದುಳಿನಲ್ಲಿ ಹೊಸ ರಚ ನೆಯೇ ಆದಂತೆ ಭಾಸವಾಗುತ್ತದೆ. ಆಗ 'ನಾವು ಅದನ್ನು ಮಾಡಬ ಲ್ಲೆವು' ಎಂಬ ವಿಶ್ವಾಸವು ಅವರಲ್ಲಿ ಬಲಿಯುತ್ತಿದೆ. ಇದು ಆತ್ಮವಿಕಾ ಸದ ಪರಿಣಾಮವು. ಇದು ಕ್ರಿಯೆಗೆ ಸಾಧನವು.

ತನ್ನನ್ನು ತಾನು ಅರಿತುಕೊಳ್ಳುವದೆಂದರೆ ಇದೇ ಇರುತ್ತದೆ. ಆಗ ಅವನು ತನ್ನ ಪ್ರಪಂಚವೆಂಬ ನಾವೆಯ ಚುಕ್ಕಾಣಿಯನ್ನು ಹಿಡಿದು ತನ್ನ ಧ್ಯೇಯದತ್ತ ಅದನ್ನು ನಡಿಸುತ್ತ ಹೋಗುತ್ತಾನೆ. ಆಗ ಅವ ನಿಗೆ ತನ್ನ ಯಶೋಮಂದಿರದ ಬಾಗಿಲು ಕಾಣಹತ್ತುವದು.

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ.)

ಲೇಖಾಂಕ ೨೫.

## ೧ ಲಕ್ಷ ೯೬ ಸಾವಿರ ಜಂಗಮರು

ಬಸವೇಶ್ವರನ ಎಲ್ಲ ಪುರಾಣಗಳಲ್ಲಿ ಕಲ್ಯಾಣದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರಿದ್ದರೆಂತಲೂ ಅವನು ಅವರನ್ನು ಪೋಷಿಸುತ್ತಿದ್ದನೆಂತಲೂ ಉಲ್ಲೇಖಗಳು ಆಗಿಂದಾಗ್ಗೆ ಬರುತ್ತವೆ. ಇಷ್ಟು ಜನ ಜಂಗಮರು ಅವನೊಡನೆ ಇದ್ದದ್ದು ನಿಜವೆಂದು ಭಾವಿಸಿ ಪಾಶ್ಚಿಮಾತ್ಯ ಇತಿಹಾಸಕಾರರೂ ಆಧುನಿಕ ನಮ್ಮ ಗ್ರಂಥಕಾರರೂ ಭಾವಿಸಿ ಅನೇಕ ತರ್ಕಗಳನ್ನು ಮಾಡಿ ಲೇಖಗಳನ್ನು ಬರೆದದ್ದು ಕಂಡುಬರುತ್ತದೆ. ಇಷ್ಟು ಜನ ಜಂಗಮರು ಕಲ್ಯಾಣ ಪಟ್ಟಣದಲ್ಲಿ ಈ ಕಾಲದಲ್ಲಿ ಇಲ್ಲಿ ಇದ್ದಿರಬಹುದೋ ಹೇಗೆ ಎಂಬುದನ್ನು ಚರ್ಚಿಸುವದು ನಮ್ಮ ಪ್ರಕೃತ ಲೇಖದ ಮುಖ್ಯೋದ್ದೇಶವಾಗಿರುತ್ತದೆ. ೧ ಲಕ್ಷ ೯೬ ಸಾವಿರ ಜಂಗಮರು ಬಸವೇಶ್ವರನ ಸಮೀಪದಲ್ಲಿ ಇದ್ದದ್ದು ಕೇವಲ ಕಾಲ್ಪನಿಕ ಕಥೆಯೆಂದು ನಮ್ಮ ಅಭಿಪ್ರಾಯವಿರುತ್ತದೆ.

ಬಸವೇಶ್ವರನು ಕಲ್ಯಾಣ ಪಟ್ಟಣದಲ್ಲಿ ಪ್ರಧಾನಿಪಟ್ಟವನ್ನು ಬಿಜ್ಜಳನಲ್ಲಿ ಹೊಂದುವ ಪೂರ್ವದಲ್ಲಿಯೇ ಅವನು ದೇಶದಲ್ಲಿ ವೀರಶೈವ ಧರ್ಮದ ಪ್ರಸಾರ ಕಾರ್ಯವನ್ನು ಕೈಕೊಂಡಿದ್ದನೆಂಬುದೇನೋ ನಿಜವು. ಈ ವಿಷಯವನ್ನು ಕುರಿತು ನಾವು ಈ ಮೊದಲಿಗೆ ಅನೇಕ ಲೇಖಗಳನ್ನು ಬರೆದಿದ್ದೇವೆ. ಅವನ ಈ ಪ್ರಯತ್ನಗಳ ಫಲವಾಗಿ ಅನೇಕರು ಅವನು ಅಧಿಕಾರರೂಢನಾದಬಳಿಕ ಅವನಿದ್ದಲ್ಲಿಗೆ ಬಂದಿರಬಹುದು. ಮತ್ತು ಅವರಲ್ಲಿ ವಿದ್ವಾಂಸರಾದವರು ಅವನು ಸ್ಥಾಪಿಸಿದ ಶಿವಾನುಭವ ಮಂಟಪದಲ್ಲಿಯೂ ಸೇರ್ಪಡೆಯಾಗಿರಬಹುದು. ಈ ಮಂಟಪದಲ್ಲಿದ್ದವರ ಸಂಖ್ಯೆಯು ಸುಮಾರು ೩೪ ರಕ್ಕಿಂತಲೂ ಹೆಚ್ಚಾಗಿರಲಿಲ್ಲವೆಂದು ಶಿವಶರಣರ ಚರಿತ್ರೆಗಳಿಂದ ತಿಳಿದುಬರುತ್ತದೆಂದು ನಾವು ನಮ್ಮ ಹಿಂದಿನ ಲೇಖದಲ್ಲಿ ವಿವರಿಸಿದ್ದೇವೆ. ಬಸವೇಶ್ವರನು ಪ್ರಧಾನಿಯಾಗಿ

ರಾಜ್ಯಭಾರ ನಡಿಸಿದ್ದು ೬ ವರ್ಷಗಳು ಮಾತ್ರ. ಅವನಕ್ಕಿಂತಲೂ ಪೂರ್ವದಲ್ಲಿ ವೀರಶೈವರ ಸಂಖ್ಯೆಯು ದೇಶದಲ್ಲಿ ಹೆಚ್ಚಿಗೆ ಇರಲಿಲ್ಲ. ಆದ್ದರಿಂದ ಅವನ ರಾಜ್ಯಭಾರದ ೬ ವರ್ಷಗಳ ಅವಧಿಯಲ್ಲಿ ವೀರಶೈವ ಸಮಾಜವು ದೇಶದಲ್ಲೆಲ್ಲ ಲಕ್ಷಾಂತರ ಸಂಖ್ಯೆಯಿಂದ ಉತ್ತರಕ್ಕೆ ಕಲ್ಯಾಣ ಪಟ್ಟಣದಿಂದ ದಕ್ಷಿಣಕ್ಕೆ ಕಾವೇರಿ ನದಿಯ ವರೆಗೆ ಈಗಿನಂತೆ ದಟ್ಟವಾಗಿ ಪಸರಿಸಿದ ಸಂಭವ ತೋರುವದಿಲ್ಲ. ಅದು ಅವನ ತರುವಾಯ ಕ್ರಮೇಣ ಬೆಳೆದಿರುತ್ತದೆ. ವಚನಕಾರರ ಸಂಖ್ಯೆಯು ಅವನ ಕಾಲದಲ್ಲಿ ೩೦-೩೬ ಜನರು ಮಾತ್ರ ದೊರೆಯುತ್ತಾರೆ. ಅವನ ತರುವಾಯ ಅವರ ಸಂಖ್ಯೆಯು ಕ್ರಮೇಣ ಬೆಳೆಯುತ್ತ ಹೋಗಿರುತ್ತದೆ. ಇವರಲ್ಲಿ ಬಹುಜನರು ವೀರ ಶೈವ ಧರ್ಮಪ್ರಚಾರಕರೂ ಇದ್ದಾರೆ. ಅವರ ಪ್ರಯತ್ನಗಳ ಫಲವಾಗಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಗಳಲ್ಲಿ ವೀರಶೈವ ಧರ್ಮವು ಕ್ರಮೇಣ ಪ್ರಸಾರವಾಗುತ್ತ ಬಂದಿದೆ. ಈ ಕಾರ್ಯವು ಬಸವೇಶ್ವರನು ೧೧೬೮ ರಲ್ಲಿ ಗತಿಸಿದ ತರುವಾಯ ಸುಮಾರು ೧೫೦ ವರ್ಷಗಳ ವರೆಗೆ ಅಂದರೆ ಕ್ರಿ. ಶ. ೧೩೦೦ ರ ವರೆಗೂ ನಡೆಯುತ್ತ ಬಂದಿದೆ. ೧೪ನೇ ಶತಮಾನದ ಅಂತ್ಯದಲ್ಲಿ ಮುಸಲ್ಮಾನರ ದಾಳಿಗಳು ಕರ್ನಾಟಕದಲ್ಲಿ ನಡಿದವು. ಇವುಗಳ ಮೂಲಕ ಧರ್ಮಪ್ರಸಾರ ಕಾರ್ಯವು ಕೆಲಕಾಲ ನಿಂತಿತು. ಆದರೂ ಮುಂದೆ ಸುವ್ಯವಸ್ಥೆ ದೇಶದಲ್ಲಿ ನೆಲೆಗೊಂಡ ಬಳಿಕ ಅನೇಕ ಮಹತ್ವಿಕರು ಕಾಲಕಾಲಕ್ಕೆ ಉದ್ಭವಿಸಿ ವೀರಶೈವ ಧರ್ಮವನ್ನು ಪ್ರಸಾರ ಮಾಡುತ್ತ ಬಂದಿದ್ದಾರೆ. ಇವರ ಪ್ರಯತ್ನಗಳ ಫಲವಾಗಿ ವೀರಶೈವ ಧರ್ಮವು ಬಹಳ ಕಡೆಗೆ ಈಗ ನಿಬಿಡವಾಗಿ ಹಬ್ಬಿರುತ್ತದೆ. ಈ ಪ್ರಕಾರ ವೀರಶೈವ ಸಮಾಜದ ಬೆಳವಣಿಗೆ ಆಗಿರುತ್ತದೆಂಬುದನ್ನು ನಾವು ಆಗಿಂದಾಗ್ಗೆ ನಮ್ಮ ಲೇಖಗಳಲ್ಲಿ ಪ್ರಸ್ತಾಪಿಸುತ್ತ ಬಂದಿರುತ್ತೇವೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರು ಇದ್ದದ್ದು ಅತಿಶಯೋಕ್ತಿಯೆಂದು ನಮಗೆ ತೋರುತ್ತದೆ.

(೨) ಒಂದುವೇಳೆ ಕಲ್ಯಾಣಪಟ್ಟಣದಲ್ಲಿ ಸುಮಾರು ೨ ಲಕ್ಷ ಜಂಗಮರಿದ್ದರೆ. ಭಕ್ತರು ಎಷ್ಟು ಜನರಿರಬೇಕೆಂಬುದನ್ನು ವಾಚಕರು ವಿಚಾರ ಮಾಡಿ ನೋಡಬೇಕು. ಇದರಿಂದ ಈ ಸಂಖ್ಯೆಯಲ್ಲಿ ನಿಜತ್ವ ವಿಲ್ಲೆಂಬುದು ಅವರಿಗೆ ಮನವರಿಕೆಯಾಗದೆ ಇರದು. ೧೯೦೧ನೇ ಇಸ್ವಿಯ ಜನಗಣಿತೆಯ ಲೆಕ್ಕದಲ್ಲಿ ಮುಂಬಯಿ ಪ್ರಾಂತದಲ್ಲಿ ವೀರಶೈವರ ಸಂಖ್ಯೆಯು

ಒಟ್ಟು ೧೪,೨೨೨,೯೩ ಇದ್ದದ್ದು ತಿಳಿದುಬರುತ್ತದೆ. ಆ ವರ್ಷ ವೀರ ಶೈವರ ಒಳಪಂಗಡಗಳ ಸಂಖ್ಯೆಯು ಕೊಡಲ್ಪಟ್ಟಿರುತ್ತದೆ. ಜಂಗಮರ ಸಂಖ್ಯೆಯು ಈ ಜನಗಣಿತೆಯ ಕಾಲದಲ್ಲಿ ೧೫೦೧೮೦ ಇದ್ದದ್ದು ತಿಳಿದು ಬರುತ್ತದೆ. ಅಂದರೆ ಜಂಗಮರಕ್ಕಿಂತಲೂ ೧೦ ಪಟ್ಟು ಹೆಚ್ಚು ಭಕ್ತರ ಸಂಖ್ಯೆ ಇದ್ದಹಾಗಾಯಿತು. ಆದ್ದರಿಂದ ಕಲ್ಯಾಣಪಟ್ಟಣದಲ್ಲಿ ೨ ಲಕ್ಷ ಜಂಗಮರಿದ್ದರೆ. ಆಗ ಅಲ್ಲಿ ೨೦ ಲಕ್ಷ ಭಕ್ತರಿರಬೇಕಾಯಿತು. ಇಷ್ಟು ಜನ ವೀರಶೈವರು ಅಲ್ಲಿದ್ದರೆ ವೀರಶೈವೇತರ ಸಂಖ್ಯೆಯು ವೀರಶೈವರ ೨೦ ಲಕ್ಷ ಸಂಖ್ಯೆಗಿಂತಲೂ ಎಷ್ಟೋಪಾಲು ಹೆಚ್ಚು ಇರಬೇಕೆಂದು ನಾವು ಭಾವಿಸಬೇಕಾಗುತ್ತದೆ. ಆದ್ದರಿಂದ ಕಲ್ಯಾಣಪಟ್ಟಣದ ಆಗಿನ ಜನ ಸಂಖ್ಯೆಯು ೧ ಕೋಟಿಯ ವರೆಗೂ ಇದ್ದಿರಬೇಕೆಂದು ನಾವು ಅನು ಮಾನಮಾಡಬೇಕಾಗುತ್ತದೆ. ಇಷ್ಟು ದೊಡ್ಡ ಪಟ್ಟಣವು ಅದು ಇರುವ ಸಂಭವವು ಇರುವದಿಲ್ಲ- ಈಗಿನ ಲಂಡನ ಪಟ್ಟಣದಲ್ಲಿ ಸಹ ಇಷ್ಟು ಜನವಸತಿಯು ಇಲ್ಲ. ಒಂದು ವೇಳೆ ಕಲ್ಯಾಣದಲ್ಲಿ ೨೦ ಲಕ್ಷ ವೀರ ಶೈವರಿದ್ದರೆ ಇಡೀ ದೇಶದಲ್ಲೆಲ್ಲ ಅವರ ಸಂಖ್ಯೆಯು ೧—೨ ಕೋಟಿ ಯಾದರೂ ಇದ್ದಿರಬೇಕೆಂದು ನಾವು ಅನುಮಾನ ಮಾಡಬೇಕಾಗುತ್ತದೆ. ಆದರೆ ಬಸವೇಶ್ವರನ ತರುವಾಯ ಈಗ ೮೦೦ ವರ್ಷಗಳಾದರೂ ವೀರ ಶೈವರ ಸಂಖ್ಯೆಯು ಈಗಿನ ಜನಗಣಿತೆಯಿಂದ ೩೦ ಲಕ್ಷಕ್ಕಿಂತ ಹೆಚ್ಚಿಗಿ ರುವದಿಲ್ಲ. ಅವರ ಸಂಖ್ಯೆಯು ೩೦ ಲಕ್ಷಕ್ಕಿಂತಲೂ ಇನ್ನೂ ಕಡಿಮೆಯೇ ಇರುತ್ತದೆ. ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಒಂದೇ ಒಂದು ಕಲ್ಯಾಣ ಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರಿರುವದು ಸಂಭ ವವಿಲ್ಲೆಂದು ನಮಗೆ ತೋರುತ್ತದೆ. ಈ ಸಂಖ್ಯೆಯಲ್ಲಿ ತೀರ ಅತಿಶ ಯೋಕ್ತಿ ಇದೆ.

(೩) ಕೆಲವು ಮಹನೀಯರು ಬಸವೇಶ್ವರನ ಸಮೀಪದಲ್ಲಿ ೨ಲಕ್ಷ ಜನರು ಇದ್ದದ್ದು ನಿಜವೆಂದು ಭಾವಿಸಿ ಬಸವೇಶ್ವರನು ಅಷ್ಟು ಜನ ದಂಡಾಳುಗಳನ್ನು ಇಟ್ಟುಕೊಂಡು ಬಿಜ್ಜಳನೊಡನೆ ಪ್ರತಿಭಟಸುತ್ತಿದ್ದನೆಂ ತಲೂ ಇಲ್ಲವೆ ಅವನನ್ನು ರಾಜ್ಯದಲ್ಲಿಯ ತನ್ನ ವಿರೋಧಿಗಳನ್ನು ಬೆದ ರಿಸುತ್ತ ಇದ್ದನೆಂತಲೂ ಅವರ ಮೂಲಕ ಬಹು ಜನ ಸಮಾಜದಲ್ಲಿ ಭೀತಿಯನ್ನುಂಟುಮಾಡುತ್ತ ಕರ್ನಾಟಕದಲ್ಲೆಲ್ಲ ಧರ್ಮ ಪ್ರಸಾರ ಮಾಡು ತ್ತಿದ್ದನೆಂತಲೂ ಈ ರೀತಿಯಾಗಿ ಊಹಿಸಿದ್ದು ಕಂಡುಬರುತ್ತದೆ. ಆದರೆ

ಬಸವೇಶ್ವರನೊಡನೆ ೨ ಲಕ್ಷ ಜನರು ಇದ್ದರೆಂಬುದು ಮೂಲತಃ ತಪ್ಪು ಕಲ್ಪನೆಯಾಗಿದೆ. ಅವನು ಬಲಾತ್ಕಾರದಿಂದ ಯಾರನ್ನೂ ಧರ್ಮಾಂತರಗೊಳಿಸದೆ ಕೇವಲ ತನ್ನ ಉಚ್ಚ ವಿಚಾರಗಳನ್ನು ಜನ ಸಮುದಾಯದಲ್ಲಿ ಬೋಧ ಮಾಡುತ್ತ ವೀರಶೈವ ಧರ್ಮವನ್ನು ಪ್ರಸಾರ ಮಾಡಿದನೆಂದು ನಾವು ಅನೇಕ ಲೇಖಗಳಲ್ಲಿ ಪ್ರಸ್ತಾಪಿಸುತ್ತ ಬಂದಿದ್ದೇವೆ. ಬಲಾತ್ಕಾರದಿಂದ ಧರ್ಮಾಂತರ ಮಾಡಬೇಕೆಂಬ ವಿಚಾರಗಳು ಅವನ ವಚನಗಳಲ್ಲಿ ಮಾತ್ರವಲ್ಲ, ಅವನ ಸಮಕಾಲೀನರಾದ ಯಾವ ವಚನಕಾರರ ವಚನಗಳಲ್ಲಿಯೂ ಎಷ್ಟು ಮಾತ್ರವೂ ಕಂಡುಬರುವದಿಲ್ಲ. ಬಸವೇಶ್ವರನ ಕಾಲದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರಿದ್ದರೆಂಬುದು ಪುರಾಣಿಕರು ಕಲ್ಪಿಸಿದ ಕಟ್ಟು ಕಥೆಯೇ ಹೊರತು ಅದರಲ್ಲಿ ಎಷ್ಟು ಮಾತ್ರವೂ ನಿಜಾಂಶವಿರುವದಿಲ್ಲ.

(೪) ಬಸವೇಶ್ವರನು ಹರಳಯ್ಯ, ಮಧುವಯ್ಯಗಳ ಕೊಲೆಯಾದನಂತರ ಕಲ್ಯಾಣಪಟ್ಟಣವನ್ನು ಬಿಟ್ಟು ಕಪ್ಪಡಿಸಂಗಮೇಶ್ವರನಲ್ಲಿಗೆ ಹೋಗಿ ನಿಂತನೆಂಬುದು ನಿಜವೆಂದು ತೋರುತ್ತದೆ. ಮುಂದೆ ದೇಶದಲ್ಲಿ ವೀರಶೈವರು ಬಿಜ್ಜಳನ ದಂಡಾಳುಗಳೊಡನೆ ಯುದ್ಧ ಮಾಡುವ ಪ್ರಸಂಗವು ಉಂಟಾಯಿತು. ಇದು ಆಗ ಧರ್ಮ ಯುದ್ಧದ ಸ್ವರೂಪವನ್ನು ಹೊಂದಿತು. ಆದರೆ ಆಗ ವೀರಶೈವರು ಸಂಖ್ಯೆಯಲ್ಲಿ ಬಹು ದುರ್ಬಲರಾದ್ದರಿಂದಲೇ ಅವರು ಕಲ್ಯಾಣವನ್ನು ಬಿಡಬೇಕಾಯಿತು. ಅಲ್ಲಮಪ್ರಭು, ಮಹಾದೇವಿಯಕ್ಕ ಮೊದಲಾದವರು ಶ್ರೀಶೈಲ ಪರ್ವತದ ಕಡೆಗೆ ಮತ್ತು ಬಹು ಜನರು ಈಗಿನ ಬೆಳಗಾವ ಜಿಲ್ಲೆಯಲ್ಲಿರುವ ಸಂಪಗಾವ ತಾಲೂಕಿನ ಮುರಗೋಡ, ಕಾದರೋಳಿ ಈ ಮಾರ್ಗವಾಗಿ ಉಳಿವಿಯ ಅರಣ್ಯ ಪ್ರದೇಶವನ್ನು ಪ್ರವೇಶ ಮಾಡಬೇಕಾಯಿತು. ಈ ಕಾಲದಲ್ಲಿ ಅನೇಕ ಸ್ಥಳಗಳಲ್ಲಿ ವೀರಶೈವರು ಬಿಜ್ಜಳನ ದಂಡಾಳುಗಳೊಡನೆ ಯುದ್ಧ ಮಾಡುವ ಪ್ರಸಂಗಗಳು ಒದಗಿದವು. ಒಂದು ವೇಳೆ ಕಲ್ಯಾಣ ಪಟ್ಟಣದಲ್ಲಿ ೨ ಲಕ್ಷ ಜಂಗಮರು ಇದ್ದರೆ ಮತ್ತು ದೇಶದಲ್ಲಿ ಈಗಿನಂತೆ ವೀರಶೈವರ ಸಂಖ್ಯೆಯು ದಟ್ಟವಾಗಿ ಪಸರಿಸಿದ್ದರೆ, ಅವರು ಈ ಪ್ರಕಾರ ಉಳಿವಿಯ ಮಹಾ ಅರಣ್ಯಕ್ಕೆ ಹೋಗಿ ವಾಸಿಸುವ ಪ್ರಸಂಗವು ಒದಗುತ್ತಿದ್ದಿಲ್ಲ. ಆಗ ದೇಶದಲ್ಲಿ ವೀರಶೈವರ ಸಂಖ್ಯೆಯು ಅತ್ಯಲ್ಪವಾಗಿದ್ದು ದರಿಂದಲೇ ಅವರಿಗೆ ಈ ಕಾಲದಲ್ಲಿ ಒಂದು ಘೋರವಾದ ವಿಪತ್ತು

ವ್ಯಾಪ್ತವಾಯಿತು. ಒಂದು ವೇಳೆ ಅವರ ಸಂಖ್ಯೆಯು ದೊಡ್ಡದಾಗಿದ್ದರೆ ಅವರು ಬಿಜ್ಜಳನ ದಂಡನ್ನು ಕೂಡಲೇ ಸೋಲಿಸಿ ಕಲ್ಯಾಣಪಟ್ಟಣ ವನ್ನು ಆಕ್ರಮಿಸಬಹುದಾಗಿತ್ತು. ಆದರೆ ಹಾಗೆ ಆಕ್ರಮಣ ಮಾಡಿ ಲ್ಲೆಂಬುದು ಬಿಜ್ಜಳನ ತರುವಾಯ ಅವನ ಮಕ್ಕಳು ಮೊಮ್ಮಕ್ಕಳು ಕಲ್ಯಾಣ ರಾಜ್ಯವನ್ನು ಆಳುತ್ತ ಬಂದಿದ್ದರ ಮೇಲಿಂದ ಮತ್ತು ಅವರ ತರುವ ಚಾಲುಕ್ಯರ ಪೂರ್ವದ ರಾಜರು ಕಲಚೂರ್ಯರನ್ನು ತಳ್ಳಿ ಪುನಃ ತಮ್ಮ ರಾಜ್ಯವನ್ನು ಪ್ರಸ್ಥಾಪಿಸಿದ್ದರಿಂದ ತಿಳಿದು ಬರುತ್ತದೆ. ಇವು ಗಳನ್ನೆಲ್ಲ ನಾವು ಒಟ್ಟಾರೆ ವಿವೇಚಿಸಿದಲ್ಲಿ ಬಸವೇಶ್ವರನ ಮನಸ್ಸಿನಲ್ಲಿ ದಂಡಾಳುಗಳನ್ನು ಕೂಡಿಸಿಕೊಂಡು ಬಿಜ್ಜಳನ ರಾಜ್ಯವನ್ನು ಹರಣ ಮಾಡಿ ಬಲಾತ್ಕಾರದಿಂದ ತನ್ನ ಮತಸ್ಥಾಪನೆಯನ್ನು ಮಾಡುವ ಪ್ರಯ ತ್ನವು ಎಷ್ಟು ಮಾತ್ರವೂ ಇದ್ದಿಲ್ಲೆಂದು ನಮಗೆ ತೋರುತ್ತದೆ. ಕೆಲ ವರು ಅವನ ಮೇಲೆ ಇಂಥ ಆರೋಪವನ್ನು ಹೊರಿಸುತ್ತಿರುವದರಿಂದ ನಾವು ಈ ವಿಷಯವನ್ನು ಇಲ್ಲಿ ಪ್ರಸ್ತಾಪಿಸಬೇಕಾಗಿದೆ.

(೫) ಬಸವೇಶ್ವರನು ಸಾಭಾವಿಕವಾಗಿ ಅತ್ಯಂತ ಮೃದು ಸ್ವಭಾ ವದವನೂ ಕೋಮಲ ಹೃದಯದವನೂ ಆಗಿದ್ದನೆಂಬುದು ಅವನ ವಚನ ಗಳಿಂದ ತಿಳಿದುಬರುತ್ತದೆ. ಎಷ್ಟೋ ಪ್ರಸಂಗಗಳಲ್ಲಿ ಶಿವಶರಣರಿಗೂ ಅವರ ವಿರೋಧಿಗಳಿಗೂ ಕಲ್ಯಾಣ ಪಟ್ಟಣದಲ್ಲಿ ವ್ಯಾಜ್ಯಗಳಾಗಿದ್ದು ಪುರಾ ಣಗಳಿಂದ ತಿಳಿದುಬರುತ್ತದೆ. ಅಂಥ ಪ್ರಸಂಗಗಳಲ್ಲಿ ಬಸವೇಶ್ವರನು ಉಭಯ ಪಕ್ಷದವರಿಗೆ ಸಮಾಧಾನ ಹೇಳುವಲ್ಲಿ ಪ್ರಯತ್ನಿಸಿದ್ದಾನೆಯೇ ಹೊರ್ತು ಅವರಲ್ಲಿ ಪರಸ್ಪರ ವೈರಭಾವವನ್ನು ಬೆಳಸಲಿಕ್ಕೆ ಪ್ರಯತ್ನಿ ಸಿದ್ದು ಕಂಡುಬರುವದಿಲ್ಲ. ಅವನ ಧಾರ್ಮಿಕ ವರ್ಚಸ್ಸಿನ ಫಲವಾಗಿ ಅನೇಕ ಶಿವಶರಣರು ಅನೇಕ ಕಡೆಯಿಂದ ಕಲ್ಯಾಣ ಪಟ್ಟಣಕ್ಕೆ ಬಂದಿ ರಬಹುದು. ಆದರೆ ಅವರಲ್ಲಿ ರಾಜ್ಯದಲ್ಲಿ ಯಾವ ತರದ ಅನಾಹುತ ಗಳನ್ನು ಉಂಟು ಮಾಡಬೇಕೆಂಬ ಆಕಾಂಕ್ಷೆಗಳು ಎಷ್ಟು ಮಾತ್ರವೂ ಕಂಡುಬರುವದಿಲ್ಲ. ಅವರ ಅಸಂಖ್ಯ ಉಕ್ತಿಗಳನ್ನು ನಾವು ಈ ವರೆಗೆ ಪ್ರಸಿದ್ಧ ಮಾಡಿದ್ದೇವೆ. ಆದರೆ ಅವುಗಳಲ್ಲಿ ರಾಜ್ಯಕ್ರಾಂತಿಯ ವಿಚಾ ರಗಳು ಎಷ್ಟು ಮಾತ್ರವೂ ಕಂಡುಬರುವದಿಲ್ಲ. ೧ ಲಕ್ಷ ೯೬ ಸಾವಿರ ಜಂಗಮರು ಕಲ್ಯಾಣ ಪಟ್ಟಣದಲ್ಲಿ ಕೂಡಿದ್ದರೆಂತಲೂ ಅವರೆಲ್ಲರಿಗೆ ಬಸ ವೇಶ್ವರನು ಸುಗ್ರಾಸ ಭೋಜನವನ್ನು ಮಾಡಿಸುತ್ತ ಕಾಲಕಳೆಯುತ್ತಿದ್ದನೆಂ

ತಲೂ ಉಲ್ಲೇಖಗಳು ವಚನಗಳಲ್ಲಿ ಬರುವದಿಲ್ಲ. ಆದರೆ ಈಚೆಗೆ ಉಂಟಾದ ವೀರಶೈವ ಪುರಾಣಗಳಲ್ಲಿ ಇವು ಬರುತ್ತವೆ. ಇಂಥ ಕಥೆಗಳನ್ನು ಭಕ್ತರಿಂದ ಭೋಜನವನ್ನು ಅಪೇಕ್ಷಿಸುತ್ತಿದ್ದ ಜಂಗಮರು ಮತ್ತು ಮಠಾಧಿಕಾರಿಗಳು ಹಿಂದುಗಡೆ ಹುಟ್ಟಿಸಿರಬಹುದೆಂದು ನಮಗೆತೋರುತ್ತದೆ. ಅವು ಕಟ್ಟು ಕಥೆಗಳೇ ಹೊರ್ತು ಅವುಗಳಲ್ಲಿ ಎಷ್ಟು ಮಾತ್ರವೂ ಸತ್ಯಾಂಶವಿರುವದಿಲ್ಲ. ಬಸವೇಶ್ವರನು ಉದಾರ ಗುಣವುಳ್ಳವನಾಗಿದ್ದನೆಂಬುದು ನಿಜವು. ಆದರೆ 'ಕಾಯಕ' ಅಂದರೆ ಉದ್ಯೋಗಕ್ಕೆ ಮಹತ್ವ ಕೊಡಬೇಕೆಂದು ಯಾವ ಶಿವಾನುಭವ ಶಾಸ್ತ್ರವು ಶಿವಾನುಭವ ಮಂಟಪದಲ್ಲಿ ಉದ್ಭವಿಸಿರುತ್ತದೆಯೋ ಅಂಥಲ್ಲಿ ಬಸವೇಶ್ವರನಿಂದ ಈ ತರದ ವರ್ತನೆಯು ಅವನಿಂದ ನಡೆದಿರಬಹುದೆಂದು ನಮಗೆ ತೋರುವದಿಲ್ಲ.

(೬) ಆದ್ದರಿಂದ ಬಸವೇಶ್ವರನ ಕಾಲದಲ್ಲಿ ಕಲ್ಯಾಣ ಪಟ್ಟಣದಲ್ಲಿ ೧ ಲಕ್ಷ ೯೬ ಸಾವಿರ ಜಂಗಮರು ಇದ್ದಿಲ್ಲವೆಂದು ನಮಗೆ ತೋರಿದರೂ ಅಷ್ಟರಲ್ಲಿ ದೇಶದಲ್ಲೆಲ್ಲ ವೀರಶೈವ ಧರ್ಮದ ಬಗ್ಗೆ ಪ್ರೀತಿಯುಳ್ಳಂಥವರು ಬಹುಜನರು ಉದಯವಾಗಿದ್ದರೆಂಬದರಲ್ಲಿ ಏನೂ ಸಂದೇಹವಿಲ್ಲ. ಇಂಥವರಲ್ಲನೇಕರು ಬಸವೇಶ್ವರನಿಗೆ ಪ್ರಧಾನಿ ಪಟ್ಟವಾದಬಳಿಕ ಕಲ್ಯಾಣಕ್ಕೆ ಬಂದಿರಬಹುದು. ಆದರೆ ಲಕ್ಷಾಂತರಗಟ್ಟಲೆ ಜನರು ಅವನಲ್ಲಿಗೆ ಬಂದಿದ್ದರೆಂಬದರಲ್ಲಿ ತೀರ ಅತಿಶಯೋಕ್ತಿ ಇದೆ. ಅವನಲ್ಲಿಗೆ ಆಗಮಿಸಿದವರು ಕೇವಲ ಬಸವೇಶ್ವರನು ಪ್ರತಿಪಾದಿಸುತ್ತಿದ್ದ ಧಾರ್ಮಿಕ ತತ್ವಗಳನ್ನು ತಿಳಿದುಕೊಳ್ಳಲಿಕ್ಕೆ ಬಂದವರೇ ಹೊರ್ತು ಬಿಜ್ಜಳನೊಡನೆ ಕಾದಾಡಲಿಕ್ಕೆ ಅಥವಾ ಅವನ ರಾಜ್ಯದಲ್ಲಿ ಅನಾಹುತಗಳನ್ನೆಬ್ಬಿಸಲಿಕ್ಕೆ ಅಥವಾ ಸುಗ್ರಾಸ ಭೋಜನವನ್ನು ಮಾಡಲಿಕ್ಕೆ ಬಂದವರಲ್ಲ.

---

# ಆತ್ಮನಿವೇದನೆ.

ಶಿವಾನುಭವ ಪತ್ರಿಕೆಗೆ ಈ ಸಂಚಿಕೆಯಿಂದ ೧೮ ನೇ ವರ್ಷವು ಪ್ರಾರಂಭವಾಯಿತು. ಈ ವರೆಗೆ ಅದಕ್ಕೆ ಸಹಾಯವನ್ನು ನೀಡಿದ ಎಲ್ಲ ಚಂದಾದಾರರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ. ಹಿಂದಿನ ವರ್ಷದಲ್ಲಿಯು ನಾವು ಏಳು ಹೊಸ ಗ್ರಂಥಗಳನ್ನು ಪ್ರಕಟ ಪಡಿಸಿದೆವು. ಅಲ್ಲದೆ ಅನೇಕ ಚರಿತ್ರಾತ್ಮಕ ಮತ್ತು ಐತಿಹಾಸಿಕ ವಿಷಯಗಳನ್ನೊಳಕೊಂಡ ಹೊಸ ಗ್ರಂಥಗಳನ್ನು ಪ್ರಾರಂಭಿಸಿದೆವು. ಶಿವಾನುಭವ ಸಂಘಗಳ ಸಂಖ್ಯೆಯು ಈಚೆಗೆ ಕ್ರಮೇಣ ಹೆಚ್ಚುತ್ತಲಿದೆ. ಆದ್ದರಿಂದ ಅವುಗಳಿಗೆ ಉಪಯೋಗವಾಗಬೇಕೆಂಬ ಉದ್ದೇಶದಿಂದ ಚಿಕ್ಕ ಪುಸ್ತಕಗಳನ್ನು ಪ್ರಸಿದ್ಧಿಸುವ ಕಾರ್ಯವನ್ನೂ ಸಹ ಕೈಕೊಂಡಿರುವೆವು. 'ಭಕ್ತಿಯ ವಚನಗಳು' ಎಂಬ ಗ್ರಂಥವು ಇಂಥ ಮಾಲಿಯಲ್ಲಿಯ ಮೊದಲನೆಯದಾಗಿದೆ. ಈ ಪ್ರಕಾರ ನಾವು ಕೈಕೊಂಡ ಗ್ರಂಥ ಪ್ರಕಟನಾ ಕಾರ್ಯದಲ್ಲಿ ಪತ್ರಿಕೆಯ ಚಂದಾದಾರರು ಮತ್ತು ಶಿವಾನುಭವ ಪ್ರೇಮಿಗಳು ನಮಗೆ ಎಂದಿನಂತೆ ಸಹಾಯವನ್ನು ನೀಡುತ್ತ ಬಂದಿದ್ದು ಅವರಿಗೆ ನಾವು ಬಹಳ ಆಭಾರಿಯಾಗಿದ್ದೇವೆ.

ಶಿವಾನುಭವ ಪತ್ರಿಕೆಯ ಕಾರ್ಯಗಳನ್ನು ನಾವೇ ವಿವರಿಸುವದಕ್ಕಿಂತಲೂ ನಮ್ಮ ಒಬ್ಬ ಚಂದಾದಾರರು ತಾವಾಗಿಯೇ ಬರೆದು ಕಳಿಸಿದ ಕೆಳಗಿನ ಲೇಖವನ್ನು ಪ್ರಸಿದ್ಧಿಸುವದು ಹೆಚ್ಚು ಯುಕ್ತವಾದುದೆಂದು ಭಾವಿಸಿ ನಾವು ಅದನ್ನು ಇಲ್ಲಿ ಕೊಡುತ್ತೇವೆ.

## ಸ್ವತಂತ್ರ ಜ್ಯೋತಿ—ಶಿವಾನುಭವ.

( ಲೇ-ಭಸ್ಮಾಂಗದೇವರು ಕೃಷ್ಣರಾಜನಗರ.)

ಇಂದಿಗೆ ಹದಿನೇಳು ವರ್ಷಗಳ ಹಿಂದೆ ನಮ್ಮ ವೀರಶೈವ ಸಮಾಜವು ತನ್ನ ಸಾಹಿತ್ಯವನ್ನು ಕಾಣದೆ ತನ್ನ ಆಚಾರ ವಿಚಾರಗಳನ್ನು ತಿಳಿಯುವ ಬಗ್ಗೆ ಹವಣಿಸುತ್ತಿತ್ತು. ನಾವೂ ಜಗತ್ತಿನಲ್ಲಿ ಒಂದು ಜನಾಂಗ, ಸ್ವತಂತ್ರವಾದ ಸಾಹಿತ್ಯವಿದೆ, ಸ್ವತಂತ್ರವಾದ ಹಾದಿ ಇದೆ, ಸ್ವತಂತ್ರವಾದ ದೈವಿಕ ಭಾವನೆ ಇದೆ, ಎಂಬುದನ್ನು ತಿಳಿಯದೆ ಹಲನಾರು ತರುಣರು ಇತರೇ ಸಮಾಜದ ನಂಬಿಗೆಗಳಿಗೆ ಒಳಗಾದರು. ತಮ್ಮ ಆಚಾರ ವಿಚಾರಗಳನ್ನು ಕೂಡ ನೆನಪಿಗೆ ತಂದುಕೊಳ್ಳದಾದರು. ಈ

ಸಮಯದಲ್ಲಿ ಶ್ರೀಮಾನ್ ರಾ. ಬ. ಫಕೀರಪ್ಪ ಗುರಬಸಪ್ಪ ಹಳಕಟ್ಟಿ ಯವರು ಧೈರ್ಯಗೊಂಡು ಸಮಾಜದ ಕುಂದುಕೊರತೆಗಳನ್ನು ನಿರ್ಮೂಲ ಮಾಡಲು ಮೊದಲು ಮಾಡಿದರು. ಸಮಾಜದ ಉನ್ನತಿ ಗೋಸುಗ ತಮ್ಮ ಆಸ್ತಿಯ ಹಿರಿಯ ಭಾಗವನ್ನೇ ಉಪಯೋಗಿಸಿದರು. ೧೯೨೬ರಲ್ಲಿ ಸ್ವತಂತ್ರವಾಗಿ ಶಿವಾನುಭವ ಮಾಸಪತ್ರಿಕೆಯನ್ನು ಹೊರ ಡಿಸಿ ಸಮಾಜಕ್ಕೆ ಏಕೆ, ಇಡೀ ಕರ್ನಾಟಕಕ್ಕೆ ಶಿವಾನುಭವ ಜ್ಯೋತಿ ಯನ್ನು ಬೆಳಗಿ ತೋರಿರುತ್ತಾರೆ. ಸ್ವತಂತ್ರ ಜ್ಯೋತಿ ಶಿವಾನುಭವದ ಬೆಳಕಿನಲ್ಲಿ ಒಂದುಕಡೆ ವಚನಸಾಹಿತ್ಯ ಭಾಂಡಾರ, ಮತ್ತೊಂದು ಕಡೆ ವೀರಶೈವ ಸಮಾಜದ ಚರಿತ್ರೆ, ಮೊಗದೊಂದುಕಡೆ ಶಿವಾನುಭವ ಕೋಶ, ಇನ್ನೊಂದುಕಡೆ ಆಚಾರ ವಿಚಾರಗಳ ಅನುಭವ, ನಾನಾಕಡೆ ನಾನಾ ವಿಧವಾದ ಸಂಸ್ಕೃತಿಗಳು ನಲಿನಲಿದಾಡುತ್ತಾ ಇವೆ. ಶಿವಾನುಭವ ಪತ್ರಿ ಕೆಯು ಜಗತ್ತಿನ ಜೀವನದ ತೊಡಕನ್ನು ಬಿಡಿಸುವ ವೀರಶೈವ ಧ್ವಜ ವನ್ನು ಕುಣಿಸುತ್ತಾ ಶಿವಶರಣರ ತತ್ವವನ್ನು ಜಗತ್ತಿಗೆ ಬೀರುತ್ತ ಅತ್ಯು ತ್ತಮವಾದ ಸೇವೆಯನ್ನು ಮಾಡುತ್ತಾ ಇದೆ. ಅನೇಕ ವೀರಶೈವೇತ ರರೂ ಕೂಡ ಈ ಪತ್ರಿಕೆಯ ಆಧಾರದಿಂದ ತಮ್ಮ ಜೀವನದ ಬೆಳ ಕನ್ನು ನೋಡಿರುತ್ತಾರೆ.

ಈ ಪತ್ರಿಕೆಯ ಸ್ಥಾಪಕರಾದ ಶ್ರೀ ಹಳಕಟ್ಟಿಯವರು ತಮ್ಮ ತನು ಮನ ಧನಗಳನ್ನೇ ಸಮಾಜ ಸೇವೆಗೋಸ್ಕರವೇ ಸೂಕ್ತವಾದ ಮಾರ್ಗದಲ್ಲಿ ವಿನಿಯೋಗಿಸಿ ಧನ್ಯರಾಗಿರುತ್ತಾರೆ. ಸ್ವತಂತ್ರವಾದ ಗುರು ಲಿಂಗ ಜಂಗಮದ ವಿಶಾಲ ತತ್ವವನ್ನು ತಮ್ಮ ಅಂಗ ಮನ ಪ್ರಾಣಗ ಳಲ್ಲಿ ಧರಿಸಿ ಸಹಜವಾದ ಲಿಂಗಾಂಗ ಸಾಮರಸ್ಯವನ್ನು ತಿಳಿದಿರುತ್ತಾರೆ. ಈ ಸ್ವತಂತ್ರ ಜ್ಯೋತಿಯಲ್ಲಿ ತಾವೊಬ್ಬರೇ ಮುಂದುವರಿಯುವುದು ಸರಿಯಲ್ಲವೆಂದೂ ನಮ್ಮ ಸಮಾಜವನ್ನೇ ಬೆಳಕಿಗೆ ಆಹ್ವಾನಿಸಿರುತ್ತಾರೆ. ಅನೇಕಾನೇಕ ವಿದ್ಯಾರ್ಥಿಗಳೂ ಬಡ ನೌಕರರೂ ಕೂಡ ಶ್ರೀ ಹಳಕ ಟ್ಟಿಯವರ ಕೃಪೆಗೆ ಪಾತ್ರರಾಗಿ ಸುಲಭವಾಗಿ ಶಿವಾನುಭವವನ್ನು ಹೊಂದುತ್ತಿರುತ್ತಾರೆ. ನಮ್ಮ ಸಮಾಜದ ಪಿತಾಮಹರ ವಿಶಾಲ ಹೃದಯವನ್ನು ಅವರ ಸೇವೆಯಿಂದಲೇ ತಿಳಿಯಬಹುದು. ಅವರ ಉಪಕಾರವು ನಮ್ಮ ಕರ್ನಾಟಕಕ್ಕೆ ಬಹಳವಾಗಿದೆಯೆಂದು ನಾನೋ ರ್ವನೇ ಹೇಳಬೇಕಾಗಿಲ್ಲ.

ಈ ಯುದ್ಧಕಾಲಗಳಲ್ಲಿಯೂ ಕೂಡ ಶಿವಾನುಭವವು ತನ್ನ ಹದಿನೆಂಟನೆಯ ವರ್ಷಕ್ಕೆ ಶುಭಸೂಚಕವಾದ ಹೆಜ್ಜೆಯನ್ನು ಇಟ್ಟಿದೆ. ಈ ಜ್ಯೋತಿಯನ್ನು ಕಾಪಾಡಿಕೊಂಡು ಬರಲು ನಮ್ಮೀ ಹಿರಿಯರು ಉದಾರವಾದ ಸಹಾಯವನ್ನು ನೀಡಿ ಮುಂದೆ ಬರಹತ್ತಿರುವುದು ನಮ್ಮ ಸಮಾಜದ ಏಳಿಗೆಯನ್ನು ತೋರಿಸುತ್ತದೆ.

ವೀರಶೈವ ಬಂಧುಗಳೇ, ಶಿವಾನುಭವವು ಸ್ವತಂತ್ರವಾದ ಜ್ಯೋತಿ. ಈ ಸ್ವತಂತ್ರ ಜ್ಯೋತಿಯೇ ವೀರಶೈವ ಸಮಾಜದ ಆತ್ಮಜ್ಯೋತಿ. ಈ ಜ್ಯೋತಿಯನ್ನು ಕಾಪಾಡಿಕೊಂಡು ಬರುವದು ಪ್ರತಿ ವೀರಶೈವನ ಹಿರಿದಾದ ಹೆಮ್ಮೆ. ಇದೇ ನಮ್ಮ ಕರ್ತವ್ಯವೆಂದು ಯಾವ ವಿವೇಕಶಾಲಿಯಾದರೂ ಮನಗಾಣಬಹುದು.

ಪ್ರಿಯ ಮಿತ್ರರೇ, ಮತ್ತು ಬಂಧುಗಳೇ, ನಮ್ಮ ಸಮಾಜದ ಹಣವು ನಿಷ್ಕಾರಣವಾದ ಕಾರ್ಯಗಳಿಗೆ ವ್ಯರ್ಥವಾಗಿ ಹೋಗುತ್ತದೆ. ನಾವುಗಳು ಕೈಲಾದ ಮಟ್ಟಿಗಾದರೂ ಸದುಪಯೋಗ ಪಡಿಸಲು ಆತುರಪಡಬೇಕು. ಶಿವಾನುಭವ ಸಹಾಯ ನಿಧಿಯನ್ನು ಬೆಳಸಬೇಕು. ಅನೇಕ ತರುಣರೂ ವಿದ್ವನ್ಮಣಿಗಳೂ ತಮ್ಮ ತಮ್ಮ ವಿದ್ಯೆಯನ್ನು ಸಮಾಜದ ಉನ್ನತಿಯ ಕಡೆ ಉಪಯೋಗಿಸಬೇಕು. ಭಕ್ತಿಪ್ರದಾಯಕವಾದ ಸಣ್ಣ ಸಣ್ಣ ಕಥೆಗಳನ್ನು ಬರೆದು ಶಿವಾನುಭವ ಪತ್ರಿಕೆಯಲ್ಲಿ ಮುದ್ರಿಸಬಹುದು. ಹಾಗೆಯೇ ಅನೇಕ ನಾಟಕಗಳೂ ಅನೇಕಾನೇಕ ಕಾದಂಬರಿಗಳೂ ಕೂಡ ಭಕ್ತಿದಾಯಕವಾಗಿ ಮಾರ್ಪಾಡು ಮಾಡಲು ಬರುವುದಿಲ್ಲವೇ? ನಾನಾ ರೀತಿಯಿಂದ ಸಮಾಜದಲ್ಲಿ ವಿವೇಕವು ತುಂಬಿ ತುಳುಕುವಂತೆ ಮಾಡಬಹುದು. ಆದರೆ ಅನೇಕರು ಡಿಗ್ರಿ ಪಡೆದವರು ನಮ್ಮ ಸಮಾಜದ ಕಡೆಗೆ ಕಣ್ಣು ಬಿಟ್ಟು ನೋಡದೆ ಇದ್ದು ಪರ ಸಮಾಜದ ಮೆಂಬರುಗಳಾಗಿ ನಮ್ಮನ್ನು ಧಿಕ್ಕರಿಸುತ್ತಿರುವದು ತನ್ನಾತ್ಮವೇ ತನಗೆ ಹಗೆ ಎಂಬಂತಾಗಿದೆ.

ಇನ್ನಾದರೂ ತನ್ನ ತಾಯಿಯ ಸೇವೆಯನ್ನು ಮಾಡಲು ಮೊದಲು ಮಾಡಿ ನಮ್ಮ ಮುಂದಿನ ಜನಾಂಗಕ್ಕೆ—ಜನಾಂಗದಲ್ಲಿ ಒಂದು ಮರ್ಯಾದೆ ಸ್ಥಾನವನ್ನು ಕಲ್ಪಿಸಿಕೊಡಿ. ಇವೇ ಮೊದಲಾದ ಕಾರ್ಯಗಳಿಗೆ ಕಂಕಣಬದ್ಧವಾದ ಶಿವಾನುಭವ ಸಹಾಯ ನಿಧಿಯನ್ನು ನಾನಾ ಮುಖವಾಗಿ ಬೆಳಸಿ. 'ಅರಿತರೆ ಶರಣ ಮರೆತರೆ ಮಾನವ' ಎಂಬುದನ್ನು ಮರೆಯಬೇಡಿ. ಸ್ವತಂತ್ರ ಜ್ಯೋತಿ ಶಿವಾನುಭವವು ಸ್ಥಿರವಾಗಲಿ.

---

**ಯಲಹಂಕನಾಡ ಪ್ರಭುಗಳು:** ಇವರಾದರೂ ರಣಭೈರೇಗೌಡನ ಶಾಖೆಯವರು. ಇವರ ಮೂಲಪುರುಷನು ೧೪೧೮ ರಿಂದ ೧೪೩೩ ವರೆಗೆ ಆಳಿದ ಜಯಗೌಡನು. ಇವರ ವಂಶಜನಾದ ಕೆಂಪೇಗೌಡನು ಬೆಂಗಳೂರನ್ನು ಸ್ಥಾಪಿಸಿದನು. ಈತನು ಗಗನಚಾರ್ಯ ಮಹಾಸ್ವಾಮಿಗಳ ಮೂಲಕ ವೀರಶೈವಕ್ಕೆ ಒಲಿದವನಾಗಿದ್ದನೆಂದು ತಿಳಿಯುತ್ತದೆ. ಈತನು ೧೫೧೩ ರಿಂದ ೧೫೬೯ ವರೆಗೆ ಆಳಿದನು.

ವಿಜಯನಗರದ ರಾಜ್ಯವು ಹಾಳಾದ ಬಳಿಕ ಮೈಸೂರು ಸೀಮೆಯಲ್ಲಿ ಅನೇಕ ಚಿಕ್ಕದೊಡ್ಡ ಪಾಳ್ಯಗಳು ಇಡೀ ದೇಶದಲ್ಲಿ ಉಂಟಾಗಿದ್ದವು. ವೀರಶೈವನಾದ ನೂರೊಂದು ಕವಿಯು ತನ್ನ ಸೌಂದರ ಕಾವ್ಯದಲ್ಲಿ ಮುಖ್ಯವಾಗಿ ಮೈಸೂರು ದೇಶದ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲಿ ಆಳುತ್ತಿದ್ದ ೩೯ ಜನ ಪಾಳ್ಯಗಾರರ ಹೆಸರುಗಳನ್ನು ತನ್ನ ಗ್ರಂಥದಲ್ಲಿ ಕೊಟ್ಟಿದ್ದಾನೆ.[೧] ಇವರಲ್ಲನೇಕರು ವೀರಶೈವರಿರಬಹುದೆಂದು ತೋರುತ್ತದೆ. ಆದರೆ ಈ ಪಾಳ್ಯಗಳು ಮುಂದೆ ಬಹುತರವಾಗಿ ಮೈಸೂರು ಅರಸರ ರಾಜ್ಯದಲ್ಲಿ ಸೇರ್ಪಡೆಯಾದದ್ದರಿಂದ ಇವರು ಯಾವ ಧರ್ಮವನ್ನು ಪಾಲಿಸುತ್ತಿದ್ದರೆಂಬುದನ್ನು ಈಗ ಕಂಡುಹಿಡಿಯುವದು ದುಸ್ತರವಾಗಿದೆ.

ಆದರೆ ಆನೇಕಲ್ಲು, ಡೆಂಕಣಕೋಟೆ, ಉಮ್ಮತ್ತೂರು, ನುಗ್ಗೇಹಳ್ಳಿ, ಚಿಟ್ಟನಮರಿಗೆ, ಸೂಲಗಿರಿ, ಬೇರಿಕೆ, ಬಾಗುಳಿ, ಪಿರಿಯಪಟ್ಟಣ, ಹದಿನಾಡು, ಮುದಿಗೆರೆ, ಬಿಜ್ಜವರ, ಕಳಲೆ, ಕಾರ್ಯ, ಇಲ್ಲಿಯ ಪಾಳ್ಯಗಾರರು ಪೂರ್ಣ ವೀರಶೈವರಾಗಿಯೂ, ಗುಮ್ಮಿನಾಯಕನ ಪಾಳ್ಯ,

---

ಟೀಪು:— ಈ ಪಾಳ್ಯಗಳು ಯಾವವೆಂದರೆ, ಜಾಂಬಳ್ಳಿ, ನುಗ್ಗೇಹಳ್ಳಿ, ಕಡಲೂರು, ಶಿರಪುರ, ಡಂಕಣಕೋಟೆ, ಕಡಬ, ಹೆಬ್ಬೂರು, ಮದ್ದೂರು, ಮಾಗಡಿ, ಚಿಕ್ಕನಾಯಕನಹಳ್ಳಿ, ಸೂಲಗಿರಿ, ಬಳ್ಳಪುರ, ಹರದನಹಳ್ಳಿ, ಸಿಂಹಾಸನಪುರ, ಫಣಿಪುರ, ಬೇಲೂರು, ನರಸಿಂಹಪುರ, ಕಿಕ್ಕೇರಿ, ಹಾರನಹಳ್ಳಿ, ಅರ್ಕಲಗೂಡು, ದೋರಾಂಬುಧಿ, ತುರುಗೆರೆ, ದೇವರಾಯದುರ್ಗ, ತುಮಕೂರು, ಚನ್ನಪಟ್ಟಣ, ಕುಣಗಿಲು, ಮದ್ದಗಿರಿ, ಹೊಸವೂರು, ಯಳಂದೂರು ಹುಲಿಯೂರುದುರ್ಗ, ನಿಡಗಲ್ಲು, ಸತ್ಯಮಂಗಳ, ಕುರಿಗೆರೆ, ಹೊನ್ನವಳ್ಳಿ, ಧಾರಾಪುರ, ಶಾಲ್ಯ, ನಾಮಕಲ್ಲು, ಪಿರಿಯಾಪಟ್ಟಣ, ಮುತ್ತೂರು ಎಂದಿವೆ— ಕವಿಚರಿತೆ ಭಾಗ ೨ ನೋಡಿರಿ.)

ಧರ್ಮಾವರಂ, ಬಳ್ಳಾರಿ ಜಿಲ್ಲೆಯಲ್ಲಿಯ ಹರಪನಹಳ್ಳಿ, ಮತ್ತು ಅನಂತ ಪುರ ಇಲ್ಲಿಯ ಪಾಳ್ಯಗಾರರು ಕೆಲಕಾಲ ವೀರಶೈವರಾಗಿಯೂ ಇದ್ದರೆಂದು ತಿಳಿದುಬರುತ್ತದೆ.

ಈ ಎಲ್ಲ ವಿವರಣೆಗಳ ಮೇಲಿಂದ ೧೬ನೇ ಶತಮಾನದಿಂದ ೧೮ನೇ ಶತಮಾನದ ವರೆಗೆ ಮೈಸೂರು ಪ್ರಾಂತದ ವಾಯುವ್ಯ, ಪಶ್ಚಿಮ, ದಕ್ಷಿಣ ಮತ್ತು ಆಗ್ನೇಯ ಭಾಗಗಳಲ್ಲಿ ವೀರಶೈವ ಸಂಸ್ಕೃತಿಯು ವಿಶೇಷ ಪ್ರಾಬಲ್ಯ ಹೊಂದಿತ್ತೆಂದು ಕಂಡುಬರುತ್ತಿದೆ. ಆದರೆ ವಾಯುವ್ಯ ಮತ್ತು ಪಶ್ಚಿಮ ಭಾಗಗಳು ಪೂರ್ಣ ವೀರಶೈವ ಸಂಸ್ಕೃತಿಯುಳ್ಳವೂ, ದಕ್ಷಿಣ ಮತ್ತು ಆಗ್ನೇಯ ಭಾಗಗಳು ಬ್ರಾಹ್ಮಣ ಮತ್ತು ವೀರಶೈವ ಮಿಶ್ರ ಸಂಸ್ಕೃತಿ ಯುಳ್ಳವೂ ಆಗಿದ್ದವೆಂದು ತೋರುತ್ತದೆ. ಈ ಭಾಗಗಳಲ್ಲಿ ಇದ್ದ ಮೈಸೂರು ರಾಜಮನೆತನದ ಆರಂಭಕಾಲದ ರಾಜರೂ ಅವರ ದೂರಿನ ಬಂಧುಗಳೂ ಪೂರ್ಣವಾಗಿ ವೀರಶೈವಧರ್ಮವನ್ನು ಯಾವಾಗಲೂ ಆಚ ರಿಸುವವರಾಗಿದ್ದರು. ಅವತಿ ನಾಡ ಪ್ರಭುಗಳಲ್ಲಿ ಕೆಲವು ಶಾಖೆಗಳು ಪೂರ್ಣ ವೀರಶೈವತ್ವವನ್ನೂ ಅವರ ಬೇರೆ ಕೆಲವು ಶಾಖೆಗಳು ಬ್ರಾಹ್ಮಣ ಮತ್ತು ವೀರಶೈವ ಧರ್ಮಗಳನ್ನು ಮಿಶ್ರವಾಗಿಯೂ ಆಚರಿಸುತ್ತ ಬಂದರು.

ಆದರೆ ಮೈಸೂರು ಪ್ರಾಂತದ ಪೂರ್ವ, ಈಶಾನ್ಯ ಮತ್ತು ಉತ್ತರ ಭಾಗಗಳಲ್ಲಿ ಮುಖ್ಯವಾಗಿ ಬೇಡರು, ಛತ್ರಿಯರು ಮತ್ತು ಮುಸಲ್ಮಾ ನರು ರಾಜ್ಯವಾಳುತ್ತಿದ್ದರು. ಈಶಾನ್ಯ ಮತ್ತು ಉತ್ತರ ಭಾಗಗಳಲ್ಲಿ ಚಿತ್ರಕಲ್ಲದುರ್ಗದ ಮತ್ತು ತರೀಕೆರೆಯಲ್ಲಿ ಆಳುತ್ತಿದ್ದ ಬಸವ ಪಟ್ಟಣದ ನಾಯಕರೂ, ಪಶ್ಚಿಮದಲ್ಲಿ ಐಗೂರನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದ ಬಾಳಮದ ನಾಯಕರೂ ಪ್ರಬಲರಾಗಿ ದ್ದರು. ಚಿತ್ರಕಲ್ಲದುರ್ಗದ ದಕ್ಷಿಣ ಮೂಲೆಯಲ್ಲಿ ಛತ್ರಿಯ ವಂಶದವ ರಾದ ನಿಡುಗಲ್ಲಿನ ಮತ್ತು ಮದ್ದಗಿರಿಯ ಅಧಿಪತಿಗಳೂ ಇವರ ಪಶ್ಚಿಮ ಭಾಗದಲ್ಲಿ ಸೀರ್ಯದ ನವಾಬರೂ ಮೈಸೂರಿನ ಮಧ್ಯಪ್ರದೇಶದಲ್ಲಿ ಚನ್ನಪಟ್ಟಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು 'ಜಗ ದೇವರಾಯ' ಎಂಬ ಹೆಸರಿನ ಅಧಿಪತಿಗಳೂ ಆಳುತ್ತಿದ್ದರು.

ಇವರಲ್ಲಿ ವೀರಶೈವ ರಾಜರು ಆರಂಭದಲ್ಲಿ ಸಣ್ಣ ಪಾಳ್ಯಗಾರ ರಾಗಿದ್ದರೂ ಅವರು ಬರಬರುತ್ತ ಪ್ರಬಲರಾಗಿ ಮೈಸೂರು ದೇಶದ

ಪಶ್ಚಿಮದ ಅರ್ಧಭಾಗ, ಇಡೀ ಕೊಡಗುಪ್ರಾಂತ, ಉತ್ತರಕ್ಕೆ ಕಾರವಾರ ಜಿಲ್ಲೆ, ಮತ್ತು ಪಶ್ಚಿಮಕ್ಕೆ ಮಂಗಳೂರು ಜಿಲ್ಲೆ ಇಷ್ಟು ಪ್ರದೇಶಗಳನ್ನು ತಮ್ಮ ವಶಮಾಡಿಕೊಂಡು ಆಳುತ್ತ ಬಂದರು. ಅವರು ವಿಜಾಪುರ, ಮೊಗಲ, ಮರಾಠಾ, ಪೋರ್ತುಗೀಜ ಮತ್ತು ಇಂಗ್ಲಿಷರ ಆಕ್ರಮಣಗಳನ್ನು ಶೂರತನದಿಂದಲೂ ಜಾಣತನದಿಂದಲೂ ಎದುರಿಸುತ್ತ ಬಂದರು. ಅವರು ಆಳಿದ ದೇಶಗಳಲ್ಲಿಯ ಜನರು ಶ್ರೀಮಂತಿಕೆಯಲ್ಲಿಯೂ ನಾಗರಿಕತೆಯಲ್ಲಿಯೂ ವ್ಯಾಪಾರೋದ್ಯೋಗಗಳಲ್ಲಿಯೂ ಉಳಿದ ಭಾಗಗಳಿಗಿಂತಲೂ ಬಹಳ ಮಿಗಿಲಾದವರಾಗಿದ್ದರು. ಈ ರಾಜರು ವಾಙ್ಮಯ ಪ್ರೇಮಿಗಳಾಗಿ ಗ್ರಂಥಕಾರರಿಗೆ ಬಹಳ ಉತ್ತೇಜನವನ್ನು ಕೊಟ್ಟಿದ್ದಾರೆ. ಅವರಲ್ಲನೇಕರು ಆರಂಭದಲ್ಲಿ ವೀರಶೈವರಿರದಿದ್ದರೂ ಅವರ ಮುಂದಿನ ವಂಶಜರು ವೀರಶೈವ ಧರ್ಮದ ಸಲುವಾಗಿ ಪ್ರೀತಿಯುಳ್ಳವರಾಗಿ ಅದನ್ನು ಪೋಷಿಸುವವರಾದರು. ಇವರಲ್ಲಿ ಕೆಲವರು ಸ್ವತಃ ಕವಿಗಳೂ, ವಚನಕಾರರೂ ಆಗಿದ್ದಾರೆ. ಈ ಎಲ್ಲ ಸಂಗತಿಗಳು ಆ ಕಾಲಕ್ಕೆ ವೀರಶೈವ ಧರ್ಮದ ವರ್ಚಸ್ಸು ದೇಶದಲ್ಲಿ ಎಷ್ಟಿತ್ತೆಂಬುದನ್ನು ಚನ್ನಾಗಿ ವ್ಯಕ್ತಪಡಿಸುತ್ತವೆ. ಹೀಗಿದ್ದರೂ ಕೂಡ ಈ ರಾಜರು ಧರ್ಮಾಂಧರಾಗಿರಲಿಲ್ಲ. ಕೆಳದಿಯ ರಾಜರು ಶೃಂಗೇರಿಯ ಶಂಕರಾಚಾರ್ಯರಿಗೆ ಆಗಿಂದಾಗ್ಗೆ ಬಹಳ ಸಹಾಯ ಮಾಡುತ್ತ ಬಂದಿದ್ದಾರೆ. ಮೈಸೂರಿನ ಆರಂಭದ ಅರಸರು ವೀರಶೈವರಿದ್ದರೂ ಅವರು ರಾಮಾನುಜಾಚಾರ್ಯರು ವಾಸಿಸಿದ್ದ ಮೆಲುಕೋಟೆಯಲ್ಲಿಯ ಪವಿತ್ರ ಸ್ಥಾನಗಳನ್ನು ಅತ್ಯಂತ ಆದರಿಸುತ್ತಬಂದರು. ಅಲ್ಲದೆ ಈ ಎಲ್ಲ ರಾಜಮನೆತನದವರು ತಮ್ಮ ಆಡಳಿತೆಯಲ್ಲಿ ಎಲ್ಲ ಸಮಾಜದವರಿಗೆ ಅಧಿಕಾರ ಸ್ಥಾನಗಳನ್ನು ಕೊಟ್ಟಿದ್ದು ಕಂಡುಬರುತ್ತದೆ. ಕೆಳದಿಯ ರಾಜರು ಮಂಗಳೂರು ಕಾರವಾರ ಜಿಲ್ಲೆಯಲ್ಲಿರುವ ಸಾರಸ್ವತ ಮೊದಲಾದ ಸಮಾಜದವರಿಗೂ ಮೈಸೂರು ರಾಜರು ಶ್ರೀ ವೈಷ್ಣವ ಮೊದಲಾದ ಬ್ರಾಹ್ಮಣ ಸಮಾಜದವರಿಗೂ ಆಶ್ರಯಕೊಟ್ಟಿರುತ್ತಾರೆ. ಈ ಪ್ರಕಾರ ವೀರಶೈವ ರಾಜರು ವಿಜಯನಗರದ ರಾಜರ ಪಾರಂಪರ್ಯವನ್ನು ೨೦೦—೩೫೦ ವರ್ಷಗಳ ವರೆಗೆ ಕರ್ನಾಟಕದಲ್ಲಿ ಕಾಯ್ದುಕೊಂಡು ಆಳಿದ್ದಾರೆ. ಮುಂದೆ ಬರಬರುತ್ತ ಬಿದನೂರು ಮತ್ತು ಮೈಸೂರು ರಾಜರು ಇಡೀ ಮೈಸೂರು ದೇಶವನ್ನು ತಮ್ಮ ತಮ್ಮೊಳಗೆ ಆಕ್ರಮಿಸುವಷ್ಟು ಪ್ರಬಲ

ರಾದರು. ಅವರು ಪೂರ್ವದಿಕ್ಕಿನಲ್ಲಿದ್ದ ರಾಜ್ಯಗಳನ್ನು ತಮ್ಮ ಕೈವಶ ಮಾಡಿಕೊಳ್ಳುವಷ್ಟು ಸಾಮರ್ಥ್ಯವನ್ನು ಹೊಂದಿದವರಾಗಿದ್ದರು. ಆದರೆ ಅಷ್ಟರಲ್ಲಿ ಹೈದರನಾಯಕನು ಇಡೀ ನಾಡಿನಲ್ಲಿ ಬಲಶಾಲಿಯಾಗಿ ಮೈಸೂರು ದೇಶದಲ್ಲಿಯ ಎಲ್ಲ ಪಾಳ್ಯಗಾರರನ್ನೂ ರಾಜರನ್ನೂ ಮೂಲೆಗೊತ್ತಿ ತಾನೇ ಸ್ವತಂತ್ರನಾಗಿ ರಾಜ್ಯವಾಳಹತ್ತಿದನು.

---

## ೧೪ ನೇ ಪ್ರಕರಣ.

### ೧೬ ನೇ ೧೭ ನೇ ೧೮ ನೇ ಶತಮಾನಗಳಲ್ಲಿಯ ವೀರಶೈವ ದೇಸಗತಿಗಳು.

ನಾವು ಹಿಂದಿನ ಪ್ರಕರಣದಲ್ಲಿ ತಾಳೀಕೋಟಿ ಯುದ್ಧವಾದ ಬಳಿಕ ವಿಜಯನಗರದ ರಾಜ್ಯದಲ್ಲಿ ಯಾವ ಆಡಳಿತೆಗಳು ಸ್ಥಾಪಿತವಾದವೆಂಬುದನ್ನು ವಿವರಿಸಿದೆವು. ಆದರೆ ಈಗಿನ ಪ್ರಕರಣದಲ್ಲಿ ಉತ್ತರ ಕರ್ನಾಟಕದಲ್ಲಿ ಯಾವ ಪರಿಸ್ಥಿತಿಯುಂಟಾಯಿತೆಂಬುದನ್ನು ವಿವೇಚಿಸುವೆವು. ೧೫೬೪ ರಲ್ಲಿ ತಾಳೀಕೋಟಿ ಕಾಳಗವಾದ ಬಳಿಕ ೧೬೮೬ ರ ವರೆಗೆ ಈ ಭಾಗದಲ್ಲಿ ವಿಜಾಪುರ ಬಾದಶಹರು ಯಾವ ಪ್ರತಿಸ್ಪರ್ಧಿಗಳಿಲ್ಲದೆ ರಾಜ್ಯವಾಳಿದರು. ಹೇಗೆ ವಿಜಯನಗರದ ರಾಜರು ಪಾಳ್ಯಗಳ ಮುಖಾಂತರ ರಾಜ್ಯವಾಳುತ್ತ ಬಂದರೋ ಹಾಗೆಯೇ ವಿಜಾಪುರ ಬಾದಶಹರು ದೇಸಗತಿಗಳ ಮುಖಾಂತರ ತಮ್ಮ ಆಡಳಿತೆಯನ್ನು ಸಾಗಿಸುತ್ತ ಬಂದರು. ಈ ದೇಸಗತಿಯವರೇ ಯುದ್ಧಕಾಲದಲ್ಲಿ ತಮ್ಮ ದಂಡುಗಳನ್ನು ತೆಗೆದುಕೊಂಡು ಬಂದು ಬಾದಶಹರಿಗೆ ಸಹಾಯವಾಗುತ್ತಿದ್ದರು. ಮತ್ತು ಶಾಂತಿಕಾಲದಲ್ಲಿ ತಮ್ಮ ಹಳ್ಳಿಗಳಿಂದ ಕಂದಾಯವನ್ನು ವಸೂಲು ಮಾಡಿ ಸರಕಾರಕ್ಕೆ ಕಳಿಸುವದು, ತಮ್ಮ ಕಡೆಗಿನ ನಾಡಿನ ಸುವ್ಯವಸ್ಥೆ, ಈ ಮೊದಲಾದ ಕಾರ್ಯಗಳನ್ನು ಜರಗಿಸುತ್ತಿದ್ದರು. ಈ ತೆರದ ರಾಜ್ಯವ್ಯವಸ್ಥೆಯು ಉತ್ತರ ಕರ್ನಾಟಕದಲ್ಲಿ ೧೬೮೬ ರ ವರೆಗೂ ನಡೆಯಿತು. ವಿಜಾಪುರದ ದೇಸಗತಿಗಳಲ್ಲಿ ವೀರಶೈವರ ದೇಸಗತಿಗಳೇ ಮುಖ್ಯವಾಗಿದ್ದು ಅವುಗಳ ಸಂಖ್ಯೆಯಾದರೂ ಬಹಳ ದೊಡ್ಡದಾಗಿತ್ತು.

ವಿಜಾಪುರ ರಾಜ್ಯವು ಹಾಳಾದ ಬಳಿಕ ದೇಶದಲ್ಲೆಲ್ಲ ಅವ್ಯವಸ್ಥೆಯುಂಟಾಯಿತು. ಔರಂಗಜೇಬ ಬಾದಶಹನು ಮೊದಲು ವಿಜಾಪುರ ಪಟ್ಟಣ, ಆಮೇಲೆ ಬೀಳಗಿ ಪೇಠಾದಲ್ಲಿಯ ಗಲಗಲಿ, ಈ ಸ್ಥಳಗಳಲ್ಲಿ ತನ್ನ ದಂಡಿನ ಮುಖ್ಯ ಠಾಣ್ಯಗಳನ್ನು ಮಾಡಿಕೊಂಡು ಆಗ ಪುಂಡಾಟಿಕೆಯನ್ನು ನಡಿಸಿದ್ದ ಮರಾಠರೊಡನೆ ಕಾಳಗ ಮಾಡುತ್ತ ಇರಬೇಕಾಯಿತು. ಮುಂದೆ ಅವನು ಅಹಮ್ಮದನಗರದಲ್ಲಿ ೧೭೦೭ ರ ಸುಮಾರಕ್ಕೆ ದೇಹವಿಟ್ಟನು.

ಔರಂಗಜೇಬ ಬಾದಶಹನ ತರುವಾಯ ಅವನು ತನ್ನ ರಾಜ್ಯದಲ್ಲಿ ನೇಮಿಸಿದ ಸುಬೇದಾರರೆಲ್ಲರು ಸ್ವತಂತ್ರರಾಗಿ ರಾಜ್ಯವಾಳಹತ್ತಿದರು. ಈ ಪ್ರಕಾರ ಕರ್ನಾಟಕದ ಪೂರ್ವಭಾಗದಲ್ಲಿ ಹೈದರಾಬಾದದ ನಿಜಾಮನ ರಾಜ್ಯ, ಆದವಾನಿ, ಕಡಪಾ, ಕರ್ನೂಲ ನವಾಬರ ರಾಜ್ಯಗಳು ಉತ್ಪನ್ನವಾದವು. ಮತ್ತು ಅದರ ಮಧ್ಯ ಪ್ರದೇಶದಲ್ಲಿ ಸವಣೂರ ನವಾಬರ ರಾಜ್ಯವು ಸ್ಥಾಪಿತವಾಯಿತು. ಮುಂದೆ ಕೆಲವು ವರ್ಷಗಳಲ್ಲಿ ಉತ್ತರ ದಿಕ್ಕಿನಲ್ಲಿ ಪುಣೆ ಪಟ್ಟಣದಲ್ಲಿ ಪೇಶ್ವೆಯರು ಮತ್ತು ಸಾತಾರಾ ಮತ್ತು ಕೊಲ್ಹಾಪುರಗಳಲ್ಲಿ ಶಿವಾಜಿಯ ವಂಶಜರು ರಾಜ್ಯಗಳನ್ನು ಸ್ಥಾಪಿಸಿ ಆಳಹತ್ತಿದರು. ಈ ಪ್ರಕಾರ ಕರ್ನಾಟಕದ ಸಂಸ್ಕೃತಿಗೆ ಹೊರತಾದ ಪ್ರಬಲ ರಾಜ್ಯಗಳು ಉತ್ತರ ಕರ್ನಾಟಕದ ಸುತ್ತಲೂ ಪಸರಿಸಿದವು. ಇದರಿಂದ ನಾಡಿನ ಮೇಲೆ ಉಂಟಾದ ಅನಿಷ್ಟ ಪರಿಣಾಮಗಳನ್ನು ಬಹುಕಾಲದ ವರೆಗೂ ಅದು ಅನುಭವಿಸಬೇಕಾಗಿ ಬಂದಿತು.

ಈ ಕಾಲದಲ್ಲಿದ್ದ ಇಲ್ಲಿಯ ಕರ್ನಾಟಕ ದೇಸಗತಿಗಳು ತಮ್ಮ ತಮ್ಮ ಭಾಗಗಳಲ್ಲಿ ಸ್ವತಂತ್ರವಾದವು. ಅವು ತಮ್ಮಲ್ಲಿಯ ದುರ್ಗಮ ಪ್ರದೇಶಗಳಲ್ಲಿ ಕೋಟಿ ಕೊತ್ತಲುಗಳನ್ನೂ ಕಟ್ಟಿಕೊಂಡು ದಂಡಾಳುಗಳನ್ನು ಇಟ್ಟುಕೊಂಡು ತಮ್ಮ ಸಂರಕ್ಷಣೆ ಮಾಡಿಕೊಳ್ಳಬೇಕಾಯಿತು. ಅವರ ಮೇಲೆ ಪ್ರಬಲರಾದ ರಾಜರು ದಂಡೆತ್ತಿ ಬರಲು ಅವರಿಗೆ ಕಪ್ಪಕೊಡುತ್ತ ಅವರು ದುರ್ಬಲರಾದ ಪಕ್ಷದಲ್ಲಿ ಸ್ವತಂತ್ರರಾಗಿ ತಮ್ಮ ಅಸ್ತಿತ್ವವನ್ನು ಕಾಯ್ದುಕೊಳ್ಳಬೇಕಾಯಿತು. ಇಂಥ ಸ್ಥಿತಿಯಲ್ಲಿಯೂ ಕೂಡ ಅವು ತಮ್ಮ ಮಿಗಿಲಾದ ಶೌರ್ಯ ಸಾಹಸಗಳನ್ನು ಆಗಿಂದಾಗ ತೋರಿಸುತ್ತ ಬಂದಿವೆ. ಇಂಥ ದೇಸಗತಿಗಳ ಉಲ್ಲೇಖವನ್ನು ನಾವು ಈ ಪ್ರಕರಣದಲ್ಲಿ ಬಹು ಸಂಕ್ಷಿಪ್ತವಾಗಿ ಮಾಡುತ್ತೇವೆ.

## ಧಾರವಾಡ ಮತ್ತು ಬೆಳಗಾವ ಜಿಲ್ಲೆಯ ದೇಸಗತಿಗಳು.

**ಲಕ್ಷ್ಮೇಶ್ವರ:**— ಧಾರವಾಡಜಿಲ್ಲೆಯಲ್ಲಿ ಈ ದೇಸಗತಿಯವರು ಮಹತ್ವದ ಸ್ಥಾನವನ್ನು ಹೊಂದಿದವರಾಗಿದ್ದರು. ಅವರು ಈ ಜಿಲ್ಲೆಯ ಫಲದ್ರೂಪವಾದ ಮಧ್ಯಭಾಗವನ್ನು ವ್ಯಾಪಿಸಿದ್ದರು.

ಈ ದೇಸಗತಿಗೆ ಸಮೀಪವಾಗಿ ಹಂದಿಗನೂರು ಮತ್ತು ಅಣಿಗೇರಿಯಲ್ಲಿಯೂ ಹುಬ್ಬಳ್ಳಿ ಮತ್ತು ಧಾರವಾಡ ತಾಲೂಕುಗಳಲ್ಲಿ ಮುಮ್ಮಿಗಟ್ಟಿ, ಹಂಗರಿಕಿ, ಕೆಂಚನಾಳಕೊಪ್ಪ, ಮತ್ತು ಹಳೇಹುಬ್ಬಳ್ಳಿ ಇಲ್ಲಿಯೂ ವೀರಶೈವ ದೇಸಗತಿಗಳು ಉಂಟಾಗಿರುತ್ತವೆ.

ನವಲಗುಂದ ತಾಲೂಕಿನಲ್ಲಿ ಮತ್ತು ಅದರ ನೆರೆ ಪ್ರದೇಶದಲ್ಲಿ ನರಗುಂದ, ರಾಮದುರ್ಗ, ಹೆಬ್ಬಳ್ಳಿ, ಧಾರವಾಡ ಇಲ್ಲಿ ಜಾಹಗೀರುಗಳು ಉಂಟಾದವು. ಇವು ಬ್ರಾಹ್ಮಣರವು ಇವೆ. ಇವುಗಳಲ್ಲಿ ನರಗುಂದ ಜಾಹಾಗೀರು ಜಿಲ್ಲೆಯಲ್ಲಿ ಬಹು ಮಹತ್ವದ ಸ್ಥಾನವನ್ನು ಹೊಂದಿತ್ತು.

**ಕಿತ್ತೂರು:**— ಇಲ್ಲಿ ಸ್ಥಾಪಿಸಲ್ಪಟ್ಟ ದೇಸಗತಿಯು ಬಹಳ ಮಹತ್ವದ್ದಿದ್ದು ನಾಡಿನಲ್ಲಿ ಪ್ರಬಲ ಸ್ಥಾನವನ್ನು ಹೊಂದಿತು. ಸಂಪಗಾವ ತಾಲೂಕಿನ ಪಶ್ಚಿಮ ಭಾಗ, ಖಾನಾಪೂರ ತಾಲೂಕು, ಮತ್ತು ಧಾರವಾಡ ತಾಲೂಕಿನ ಉತ್ತರಭಾಗ ಇಷ್ಟು ಪ್ರದೇಶವನ್ನು ಇದು ವ್ಯಾಪಿಸಿತ್ತು. ಕೆಲವು ಕಾಲ ಇದು ಗೋಕಾವಿಯ ವರೆಗೂ ಹಬ್ಬಿತ್ತು. ಇವರಲ್ಲಿ ಕೆಲವರು ಶೂರ ಪುರುಷರಾಗಿ ವಿಜಾಪುರ ಬಾದಶಹರು ಮತ್ತು ಪೇಶ್ವೆ ಇವರಿಂದ ಮನ್ನಣೆಯನ್ನು ಹೊಂದಿದವರಾಗಿದ್ದರು.

**ನವಲಗುಂದ:**— ಇಲ್ಲಿಯ ದೇಸಗತಿಯವರು ಒಂದು ಕಾಲದಲ್ಲಿ ನವಲಗುಂದ, ಸವದತ್ತಿ ಈ ತಾಲೂಕಗಳನ್ನಷ್ಟೇ ಅಲ್ಲ, ಗದಿಗಿನ ವರೆಗೂ ವ್ಯಾಪಿಸಿದ್ದರು. ಮೊಗಲರ ಕಾಲದಲ್ಲಿ ಚನ್ನಮ್ಮನು ತನ್ನ ಶೂರತನದಿಂದ ಮತ್ತು ಹಾಗೆಯೇ ಪೇಶ್ವೆಯವರ ಕಾಲದಲ್ಲಿ ಜಾಯಪ್ಪಾ, ಲಿಂಗಪ್ಪಾ ಮೊದಲಾದವರು ಪ್ರಸಿದ್ಧಿಗೆ ಬಂದಿದ್ದಾರೆ.

**ಬೆಳವಡಿ:**— ಈ ದೇಸಗತಿಯು ಸಂಪಗಾವ ತಾಲೂಕಿನ ಪೂರ್ವ ಭಾಗ, ಬೆಳಗಾವ ತಾಲೂಕು, ಮತ್ತು ಮುರಗೋಡ ಮಹಾಲು

ಇಷ್ಟು ಭಾಗವನ್ನು ವ್ಯಾಪಿಸಿತ್ತು. ಇದರಲ್ಲಿ ಮುಂದೆ ತಲ್ಲೂರು, ಚಚಡಿ, ಮತ್ತು ರುದ್ರಾಪುರ ಎಂಬ ಭಾಗಗಳಾದವು. ಈ ದೇಸಗತಿಗಳಲ್ಲಿ ಅನೇಕ ಶೂರ ಪುರುಷರಾಗಿಹೋಗಿದ್ದಾರೆ. ಶಿವಾಜಿಯೊಡನೆ ಶೂರತನದಿಂದ ಯುದ್ಧಮಾಡಿದ ಮಲ್ಲವ್ವನು ಬೆಳವಡಿ ದೇಸಗತಿಯುವಳು ಇದ್ದಾಳೆ.

**ಒಂಟಿಮುರಿ**:— ಇಲ್ಲಿಯ ದೇಸಗತಿಯುವರ ಕೈಕೆಳಗೆ ಚಿಕ್ಕೋಡಿ ಮತ್ತು ಹುಕ್ಕೇರಿ ತಾಲೂಕಗಳು ಮತ್ತು ಈಗಿನ ಕೊಲ್ಲಾಪುರ ಸಂಸ್ಥಾನದ ದಕ್ಷಿಣ ಭಾಗ ಇಷ್ಟು ಪ್ರದೇಶಗಳಿದ್ದವು. ಅವರು ಬೆಳಗಾವ ಜಿಲ್ಲೆಯ ಉತ್ತರ ಭಾಗದಲ್ಲಿ ಬಹು ಪ್ರಬಲರಾಗಿದ್ದರು.

**ಜಮಖಂಡಿ**:— ಕೃಷ್ಣಾತೀರದಲ್ಲಿ ಈ ದೇಸಗತಿಯು ಬಹು ದೊಡ್ಡ ಭಾಗವನ್ನು ವ್ಯಾಪಿಸಿತ್ತು. ಆದರೆ ಪೇಶ್ವೆಯುವರ ಸರದಾರರಾದ ಪಟವರ್ಧನರು ಇದನ್ನು ತಮ್ಮ ಕೈವಶಮಾಡಿಕೊಂಡರು. ಈ ದೇಸಗತಿಯ ವಂಶಜರು ಈಗಲೂ ವಿಜಾಪುರ ಜಿಲ್ಲಾ ಬೀಳಗಿ ಪೇಠೆಯಲ್ಲಿರುವ ಕೊಣ್ಣೂರಲ್ಲಿರುತ್ತಾರೆ.

ಮೇಲಿನ ವೀರಶೈವ ದೇಸಗತಿಗಳಲ್ಲದೆ, ಬೆಳಗಾವ ಜಿಲ್ಲೆಯಲ್ಲಿ ಕೊಕ್ಕಟನೂರು, ನಾಗರಮುನವಳ್ಳಿ, ಕಾಗತಿ, ಬೊಂಬರಗಿಯಲ್ಲಿಯೂ ಮುಧೋಳ ಸಂಸ್ಥಾನದಲ್ಲಿ ಮುದ್ದಾಪುರ, ಹಲಗಲಿಯಲ್ಲಿಯೂ ಕೊಲ್ಲಾಪುರ ಸಂಸ್ಥಾನದ ದಕ್ಷಿಣ ಭಾಗದಲ್ಲಿ ತೇರಣಿ, ಭಡಗಾವಿ, ಇದಲಗುಂಚಿ, ಕವಳೀಕಟ್ಟಿ, ಕಡೋಲಿ ಇಲ್ಲಿಯೂ ದೇಸಗತಿಗಳು ಇರುತ್ತವೆ. ಪ್ರಸಿದ್ಧಳಾದ ಕಿತ್ತೂರು ಚನ್ನಮ್ಮನು ಕಾಗತಿಯ ಮನೆತನದವಳು ಇದ್ದಾಳೆ.

ಬೆಳಗಾವ ಜಿಲ್ಲೆಯ ಮಧ್ಯಭಾಗದಲ್ಲಿ ಮತ್ತು ಮುಧೋಳ ಸಂಸ್ಥಾನದಲ್ಲಿ ಛತ್ರಿ ಜಾತಿಯುವರ ದೇಸಗತಿಗಳು ಮಹತ್ವದವು ಇರುತ್ತವೆ. ಅವು ಸಿಂದೀಕುರುಬೆಟ್ಟ, ಕೌಜಲಗಿ, ಯರಗಟ್ಟಿ, ಬೂದೀಹಾಳ, ಹಿರೇಬಾಗೇವಾಡಿ, ಜಂಬಿಗಿ, ಮಂಗಸೂಳಿ, ವೆಂಕಟಾಪೂರ, ಸಾಲಳ್ಳಿ, ಕಂಕಣವಾಡಿ, ಲೋಕಾಪೂರ, ಕುಳಲಿ ಎಂಬಲ್ಲಿ ಇರುತ್ತವೆ.

ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕೆಲವು ಬ್ರಾಹ್ಮಣ ದೇಸಗತಿಗಳು ಇವೆ. ಅವು ಅಮ್ಮಣಗಿ, ನೀರಲಗಿ, ರಾಯಬಾಗ, ಬಾಳೇಕುಂದರಗಿ, ಅಷ್ಟಗಿ, ಎಂಬಲ್ಲಿ ಇರುತ್ತವೆ.

ನಿಪ್ಪಾಣಿ, ಚಿಂಚಲಿ,ಹೇರಲೆ, ಇವು ಮರಾಠಾ ದೇಸಗತಿಗಳು ಮತ್ತು ಹನಗಂಡಿ ಮತ್ತು ನಾವಿಗೆ ಇವು ಜೈನರ ದೇಸಗತಿಗಳು ಇರುತ್ತವೆ.

ಹೀಗೆ ಬೆಳಗಾವ ಜಿಲ್ಹೆಯಲ್ಲಿ ಅನೇಕ ದೇಸಗತಿಗಳು ಇದ್ದು ಅವುಗಳಲ್ಲಿ ವೀರಶೈವ ದೇಸಗತಿಗಳು ದೊಡ್ಡವೂ ಪ್ರಬಲವೂ ಇದ್ದು ಅವು ೨೦೦—೩೦೦ ವರ್ಷಗಳ ವರೆಗೆ ಉತ್ತರ ಕರ್ನಾಟಕದಲ್ಲಿ ಬಹು ಮಹತ್ವದ ಸ್ಥಾನವನ್ನು ಹೊಂದಿದ್ದವು.

## ವಿಜಾಪುರ ಮತ್ತು ನಿಜಾಮ ರಾಜ್ಯದಲ್ಲಿಯ ದೇಸಗತಿಗಳು.

ವಿಜಾಪುರ ಬಾದಶಹರ ಯುದ್ಧಗಳಲ್ಲಿ ಅವರಿಗೆ ಹೆಚ್ಚಾಗಿ ಸಹಾಯ ಮಾಡಿದವರು ವಿಜಾಪುರ, ಕಲಬುರ್ಗಿ, ಮತ್ತು ರಾಯಚೂರ ಜಿಲ್ಲೆಗಳಲ್ಲಿರುವ ದೇಸಗತಿಯವರೇ ಇರುತ್ತಾರೆ. ಈ ಬಾದಶಹರು ಮೊಗಲ, ಮರಾಠಾ, ಅಹಮ್ಮದನಗರ, ಗೋವಳಕೊಂಡ, ಮತ್ತು ವಿಜಯನಗರ ಇಲ್ಲಿಯ ಅರಸರೊಡನೆ ಆಗಿಂದಾಗ್ಗೆ ಯುದ್ಧಗಳನ್ನು ಮಾಡಬೇಕಾಗುತ್ತಿತ್ತು. ಇವುಗಳಲ್ಲಿ ಅವರು ಶೂರತನದಿಂದ ಕಾದಾಡಿ ಯಶಸ್ಸನ್ನು ಹೊಂದಿದ್ದು ಕಂಡು ಬರುತ್ತದೆ. ಇದರ ಶ್ರೇಯಸ್ಸು ಈ ಭಾಗಗಳಲ್ಲಿರುವ ದೇಸಗತಿಯವರಿಗೂ ವತನದಾರರಿಗೂ ಇರುತ್ತದೆ. ಆದ್ದರಿಂದ ಈ ಭಾಗಗಳಲ್ಲಿ ಮಹತ್ವದ ದೇಸಗತಿಗಳ ಸಂಖ್ಯೆಯು ಬಹಳ ದೊಡ್ಡದಿರುತ್ತದೆ. ಇಲ್ಲಿಯ ಪ್ರತಿಯೊಂದು ತಾಲೂಕಿನಲ್ಲಿ ದೊಡ್ಡ ಉತ್ಪನ್ನವುಳ್ಳ ದೇಸಗತಿಗಳಿರುವದು ಕಂಡು ಬರುತ್ತದೆ. ಆದರೆ ಅವುಗಳ ಪೂರ್ವಜರು ಮಾಡಿದ ಶೂರ ಕೃತ್ಯಗಳು ಮಾತ್ರ ಈಗ ನಮಗೆ ಗೊತ್ತಾಗದೆ ಇರುವದು ಕರ್ನಾಟಕದ ಇತಿಹಾಸದ ದೃಷ್ಟಿಯಿಂದ ಅತ್ಯಂತ ದುರ್ದೈವದ ಸಂಗತಿಯಾಗಿದೆ.

ಈ ದೇಸಗತಿಗಳಲ್ಲಿ ವೀರಶೈವರವು, ಬೇಡರವು, ಮತ್ತು ಛತ್ರಿಯರವು ಎಂದು ಮೂರು ವಿಭಾಗಗಳನ್ನು ನಾವು ಮಾಡಬಹುದು. ಬೇಡರ ಮತ್ತು ಛತ್ರಿಯರ ದೇಸಗತಿಗಳಲ್ಲಿ ಅರ್ಧಕ್ಕಿಂತ ಹೆಚ್ಚು ವೀರಶೈವ ಮತವನ್ನು ಸ್ವೀಕರಿಸಿದ್ದು ಕಂಡುಬರುತ್ತದೆ.

ಎನ್ನ ಕೆಂಪು ವರ್ಣಕ್ಕೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ನೀಲವರ್ಣಕ್ಕೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಕುಂಕುಮ ವರ್ಣಕ್ಕೆ ಶಿಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಪೀತವರ್ಣಕ್ಕೆ ವಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಶ್ವೇತ ವರ್ಣಕ್ಕೆ ಯಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಮಾಣಿಕ್ಯ ವರ್ಣಕ್ಕೆ ಓಂಕಾರವಾಗಿ ಬಂದನಯ್ಯ ಬಸವಣ್ಣ.

ಎನ್ನ ಜಾಗ್ರಾವಸ್ಥೆಗೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಸ್ವಪ್ನಾವಸ್ಥೆಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಸುಷುಪ್ತಾವಸ್ಥೆಗೆ ಶಿಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ತೂರ್ಯಾವಸ್ಥೆಗೆ ವಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಅತೀತಾವಸ್ಥೆಗೆ ಯಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ನಿರವಸ್ಥೆಗೆ ಓಂಕಾರವಾಗಿ ಬಂದನಯ್ಯ ಬಸವಣ್ಣ.

ಎನ್ನ ಅಂತಃಕರಣಂಗಳಿಗೆ ಚತುರ್ವಿಧ ಬಿಂದು ಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಅರಿಷಡ್ವರ್ಗಂಗಳಿಗೆ ಷಡ್ವಿಧ ಧಾತು ಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ದಶವಾಯುಗಳಿಗೆ ದಶವಿಧ ಕ್ಷೇತ್ರಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ದ್ವಾದಶೇಂದ್ರಿಯಂಗಳಿಗೆ ದ್ವಾದಶವಿಕೃತಿ ಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಷೋಡಶ ಕಲೆಗೆ ಷೋಡಶ ಕಲಾಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಅಹಂಕಾರ ಮಮಕಾರಂಗಳಿಗೆ ವಿದ್ಯಾಲಿಂಗವಾಗಿ ಬಂದನಯ್ಯ ಬಸವಣ್ಣ.

ಎನ್ನ ಭಕ್ತಸ್ಥಲಕ್ಕೆ ಆಚಾರಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಮಹೇಶ್ವರ ಸ್ಥಲಕ್ಕೆ ಗುರುಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಪ್ರಸಾದಿಸ್ಥಲಕ್ಕೆ ಶಿವಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಪ್ರಾಣಲಿಂಗಿಸ್ಥಲಕ್ಕೆ ಜಂಗಮಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಶರಣಸ್ಥಲಕ್ಕೆ ಪ್ರಸಾದಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ಐಕ್ಯ ಸ್ಥಲಕ್ಕೆ ಮಹಾಲಿಂಗವಾಗಿ ಬಂದನಯ್ಯ ಬಸವಣ್ಣ.

ಎನ್ನ ಚಿತ್ತಕ್ಕೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಬುದ್ಧಿಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಅಹಂಕಾರಕ್ಕೆ ಶಿಕಾ

ರವಾಗಿ ಬಂದನಯ್ಯ ಬಸವಣ್ಣ. ಎನ್ನ ಮನಕ್ಕೆ ವಕಾರವಾಗಿ ಬಂದ ನಯ್ಯ ಬಸವಣ್ಣ. ಎನ್ನ ಜ್ಞಾನಕ್ಕೆ ಯಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಭಾವಕ್ಕೆ ಓಂಕಾರವಾಗಿ ಬಂದನಯ್ಯ ಬಸವಣ್ಣ.

ಎನ್ನ ಕ್ರಿಯಾಶಕ್ತಿಗೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಜ್ಞಾನಶಕ್ತಿಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಇಚ್ಛಾ ಶಕ್ತಿಗೆ ಶಿಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಆದಿಶಕ್ತಿಗೆ ವಕಾರ ವಾಗಿ ಬಂದನಯ್ಯ ಬಸವಣ್ಣ. ಎನ್ನ ಪರಾಶಕ್ತಿಗೆ ಯಕಾರವಾಗಿ ಬಂದ ನಯ್ಯ ಬಸವಣ್ಣ. ಎನ್ನ ಚಿತ್‌ಶಕ್ತಿಗೆ ಓಂಕಾರವಾಗಿ ಬಂದನಯ್ಯಾ ಬಸವಣ್ಣ.

ಎನ್ನ ಶ್ರದ್ಧೆಗೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ನೈಷ್ಠೆಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಅವಧಾನಕ್ಕೆ ಶಿಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಅನುಭಾವಕ್ಕೆ ವಕಾರವಾಗಿ ಬಂದ ನಯ್ಯ ಬಸವಣ್ಣ. ಎನ್ನ ಆನಂದಕ್ಕೆ ಯಕಾರವಾಗಿ ಬಂದನಯ್ಯ ಬಸ ವಣ್ಣ. ಎನ್ನ ಸಮರಸಕ್ಕೆ ಓಂಕಾರವಾಗಿ ಬಂದನಯ್ಯ ಬಸವಣ್ಣ.

ಎನ್ನ ಶಬ್ದಕ್ಕೆ ಗುರುವಾಗಿ ಬಂದನಯ್ಯ ಬಸವಣ್ಣ. ಎನ್ನ ಸ್ಪರು ಶನಕ್ಕೆ ಲಿಂಗವಾಗಿ ಬಂದನಯ್ಯ ಬಸವಣ್ಣ. ಎನ್ನ ರೂಪಿಂಗೆ ಶಿವ ಲಾಂಛನವಾಗಿ ಬಂದನಯ್ಯ ಬಸವಣ್ಣ. ಎನ್ನ ರಸಕ್ಕೆ ಶಿವಪ್ರಸಾದ ವಾಗಿ ಬಂದನಯ್ಯ ಬಸವಣ್ಣ. ಎನ್ನ ಗಂಧಕ್ಕೆ ಶಿವಾನುಭಾವವಾಗಿ ಬಂದನಯ್ಯ ಬಸವಣ್ಣ.

ಎನ್ನ ನಾಸಿಕಕ್ಕೆ ನಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಜಿಹ್ವೆಗೆ ಮಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ನೇತ್ರಕ್ಕೆ ಶಿಕಾರ ವಾಗಿ ಬಂದನಯ್ಯ ಬಸವಣ್ಣ. ಎನ್ನ ತ್ವಕ್ಕಿಂಗೆ ವಕಾರವಾಗಿ ಬಂದ ನಯ್ಯ ಬಸವಣ್ಣ. ಎನ್ನ ಶ್ರೋತ್ರಕ್ಕೆ ಯಕಾರವಾಗಿ ಬಂದನಯ್ಯ ಬಸ ವಣ್ಣ. ಎನ್ನ ಹೃದಯಕ್ಕೆ ಓಂಕಾರವಾಗಿ ಬಂದನಯ್ಯ ಬಸವಣ್ಣ.

ಎನ್ನ ವಾಕ್ಕಿಂಗೆ ಯಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಪಾಣಿಗೆ ವಕಾರವಾಗಿ ಬಂದನಯ್ಯ ಬಸವಣ್ಣ. ಎನ್ನ ಪಾದಕ್ಕೆ ಶಿಕಾ ರವಾಗಿ ಬಂದನಯ್ಯ ಬಸವಣ್ಣ. ಎನ್ನ ಗುಹ್ಯಕ್ಕೆ ಮಕಾರವಾಗಿ ಬಂದ

ನಯ್ಯ ಬಸವಣ್ಣ. ಎನ್ನ ಪಾಯುವಿಂಗೆ ನಕಾರವಾಗಿ ಬಂದನಯ್ಯ ಬಸವಣ್ಣ.

ಇಂತೀ ಪಂಚೇಂದ್ರಿಯಂಗಳೇ ಪಂಚಮಹಾಯಜ್ಞ. ಆ ಪಂಚ ಮಹಾಯಜ್ಞದಲ್ಲಿ ಎನ್ನ ಮನ ಹಾರೈಸಿ ಪೂರೈಸಿ ಒಲಿದು ಕೇಳಿತ್ತು, ಮುಟ್ಟಿತ್ತು, ನೋಡಿತ್ತು, ರುಚಿಸಿತ್ತು, ವಾಸಿಸಿತ್ತು. ಎನ್ನ ಮಾನಸ ವಾಚಕ ಕಾಯಕ ಕರಣಂಗಳೆಲ್ಲವೂ ಪಂಚ ಮಹಾಯಜ್ಞವ ಸೋಂಕಿ ಪಂಚಮಹಾಯಜ್ಞವಪ್ಪುದು ತಪ್ಪದು. ಅದೆಂತೆಂದೊಡೆ:—

ಮಹಾಜ್ಯೋತಿಯ ಸೋಂಕಿದ ಉತ್ತಮ ಅಧಮ ತೃಣ ಮೊದಲಾದವೆಲ್ಲವೂ ಮಹಾ ಅಗ್ನಿಯಪ್ಪುದು ತಪ್ಪದು. ಇಂತಪ್ಪ ಪಂಚ ಮಹಾ ಯಜ್ಞವನೊಳಕೊಂಡಿಪ್ಪ ಮೂಲಾಗ್ನಿಯೇ ಬಸವಣ್ಣ. ಆ ಬಸವಣ್ಣನೇ ಗುರು ಲಿಂಗ ಜಂಗಮ ಪಾದೋದಕ ಪ್ರಸಾದ ವಿಭೂತಿ ರುದ್ರಾಕ್ಷಿ. ಪಂಚಾಕ್ಷರಿಯೇ ಚಿದ್ಬ್ರಹ್ಮವು, ಆ ಚಿದ್ಬ್ರಹ್ಮನೇ ಬಸವಣ್ಣ, ಆ ಬಸವಣ್ಣನೇ ಎನಗೆ ಅಷ್ಟಾವರಣ ಸ್ವರೂಪನಾದ ಸಚ್ಚಿದಾನಂದ ಬಸವಣ್ಣ, ನಿತ್ಯ ಪರಿಪೂರ್ಣ ಬಸವಣ್ಣ, ಅಖಂಡದ್ವಯ ಬಸವಣ್ಣ, ನಿರಂಜನ ಬಸವಣ್ಣ, ನಿರ್ಮಾಯ ಬಸವಣ್ಣ, ನಿರಾಚರಣ ಬಸವಣ್ಣ, ನಿರ್ಜನಿತ ಬಸವಣ್ಣ, ನಿರ್ಲೇಪ ಬಸವಣ್ಣ, ನಿಃಕಪಟ ಬಸವಣ್ಣ, ಅಸಾಧ್ಯ ಸಾಧಕ ಬಸವಣ್ಣ, ಅಭೇದ್ಯ ಭೇದಕ ಬಸವಣ್ಣ, ಚಿತ್ಪ್ರಕಾಶ ಬಸವಣ್ಣ.

ಇಂತಪ್ಪ ಬಸವಣ್ಣನ ಅಂಗಣವೇ ಚಿದಾಕಾಶ, ಆ ಚಿದಾಕಾಶದ ಮಧ್ಯದಲ್ಲಿ ಚಿತ್ಪ್ರಾಣವಾಯು, ಆ ಚಿತ್ಪ್ರಾಣ ವಾಯುವಿನ ಮಧ್ಯದಲ್ಲಿ ಚಿದಗ್ನಿ, ಆ ಚಿದಗ್ನಿಯ ಮಧ್ಯದಲ್ಲಿ ಚಿಜ್ಜಲ, ಆ ಚಿಜ್ಜಲದ ಮಧ್ಯದಲ್ಲಿ ಚಿದ್ಭೂಮಿ, ಆ ಚಿದ್ಭೂಮಿ ಮಧ್ಯದಲ್ಲಿ ಚಿದಂಗ, ಆ ಚಿದಂಗದ ಮಧ್ಯದಲ್ಲಿ ಹೃದಯ, ಆ ಹೃದಯದ ಮಧ್ಯದಲ್ಲಿ ಅಕಾರ, ಉಕಾರ, ಮಕಾರ, ಪ್ರಣಮಪೀಠ. ಆ ಪ್ರಣಮಪೀಠ ಮಧ್ಯದಲ್ಲಿ ಜಂಗಮ, ಆ ಜಂಗಮದ ಮಕುಟದಲ್ಲಿ ಶೂನ್ಯ ಲಿಂಗವು, ಆ ಶೂನ್ಯಲಿಂಗದಲ್ಲಿ ಚಿದಂಬರ, ಆ ಚಿದಂಬರದಲ್ಲಿ ಶಿವಶಕ್ತಿ, ಆ ಶಿವಶಕ್ತಿಯಲ್ಲಿ ಪಂಚಶಕ್ತಿಗಳು, ಆ ಪಂಚಶಕ್ತಿಗಳಲ್ಲಿ ಪಂಚಕಲೆಗಳು, ಆ ಪಂಚ ಕಲೆಗಳಲ್ಲಿ ಪಂಚ ಮುಖಗಳು, ಆ ಪಂಚ ಮುಖಗಳಲ್ಲಿ ಪಂಚ ಸಾದಾಖ್ಯಗಳು, ಆ ಪಂಚ ಸಾದಾಖ್ಯಗಳಲ್ಲಿ ಈಶ್ವರ, ಆ ಈಶ್ವರನಲ್ಲಿ ಮಹೇಶ್ವರ, ಆ

ಮಹೇಶ್ವರನಲ್ಲಿ ರುದ್ರ, ಆ ರುದ್ರನಲ್ಲಿ ತ್ರಯುವಹ ಹಿರಣ್ಯಗರ್ಭ, ವಿರಾಟ ಮೂರ್ತಿ.

ಇಂತೀ ಎಂಭತ್ತುಮೂರು ಮೂರ್ತಿಗಳೊಳಗೆ ಎಂಭತ್ತೆರಡೇ ಬಸವಣ್ಣನಂಗ, ಒಂದೇ ಪ್ರಾಣ, ಆ ಪ್ರಾಣಚೈತನ್ಯಶೂನ್ಯವೇ ಗೋಳಕ, ಗೋಮುಖ, ವೃತ್ತಾಕಾರವಾಗಿ ಕರಸ್ಥಲದಲ್ಲಿ ಪಿಡಿದು ಆ ಲಿಂಗದಲ್ಲಿ ಅದೇ ಪ್ರಣವವೇ ಪೀಠ, ಅಕಾರವೇ ಕಂಠ, ಉಕಾರವೇ ಗೋಮುಖ, ಮಕಾರವೇ ವರ್ತುಳ, ನಾಳವೇ ಬಿಂದು, ಮಹಾತೇಜ ನಾದವೇ ಅಖಂಡ ಲಿಂಗ, ಇಂತಪ್ಪ ಬಸವಣ್ಣನ ನಿತ್ಯತ್ವವೇ ಲಿಂಗ, ಪೂರ್ಣತ್ವವೇ ಗುರು, ಚಿತ್ಪ್ರಕಾಶವೇ ಜಂಗಮ, ಆನಂದವೇ ಪ್ರಸಾದ, ಚಿದ್ರಸದ ಪ್ರವಾಹವೇ ಪಾದತೀರ್ಥ.

ಇಂತಪ್ಪ ಬಸವಣ್ಣನ ಅನಂತ ಕೋಟಿ ಬ್ರಹ್ಮಾಂಡಂಗಳ ರೋಮಕೂಪದಲ್ಲಿ ಸಂಕಲ್ಪಿಸಿ, ಅಲ್ಲಿದ್ದಾತ್ಮಂಗೆ ಸುಜ್ಞಾನ ಕ್ರಿಯುನಿತ್ತು, ತದ್ಭೃತ್ಯ ಕರ್ತೃ ತಾನಾಗಿ, ಇಷ್ಟಾರ್ಥಸಿದ್ಧಿಯುನೀವುತಿಪ್ಪ ಬಸವಣ್ಣನ ಭೃತ್ಯರ ಭೃತ್ಯರ ತದ್ಭೃತ್ಯನಾಗಿರಿಸಿ, ಬಸವಣ್ಣನ ಪಡುಗ ಪಾದರಕ್ಷೆಯು ಪಿಡಿವ ಭಾಗ್ಯವ ಎನಗೆ ಈವುದಯ್ಯ, ಪರಂಜ್ಯೋತಿ ಮಹಾಲಿಂಗ ಗುರುಸಿದ್ಧಲಿಂಗ ಪ್ರಭುವಿನಲ್ಲಿ ಬಸವಣ್ಣನನರುಹಿಕೊಟ್ಟ ಸಿದ್ಧೇಶ್ವರನ ಶ್ರೀಪಾದಪದ್ಮದಲ್ಲಿ ಭೃಂಗನಾಗಿರ್ದೆನಯ್ಯ ಬೋಳ ಬಸವೇಶ್ವರಾ ನಿಮ್ಮ ಧರ್ಮ, ನಿಮ್ಮ ಧರ್ಮ.

---

**ವಿವರಣೆಃ—** ಈ ಕೆಳಗಿನ ವಚನದಲ್ಲಿ ಜಗತ್ತಿನ ಉದ್ಭವ, ೨೫ ತತ್ತ್ವಗಳ ಉಗಮ, ಷಟ್‌ಸ್ಥಲ ವಿಷಯಗಳ ನಿರ್ದೇಶ, ಅವುಗಳಿಗೆ ಸಂಬಂಧಿಸಿದ ಸಕೀಲ ವಿಷಯಗಳು ಹೇಳಲ್ಪಟ್ಟಿವೆ. ಅವೆಲ್ಲವುಗಳ ವ್ಯಾಖ್ಯೆಗಳನ್ನು ವಚನಕಾರನು ಇಲ್ಲಿಯೇ ಹೇಳಿಲ್ಲ. ಆದರೆ ವಾಚಕರು 'ಶಿವಾನುಭವ ಶಬ್ದಕೋಶ'ದ ಮೂಲಕ ಅವುಗಳ ಭಾವವನ್ನು ತಿಳಿದುಕೊಳ್ಳಬಹುದು.

(೨) ಅಯ್ಯಾ, ತತ್ವ ವಿತತ್ವ ಶೂನ್ಯ ಮಹಾಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು ರುದ್ರ ಇನ ಶಶಿ ವ್ಯೋಮ ಸಮೀರ ಅಗ್ನಿ ಅಂಬು ಪೃಥ್ವಿ ನವಗ್ರಹ ದಶದಿಕ್ಕು ಛತ್ತೀಸ ತತ್ವಂಗಳೇನೂ ಇಲ್ಲದಂದು, ಆಳಂಧರ, ಕಾಳಂಧರ ತಾಳಂಧರ ಅನಂತ ಅದ್ಭುತ ತಮಂಧ ತಾರಕ ತಂಡಜ ಭಿನ್ನಜ ಭಿನ್ನಯುಕ್ತ ಅವ್ಯಕ್ತ ಯುವ್ಯಕ್ತ ವಿಶ್ವಾವಸು ಅಲಂಕೃತ ಕೃತಯುಗ ತ್ರೇತಾಯುಗ ದ್ವಾಪರ ಕಲಿಯುಗ ಇಂತಿವು

ಯಾವವೂ ಇಲ್ಲದಂದು, ನಾದ ಬಿಂದು ಕಳೆಗಳಿಲ್ಲದಂದು, ಪಶು ಪಾಶ ಪತಿ ಕುಂಡಲಿ ಕಾರಕ ಇವೇನೂ ಇಲ್ಲದಂದು, ವಿಜ್ಞಾನಾಕಲರು ಸಕಲಾ ಕಲರು ಪ್ರಳಯಾಕಲರು ಇವೇನೂ ಇಲ್ಲದಂದು, ದನುಜ ಮನುಜ ದಿವಿಜ ಮನು ಮುನಿ ನಕ್ಷತ್ರ ಮಂಡಲ ಇವೇನೂ ಇಲ್ಲದಂದು, ಅಂದು ನೀನು ನಿಷ್ಕಲ ನಿರವಯ ನಿಃಶೂನ್ಯವಾಗಿರ್ದೆಯಯ್ಯಾ ಬಸವಣ್ಣಾ. ನೀವೊಂದು ಅನಂತ ಕಾಲ ಅನಂತ ಯುಗ ನಿಮ್ಮ ಲೀಲಾ ವಿಚಿಂತನೆ ನೆನೆದ ನೆನಹೇ ಸುನಾದ. ಆ ಸುನಾದದ ಪ್ರಕಾಶ ತೇಜೋಪುಂಜವೇ ಬಿಂದು, ನಾದವೇ ನಿರಂಜನ, ಬಿಂದುವೇ ನಿರಾಲಂಬ......ಕೂಟವೇ ನಿರಾಮಯ, ಇಂತೀ ನಾದ ಬಿಂದು ಕಳೆ ಮೂರು ಕೂಡಿ ಅಖಂಡ ತೇಜೋಮಯವಾಗಿ ಷಡ್‌ಬ್ರಹ್ಮ ಸ್ವರೂಪವನೈದಿದೆಯಲ್ಲಾ ಬಸವಣ್ಣಾ. ನಿನ್ನ ವಿನೋದದಿಂದ ಆ ಷಡ್‌ಬ್ರಹ್ಮದಿಂದ ಷಡ್ವಿಧ ಭೂತಂಗಳು ಪುಟ್ಟಿ, ಆ ಷಡ್ವಿಧ ಭೂತಂಗಳೇ ಎನಗಂಗವಾದಲ್ಲಿ, ಆ ಷಡ್‌ಬ್ರಹ್ಮವೇ ಷಡ ಕ್ಷರಿಮಯವಾಗಿ, ಆ ಷಡ್ವಿಧ ಭೂತಂಗಳೊಳಗೆ ಸಮೇತವಾಗಿ ಕೂಡಿ ಛತ್ತೀಸ ತತ್ವ ಮಂತ್ರ ಸ್ವರೂಪವಾದ ಭೇದ ಹೇಗೆಂದೊಡೆ, ಅದಕ್ಕೆ ವಿವರ:—

ಓಂಕಾರವೇ ಆತ್ಮನು, ಓಂಕಾರ ಯಕಾರ ಸಂಯೋಗವಾದಲ್ಲಿ ಆಕಾಶ ಪುಟ್ಟಿತ್ತು. ಓಂಕಾರ ವಕಾರ ಸಂಯೋಗವಾದಲ್ಲಿ ವಾಯು ಪುಟ್ಟಿತ್ತು. ಓಂಕಾರ ಶಿಕಾರ ಸಂಯೋಗವಾದಲ್ಲಿ ಅಗ್ನಿ ಪುಟ್ಟಿತ್ತು. ಓಂಕಾರ ಮಕಾರ ಸಂಯೋಗವಾದಲ್ಲಿ ಅಪ್ಪು ಪುಟ್ಟಿತ್ತು. ಓಂಕಾರ ನಕಾರ ಸಂಯೋಗವಾದಲ್ಲಿ ಪೃಥ್ವಿ ಪುಟ್ಟಿತ್ತು.

ಇನ್ನು ಯಕಾರ ಓಂಕಾರ ಸಂಯೋಗವಾದಲ್ಲಿ ಭಾವ ಪುಟ್ಟಿತ್ತು. ಯಕಾರವೇ ಜ್ಞಾನ ಯಕಾರ ಮಕಾರ ಸಂಯೋಗವಾದಲ್ಲಿ ಮನ ಪುಟ್ಟಿತ್ತು. ಯಕಾರ ಶಿಕಾರ ಸಂಯೋಗವಾದಲ್ಲಿ ಅಹಂಕಾರ ಪುಟ್ಟಿತ್ತು. ಯಕಾರ ಮಕಾರ ಸಂಯೋಗವಾದಲ್ಲಿ ಬುದ್ಧಿ ಪುಟ್ಟಿತ್ತು. ಯಕಾರ ನಕಾರ ಸಂಯೋಗವಾದಲ್ಲಿ ಚಿತ್ತ ಪುಟ್ಟಿತ್ತು.

ಇನ್ನು ವಕಾರ ಓಂಕಾರ ಸಂಯೋಗವಾದಲ್ಲಿ ಪಂಚವಾಯು ಪುಟ್ಟಿ ದವು. ವಕಾರ ಯಕಾರ ಸಂಯೋಗವಾದಲ್ಲಿ ಸಮಾನ ವಾಯು ಪುಟ್ಟಿತ್ತು. ವಕಾರ ತಾನೇ ಉದಾನ ವಾಯು. ವಕಾರ ಶಿಕಾರ ಸಂಯೋ

ಗವಾದಲ್ಲಿ ವ್ಯಾನವಾಯು ಪುಟ್ಟಿತ್ತು. ವಕಾರ ಮಕಾರ ಸಂಯೋಗ ವಾದಲ್ಲಿ ಅಪಾನವಾಯು ಪುಟ್ಟಿತ್ತು. ವಕಾರ ನಕಾರ ಸಂಯೋಗವಾದಲ್ಲಿ ಪ್ರಾಣವಾಯು ಪುಟ್ಟಿತ್ತು.

ಇನ್ನು ಶಿಕಾರ ಓಂಕಾರ ಸಂಯೋಗವಾದಲ್ಲಿ ಹೃದಯ ಪುಟ್ಟಿತ್ತು. ಶಿಕಾರ ಯಕಾರ ಸಂಯೋಗವಾದಲ್ಲಿ ಶ್ರೋತ್ರ ಪುಟ್ಟಿತ್ತು. ಶಿಕಾರ ವಕಾರ ಸಂಯೋಗವಾದಲ್ಲಿ ತ್ವಕ್ಕು ಪುಟ್ಟಿತ್ತು. ಶಿಕಾರ ತಾನೇ ನೇತ್ರ. ಶಿಕಾರ ಮಕಾರ ಸಂಯೋಗವಾದಲ್ಲಿ ಜಿಹ್ವೆ ಪುಟ್ಟಿತ್ತು. ಶಿಕಾರ ನಕಾರ ಸಂಯೋಗವಾದಲ್ಲಿ ಘ್ರಾಣ ಪುಟ್ಟಿತ್ತು.

ಇನ್ನು ಮಕಾರ ಓಂಕಾರ ಸಂಯೋಗವಾದಲ್ಲಿ ತೃಪ್ತಿ ಪುಟ್ಟಿತ್ತು. ಮಕಾರ ಯಕಾರ ಸಂಯೋಗವಾದಲ್ಲಿ ಶಬ್ದ ಪುಟ್ಟಿತ್ತು. ಮಕಾರ ವಕಾರ ಸಂಯೋಗವಾದಲ್ಲಿ ಸ್ಪರ್ಶನ ಪುಟ್ಟಿತ್ತು. ಮಕಾರ ಶಿಕಾರ ಸಂಯೋಗವಾದಲ್ಲಿ ರೂಪು ಪುಟ್ಟಿತ್ತು. ಮಕಾರ ತಾನೇ ರಸ. ಮಕಾರ ನಕಾರ ಸಂಯೋಗವಾದಲ್ಲಿ ಗಂಧ ಪುಟ್ಟಿತ್ತು.

ಇನ್ನು ನಕಾರ ಓಂಕಾರ ಸಂಯೋಗವಾದಲ್ಲಿ ಅಂತರ್ವಾಕ್ಕು ಪುಟ್ಟಿತ್ತು. ನಕಾರ ಯಕಾರ ಸಂಯೋಗವಾದಲ್ಲಿ ವಾಕ್ಕು ಪುಟ್ಟಿತ್ತು. ನಕಾರ ವಕಾರ ಸಂಯೋಗವಾದಲ್ಲಿ ಪಾಣಿ ಪುಟ್ಟಿತ್ತು. ನಕಾರ ಶಿಕಾರ ಸಂಯೋಗವಾದಲ್ಲಿ ಪಾದ ಪುಟ್ಟಿತ್ತು. ನಕಾರ ಮಕಾರ ಸಂಯೋಗ ವಾದಲ್ಲಿ ಗುಹ್ಯ ಪುಟ್ಟಿತ್ತು. ನಕಾರ ತಾನೇ ಪಾಯು.

ಇಂತೀ ಛತ್ತೀಸ ತತ್ವವೆಲ್ಲ ಮಂತ್ರ ಸ್ವರೂಪವಾದ ಬಸವಣ್ಣನೇ ಎನಗೆ ಅಂಗ ಲಿಂಗ ಹಸ್ತ ಮುಖ ಶಕ್ತಿ ಭಕ್ತಿ ಪದಾರ್ಥ ಪ್ರಸಾದ. ಇಂತಿವೆಲ್ಲವನರಿದು ಅರ್ಪಿಸುವ ಭೇದ ಹೇಗೆಂದೊಡೆ:—

ಪ್ರಥಮದಲ್ಲಿ ಷಟ್‌ಸ್ಥಲದ ವಿವರ–ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ. ಇನ್ನು ಭಕ್ತನ ಷಡ್ವಿಧ ಲಿಂಗದ ವಿವರ— ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ. ಇನ್ನು ಭಕ್ತನ ಷಡ್ವಿಧ ಹಸ್ತದ ವಿವರ—ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ. ಇನ್ನು ಭಕ್ತನ ಷಡ್ವಿಧ ಮುಖದ ವಿವರ— ಘ್ರಾಣ ಜಿಹ್ವೆ ನೇತ್ರ ತ್ವಕ್ಕು ಶ್ರೋತ್ರ ಹೃದಯ,

ಇನ್ನು ಭಕ್ತನ ಷಡ್ವಿಧ ಶಕ್ತಿಯು ವಿವರ-ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಆದಿಶಕ್ತಿ ಪರಾಶಕ್ತಿ ಚಿತ್ಶಕ್ತಿ. ಇನ್ನು ಭಕ್ತನ ಷಡ್ವಿಧ ಭಕ್ತಿಯ ವಿವರ— ಶ್ರದ್ಧೆ ನೈಷ್ಠೆ ಸಾವಧಾನ ಅನುಭಾವ ಆನಂದ ಸಮರಸ. ಇನ್ನು ಭಕ್ತನ ಷಡ್ವಿಧ ಪದಾರ್ಥದ ವಿವರ— ಗಂಧ ರಸ ರೂಪು ಸ್ಪರ್ಶನ ಶಬ್ದ ಪರಿಣಾಮ. ಇನ್ನು ಭಕ್ತನ ಷಡ್ವಿಧ ಪ್ರಸಾದದ ವಿವರ. ಗಂಧ ಪ್ರಸಾದ ರಸಪ್ರಸಾದ ರೂಪುಪ್ರಸಾದ ಸ್ಪರ್ಶಪ್ರಸಾದ ಶಬ್ದಪ್ರಸಾದ ಪರಿಣಾಮಪ್ರಸಾದ.

ಇನ್ನು ದ್ವಿತೀಯದಲ್ಲಿ ಮಹೇಶ್ವರನ ಷಟ್‌ಸ್ಥಲದ ವಿವರ- ಮಹೇಶ್ವರ, ಭಕ್ತ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ. ಇನ್ನು ಮಹೇಶ್ವರನ ಷಡ್ವಿಧ ಲಿಂಗದ ವಿವರ— ಗುರುಲಿಂಗ, ಆಚಾರಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ. ಇನ್ನು ಮಹೇಶ್ವರನ ಷಡ್ವಿಧ ಹಸ್ತದ ವಿವರ—ಸುಬುದ್ಧಿ ಸುಚಿತ್ತ ನಿರಹಂಕಾರ ಸುಮನ ಸುಜ್ಞಾನ ಸದ್ಭಾವ. ಇನ್ನು ಮಹೇಶ್ವರನ ಷಡ್ವಿಧ ಮುಖದ ವಿವರ. ಜಿಹ್ವೆ, ಘ್ರಾಣ, ನೇತ್ರ, ತ್ವಕ್ಕು, ಶ್ರೋತ್ರ, ಹೃದಯ. ಇನ್ನು ಮಹೇಶ್ವರನ ಷಡ್ವಿಧ ಶಕ್ತಿಯು ವಿವರ—ಜ್ಞಾನಶಕ್ತಿ, ಕ್ರಿಯಾಶಕ್ತಿ, ಇಚ್ಛಾಶಕ್ತಿ, ಪರಾಶಕ್ತಿ, ಚಿತ್ಶಕ್ತಿ. ಇನ್ನು ಮಹೇಶ್ವರನ ಷಡ್ವಿಧ ಭಕ್ತಿಯ ವಿವರ— ನೈಷ್ಠೆ ಶ್ರದ್ಧೆ ಸಾವಧಾನ ಅನುಭಾವ ಆನಂದ ಸಮರಸ. ಇನ್ನು ಮಹೇಶ್ವರನ ಷಡ್ವಿಧ ಪದಾರ್ಥದ ವಿವರ— ರಸ, ಗಂಧ, ರೂಪು, ಸ್ಪರುಶನ, ಶಬ್ದ, ಪರಿಣಾಮ. ಇನ್ನು ಮಹೇಶ್ವರನ ಷಡ್ವಿಧ ಪ್ರಸಾದದ ವಿವರ—ರಸಪ್ರಸಾದ, ಗಂಧಪ್ರಸಾದ, ರೂಪು ಪ್ರಸಾದ, ಸ್ಪರುಶನ ಪ್ರಸಾದ, ಶಬ್ದಪ್ರಸಾದ, ಪರಿಣಾಮಪ್ರಸಾದ.

ಇನ್ನು ತೃತೀಯದಲ್ಲಿ ಪ್ರಸಾದಿಯ ಷಟ್‌ಸ್ಥಲದ ವಿವರ—ಪ್ರಸಾದಿ ಭಕ್ತ ಮಹೇಶ್ವರ ಪ್ರಾಣಲಿಂಗಿ ಶರಣ ಐಕ್ಯ. ಇನ್ನು ಪ್ರಸಾದಿಯ ಷಡ್ವಿಧ ಲಿಂಗದ ವಿವರ—ಶಿವಲಿಂಗ ಆಚಾರಲಿಂಗ ಗುರುಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ. ಇನ್ನು ಪ್ರಸಾದಿಯ ಷಡ್ವಿಧ ಹಸ್ತದ ವಿವರ—ನಿರಹಂಕಾರ ಸುಚಿತ್ತ ಸುಬುದ್ಧಿ ಸುಮನ ಸುಜ್ಞಾನ ಸದ್ಭಾವ. ಇನ್ನು ಪ್ರಸಾದಿಯ ಷಡ್ವಿಧ ಮುಖದ ವಿವರ-ನೇತ್ರ ಘ್ರಾಣ ಜಿಹ್ವೆ ತ್ವಕ್ಕು ಶ್ರೋತ್ರ ಹೃದಯ. ಇನ್ನು ಪ್ರಸಾದಿಯ ಷಡ್ವಿಧ ಶಕ್ತಿಯು ವಿವರ—

ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿ ಆದಿಶಕ್ತಿ ಪರಾಶಕ್ತಿ ಚಿತ್ಶಕ್ತಿ. ಇನ್ನು ಪ್ರಸಾದಿಯ ಷಡ್ವಿಧ ಭಕ್ತಿಯ ವಿವರ— ಸಾವಧಾನ ಶ್ರದ್ಧೆ ನೈಷ್ಠೆ ಅನುಭಾವ ಆನಂದ ಸಮರಸ. ಇನ್ನು ಪ್ರಸಾದಿಯ ಷಡ್ವಿಧ ಪದಾರ್ಥದ ವಿವರ—ರೂಪು ಗಂಧ ರಸ ಸ್ಪರುಶನ ಶಬ್ದ ಪರಿಣಾಮ. ಇನ್ನು ಪ್ರಸಾದಿಯ ಷಡ್ವಿಧ ಪ್ರಸಾದದ ವಿವರ—ರೂಪು ಪ್ರಸಾದ, ಗಂಧ ಪ್ರಸಾದ, ರಸ ಪ್ರಸಾದ, ಸ್ಪರುಶನ ಪ್ರಸಾದ, ಶಬ್ದ ಪ್ರಸಾದ, ಪರಿಣಾಮ ಪ್ರಸಾದ. ಇಂತೀ ಮಾರ್ಗಕ್ರಿ ಅಂಗಲಿಂಗವಾದಲ್ಲಿ ಮುಂದೆ ಮೀರಿದ ಕ್ರಿಯೆ ಅಂಗ ಲಿಂಗ ತೃತೀಯ ಸ್ಥಲ.

ಇನ್ನು ಚತುರ್ಥದಲ್ಲಿ ಪ್ರಾಣಲಿಂಗಿಯ ಷಡ್ವಿಧ ವಿವರ— ಪ್ರಾಣಲಿಂಗಿ ಭಕ್ತ ಮಹೇಶ್ವರ ಪ್ರಸಾದಿ ಶರಣ ಐಕ್ಯ. ಇನ್ನು ಪ್ರಾಣಲಿಂಗಿಯ ಷಡ್ವಿಧ ಲಿಂಗದ ವಿವರ—ಜಂಗಮಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗ ಪ್ರಸಾದಲಿಂಗ ಮಹಾಲಿಂಗ. ಇನ್ನು ಪ್ರಾಣಲಿಂಗಿಯ ಷಡ್ವಿಧ ಹಸ್ತದ ವಿವರ—ಸುಮನ, ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಜ್ಞಾನ ಸದ್ಭಾವ. ಇನ್ನು ಪ್ರಾಣಲಿಂಗಿಯ ಷಡ್ವಿಧ ಮುಖದ ವಿವರ— ತ್ವಕ್ಕು ಘ್ರಾಣ ಜಿಹ್ವೆ ನೇತ್ರ ಶ್ರೋತ್ರ ಹೃದಯ. ಇನ್ನು ಪ್ರಾಣಲಿಂಗಿಯ ಷಡ್ವಿಧ ಶಕ್ತಿಯ ವಿವರ—ಆದಿಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಪರಾಶಕ್ತಿ, ಚಿತ್ಶಕ್ತಿ. ಇನ್ನು ಪ್ರಾಣಲಿಂಗಿಯ ಷಡ್ವಿಧ ಭಕ್ತಿಯ ವಿವರ. ಅನುಭಾವ ಶ್ರದ್ಧೆ ನೈಷ್ಠೆ ಸಾವಧಾನ ಆನಂದ ಸಮರಸ. ಇನ್ನು ಪ್ರಾಣಲಿಂಗಿಯ ಷಡ್ವಿಧ ಪದಾರ್ಥದ ವಿವರ—ಸ್ಪರುಶನ ಗಂಧ ರಸ ರೂಪು ಶಬ್ದ ಪರಿಣಾಮ. ಇನ್ನು ಪ್ರಾಣಲಿಂಗಿಯ ಷಡ್ವಿಧ ಪ್ರಸಾದದ ವಿವರ. ಸ್ಪರುಶನಪ್ರಸಾದ ಗಂಧಪ್ರಸಾದ ರಸಪ್ರಸಾದ ರೂಪುಪ್ರಸಾದ ಶಬ್ದ ಪ್ರಸಾದ ಪರಿಣಾಮಪ್ರಸಾದ.

ಇನ್ನು ಪಂಚಮದಲ್ಲಿ ಶರಣನ ಷಟ್‌ಸ್ಥಲದ ವಿವರ— ಶರಣ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಐಕ್ಯ. ಇನ್ನು ಶರಣನ ಷಡ್ವಿಧ ಲಿಂಗದ ವಿವರ—ಪ್ರಸಾದಲಿಂಗ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಮಹಾಲಿಂಗ. ಶರಣನ ಷಡ್ವಿಧ ಹಸ್ತದ ವಿವರ—ಸುಜ್ಞಾನ ಸುಚಿತ್ತ, ಸುಭುದ್ಧಿ, ನಿರಂಕಾರ, ಸುಮನ, ಸದ್ಭಾವ. ಇನ್ನು ಶರಣನ ಷಡ್ವಿಧ ಮುಖದ ವಿವರ— ಶ್ರೋತ್ರ ಘ್ರಾಣ ಜಿಹ್ವೆ ನೇತ್ರ ತ್ವಕ್ಕು ಹೃದಯ. ಇನ್ನು ಶರಣನ ಷಡ್ವಿಧ ಶಕ್ತಿಯ ವಿವರ— ಪರಾ

(೪೫) ದುಂಡಪ್ಪ ಹೂವಪ್ಪ ಅವಾಸಿ ೧೧ ರೂ. (೪೬) ಭರಮಗೌಡ ಲಿಂಗನಗೌಡ ಪಾಟೀಲ ೫ ರೂ. (೪೭) ಎಂ. ಕೆ. ಚಿಕ್ಕೋಡಿ ೫ ರೂ. (೪೮) ವೀರಪ್ಪ ಲಿಂಗಪ್ಪ ಪಟ್ಟಣಶೆಟ್ಟಿ ೫ ರೂಪಾಯಿ (೪೯) ಜಿ. ಎಲ್. ಮಳಲಿ ವಕೀಲ ೫ ರೂ. (೫೦) ವೀರಪ್ಪ ಚನ್ನಪ್ಪ ಜಿಗಜಿನ್ನಿ ಅಡತಿ ಅಂಗಡಿ ೫ ರೂ. (೫೧) ಬಿ. ಎ. ಹಿರೇಮಠ ವಕೀಲರು ೫ ರೂ. (೫೨) ವಿರಭದ್ರಪ್ಪ ದಾನಪ್ಪ ಪುಣೇದ ೫ ರೂ. (೫೩) ಎಸ್. ಎಂ. ದೇಸಾಯಿ ರುದ್ರಾಪುರ ೫ ರೂ. (೫೪) ಫಕೀರಪ್ಪಾ ಬಾಳಪ್ಪಾ ಮತ್ತೀಕೊಪ್ಪ ೫ ರೂ. (೫೫) ವೀರಪ್ಪ ಉಪ್ಪಿನ ೫ ರೂ. (೫೬) ಡಾ. ಎಸ್. ಆರ್. ಹಿರೇಮಠ ಖಡೇಬಜಾರ ೫ ರೂ. (೫೭) ಎಸ್. ಎನ್. ಅಂಗಡಿ ವಕೀಲರು ೫ ರೂ,

ಖಾನಾಪುರ:— (ಜಿ. ಬೆಳಗಾವ) (೫೮) ಬಸಲಿಂಗಪ್ಪ ಬಸವಣ್ಣೆಪ್ಪ ಹೊಸಮನಿ ೫ ರೂ. (೫೯) ಬಾಳಪ್ಪ ಚನಮಲ್ಲಪ್ಪ ಹೊಸಮನಿ ೫ ರೂ. (೬೦) ಬಸವಣ್ಣೆಪ್ಪ ಮಲ್ಲಪ್ಪ ಶೆಟ್ಟಿ ೫ ರೂ. (೬೧) ವಿರಭದ್ರಪ್ಪ ಮಹಾರುದ್ರಪ್ಪ ಹೊಂಬಳ್ಳಿ ೫ ರೂ. (೬೨) ಶಿವಬಸಪ್ಪ ಚನಬಸಪ್ಪ ಕೊಡೊಳ್ಳಿ ೫ ರೂ. (೬೩) ನಾಗಪ್ಪ ಶಿವಲಿಂಗಪ್ಪ ಬಳ್ಳೊಳ್ಳಿ ೫ ರೂ.

ಕಣಬರಗಿ (ಜಿ. ಬೆಳಗಾವ) (೬೪) ಅಪ್ಪಯ್ಯ ಚರಂತಯ್ಯ ಪಂಚಾಕ್ಷರಿಮಠ ೫ ರೂ.

ಮೈಸೂರ ಸ್ಟೇಟ— (೬೫) ಆರ್ ಟಿ. ಗುರುಕಾರ C/o ಆರ್. ಬಿ. ಶಿವಪ್ಪ ಸೋಮಪ್ಪ ಮರ್ಚಂಟ ೫ ರೂ. (೬೬) ಜಿ. ಆರ್. ಭಸ್ಮಾಂಗದೇವರು ಕೃಷ್ಣರಾಜನಗರ ಇಲೆಕ್ಟ್ರಿಕ್ ಡಿಪಾರ್ಟಮೆಂಟ ೩ ರೂಪಾಯಿ (೬೭) ಶ್ರೀ ಸಂಗಮನಾಥ ಸ್ವಾಮಿಗಳವರು ವಿರಕ್ತಮಠ ಬಿಲ್ಲಹಳ್ಳಿ ಜಿ ಶಿವಮೊಗ್ಗಾ ೧೫ ರೂ. (೬೮) ದಿ. ಶಿವಲಿಂಗಪ್ಪ ಸ್ಕೂಲ ಮಾಸ್ತರ ಸೋಮಶೆಟ್ಟಿಹಳ್ಳಿ ಜಿ ಶಿವಮೊಗ್ಗಾ ೨ ರೂ. (೬೯) ಶಿವಲಿಂಗಪ್ಪನವರು ಪಟೀಲ ಸೋಮಶೆಟ್ಟಿಹಳ್ಳಿ ಜಿ. [illegible]ಗ್ಗಾ ೧ ರೂ.

ಬಳ್ಳಾರಿ ಜಿಲ್ಲಾ:— (೭೦) ಮಠದ ಶ್ರೀ ಬಸಯ್ಯನವರು ಪುಣಬಗಟ್ಟಿ ತಾ. ಹರಪನಹಳ್ಳಿ ೨ ರೂ (೭೧) ರೇವಮ್ಮನವರು ಮಠದ ಕಂಭತ್ತಳ್ಳಿ ತಾ. ಹರಪನಹಳ್ಳಿ ೧ ರೂ.

ಗೋಕಾಕ:— (೭೨) ಬಿ. ಎ. ಮುಂಡಾಸ ಹೆ. ಮಾ. ಮುನಿಸಿಪಲ್ ಹೈಸ್ಕೂಲ ೫ ರೂ

ಇದಲ್ಲದೆ ಬೈಲಹೊಂಗಲದಲ್ಲಿ ಸಹಾಯ ದೊರೆತಿದ್ದು ಅದನ್ನು ಮುಂದಿನ ಸಂಚಿಕೆಯಲ್ಲಿ ಪ್ರಸಿದ್ಧ ಮಾಡುತ್ತೇವೆ. ಸಹಾಯ ಮಾಡಿದ ಎಲ್ಲ ಜನರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಹೋದ ಸಂಚಿಕೆಯಲ್ಲಿ ತೇರದಾಳ ಬಸವಪ್ರಭು ಅಲ್ಲಯ್ಯ ದೊಡ್ಡಮನಿ ೨೫ ರೂ. ಇದ್ದದ್ದು ೫ ರೂ. ಎಂದೂ ದುಂಡಪ್ಪ ಬಸಪ್ಪ ಮುಚ್ಚಂಡಿ ೫ ರೂ. ಎಂದೂ ಓದಬೇಕು. ಸಂಪಾದಕರು— ಶಿವಾನುಭವ ವಿಜಾಪುರ.

## ಮುಂಬಯಿ ಸರಕಾರದವರು
## ಪಾಸ ಮಾಡಿದ "ಲೋಣಿ" ಇವರ ಗ್ಯಾಸ ಪ್ಲೆಂಟಗಳನ್ನೇ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯ ಖರ್ಚು ಬಹಳೇ ಕಡಿಮೆ ಇದ್ದು, ಬೇಗನೆ ಸ್ಟಾರ್ಟವಾಗಿ ಭರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳೇ ಸುಲಭ. ಮಶಿನರಿಗಳಿಗೆಬಿಲಕೂಲ ಅಪಾಯವಿಲ್ಲ. ದೃಷ್ಟಿಗೆ ಶುಭಕ. ಇದಲ್ಲದೆ ಟುಯಿರಿಂಗ ಕಾರ್ಸ ಮತ್ತು ಆಯಿಲ್ ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟಿವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

**ದಿ ಲೋಣಿ ಇಂಜನಿಯರಿಂಗ ವರ್ಕ್ಸ [illegible] ಜಾಪೂರ.**

---

**BOOK-POST.** R. N. B. 2554

ಶ್ರೀ. ರಾ|| ರಾ||

ಚನ್ನಮಲ್ಲಪ್ಪ ಸಿದ್ದಪ್ಪ ಬಡೇಮಿ
ಪೋ. ಬನಹಟ್ಟಿ
ವ್ಹಾಯಾ-ಕುಡಚಿ ಸ್ಟೇಶನ್

*From,*
**Shivanubhava**
**Office**
**Bijapur.**

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ೧೬೩೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

# ಶಿವಾನುಭವ

ವರ್ಷ ೧೮ | ನವ್ಹಂಬರ-ಡಿಶೆಂಬರ ೧೯೪೩. | ಸಂಚಿಕೆ ೨-೩

## ಹಿಡಿದ ನೇಮವ ಬಿಡದಿರ್ಪುದು.

( ಲೇ:— ಶಿವಮೂರ್ತಿ )

ಸ್ವೀಕರಿಸುವ ನೇಮವಂ ಪ್ರಾಣಾಂತ್ಯದ ವರೆಗೆ ಬಿಡೆನೆಂಬುದೇ ೭ ನೆಯ ಆಚಾರ. ಶಿವಶರಣರು ಒಮ್ಮೆ ಕೈಕೊಂಡ ವ್ರತನೇಮಗಳನ್ನು ಸಾಯುವ ವರೆಗೂ ತಪ್ಪದೆ ನಡೆಯಿಸುವರು. ಪ್ರಸಂಗ ಬಂದಾಗ ತಪ್ಪಿ ನಡೆಯುವವರಲ್ಲ. ಹೊತ್ತು ಬಂದಂತೆ ಕೊಡೆ ಹಿಡಿಯುವವರಲ್ಲ. ಆಪದ್ಧರ್ಮ ಅನುಕೂಲಸಿಂಧುಗಳನ್ನು ಮುಂದು ಮಾಡಿ ತಮ್ಮ ವ್ರತಶೀಲಗಳಿಗೆ ಭಂಗ ತಂದುಕೊಳ್ಳುವವರಲ್ಲ. ಅಲ್ಲದ್ದನ್ನು ಎಂದಿಗೂ ಹಿಡಿಯರು. ಒಳಿತನ್ನೆಂದಿಗೂ ಬಿಡರು. ಬಿಟ್ಟದ್ದನ್ನೆಂದಿಗೂ ಹಿಡಿಯರು. ಹಿಡಿದದ್ದನ್ನೆಂದಿಗೂ ಬಿಡರು. ಛಲವೇ ಶರಣರ ಶೀಲ. ಛಲವೇ ಅವರ ಬಲ. ಛಲದಿಂದಲೇ ನಿಜವಾದ ಆತ್ಮೋನ್ನತಿ.

ಹಿಡಿದ ಕೆಲಸಗಳನ್ನು ಬಿಟ್ಟು ಬಿಟ್ಟು ಆಚರಿಸುವದರಿಂದ ಅವು ಸರಿಯಾಗಿ ಕೊನೆಗಾಣಲಾರವು. ಹಾಗೆ ಮಾಡುವವರೂ ದುರ್ಬಲಾತ್ಮರೆಂದು ಸಿದ್ಧವಾಗುತ್ತದೆ. ಎಂಥ ಎಡೆತಡೆಗಳೊದಗಿದರೂ ಹಿಡಿದ ಕಾರ್ಯವನ್ನು ಎದೆಗೊಟ್ಟು ಈಡೇರಿಸಿದರೆ ನಮಗೆ ಯಶಸ್ಸು ದೊರೆಯುವದು. ಆತ್ಮಕ್ಕೆ ಶಾಂತಿ ಲಭಿಸುವದು. “ಕ್ರಮತಪ್ಪಿ ನಡೆವುದರಿಂ ಕಷ್ಟಮುಂಟೆ?” ಎಂದು ನಿಜಗುಣಾರ್ಯರು ಹಾಡಿಕೊಂಡಿದ್ದಾರೆ. ಹಿಡಿದ ವ್ರತವನ್ನು ತಪ್ಪದೆ ನಡೆಯಿಸುವದೇ ಸುಖ. ಬಿಟ್ಟು ಬಿಟ್ಟು ಆಚರಿ

ಸುವದೇ ದುಃಖ. ಹಿಡಿದ ವೃತವನ್ನು ಎಂದಿಗೂ ಬಿಡೆನೆಂಬುದೇ ಛಲ. ಆ ಛಲವೇ ಮನುಷ್ಯನಿಗೆ ನಿಜವಾದ ಬಲ.

" ನಾಯ ಮಾತ್ಮಾ ಬಲಹೀನೇನ ಲಭ್ಯಃ " ಅಂದರೆ ಆತ್ಮ ಸಾಕ್ಷಾತ್ಕಾರವು ಬಲವಂತರಿಗೆ ಸಾಧ್ಯವೇ ವಿನಾ ದುರ್ಬಲರಿಗೆ ಸಾಧ್ಯವಲ್ಲ ಎಂಬ ಶೃತಿವಾಕ್ಯವುಂಟು. ಲೌಕಿಕ ಪಾರಮಾರ್ಥಗಳೆರಡರಲ್ಲಿ ಅಘಟಿತ ಘಟನಾ ಕಾರ್ಯವು ಬಲವಂತನಾದ ಛಲಗಾರನಿಗಷ್ಟೇ ಸಾಧ್ಯವಲ್ಲದೆ ದುರ್ಬಲಾತ್ಮನಿಗೂ ವ್ರತಗೇಡಿಗೂ ಸರ್ವಥಾ ಸಾಧ್ಯವಲ್ಲ. ಮಹೇಶ್ವರ ಸ್ಥಲದಲ್ಲಿ ಛಲದ ಪ್ರತಿಭಾ ಶಕ್ತಿಯು ಹೆಜ್ಜೆಜ್ಜೆಗೆ ಕಂಗೊಳಿಸುತ್ತದೆ. ಛಲವುಳ್ಳಾತನೇ ಮಹೇಶನು. ಶರಣರ ಛಲವು ನಿಜವಾಗಿಯೂ ಅನುಕರಣೀಯವಾಗಿದೆ. ಶರಣರಿಗೆ ಸತ್ಕಾರ್ಯ ಸಾಧನೆಗಾಗಿ ಛಲವು ಬೇಕೇ ಹೊರತು ದುಷ್ಟ ಕಾರ್ಯ ಸಾಧನೆಗಾಗಿಯಲ್ಲ.

ಛಲವೇ ಬಲವಾದ್ದರಿಂದ ಮನುಷ್ಯನಿಗೆ ಛಲವು ಬೇಕೆಂಬ ವಿಷಯದಲ್ಲಿ ಷಣ್ಮುಖ ಸ್ವಾಮಿಗಳು ಈ ರೀತಿಯಾಗಿ ಅಪ್ಪಣೆ ಕೊಡಿಸಿದ್ದಾರೆ. " ಛಲವಿರಬೇಕು ಭಕ್ತಿಯ ಮಾಡುವಲ್ಲಿ ಹಿಡಿದು ಬಿಡೆನೆಂಬ ಛಲವಿರಬೇಕು. ನಮ್ಮ ಅಖಂಡೇಶ್ವರ ಲಿಂಗವ ಕೂಡಿ ಅಗಲೆನೆಂಬ ಛಲವಿರಬೇಕು. " ಸತ್ಕಾರ್ಯವನ್ನು ತಪ್ಪದೆ ಮಾಡುವೆನೆಂಬ ಸತ್ಯಾಗ್ರಹವೇ ಛಲ. ಹರಿಶ್ಚಂದ್ರ, ಮ. ಗಾಂಧಿಯವರಲ್ಲಿ ಇಂಥ ಛಲವುಂಟು. ಆದರೆ ದುಷ್ಟ ಕಾರ್ಯ ಸಾಧನೆಗಾಗಿ ತೊಡುವ ದುರಾಗ್ರಹಕ್ಕೆ ಶರಣರು ಛಲವೆನ್ನುವದಿಲ್ಲ. ರಾವಣ ದುರ್ಯೋಧನಾದಿಗಳ ಛಲವು ದುರಾಗ್ರಹವೇ ಹೊರತು ಸತ್ಯಾಗ್ರಹವಲ್ಲ. ಶರಣರು ದುರಾಗ್ರಹವನ್ನೆಂದಿಗೂ ಒಪ್ಪರು.

ಛಲವು ಯಾತರ ಸಲುವಾಗಿ ಬೇಕೆಂಬ ಮಾತನ್ನು ಶ್ರೀ ಬಸವಣ್ಣನವರು ಒಳ್ಳೆ ಸುಗಮವಾಗಿ ನಿರೂಪಿಸಿದ್ದಾರೆ. " ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲಬೇಕು ಶರಣಂಗೆ ಪರಸ್ತ್ರೀಯು ಬೇಡವೆಂಬ. ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ. ಛಲಬೇಕು ಶರಣಂಗೆ ಪರವಾದಿ ನಿಗ್ರಹದಲ್ಲಿ. ಛಲಬೇಕು ಶರಣಂಗೆ ಪ್ರಸಾದವಿರಬೇಕೆಂಬ. ಛಲವಿಲ್ಲದಿರ್ದೊಡೆ ಮೆಚ್ಚನು ನಮ್ಮ ಕೂಡಲಸಂಗಮದೇವಯ್ಯ. "

ಮನುಷ್ಯನಿಗೆ ಏನೋ ಆವೇಶ ಬಂದಾಗ ಆತ್ಮನು ಪ್ರತಿಜ್ಞೆ ಶಪಥಗಳನ್ನು ಮಾಡಿ ವೃತನೇಮಾದಿಗಳನ್ನು ಕೈಕೊಳ್ಳಬಹುದು. ಪ್ರತಿಜ್ಞಾ

ಮಾಡುವದೂ ಸುಲಭ. ವ್ರತಾದಿಗಳನ್ನು ಹಿಡಿಯುವದೂ ಸುಲಭ. ಆದರೆ ಅವುಗಳನ್ನು ತಪ್ಪದೆ ನಡೆಯಿಸುವದು ಮಾತ್ರ ಬಹುಕಷ್ಟ. ಅದು ಕಂಡವರಿಗೆ ಸಾಧ್ಯವಿಲ್ಲ. ವ್ರತ ನೇಮಗಳಿಗೆ ಎಡರು ತೊಡರುಗಳು ಬಂದು ಎಡೆಗೊಂಡರೆ ಕೈಮುಚ್ಚಿಕೊಂಡು ಕೂಡ್ರುವವರೇ ಬಹಳ. ಅದನ್ನು ಹ್ಯಾಗಾದರೂ ನಡೆಯಿಸಿಯೇ ತೀರುವೆನೆಂಬ, ಛಲವುಳ್ಳವರು ತೀರ ಕಡಿಮೆ. "ಪಿಡಿದ ನೇಮವ ನೆಡವಿಡದಕಿ ಛಲವನು । ನೀಡೆನಗಭವಾ ನಿಮ್ಮನು ನಾನು ಬೇಡುವೆ" ಎಂದು ನಿಜಗುಣಾರ್ಯರು ಹಾಡಿ ಕೊಂಡಿದ್ದಾರೆ. ಛಲವು ಸಾಧಿಸಬೇಕಾದರೆ ಪುಣ್ಯಾತ್ಮರಿಗೆ ಶಕ್ಯ. ಪಾಪಾತ್ಮರಿಗೆಂದಿಗೂ ಸಾಧಿಸದು.

ಹಿಡಿದ ನೇಮವನ್ನು ತಪ್ಪದೆ ಅಚ್ಚುಕಟ್ಟಾಗಿ ನಡೆಯಿಸಿಕೊಂಡು ಹೋಗುವದಕ್ಕೆ ಪಾಶ್ಚಿಮಾತ್ಯರು 'ಶಿಸ್ತು' (*Discipline*) ಎಂದೆನ್ನುತ್ತಾರೆ ಆ ಶಿಸ್ತಿನ ಬಲದಿಂದಲೇ ಅವರು ಅನೇಕ ರಾಷ್ಟ್ರಗಳನ್ನು ಪಾದಾಕ್ರಾಂತ ಮಾಡಿ ಇಹದಲ್ಲಿ ಸುಖದಿಂದ ರಾಜ್ಯವಾಳುತ್ತಾರೆ. ಇಂಥ ಶಿಸ್ತನ್ನು ಪಾರಮಾರ್ಥ ಸಾಧನೆಗಾಗಿ ಪ್ರಯೋಗಿಸಿದಲ್ಲಿ ನಾವು ಪರಮಾತ್ಮನ ರಾಜ್ಯದಲ್ಲಿ ಸುಖಶಾಂತಿಯಿಂದ ಬಾಳಬಹುದು. ಆದರೆ ನಮ್ಮ ನಾಡಿನ ಜನಗಳು ಬಲು ಮುಗ್ಗಲಗೇಡಿಗಳು "ಆರಂಭಶೂರಾಃ ಖಲುದಾಕ್ಷಿಣಾತ್ಯಃ" ಎಂಬ ಗಾದೆಯು ಪ್ರಸಿದ್ಧವಾಗಿದೆ. ನಾವು ಮೊದಲಿಗಷ್ಟೇ ಒಳ್ಳೆ ಆವೇಶದಿಂದ ಕೆಲಸ ಪ್ರಾರಂಭ ಮಾಡಿ ವಿಘ್ನ ಬಂದೊಡನೆಯೇ ಕೈ ಕಟ್ಟಿಕೊಂಡು ಸುಮ್ಮನೆ ಕುಳಿತುಕೊಳ್ಳುತ್ತೇವೆ. ಅದ್ದರಿಂದ ಯಾವ ಹೇಳಿಕೊಳ್ಳತಕ್ಕ ಕಾರ್ಯಗಳೂ ನಮ್ಮಿಂದ ಘಟಿಸಲಾರವು.

"ವಿಘ್ನೈಃ ಪುನಃ ಪುನರಪಿ ಪ್ರತಿಹನ್ಯಮಾನಾಃ । ಪ್ರಾರಬ್ಧಮುತ್ತಮ ಜನಾಃ ನ ಪರಿತ್ಯಜಂತಿ" ಅಂದರೆ "ವಿಘ್ನಗಳು ಮೇಲಿಂದ ಮೇಲೆ ಬಂದರೂ ಒಮ್ಮೆ ಹಿಡಿದ ವ್ರತನೇಮಗಳನ್ನು ಧೀರರು ಎಂದಿಗೂ ಬಿಟ್ಟು ತೊಲಗುವದಿಲ್ಲ." ಎಂಬ ಹಿತೋಕ್ತಿಯುಂಟು. ಇನ್ನೊಂದೆಡೆಗೆ ಸಂಸ್ಕೃತ ನೀತಿ ವಾಕ್ಯವು ಈ ರೀತಿಯಾಗಿ ಹೇಳುತ್ತದೆ. "ಅದ್ಯೈವ ವಾ ಮರಣ ಮಸ್ತು ಯುಗಾಂತರೇ ವಾ । ನ್ಯಾಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ" ಇವತ್ತೇ ಮರಣ ಬರಲಿ. ಯುಗಯುಗಾಂತರವಾದ ಬಳಿಕ ಬರಲಿ. ಉತ್ತಮ ಜನರು ನ್ಯಾಯಮಾರ್ಗವನ್ನು ಬಿಟ್ಟು ಒಂದು ಹೆಜ್ಜೆಯನ್ನಾದರೂ ಹಿಂದೆಗೆಯುವದಿಲ್ಲ. ವಿಘ್ನಗಳು ಬಂದಾಗ ಎದೆ

ಗೊಟ್ಟು ನಿಲ್ಲುವ ಸಾಮರ್ಥ್ಯವು ಶರಣರಂಥ ಆತ್ಮಬಲಶಾಲಿಗಳಿಗಲ್ಲದೆ ಮತ್ತಾರಿಗೆ ತಾನೆ ಸಾಧ್ಯ?

ಶಿವನು ಭಕ್ತರ ಪರೀಕ್ಷಾರ್ಥವಾಗಿ ಅನೇಕ ವಿಘ್ನಗಳನ್ನೊಡ್ಡುತಿರುವನು. ಅವುಗಳಿಗೆ ಹೆದರದೆ ಧೈರ್ಯದಿಂದ ವ್ರತನೇಮಗಳನ್ನು ಪಾಲಿಸಿದರೆ ನಾವು ಪರಶಿವನ ಒಲ್ಮೆಗೆ ಪಾತ್ರರಾಗುವೆವು ಈ ವಿಷಯದಲ್ಲಿ ದೇವರ ದಾಸಿಮಯ್ಯನವರು ಅಪ್ಪಣೆ ಕೊಡಿಸಿರುವದೇನಂದರೆ "ಹರ ತನ್ನ ಭಕ್ತರ ತಿರಿವಂತೆ ಮಾಡುವ, ಒರೆದು ನೋಡುವ ಸುವರ್ಣದ ಚಿನ್ನದಂತೆ. ಅರೆದು ನೋಡುವ ಚಂದನದಂತೆ. ಅರಿದು ನೋಡುವ ಕಬ್ಬಿನ ಕೋಲನಂತೆ. ಬೆದರದೆ ಬೆಚ್ಚದೆ ಇದ್ದರೆ ಕರವಿಡಿದೆತ್ತಿಕೊಂಬ ನಮ್ಮ ರಾಮನಾಥನು.

ಬಸವಣ್ಣನವರು ಎಂಥ ಅನಿಷ್ಟಗಳು ತಮಗೊದಗಿದರೂ ಹಿಡಿದ ವ್ರತನೇಮಾದಿಗಳನ್ನು ಎಂದಿಗೂ ಬಿಡೆನೆಂಬ ಮಾತನ್ನು ಒಳ್ಳೆ ಸ್ಫೂರ್ತಿಯಿಂದ ಹೇಳಿದ್ದಾರೆ. "ಅರ್ಥವನರ್ಥವ ಮಾಡಿ ಕೋಳಾಹಳಂಗೈವುತ್ತಿರಲಿ. ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿವುತ್ತಿರಲಿ. ಮುಟ್ಟುವ ಸ್ತ್ರೀಯ ಕಣ್ಣ ಮುಂದೆ ಅವಮಾನಂಗೈವುತ್ತಿರಲಿ. ನನ್ನಂಗಕ್ಕೆ ಶೂಲಪ್ರಾಪ್ತಿಸಲಿ. ನನ್ನ ದೇಹಮಂ ಹಿಡಿಕ್ಹಂಡವ ಮಾಡಿ ಕಡಿವುತ್ತಿರಲಿ ಮತ್ತೆಯೂ ಲಿಂಗಾರಾಧನೆಯ ಮಾಡುವೆ. ಮತ್ತೆಯೂ ಜಂಗಮಾರಾಧನೆಯ ಮಾಡುವೆ. ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದೊಡೆ ನೀನಂದೇ ಮೂಗ ಕೊಯ್ಯಿ ಕೂಡಲಸಂಗಮ ದೇವಾ. ಇನ್ನೊಂದೆಡೆಗೆ ಬಸವಣ್ಣನವರು ಅಪ್ಪಣೆ ಕೊಡಿಸಿದ್ದೇನಂದರೆ ಎನಿಸೆನಿಸೆಂದರೆಯೂ ನಾ ಧೃತಿ ಗೆಡೆನಯ್ಯಾ ಎಲುದೋರಿದೊಡೆಯೂ ಕರಳು ಕುಪ್ಪಳಿಸಿದೊಡೆಯೂ ನರ ಹರಿದೊಡೆಯೂ ನಾ ಧೃತಿಗೆಡೆನಯ್ಯಾ ಸಿರಹರಿದು ಅಟ್ಟೆ ನೆಲಕ್ಕೆ ಬಿದ್ದರೆಯೂ ಎನ್ನ ನಾಲಿಗೆ 'ಸಂಗ ಶರಣು' ಎನ್ನುತ್ತಿದ್ದಿತಯ್ಯಾ."

ವ್ರತವನ್ನು ತಪ್ಪದೆ ನಡೆಯಿಸಿಕೊಂಡು ಹೋಗುವವರೇ ಧೀರರು. ಹೇಡಿಗಳ ಕೈಯಿಂದ ನೇಮಗಳನ್ನು ಪಾಲಿಸಿಕೊಂಡು ಹೋಗುವದಾಗುವದಿಲ್ಲ. ನಾನು "ವ್ರತಸ್ಥ ನಾನು 'ಶೀಲವಂತ' ಎಂದು ಹೇಳಿ ಜನರ ಕಣ್ಣಿಗೆ ಮಂಕು ಬೂದಿ ಹಚ್ಚುವ ಡಾಂಭಿಕರೇ ಬಹಳ. ಪರೀಕ್ಷಾಸಮಯ ಬಂದಾಗ ಅವರ ವ್ರತನೇಮಗಳೆತ್ತ ಅಡಗುವವೋ ತಿಳಿ

ಯದು. ಅಂಥವರ ಬಗ್ಗೆ ಬಸವಣ್ಣನವರು ಹೇಳುವದೇನಂದರೆ " ಹೇಡಿ ಬಿರುದು ಕಟ್ಟಿದರೆ ಕಲಿಯಪ್ಪನೇ ? ಒರೆಯ ಬಿಚ್ಚಿ ಇರಿಯದಿರ್ದೊಡೆ ಲೋಕ ಮೆಚ್ಚುವದೇ ? ಚಲ್ಲಣವನುಟ್ಟು ಗರುಡಿಯ ಕಟ್ಟಿ ಸಾಧನೆಯ ಮಾಡಿ ತನ್ನ ತಪ್ಪಿಸಿಕೊಂಡೊಡೆ ಶಿವನು ಮೆಚ್ಚುವನೇ ? ಅರಿಯದವರಿಗೆ ಒಳ್ಳೆ ಹೆಡೆಯತ್ತಿ ತೋರಿದಂತೆ ಬೊಳ್ಳೆಗನ ಭಕ್ತಿ ಕೂಡಲಸಂಗಮದೇವಾ. "

ಮನುಷ್ಯನಿಗೆ ಹಿಡಿಯುವೆನೆಂಬ ಒಂದು ಛಲವಿರಬೇಕು. ಬಿಡುವೆನೆಂಬ ಇನ್ನೊಂದು ಛಲವಿರಬೇಕು. ಸದಾಚಾರ ಸನ್ಮಾರ್ಗಗಳನ್ನು ಹಿಡಿಯುವೆನೆಂಬ ಛಲವಿರಬೇಕು. ದುರಾಚಾರ ದುರ್ಗುಣಗಳನ್ನು ಬಿಡುವೆನೆಂಬ ಛಲವೂ ಇರಬೇಕು. ಅಂಥ ಛಲತೊಟ್ಟು ವ್ರತನೇಮಾದಿಗಳನ್ನು ಕೈಕೊಳ್ಳಬೇಕು. ಅದರಿಂದ ಅವನ ಉನ್ನತಿಯು ಖಂಡಿತವಾಗಿ ಆಗುವದು. *where there is a will there is a way* ಛಲವುಳ್ಳ ಇಚ್ಛೆಯಿದ್ದಲ್ಲಿ ನಿಜವಾದ ಮಾರ್ಗದೋರುವದು ಎಂಬ ಗಾದೆಯುಂಟು. ನೆಪೋಲಿಯನ್ನನು ಒಮ್ಮೆ ಹೇಳಿರುವದೇನಂದರೆ "*Im—possible is a word that can be found in the dictionary of fools*" ಅಂದರೆ ಅಶಕ್ಯವೆಂಬ ಶಬ್ದವು ಮೂರ್ಖರ ಶಬ್ದಕೋಶದಲ್ಲಿ ಮಾತ್ರ ಸಿಗುವದು. ಆದರೆ ಛಲತೊಟ್ಟು ಕಾರ್ಯವನ್ನು ದಕ್ಷತೆಯಿಂದ ಮಾಡುವ ಧೀರನಿಗೆ ಯಾವದೂ ಅಸಾಧ್ಯವಲ್ಲ ಛಲದಲ್ಲಿ ಅಚಲವಾದ ಶ್ರದ್ಧೆಯಿರುತ್ತದೆ. ಆ ಶ್ರದ್ಧೆಯಿಂದಲೇ ಶರಣರು ಇಹದಲ್ಲಿ ಪೂಜ್ಯರೆನಿಸಿಕೊಂಡರು ಮತ್ತು ಪರಶಿವನ ಕೃಪೆಗೂ ಪಾತ್ರರಾದರು.

ಹಿಡಿದ ವ್ರತಗಳನ್ನು ತಪ್ಪಿಸಿದರೆ ನಮ್ಮ ಜೀವನ ಕಳೆಯೇ ಮಂಕಾಗಿ ಹೋಗುವದು. ನಾವು ಕೈಕೊಂಡ ಕೆಲಸಗಳಿಗೂ ಕಳೆಯುಂಟಾಗಲಾರದು. ಲಿಂಗಪೂಜಾ ನಿಷ್ಠರು ಬಿಟ್ಟು ಬಿಟ್ಟು ಲಿಂಗ ಪೂಜೆಮಾಡಿದರೆ ಲಿಂಗದಕಳೆ ನಷ್ಟವಾಗುವದು. ಈ ವಿಷಯದಲ್ಲಿ ಉರಿಲಿಂಗಪೆದ್ದಿಗಳ ಮಡದಿಯು ಅಪ್ಪಣೆಕೊಡಿಸಿರುವದೇನಂದರೆ ''ವ್ರತ ತಪ್ಪಿದಾಗಳೇ ಇಷ್ಟಲಿಂಗದ ಕಳೆ ನಷ್ಟವವ್ವಾ. ಅವರು ಲಿಂಗವಿದ್ದ ಭವಿಗಳು. ಅವರು ಪ್ರಾಣವಿಲ್ಲದ ದೇಹದಂತೆ ನಿಸ್ತೇಜರು. ಉರಿಲಿಂಗ

ವೆದ್ದಿಗಳರಸ ಒಲ್ಲನಾಗಿ ಒಲ್ಲೆನವ್ವಾ" ಕಾಯಕಕ್ಕಿಂತಲೂ ವ್ರತವು ಹೆಚ್ಚಿನದು. ಕಾಯಕವು ತಪ್ಪಿದರೆ ಮನುಷ್ಯನಿಗೆ ಚ್ಯುತಿಯುಂಟಾಗುತ್ತದೆ. ಆದರಲ್ಲಿ ಅವನಿಗೆ ವ್ರತವು ತಪ್ಪಿದರಂತೂ ಅಧೋಗತಿಯೇ ಪ್ರಾಪ್ತವಾಗುತ್ತದೆ. ಆದ್ದರಿಂದ ಕಾಯಕ ವ್ರತಗಳನ್ನು ತಪ್ಪಿಸಬಾರದೆಂದೇ ಶರಣರು ಅಪ್ಪಣೆಕೊಡಿಸಿದ್ದಾರೆ. "ಕಾಯಕ ತಪ್ಪಿದೊಡೆ ಸೈರಿಸಬಾರದು ವ್ರತತಪ್ಪಿದರೆಂತು ಸೈರಿಸಬಹುದು ಕರ್ಮಹರ ಕಾಳೇಶ್ವರಾ" ವ್ರತ ತಪ್ಪಿಸುವವರಿಗೆ ನರಕ ಪ್ರಾಪ್ತಿಸುವದಷ್ಟೇಅಲ್ಲ ವ್ರತಹೀನರ ಸಂಗ ಮೂಕೂಡ ನರಕವೆಂದು ಅದೇ ಶರಣರು ಹೇಳಿದ್ದಾರೆ. ಕೈತಪ್ಪಿ ಕೆತ್ತಲು ಕಾಲಿಂಗೆ ಮೂಲ, ಮಾತು ತಪ್ಪಿ ನುಡಿಯಲು ಬಾಯಿಂಗೆ ಮೂಲ, ವ್ರತಹೀನರಸಂಗ ನರಕಕ್ಕೆ ಮೂಲ ಕರ್ಮಹರ ಕಾಳೇಶ್ವರಾ"

ಗಣಾಚಾರದಲ್ಲಿ ವ್ರತಗೇಡಿಗಳ ಶಾಸನ ಮಾಡಬೇಕೆಂದೇ ನೇಮವಿರುವದು. 'ಲಿಂಗಬಾಹ್ಯನ, ಆಚಾರ ಭ್ರಷ್ಟನ, ವ್ರತ ತಪ್ಪುಗನ, ಗುರುಲಿಂಗ ಜಂಗಮವ ಕೊಂದವನ, ಪಾದೋದಕ ಪ್ರಸಾದ ದೂಷಕನ, ವಿಭೂತಿ ರುದ್ರಾಕ್ಷಿ ನಿಂದಕನ ಕಂಡಡೆ ಶಕ್ತಿಯುಳ್ಳೊಡೆ ಸಂಹಾರ ಮಾಡುವದು. ಇಲ್ಲದಿರ್ದೊಡೆ ಗ್ರಾಮವ ಬಿಡುವುದು. ಅದಾಗದಿರ್ದೊಡೆ ಕಿವಿಮುಚ್ಚಿಕೊಂಡು ಶಿವಮಂತ್ರವನ್ನು ಜಪಿಸುವದು. ಹಾಗೆ ಮಾಡದಿರ್ದೊಡೆ ಕುಂಭೀಪಾತ ನರಕ ತಪ್ಪದು ಶ್ರೀಗುರು ಶಿದ್ಧೇಶ್ವರಾ''

ವ್ರತಗೇಡಿಗಳು ಬಂಧು ಬಾಂಧವರಿದ್ದರೂ ಅವರನ್ನು ತ್ಯಜಿಸಿ ಬಿಡಬೇಕೆಂದು ಶರಣರು ಹೇಳಿದ್ದಾರೆ. 'ಮಾತಾಪಿತರಾಗಲಿ, ಬಂಧು ಬಾಂಧವರಾಗಲಿ, ಸ್ನೇಹಿತ ಗುರು-ಬಂಧುಗಳಾಗಲಿ ವ್ರತನೇಮಗಳನ್ನು ಪಾಲಿಸಿ ಸಹಕಾರಿಗಳಾಗಿ ನಡೆದುಕೊಂಡರೆ ನಮ್ಮವರು. ವ್ರತಹೀನರಾಗಿ ಪ್ರತಿಕೂಲಿಸಿದರೆ ನಮ್ಮವರಲ್ಲ ಅಂತವರಸಂಗ ಮಹಾದ್ರೋಹವಯ್ಯಾ ಕಲಿದೇವಯ್ಯಾ"

ನಾವು ತಾಮಸ ಶೀಲ ವ್ರತನೇಮಗಳನ್ನು ಹಿಡಿಯಬಾರದು. ಅವುಗಳಿಗಾಗಿ ಛಲತೊಡಲೂ ಬಾರದು. ಈ ವಿಷಯದಲ್ಲಿ ಪ್ರಭುದೇವರು ಅಪ್ಪಣೆ ಕೊಡಿಸಿದುದೇನಂದರೆ '' ಹಾಲು ನೇಮವ ಹಿಡಿದವರು ಬೆಕ್ಕಾಗಿ ಹುಟ್ಟುವರು. ಕಡಲೆಯ ನೇಮವ ಹಿಡಿದವರು ಕುದುರೆಯಾಗಿ ಹುಟ್ಟುವರು. ಪುಷ್ಪದ ನೇಮವ ಹಿಡಿದವರು ತುಂಬಿಯಾಗಿ

ಹುಟ್ಟುವರು. ಅಗ್ಗವಣಿಯ ನೇಮವ ಹಿಡಿದವರು ಕಪ್ಪೆಯಾಗಿ ಹುಟ್ಟು ವರು. ಅವರು ಷಟ್‌ಸ್ಥಲಕ್ಕೆ ಹೊರಗು. ಭಕ್ತಿ ನಿಷ್ಠೆಯಿಲ್ಲದವರ ಕಂಡಡೆ ಮೆಚ್ಚ ಗುಹೇಶ್ವರಾ.

ಕೆಲವರು ನಿಜವಾದ ಶೀಲವಾವುದೆಂಬದನ್ನು ಬಿಟ್ಟು, ಮುಟ್ಟ ತಟ್ಟ ಎಂಬ ತೋರಿಕೆಯ ಶೀಲಗಳನ್ನೇ ನೇಮವಾಗಿಟ್ಟುಕೊಂಡು ಛಲದಿಂದ ನಡೆಯಿಸುವರು. ಅವರಬಗ್ಗೆ ಶ್ರೀ ಚೆನ್ನಬಸವಣ್ಣನವರು ಈ ರೀತಿ ಯಾಗಿ ಅಪ್ಪಣೆಕೊಡಿಸಿದ್ದಾರೆ "ಅಗ್ಗವಣಿ ಮಿಾಸಲಾಗಿರಬೇಕೆಂಬುದು ಶೀಲವೇ ? ಪುಷ್ಪ ಮಿಾಸಲಾಗಿರಬೇಕೆಂಬುದು ಶೀಲವೇ ? ಓಗರ ಮಿಾಸ ಲಾಗಿರಬೇಕೆಂಬುದು ಶೀಲವೇ ? ಇವು ಶೀಲವಲ್ಲ ಕಾಣಿರೋ ಪಂಚೇಂ ದ್ರಿಯ, ಷಡ್ವರ್ಗ, ಸಪ್ತಧಾತು, ಅಷ್ಟಮದಂಗಳ ಕೊಂದಾತ ಶೀಲ ವಂತ ಕೂಡಲ ಚೆನ್ನಸಂಗಮದೇವಾ."

ಶರಣರು ಕಿರುಕುಳ ದೈವಂಗಳಂ ನಂಬಿ ಕೆಡುವ ವ್ರತನೇಮಗಳನ್ನು ಧಿಕ್ಕರಿಸಿದ್ದಾರೆ. "ಅರಗು ತಿಂದು ಕರಗುವ ದೈವ. ಉರಿಯ ಕಂಡಡೆ ಮುರುಟುವ ದೈವ ಎಂದು ಸರಿಯೆಂಬೆನಯ್ಯ ? ಅವಸರ ಬಂದಾಗ ಮಾರುವ ದೈವವನೆಂತು ಸರಿಯೆಂಬೆನಯ್ಯ ? ಅಂಜಿಕೆಯ ಬಂದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯ ? ನಿರಂಜನ ಕೂಡಲ ಸಂ ಗಮದೇವನೊಬ್ಬನೇ ದೈವವೆಂದು ಛಲವಿಡಿದು ಪೂಜಿಸಿದೊಡೆ ಅಖಂಡ ಮುಕ್ತಿಯಪ್ಪುದು ನೋಡಾ"

ಕೆಲವರು ತೀರ್ಥಯಾತ್ರೆಗಳ ವ್ರತವನ್ನು ಕೈಕೊಂಡು ಅದನ್ನು ಛಲದಿಂದ ಸಾಗಿಸುವರು. ಅಂಥವರ ಬಗ್ಗೆ ಸಿದ್ಧರಾಮಯ್ಯ ದೇವರು ಈ ರೀತಿಯಾಗಿ ಬುದ್ಧಿವಾದ ಹೇಳಿದ್ದಾರೆ "ಒಬ್ಬರ ಮನವ ನೋಯಿಸಿ ಒಬ್ಬರ ಮನೆಯ ಘಾತವಮಾಡಿ ಗಂಗೆಯ ಮುಳಿಗಿದೊಡೆ ಆಗುವ ದೇನಯ್ಯ. ಚಂದ್ರನು ಗಂಗೆಯ ತಡಿಯ ಮೇಲಿದ್ದರೂ ಕಲಂಕ ಬಿಡದಾಯಿತ್ತಯ್ಯ ಅದು ಕಾರಣ ಒಬ್ಬರ ಮನವನೋಯಿಸದವನೇ, ಒಬ್ಬರ ಮನೆಯ ಘಾತವ ಮಾಡದವನೇ ಪರಮ ಪಾವನ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ" ಸರ್ಪಭೂಷಣ ಶಿವಯೋಗಿಗಳು 'ಯಾಕೆ ಯಾತ್ರೆಯ ಮಾಡುತಿರ್ಪರಲ್ಲೇನಿಹುದು ಸಾಕು ಬಿಡು ತಮ್ಮೊಳೇ ಗುಣ ಗಳಿರುತಿರಲು" ಎಂದು ಹಾಡಿಕೊಂಡಿದ್ದಾರೆ.

ಛಲದಿಂದ ವ್ರತ ನೇಮಗಳನ್ನು ನಡೆಯಿಸುವವನು ವೀರಶೈವನೆನಿಸುವನೆಂದು ಫಲಶ್ರುತಿಯುಂಟು. ರಣದಲ್ಲಿ ಶೌರ್ಯವನ್ನು ತೋರಿಸುವವನು ವೀರಶೈವನಲ್ಲ. ಶಿವಜೀವೈಕ್ಯ ಬೋಧಿನೀ ವಿದ್ಯೆಯಲ್ಲಿ ರಮಿಸುವವನೂ ವೀರಶೈವನಲ್ಲ. ಆದರೆ ಹಿಡಿದ ಸದ್ವ್ರತಂಗಳಂ ಪ್ರಾಣಾಂತ್ಯದ ವರೆಗೂ ಬಿಡದೆ ನಡೆಯಿಸುವೆನೆಂಬ ಛಲವುಳ್ಳಾತನೇ ವೀರಶೈವನು. ಹಾಗೆ ಮಾಡಿದರೇನೇ ವೀರಶೈವನೆಂಬ ಅಭಿದಾನವು ಸಾರ್ಥಕವು.

---

# ಬಸವೇಶ್ವರನ ಚರಿತ್ರೆ.

(ರಾ. ಬ. ಪಿ. ಜಿ. ಹಳಕಟ್ಟಿ ಬಿ. ಏ. ಎಲ್. ಎಲ್. ಬಿ. ವಿಜಾಪುರ.)

ಲೇಖಾಂಕ ೨೬.

---

## ಬಸವೇಶ್ವರನ ಕಾಲದಲ್ಲಿಯ ಜಂಗಮರು.

ನಾವು ಹಿಂದಿನ ಸಂಚಿಕೆಯಲ್ಲಿ ೧ ಲಕ್ಷ ತೊಂಬತ್ತಾರುಸಾವಿರ ಜಂಗಮರು ಕಲ್ಯಾಣ ಪಟ್ಟಣದಲ್ಲಿದ್ದರೋ ಹೇಗೆಂಬುದರ ವಿಷಯವಾಗಿ ವಿವೇಚಿಸಿದ್ದೇವೆ. ಇಷ್ಟು ಜನ ಜಂಗಮರು ಬಸವೇಶ್ವರನೊಡನೆ ಇದ್ದಿರಲಿಕ್ಕಿಲ್ಲೆಂದು ನಾವು ಆ ಲೇಖದಲ್ಲಿ ಪ್ರಸ್ತಾಪಿಸಿದ್ದೇವೆ. ಆದರೆ ಅವನ ಕಾಲದಲ್ಲಿ ಅಥವಾ ಅವನಕಿಂತಲೂ ಮೊದಲು ದೇಶದಲ್ಲಿ ಜಂಗಮರೇ ಇದ್ದಿಲ್ಲೆಂದು ಯಾರಾದರೂ ತಿಳಿದಿದ್ದರೆ ಇದು ವಚನ ಗ್ರಂಥಗಳ ಮೂಲಕ ಸಿದ್ಧವಾಗುವದಿಲ್ಲೆಂದು ನಮಗೆ ತೋರುತ್ತದೆ. ಕೆಲವರು ಬಸವೇಶ್ವರನ ಕಾಲಕ್ಕೆಯೇ ವೀರಶೈವ ಧರ್ಮದ ಉಗಮವಾಯಿತೆಂತಲೂ ಹೇಗೆ ಕ್ರೈಸ್ತನಿಂದ ಕ್ರಿಸ್ತೀಧರ್ಮವೂ, ಬೌದ್ಧನಿಂದ ಬುದ್ಧ ಧರ್ಮವೂ ಉದಯವಾದವೋ ಹಾಗೆಯೇ ವೀರಶೈವ ಧರ್ಮವು ಬಸವೇಶ್ವರನಿಂದಲೇ ಉದಯವಾಯಿತೆಂದು ಪ್ರತಿಪಾದಿಸುವದುಂಟು. ಆದರೆ ಬಸವೇಶ್ವರನ ಮತ್ತು ಅವನ ಸಮಕಾಲೀನರಾದ ಶಿವಶರಣರ ವಚನಗಳನ್ನು ನಾವು ಪರೀಕ್ಷಿಸಿದಲ್ಲಿ ಈ ತಿಳುವಳಿಕೆಯು ದೃಢಪಡುವದಿಲ್ಲೆಂದು ನಮಗೆ ತೋರುತ್ತದೆ. ಅವನಕಿಂತಲೂ ಮೊದಲು ವೀರ

ಶೈವ ಧರ್ಮವಿತ್ತೆಂತಲೂ ಜಂಗಮರಾದರೂ ಕೂಡ ಅಸ್ತಿತ್ವದಲ್ಲಿದ್ದರೆಂತಲೂ ನಾವು ಅನುಮಾನ ಮಾಡಬೇಕಾಗುತ್ತದೆ. ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮದ ಸ್ವರೂಪು ಬೇರೆಯಾಗಿರಬಹುದು. ಬಸವೇಶ್ವರನ ಕಾಲದಲ್ಲಿ ಅನೇಕ ಮಾರ್ಪಾಡುಗಳೂ ಅದರಲ್ಲಿ ಆಗಿರಬಹುದು. ಆದರೆ ಈ ಕಾರಣಗಳಿಂದ ಆಗ ಹೊಸತಾದ ಧರ್ಮವೇ ಉಗಮವಾಯಿತೆಂದು ಹೇಳಲಿಕ್ಕೆ ಬರಲಾರದು. ಪುರಾತನ ಕಾಲದಲ್ಲಾದ ವಚನಗಳಲ್ಲಿ ಜಂಗಮ ಶಬ್ದವು ಆಗಿಂದಾಗ್ಗೆ ಬರುವದುಂಟು. ಅವುಗಳನ್ನು ನಾವು ಪರೀಕ್ಷಿಸಿದಲ್ಲಿ ಆ ವಚನಗಳನ್ನು ರಚಿಸಿದವರಕಿಂತಲೂ ಮೊದಲು ಜಂಗಮರಿದ್ದರೆಂಬ ಭಾವವು ಹೊರಡುತ್ತದೆ.

ಆದರೆ ವಚನಕಾರರೆಲ್ಲರೂ ಗುರು ಲಿಂಗ ಜಂಗಮ ಮೊದಲಾದ ಅಷ್ಟಾವರಣಗಳಿಗೆ ತಾತ್ವಿಕ ಅರ್ಥವನ್ನು ಕೊಟ್ಟಿರುವದು ಕಂಡು ಬರುತ್ತದೆ. ಈ ಆವರಣಗಳ ಮೂಲಕ ಮನುಷ್ಯನು ತನ್ನಲ್ಲಿಯ ಶಕ್ತಿಗಳನ್ನು ಹೇಗೆ ಉಚ್ಚ ಸ್ಥಿತಿಗೆ ಒಯ್ಯಬೇಕೆಂಬುದನ್ನು ಅವರು ಬಹಳ ಆಳವಾಗಿ ವಿವೇಚಿಸಿರುತ್ತಾರೆ. ಅವರು ಜಂಗಮನನ್ನು ತನಗೆ ಅಂದರೆ ತನ್ನ ಶರೀರಕ್ಕೆ ಅಥವಾ ಶಕ್ತಿಗಳಿಗೆ ಸಂಬಂಧಿಸಿ ಹೇಳುವದುಂಟು. ಹೀಗೆ ಅವರು ವಿವೇಚನೆ ಮಾಡುವಲ್ಲಿ ಅಷ್ಟಾವರಣಗಳು ಸ್ಥೂಲ, ಸೂಕ್ಷ್ಮ ಕಾರಣಗಳೆಂತಲೂ, ಅಂತರಂಗ ಬಹಿರಂಗವೆಂತಲೂ ಈ ಮೇರೆಗೆ ಅನೇಕ ವಿಧವಾಗಿ ಅವುಗಳ ಚರ್ಚೆ ಮಾಡುತ್ತಾರೆ. ಶಿವಾನುಭವ ಮಂಟಪದ ವಾಗ್ವಾದಗಳಲ್ಲಿ ಲಿಂಗ ಜಂಗಮಗಳ ಸಂಬಂಧ, ಗುರು ಜಂಗಮಗಳ ಸಂಬಂಧ, ಭಕ್ತ ಜಂಗಮಗಳ ಸಂಬಂಧ, ಈ ವಿಷಯಗಳನ್ನು ಬಹು ದೀರ್ಘವಾಗಿ ಆಲೋಚಿಸಿದ್ದು ನಮಗೆ ತೋರುತ್ತದೆ. ಆದರೆ ಈ ತಾತ್ವಿಕ ವಿವೇಚನೆಗಳು ನಮ್ಮ ಪ್ರಸ್ತುತ ವಿಷಯಕ್ಕೆ ಸಂಬಂಧ ಪಡುವದಿಲ್ಲ. ಆದರೆ ಬಸವೇಶ್ವರನಕಿಂತ ಮೊದಲು ಜಂಗಮ ವರ್ಗವು ಇದ್ದಿತೋ ಹೇಗೆ, ಅವರನ್ನು ಅವನು ಯಾವ ರೀತಿಯಾಗಿ ಕಾಣುತ್ತಿದ್ದನು, ಈ ವಿಷಯವಾಗಿ ಐತಿಹಾಸಿಕ ದೃಷ್ಟಿಯಿಂದ ನಾವು ವಿವೇಚನೆ ಮಾಡುವದಿದ್ದು ಬಸವೇಶ್ವರನ ವಚನಗಳನ್ನು ನಾವು ಪರಿಶೀಲಿಸಿದಲ್ಲಿ ಅವನ ಕಾಲಕ್ಕೆ ಅಥವಾ ಅವನ ಮೂಲಕ ಅವರು ಉಂಟಾಗಿರದೆ, ಅವನಕಿಂತಲೂ ಮೊದಲು ಅವರು ಅಸ್ತಿತ್ವದಲ್ಲಿದ್ದರೆಂತಲೂ, ಅವರನ್ನು ಅವನು ಬಹು ಆದರ ಪೂರ್ವಕವಾಗಿ ಕಾಣುತ್ತಿದ್ದನೆಂತಲೂ, ನಾವು ಒಪ್ಪಬೇಕಾ

ಗುತ್ತದೆ. ಆದರೆ ಅವರ ಸಂಖ್ಯೆಯು ಮಾತ್ರ ಪುರಾಣಗಳಲ್ಲಿ ಹೇಳಿದಂತೆ ಅನೇಕ ಲಕ್ಷವಾಗಿರದೆ, ದೇಶದಲ್ಲಿ ಅವರು ಬಹುಜನರು ಇದ್ದರು ಎಂದು ಮಾತ್ರ ನಾವು ಹೇಳಬೇಕಾಗುತ್ತದೆ.

ಜಂಗಮರ ಆಗಿನ ಸಾಮಾಜಿಕ ಸ್ಥಿತಿಯನ್ನು ವಿವರಿಸುವ ಬಸವೇಶ್ವರನ ಕೆಲವು ವಚನಗಳು ಇದ್ದು ಅವುಗಳನ್ನು ನಾವು ಇಲ್ಲಿ ಉದಹರಿಸುತ್ತೇವೆ.

(೧) "ಅಡ್ಡ ದೊಡ್ಡ ನಾನಲ್ಲಯ್ಯ. ದೊಡ್ಡ ಬಸಿರು ಎನಗಿಲ್ಲವಯ್ಯ. ದೊಡ್ಡವರನಲ್ಲದೆ ನಿಮ್ಮ ಶರಣರು ಮನ್ನಿಸರಯ್ಯ. ಹಡೆದುಂಬ ಸೂಳೆಯಂತೆ ಧನವುಳ್ಳವರನರಸಿಯರಿಸಿ ಬೋಧಿಸಲು ಪ್ರಾರ್ಥಿಸಲು ಮುನ್ನ ನಾನರಿಯೆನಯ್ಯ. ದೊಡ್ಡತನವೆನ್ನಲ್ಲಿಲ್ಲವಯ್ಯ. ಅಂಜುವೆ, ಅಂಜುವೆ ನಿಮ್ಮ ಪ್ರಮಥರಿಗೆ. ಅನಾಥ ನಾನಯ್ಯ ಕೂಡಲ ಸಂಗಮ ದೇವಾ."

(೨) "ದೂರದಿಂದ ಬಂದ ಜಂಗಮನಯ್ಯಗಳೆಂದು, ಸಾರಿದ್ದ ಜಂಗಮವ ಪರಿಚಾರಕರೆಂಬ ಕೇಡಿಂಗೆ ಬೆರಗಾದೆನಯ್ಯ. ಸಾರಿದ್ದವರು ದೂರಿದ್ದವರೆಂದರೆಂದು ಬೇರು ಮಾಡಿ ಕಂಡರೆ ಕೂಡಲಸಂಗಮದೇವ ಸಿಂಗಾರದ ಮೂಗ ಕೊಯ್ಯದೆ ಮಾಣ್ಬನೇ?"

(೩) "ಉಟ್ಟು ತೊಟ್ಟು ಪೂಜ್ಯನಾಗಿ ಬಂದ ಜಂಗಮ ವಿಶೇಷವೆಂದು ಕಂಡು, ಕಂತೆ ಬೊಂತೆಯ ಜಂಗಮ ಬಂದರೆ ಹೀನವೆಂದು ಕಂಡೆನಾದರೆ ಪಂಚಮಹಾಪಾತಕ " ಇತ್ಯಾದಿ.

(೪) " ಬೇರೂರಲ್ಲಿದ್ದು ಬಂದ ಜಂಗಮವೇ ಲಿಂಗವೆಂದು ಕಂಡು ಮನೆಯಲ್ಲಿದ್ದ ಜಂಗಮವನುದಾಸೀನವ ಮಾಡಿದರೆ ನಾನು ಬೆಂದೆನಯ್ಯ " ಇತ್ಯಾದಿ.

(೫) " ಉತ್ತಮ, ಮಧ್ಯಮ, ಕನಿಷ್ಠವೆಂದು ಬಂದ ಜಂಗಮವ ನೆಂದೆನಾದರೆ ನೊಂದೆನಯ್ಯ, ಬೆಂದೆನಯ್ಯ " ಇತ್ಯಾದಿ.

(೬) " ಲಿಂಗ ಜಂಗಮ ಒಂದೇ ಎಂದು ನಂಬಿದ ಬಳಿಕ ಅವರಂಗನೆಯರು ಲಿಂಗದ ರಾಣಿವಾಸ. " ಇತ್ಯಾದಿ.

(೭) " ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ ? " ಇತ್ಯಾದಿ.

(೮) ಆಚಾರವನರಿಯಿರಿ. ವಿಚಾರವನರಿಯಿರಿ. ಜಂಗಮ ಸ್ಥಲ ಲಿಂಗ ಕಾಣಿರಯ್ಯ. ಜಾತಿ ಭೇದವಿಲ್ಲ. ಸೂತಕವಿಲ್ಲ. ಅಜಾತಂಗೆ ಕುಲವಿಲ್ಲ. ಇತ್ಯಾದಿ.

ಈ ಉಕ್ತಿಗಳ ಮೇಲಿಂದ ಜಂಗಮರ ಪೂರ್ವಸ್ಥಿತಿಯು ಸಾಮಾನ್ಯವಾಗಿ ಈಗಿನಂತೆಯೇ ಇತ್ತೆಂದು ನಾವು ಅನುಮಾನ ಮಾಡಬೇಕಾಗುತ್ತದೆ ಅವರಲ್ಲನೇಕರು ಸರಿಯಾಗಿ ನಡೆಯುತ್ತಿದ್ದಿಲ್ಲಾದ್ದರಿಂದ ಅವರನ್ನು ಬಸವೇಶ್ವರನು ಮೃದು ಶಬ್ದಗಳಿಂದ ಹೀಯಾಳಿಸಿದ್ದು ಮೇಲೆ ಉದಹರಿಸಿದ ಕೆಲವು ವಚನಗಳಲ್ಲಿ ತೋರಿಬರುತ್ತದೆ. ಆದರೆ ಕೆಲ ವಚನಕಾರರು ಅತ್ಯಂತ ಕಟುವಾದ ಶಬ್ದಗಳಿಂದ ಇಂಥವರನ್ನು ಟೀಕಿಸಿದ್ದುಂಟು. ಅವರಲ್ಲಿ ಕೆಲವರು ಲಗ್ನವಾದವರಿದ್ದರೆಂಬುದು ಮೇಲಿನ ೬ನೇ ವಚನದಿಂದ ಗೊತ್ತಾಗುತ್ತಿದೆ. ಆದರೆ ಬಸವೇಶ್ವರನ ಕಾಲದಲ್ಲಿ ಶಿವಾನುಭವ ಮಂಟಪದಲ್ಲಿ ಜಂಗಮಕ್ಕೆ ಗುರುಲಿಂಗಗಳ ಸಂಬಂಧವಾಗಿ ವಿಶೇಷ ಚರ್ಚೆಗಳು ನಡೆದು ಅವೆಲ್ಲವುಗಳ ಮೂಲಕ ಆತ್ಮೋದ್ಧಾರವನ್ನು ಹೇಗೆ ಮಾಡಿಕೊಳ್ಳಬೇಕೆಂಬುದು ನಿರ್ಧರಿಸಲ್ಪಟ್ಟಿದೆ. ಈ ವಿಷಯದ ವಿಚಾರಗಳು ಬಹು ಸೂಕ್ಷ್ಮವೂ ಆಳವಾದವುಗಳೂ ಇರುತ್ತವೆ. ಅವುಗಳಮೇಲಿಂದ ಅಷ್ಟಾವರಣಗಳ ರೀತಿಯು ಎಷ್ಟು ಶ್ರೇಷ್ಠವಾದದ್ದೆಂಬದು ವಾಚಕರಿಗೆ ಅರಿಕೆಯಾಗದೆ ಇರದು. ಬಸವಾದಿ ಶಿವಶರಣರು ಅಷ್ಟಾವರಣಗಳ ವಿಚಾರಗಳ ಮೂಲಕ ಜಂಗಮತ್ವಕ್ಕೆ ಒಂದು ವ್ಯವಸ್ಥೆಯುಂಟುಮಾಡಿದ್ದಾರೆ ಭಕ್ತ ಜಂಗಮರ ಸಾಮರಸ್ಯ ಭಾವದಿಂದಲೇ ಉಭಯತರ ಐಕ್ಯವೆಂಬುದನ್ನು ಅವರು ಅರುಹಿದ್ದಾರೆ. ಬ್ರಾಹ್ಮಣರು ಚಾತುರ್ವರ್ಣಗಳನ್ನು ಕಲ್ಪಿಸಿ ಅವರಲ್ಲಿ ಪರಸ್ಪರ ಧಾರ್ಮಿಕ ಸಂಬಂಧವನ್ನಿಡದ್ದರಿಂದ ಸಮಾಜದಲ್ಲಿ ಒಡಕುಂಟಾಗಲು ಕಾರಣವಾಯಿತು. ಆದರೆ ಬಸವಾದಿ ಪ್ರಮಥರು ಷಟ್‌ಸ್ಥಲ, ಪಂಚಾಚಾರ, ಅಷ್ಟಾವರಣಗಳಿಗೆ ಜಂಗಮವನ್ನು ಸಂಬಂಧಿಸಿ ಸಮಾಜದಲ್ಲಿ ಒಂದು ಬಲವಾದ ಐಕ್ಯವನ್ನುಂಟು ಮಾಡಿದ್ದಾರೆ.

ವಚನಶಾಸ್ತ್ರದಲ್ಲಿ ಜಂಗಮ ಶಬ್ದವಲ್ಲದೆ ಶರಣರು, ಪುರಾತರು ಅಥವಾ ಪುರಾತನರು, ಒಡೆಯರು, ಆದ್ಯರು, ಗಣಂಗಳು, ಪ್ರಮಥರು, ಮಾಹೇಶ್ವರರು ಎಂಬ ಶಬ್ದಗಳು ಕೂಡ ಬರುತ್ತವೆ. ಅವುಗಳ ಸಂಕ್ಷಿಪ್ತ ವಿವರಣೆಗಳನ್ನು ನಾವು ಇಲ್ಲಿ ಕೊಡುತ್ತೇವೆ.

(೧) **ಶರಣರು:** ಈ ಶಬ್ದವು ವಚನಶಾಸ್ತ್ರವು ದೇಶದಲ್ಲಿ ಹೆಚ್ಚಾಗಿ ಪ್ರಸಾರವಾದ ಕಾಲದಲ್ಲಿ ರೂಢವಾದಂತೆ ತೋರುತ್ತದೆ. ಈ ಶಬ್ದವು 'ಜಂಗಮ' ಈ ಶಬ್ದಕ್ಕಿಂತಲೂ ಬಹು ಹೆಚ್ಚಾಗಿ ವಚನ ಗ್ರಂಥಗಳಲ್ಲಿ ಉಪಯೋಗಿಸಲ್ಪಡುತ್ತದೆ.

(೨) **ಪುರಾತರು ಅಥವಾ ಪುರಾತನರು:—** ವಚನಗ್ರಂಥ ಗಳಲ್ಲಿ ಈ ಶಬ್ದವು ವಿಪುಲವಾಗಿ ಬರುವದಿಲ್ಲ. ಜಂಗಮ ಈ ಶಬ್ದಕ್ಕೆ ಪ್ರತಿಯಾಗಿ ಈ ಶಬ್ದವು ಉಪಯೋಗಿಸಲ್ಪಟ್ಟಿರುತ್ತದೆ. ತಮಿಳು ದೇಶ ದಲ್ಲಿಯ ಪುರಾತನರ ಹೆಸರೇ ಜಂಗಮರಿಗೆ ಕೊಟ್ಟಿದ್ದಾಗಿದೆ. ವೀರ ಶೈವರು ಈ ಪುರಾತನರನ್ನು ಯಾವಾಗಲೂ ಬಹಳ ಮನ್ನಿಸುತ್ತ ಬಂದಿದ್ದಾರೆ.

(೩) **ಒಡೆಯರು:—** ಇದು ಜಂಗಮರಿಗೋಸ್ಕರ ಬಹುಮಾನ ವಾಚಕ ಶಬ್ದವಿದೆ. ಮಹಂತರು ಎಂಬ ಸಂಸ್ಕೃತ ಶಬ್ದವು ಒಡೆಯರು ಈ ಕನ್ನಡ ಶಬ್ದದ ಭಾಷಾಂತರವಾಗಿರುತ್ತದೆ. ಆದರೆ ಈ ಶಬ್ದವು ವಚನ ಶಾಸ್ತ್ರದಲ್ಲಿ ಬಹಳ ಬರುವದಿಲ್ಲ.

(೪) **ಆದ್ಯರು:—** ಆದ್ಯರು ಎಂದರೆ ಮೊದಲಿನವರು. 'ಪುರಾ ತನರು' ಈ ಶಬ್ದಕ್ಕೆ ಸಮಾನಾರ್ಥವುಳ್ಳ ಸಂಸ್ಕೃತ ಶಬ್ದವು ಇದಾಗಿ ರುತ್ತದೆ. ಇದು ಬಸವೇಶ್ವರನ ವಚನಗಳಲ್ಲಿ ಅನೇಕ ಕಡೆಗೆ ಬಂದಿ ರುತ್ತದೆ.

(೫) **ಗಣಂಗಳು:—** ಕಾಳಾಮುಖರ ಶಿಲಾಶಾಸನಗಳಲ್ಲಿ ಈ ಶಬ್ದವು ಉಪಲಬ್ಧವಿದೆ. ಈಶ್ವರನ ಸಾನ್ನಿಧ್ಯದಲ್ಲಿ ಇರುವಂಥವರಿಗೆ 'ಗಣ' ಎಂಬ ಹೆಸರು ಇದೆ. ಜಂಗಮರನ್ನು ಆದರಪೂರ್ವಕವಾಗಿ ಕರೆಯುವಾಗ್ಗೆ ಇದನ್ನು ವಚನಕಾರರು ಉಪಯೋಗಿಸುವದುಂಟು.

(೬) **ಪ್ರಮಥರು:—** 'ಗಣಂಗಳು' ಈ ಶಬ್ದಕ್ಕೆ ಪ್ರತಿಯಾಗಿ ಈ ಶಬ್ದವು ಉಪಯೋಗಿಸಲ್ಪಡುತ್ತದೆ.

(೭) **ಮಾಹೇಶ್ವರರು:—** ಷಟ್‌ಸ್ಥಲದಲ್ಲಿ ಇದು ಎರಡನೆಯ ಸ್ಥಲ ವಾಗಿದೆ. ಭಕ್ತನ ಮೇಲಿನ ತರಗತಿಯವರು ಮಾಹೇಶ್ವರರು. ಆದರೆ

ಇದು ಜಂಗಮ ಅಥವಾ ಶರಣ ಸ್ಥಲವಲ್ಲ. ರೂಢಿಯಲ್ಲಿ ಜಂಗಮರಿಗೆ ಮಹೇಶ್ವರರೆಂದು ಕರೆಯುವ ಸಂಪ್ರದಾಯವು ಉಂಟಾಗಿರುತ್ತದೆ. ಗಣಾಚಾರವುಳ್ಳವರು ಅಂದರೆ ಅತ್ಯಂತ ದೃಢವಾದ ಭಕ್ತಿಯುಳ್ಳವರಾಗಿ ತಾವು ಹಿಡಿದ ಪಂಥವನ್ನು ಎಂದೂ ಬಿಡದೆ ಪಾಲಿಸುವಂಥವರು ಮಹೇಶ್ವರರೆಂದು ವಚನಗಳಲ್ಲಿ ಈ ಶಬ್ದಕ್ಕೆ ಅರ್ಥವಿದೆ.

ಈ ಪ್ರಕಾರ ಏಳು ತರದ ಶಬ್ದಗಳು ವಚನಗ್ರಂಥಗಳಲ್ಲಿ ಆಗಿಂದಾಗ್ಗೆ ಬರುವದುಂಟು.

ವಚನಕಾರರು ಭಕ್ತ, ಲಿಂಗ, ಗುರು, ಜಂಗಮ ಇವರ ಸ್ಥಾನಮಾನಗಳನ್ನು ಕುರಿತು ಬಹು ವಿಸ್ತೃತವಾಗಿ ತಮ್ಮ ವಚನಗಳಲ್ಲಿ ವಿವೇಚಿಸಿದ್ದಾರೆ. ಈ ವಿಷಯದಲ್ಲಿ ಅವರಲ್ಲಿ ಯಾವ ತರದ ಮತಭೇದವು ಕಂಡುಬರುವದಿಲ್ಲ. ಈ ನಾಲ್ವರಲ್ಲಿ ಅವರು ಒಂದು ವಿಶೇಷತರದ ಸಂಬಂಧವನ್ನುಂಟುಮಾಡಿ ಅವರನ್ನು ಪರಸ್ಪರಾವಲಂಬಿಗಳನ್ನಾಗಿ ಮಾಡಿದ್ದಾರೆ. ಅವರು ಜಂಗಮಕ್ಕೆ ಉಚ್ಚಸ್ಥಾನವನ್ನಿತ್ತರೂ ಗುರು, ಲಿಂಗ, ಭಕ್ತ, ಇವರೊಡನೆ ಸಾಮರಸ್ಯ ಸಂಬಂಧವನ್ನು ಕಲ್ಪಿಸಿದ್ದಾರೆ. ಹಾಗೆಯೇ ಅವರು ಲಿಂಗಕ್ಕೆ ಕೆಲವೊಂದು ವಿಶಿಷ್ಟಾರ್ಥವನ್ನು ಕಲ್ಪಿಸಿ ಹಿಂದುಗಳಲ್ಲಿರುವ ಮೂರ್ತಿಪೂಜೆಯ ಅತಿರೇಕವನ್ನು ಹೊಡೆದುಹಾಕಿದ್ದಾರೆ. ಲಿಂಗವೆಂದರೆ ಮನಸ್ಸನ್ನು ಏಕಾಗ್ರತೆಗೊಳಿಸುವ ಒಂದು ಸಾಧನ ಮಾತ್ರವೆಂದು ಕಲ್ಪಿಸಿ ಅದರ ಮೂಲಕ ಪ್ರಾಣಲಿಂಗ, ಭಾವಲಿಂಗಗಳನ್ನು ಹೇಗೆ ಅರಿಯಬೇಕೆಂಬುದನ್ನು ವಿವೇಚಿಸಿದ್ದಾರೆ. ಆದ್ದರಿಂದ ಅವರು ಲಿಂಗ ಹೋದರೆ ಆತ್ಮಘಾತ ಮಾಡಿಕೊಳ್ಳಬೇಕೆಂದು ಯಾವ ಅಗಮ ವಾಕ್ಯಗಳಿರುತ್ತವೆಯೋ ಅವುಗಳನ್ನು ಸಹ ಅವರು ಖಂಡಿಸಿರುತ್ತಾರೆ. ಜಂಗಮಸ್ಥಲ ಅಥವಾ ಶರಣಸ್ಥಲದವರು ಭಕ್ತಸ್ಥಲದ ಅನುಭವವನ್ನು ಪಡೆಯಬೇಕೆಂದು ಬೋಧಿಸಿ ಬ್ರಾಹ್ಮಣರಂತೆ ಜಂಗಮರನ್ನು ಒಂದು ಸ್ವತಂತ್ರ ವರ್ಗವನ್ನಾಗಿ ಮಾಡಿಲ್ಲ. ಗುರುವೆಂದರೆ ಆಚಾರ ಬೋಧೆಯನ್ನು ಮಾಡುವವನಾದರೂ ಆಚಾರಕ್ಕೆ ತಿಳುವಳಿಕೆಯು ಅವಶ್ಯವಿರುವದರಿಂದ ಗುರುಸ್ಥಲಕ್ಕೆ ಜಂಗಮಸ್ಥಲವನ್ನು ಸಂಬಂಧಿಸಿರುತ್ತಾರೆ. ಈ ಎಲ್ಲ ಆವರಣಗಳ ಪರಸ್ಪರ ಸಂಬಂಧವನ್ನು ಪಾದೋದಕ, ಪ್ರಸಾದ, ಮಂತ್ರ, ಇವುಗಳ ಮೂಲಕ ಹೇಗೆ ಜರಗಿಸಬೇಕೆಂಬುದರ ಕ್ರಮವನ್ನು ಅವರು ಅಷ್ಟಾವರಣಗಳಲ್ಲಿ ಬಹು ವಿಸ್ತೃತವಾಗಿ ವಿವೇಚಿಸಿರುತ್ತಾರೆ.

ಈ ಎಲ್ಲ ವಿಚಾರಗಳು ಹಿಂದೂಧರ್ಮ ಶಾಸ್ತ್ರದಲ್ಲಿಯೇ ಅತ್ಯಂತ ಕ್ರಾಂತಿಕಾರಕವಾದವುಗಳು. ಬಸವಾದಿ ಶಿವಶರಣರು ಶಿವಾನುಭವ ಮಂಟಪದಲ್ಲಿ ಈ ತತ್ವಗಳನ್ನು ನಿರ್ಧಾರ ಮಾಡಿ ಅದರಂತೆಯೇ ಆಚರಿಸಿರುವರು.

ವಚನಕಾರರು ಕ್ರಿಯೆಗೆ ಮಹತ್ವಕೊಟ್ಟವರಾಗಿ ಕಾಯಕ ಅಂದರೆ ಉದ್ಯೋಗಕ್ಕೆ ಶ್ರೇಷ್ಠಸ್ಥಾನವನ್ನು ತಂದುಕೊಟ್ಟಿದ್ದಾರೆ. ಆದ್ದರಿಂದ ಅವರು ಭಿಕ್ಷೆಬೇಡುವದನ್ನು ನಿರಾಕರಿಸಿದ್ದಾರೆ. ಬಸವೇಶ್ವರನ ಕಾಲದಲ್ಲಿ ಬೌದ್ಧರಲ್ಲಿ ಭಿಕ್ಷುಕರು ಮತ್ತು ಜೈನರಲ್ಲಿ ಶ್ರಾವಕ ಇದ್ದು ಅವರು ಭಿಕ್ಷೆಯಿಂದಲೇ ಜೀವಿಸುವವರಾಗಿದ್ದರು. ಭಿಕ್ಷೆಯೇ ಅತ್ಯುತ್ತಮ ಜೀವನದ ಮಾರ್ಗವೆಂಬ ತತ್ವವನ್ನು ಅವರು ಪ್ರಸಂಗೊಳಿಸಿದರು. ಮೊದಲಿನ ಕಾಲದ ಜಂಗಮರೂ ಕೂಡ ಅವರ ಅನುಕರಣವನ್ನು ಮಾಡಿದ ಹಾಗೆ ನಮಗೆ ತೋರುತ್ತದೆ. ಅವರು ಕೇವಲ ಭಿಕ್ಷುಕರಾಗಿದ್ದರು. ಆದರೆ ಬಸವಾದಿ ಶಿವಶರಣರು ಎಲ್ಲರಿಗೂ ಕಾಯಕ ಅಂದರೆ ಕಾರ್ಯದ ಮಹತ್ವವನ್ನು ಹೇಳಿ ಜಂಗಮರನ್ನೊಡಗೊಂಡು ಎಲ್ಲರಿಗೂ ಉದ್ಯೋಗಕ್ಕೆ ಹಚ್ಚಿದರು. ಅವರ ಕಾಲದಲ್ಲಾದ ಶರಣರೆಲ್ಲರೂ ಕೆಲವೊಂದು ಉದ್ಯೋಗವನ್ನು ಮಾಡುವವರಾಗಿದ್ದರು. ಅವರಲ್ಲಾರೂ ಭಿಕ್ಷುಕರಿಲ್ಲ. ಜಂಗಮನು ಬೇಡಕೂಡದು, ಭಕ್ತನು ಬೇಡಿಸಿಕೊಳ್ಳಬಾರದು ಎಂಬ ಮಹತ್ವದ ತತ್ವವನ್ನು ಅವರು ಪ್ರಸಾರ ಮಾಡಿದರು. ಇದರಿಂದ ಜಂಗಮರು ಮಠಗಳನ್ನು ಗ್ರಾಮಗಳಲ್ಲಿಯೇ ಸ್ಥಾಪಿಸಿ, ಮುಖ್ಯವಾಗಿ ಒಕ್ಕಲತನವನ್ನು ಮಾಡುತ್ತ, ಸಮಾಜ ಸುಧಾರಣೆಯ ಕಾರ್ಯವನ್ನು ಕೈಕೊಳ್ಳುವವರಾದರು. ಇದೇ ಅವರಿಗೆ ಉಚ್ಚಜೀವನವಾಯಿತು. ಆದ್ದರಿಂದ ಬಸವೇಶ್ವರನು ೧ ಲಕ್ಷ ೯೬ ಸಾವಿರ ಜಂಗಮರನ್ನು ತನ್ನ ಹತ್ತಿರ ಇಟ್ಟುಕೊಂಡು ಅವರಿಗೆ ಪುಕ್ಕಟೆಯಾಗಿ ಸುಗ್ರಾಸ ಭೋಜನವನ್ನು ಮಾಡಿಸುತ್ತ ಇದ್ದನೆಂಬ ಸಂಗತಿಯು ಶಿವಶರಣರ ಮಾರ್ಗಕ್ಕೆ ಸಂಬಂಧಿಸಿದುದಲ್ಲ. ಅದು ವಿಶ್ವಾಸಾರ್ಹವಲ್ಲ, ಎಂದು ನಮಗೆ ತೋರುತ್ತದೆ. ಇಂಥ ಕಥೆಗಳನ್ನು ಪುರಾಣಿಕರು ಈಚೆಗೆ ಹುಟ್ಟಿಸಿರುತ್ತಾರೆಂದು ನಮಗೆ ತೋರುತ್ತದೆ.

# ಅಷ್ಟಾವರಣಗಳು.

( ಲೇಖಕಃ— ಶ್ರೀಯುತ ಬಸವಪ್ಪ ಚೆನ್ನಪ್ಪ ಪಟ್ಟೇದ. ಮು. ಒಂಟಮುರಿ. )

ವೀರಶೈವರಿಗೆ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲಗಳೇ ಮುಖ್ಯ ವಾದ ಧಾರ್ಮಿಕ ವಿಷಯಗಳಾಗಿರುತ್ತವೆ. ಇವುಗಳಲ್ಲಿ ಷಟ್‌ಸ್ಥಲಗ ಳನ್ನು ಕುರಿತು ಒಂದು ಲೇಖವನ್ನು ಶಿವಾನುಭವದ ೧೬ ನೆಯ ಸಂಪು ಟದ ೬ ನೆಯ ಸಂಚಿಕೆಯಲ್ಲಿ ಪ್ರಸಿದ್ಧಿಸಿರುವೆನು. ಅಷ್ಟಾವರಣಗಳಲ್ಲಿ ಅತ್ಯಂತ ಮಹತ್ವವಾದ ಗುರು-ಲಿಂಗ-ಜಂಗಮ ವಿಷಯವಾಗಿಯೂ ಅದೇ ಪತ್ರಿಕೆಯಲ್ಲಿ ಪ್ರಕಟಿಸಿದ್ದೇನೆ. ಆ ಲೇಖ ಮಾಲೆಯು ೧೬ ನೆಯ ಸಂಪು ಟದ ೮ ಮತ್ತು ೧೧ ನೆಯ ಸಂಚಿಕೆಗಳಲ್ಲಿಯೂ ೧೭ ನೆಯ ಸಂಪುಟದ ೧-೨-೩-೪-೫ ನೆಯ ಸಂಚಿಕೆಗಳಲ್ಲಿಯೂ ಅಚ್ಚಾಗಿದೆ. ಸದ್ಯದ ಲೇಖದಲ್ಲಿ ಇನ್ನುಳಿದ ಐದು ಆವರಣಗಳ ಸ್ವರೂಪವನ್ನು ಮುಂದಿರಿಸುವದಿದೆ. ಪಂಚಾ ಚಾರಗಳ ಬಗೆಗೂ ಮುಂದೆ ಯಥಾವಕಾಶ ವಿವರಿಸಬಹುದು. ಗುರು-ಲಿಂಗ-ಜಂಗಮಗಳಲ್ಲದೆ, ಪಾದೋದಕ-ಪ್ರಸಾದ-ವಿಭೂತಿ-ರುದ್ರಾಕ್ಷಿ- ಮಂತ್ರಗಳೆಂಬುವುಗಳು ಅಷ್ಟಾವರಣಗಳಲ್ಲಿ ಬರುವುವು. ಪ್ರತಿಯೊಂದು ಅಷ್ಟಾವರಣವು ಐದು ತರವಾಗಿರುವದು. ಅವನ್ನೆಲ್ಲ ಸಂಕ್ಷೇಪತಃ ಇದ ರೊಂದಿಗಿರುವ ಪಟ್ಟಿಯಲ್ಲಿ ವಿವರಿಸಿದೆ.

## ಪಾದೋದಕ.

ಪಾದ-ಉದಕವೆಂಬೆರಡರ ಯೋಗದಿಂದ ಪಾದೋದಕವಾಗಿದೆ. ಪದ ಶಬ್ದಕ್ಕೆ ಅನೇಕಾರ್ಥಗಳಾಗುವವು ಅವುಗಳಲ್ಲಿ ನಮಗೆ ಪ್ರಸ್ತುತ, ಪಾದ ಮತ್ತು ಸ್ಥಳ ಎಂಬೆರಡು ಮಾತ್ರ ಅವಶ್ಯವಾಗಿವೆ. ಅದಕ್ಕೆ ಪಾದವೆಂಬ ಅರ್ಥವನ್ನು ಸ್ವೀಕರಿಸಿದರೆ, ಪಾದೋದಕವೇ ಪದೋದಕ ವಾಗುವದು. ಹಾಗು ಅದಕ್ಕೆ ಸ್ಥಳವೆಂದು ತಕ್ಕೊಂಡರೆ, ಸ್ಥಳವೇ ವೀರ ಶೈವರ ವಚನಶಾಸ್ತ್ರದಲ್ಲಿ ಪರವಸ್ತುವಾಗಿರುವದರಿಂದ, ಪಾದೋದಕವೆಂ ದರೆ ಪರವಸ್ತುವಿನ ದೆಸೆಯಿಂದ ಉದಿಸಿದ ಪವಿತ್ರವಾದ ಉದಕ, ಇಲ್ಲವೆ ಅದರ ಕೃಪಾಜಲ ಅಥವಾ ಕರುಣಾಮೃತವೆಂದು ಅರ್ಥವಾಗುವದು. ಗುರು-ಲಿಂಗ-ಜಂಗಮಗಳು ಮೂರಾದರೂ, ಒಂದೇ ಪರವಸ್ತುವಿನ

ಭಿನ್ನ ಭಿನ್ನ ಉದ್ದೇಶದಿಂದುಂಟಾದ ಸ್ವರೂಪಗಳು. ಆದುದರಿಂದ ಆ ಮೂರರ ಪಾದೋದಕವೂ ಒಂದೇ. ಗದ್ದಿಗೆಯ ಮೇಲೆ ಕುಳಿತ ಸ್ವಾಮಿಗಳಾಗಲಿ, ಪೂಜೆ ಮಾಡುವ ಭಕ್ತನಾಗಲಿ, ಆ ಪಾದತೀರ್ಥವು ಇಂತಹದೊಂದು ವಿಶಿಷ್ಟ ಮಾನವ ವ್ಯಕ್ತಿಯ ಪಾದದಿಂದುದ್ಭವಿಸಿದುದೆಂದು ಗ್ರಹಿಸಿರುವದಿಲ್ಲ; ಅದು ಕೇವಲ " ಆ ಪರವಸ್ತುವಿನದೇ ಅಥವಾ ಆ ಪರವಸ್ತುವೇ " ಎಂದು ನಂಬಿರುವರು. ಆದುದರಿಂದ ಅದು ಅವರಿವರೆನ್ನದೆ ಸಕಲರಿಗೂ ಪೂಜ್ಯವೂ ಸಮರಸತೆಯ ದ್ಯೋತಕವೂ ಆಗಿರುವುದು. ಅದೇ ಕ್ರಿಯಾ ಪಾದೋದಕವು.

ಹೂಲಿಯ ಹಿರೇಮಠದ ಶ್ರೀನೀಲಕಂಠ ಚರಮೂರ್ತಿಗಳು ಪಾದೋದಕದ ವಿಷಯವಾಗಿ ರಚಿಸಿ ಪ್ರಸಿದ್ಧಿಸಿದ ಪದಗಳ ಮೇಲೆ, ಶ್ರೀ. ಮಾಮನೆಯವರು ಆಕ್ಷೇಪವೆತ್ತಿ ಶಿವಾನುಭವದಲ್ಲಿ ಕೊಟ್ಟ ಲೇಖದ ಮೂಲಕವಾಗಿ ಚರ್ಚೆನಡೆದು, ಬೇರೆ ಬೇರೆ ವಿದ್ವನ್ಮಣಿಗಳೂ ಶಿವಾನುಭವಿಗಳೂ ತಮ್ಮ ತಮ್ಮ ಸುವಿಚಾರ ಪರಿಪ್ಲುತವಾದ ವಿಸ್ತಾರ ಪೂರ್ವಕ ಅನೇಕ ಲೇಖಗಳನ್ನು ಬರೆದು, ಅದರ ನಿಜಸ್ವರೂಪವನ್ನೂ ಮಹತ್ವವನ್ನೂ ಜನತೆಯ ಮುಂದೆ ಮಂಡಿಸಿದ್ದಾರೆ. ಆ ಲೇಖಗಳು ಶಿ. ಭ. ದ ೧೫ ಹಾಗು ೧೬ ನೆಯ ಸಂಪುಟಗಳ ಬೇರೆ ಬೇರೆ ಸಂಚಿಕೆಗಳಲ್ಲಿ ಬಂದಿವೆ. ಆದಕಾರಣ ಈಗ ಮತ್ತೆ ಅದರ ಸಲುವಾಗಿ ನಾನೇನೂ ಹೆಚ್ಚಿಗೆ ಬರೆಯುತಕ್ಕ ಅವಶ್ಯಕತೆಯಿಲ್ಲವಾದರೂ, ಬೇರೆ ದೃಷ್ಟಿಯಿಂದ ತುಸು ವಿವೇಚಿಸುವುದು ಅಪ್ರಾಸಂಗಿಕವಾಗಲಾರದೆಂದು ಭಾವಿಸುವೆನು.

ಸಾಮಾನ್ಯ ಜನಸಮೂಹವು ಸಾಧಾರಣವಾಗಿ ಪಾದೋದಕವನ್ನು ಹೀಗೆ ಭಾವಿಸಿರುವುದು:— ಗುರು ಜಂಗಮರ (ಅಷ್ಟೇ ಏಕೆ, ಬೇಕಾದ ಅಯ್ಯಗಳ) ಪಾದ ಪೂಜೆ ಮಾಡಿ, ಅವುಗಳ ಮೇಲೆ ಎರೆದ ಜಲವೇ ಈ ಪಾದೋದಕವು ! ಅವರು ಎಂತಹರೇ ಇರಲೊಲ್ಲರೇಕೆ !! ಆ ಪಾದತೀರ್ಥವನ್ನು ಸೇವಿಸಿದರೆ, ತಾವು ಕೃತಾರ್ಥರೂ ಪುಣ್ಯವಂತರೂ ಧಾರ್ಮಿಕರೂ ಆಗುವೆವೆಂಬುದು ಅವರ ತಿಳಿವಳಿಕೆ. " ಭಾವನೆಯಂತಿಹುದಂತೆ ಫಲಂಗಳ್ " ಎಂಬಂತೆ ಅವರಿಗೆ ಭಾವಿಕತನದ ಫಲವೂ ಲಭಿಸುತ್ತಿರಬಹುದು. ಆದರೂ ಅದು ಕೇವಲ ಲೌಕಿಕವಾದುದೆಂದು ಬೇರೆ ಹೇಳಬೇಕಾಗಿಲ್ಲ. ಇಂತಹ ಐಹಿಕ ಫಲ ಪದವಿಗಳಿಗೆ ವೀರಶೈವರು ಭ್ರಮಿಸುವವರಲ್ಲ. ಅವರ ಪರಮ ಗುರಿಯು ಲಿಂಗಾಂಗ ಸಾಮರಸ್ಯವು.

ತಮ್ಮ ಈ ಉಚ್ಚ ಧ್ಯೇಯ ಸಾಧನೆಗಾಗಿಯೇ ಅವರು ಅಷ್ಟಾವರಣ ಗಳನ್ನು ಧರಿಸಿರುವುದು. ಪಾದೋದಕದ ತಾತ್ವಿಕಾರ್ಥವೂ ಆಚರಣೆಯೂ ಬಲ್ಲಿದರಾದ ಶಿವಾನುಭಾವಿಗಳಲ್ಲಿಯೂ ಮಹಾನುಭಾವಿಗಳಲ್ಲಿಯೂ ಮಾತ್ರ ತೋರಬಹುದು. ಅವರೇ ತಮ್ಮ ಗುರಿಯನ್ನು ನೇರವಾಗಿ ಹೊಂದಬಹುದು. ಆದರೆ ಸಾಮಾನ್ಯ ಜನಕ್ಕೆ ಅದು ನಿಲುಕುವುದು ಹೇಗೆ?! ಮೇಲೆ ಹೇಳಿದಂತೆ ಶಿವಾನುಭವ ಪತ್ರಿಕೆಯಲ್ಲಿ ತುಸು ದಿನ ಗಳ ಹಿಂದೆ ಬೇಕಾದಷ್ಟು ಚರ್ಚೆಯಾಗಿದ್ದರೂ ಅದರಿಂದ ಬಹುಜನ ಸಮಾಜವು ಅದಾವ ಪ್ರಯೋಜನ ಪಡೆಯಿತು? ಏನೂ ಇಲ್ಲವೆಂದೇ ಅನಿವಾರ್ಯವಾಗಿ ಹೇಳಬೇಕಾಗುವುದು. ಅವರ ಮನಸ್ಸಿಗೆ ಸರಾಗವಾಗಿ ಸೋಂಕುವಂತೆ ತೀರ ಸುಲಭರೀತಿಯಿಂದಲೂ ಸ್ವಲ್ಪದರಲ್ಲಿಯೂ ಹೇಳು ವದು ಅವಶ್ಯವಾಗಿದೆ.

ಭಕ್ತಿಯೇ ಮುಕ್ತಿಗೆ ಸಾಧನವಾದುದರಿಂದ, ಲಿಂಗಾಯತರು ತಾವು ಹೆಸರಿಗೆ ಮಾತ್ರ ಭಕ್ತರಾಗದೆ, ನಿಜವಾದ ಭಕ್ತರಾ ಗುವ ಹಂಬಲದಿಂದಲೇ ತಮ್ಮನ್ನು ಭಕ್ತರೆಂದು ಕರೆದುಕೊಂಡಿದ್ದಾರೆ. ಅವರ ಮುಕ್ತಿಯೆಂದರೆ ಲಿಂಗಾಂಗ ಸಾಮರಸ್ಯವು. ಅದನ್ನು ತಪ್ಪದೆ ಪಡೆಯುವ ಸಾಧನವೇ ಅವರ ತಿರುಳುಳ್ಳ ಹುರುಳುಳ್ಳ ಅಚ್ಚ ಭಕ್ತಿಯು. ಇಂತಹ ಭಕ್ತಿವಿಡಿದು ತನ್ನ ಗುರಿಯನ್ನು ಸಾಹಸ ಪೂರ್ವಕವಾಗಿ ಭಜಿಸುವವನೇ ಭಕ್ತನು. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಶ್ರುತಿ ಯಂತೆ, ಪ್ರತ್ಯೇಕ ವಸ್ತುವಿನಲ್ಲಿ ಅದು ಸಚೇತನವೇ ಇರಲಿ ಅಚೇತ ನವೇ ಇರಲಿ ಬ್ರಹ್ಮವು ವಾಸಿಸುತ್ತದೆ. ಸಚೇತನ ಶ್ರೇಷ್ಠನಾದ ಮನುಷ್ಯ ಮನುಷ್ಯಪ್ರಾಣಿಯಲ್ಲ. ಅದು ಹೆಚ್ಚು ಸ್ಫುಟವಾದ ರೀತಿಯಲ್ಲಿ ವಾಸಿ ಸುವುದು ಸತ್ಯವೂ ಸ್ವಾಭಾವಿಕವೂ ಉಂಟು. ಅಂತೇ ನರನು ಹರನಾ ಗುವನು. ಲಿಂಗರೂಪನಾಗುವನು. ಮೂಲತಃ ಅವನು ಪರಮಾತ್ಮ ನಿಲ್ಲದಿದ್ದರೆ, ಅವನಿಗೆ ಲಿಂಗವಾಗುವದು ಎಂದೂ ಸಾಧ್ಯವಿರುತ್ತಿದ್ದಿಲ್ಲ. ತಾತ್ವಿಕ ರೀತಿಯಿಂದ ಹೀಗೆ ಎಲ್ಲ ಮನುಷ್ಯರು ಬ್ರಹ್ಮ(ಲಿಂಗ) ರೂಪವೇ ಇದ್ದಾಗ್ಯೂ ಅವರ ಭಾವನೆ ಮಾತ್ರ ಹಾಗಿರುವದಿಲ್ಲ. ಬಹುಶಃ ಆಣ ವಾದಿ ಮಲಗಳ ಮೂಲಕವಾಗಿ, ನಾವು ನರರೆಂದೇ, ಕ್ಷುದ್ರ ಪ್ರಾಣಿ ಗಳೆಂದೇ ಅವರು ತಿಳಿದಿರುವರು. ತಾವು ಮರಣಕ್ಕೆ ಸಿಲುಕಿರುವೆ ವೆಂದೇ ನಿಶ್ಚಯಿಸಿಕೊಂಡಿರುವರು. ಇಂತಹರು ಬ್ರಹ್ಮರೂಪಿಯಾಗು

ವುದು ಹೇಗೆ? ಆ ಬ್ರಹ್ಮ ಸ್ವರೂಪವು ಒದಗಬೇಕಾದರೆ ತಾವು ಆರಾಧಿಸುವ ದೈವತವು, ತಮ್ಮ ಗುರಿಯನ್ನು ಸರಳವಾದ ಕಲ್ಯಾಣಕರ(ಶಿವ) ಮಾರ್ಗದಿಂದ ಮುಟ್ಟಿಸುವ ಶಿವನೇ ಆಗಿರುವದು, ಹೆಚ್ಚು ಪ್ರಶಸ್ತವಾಗಿದೆ. ವಿಷ್ಣುವೇನೂ ಅಷ್ಟು ಉಚಿತನಲ್ಲ. ಯಾಕಂದರೆ ಅವನು ಪ್ರಪಂಚದ ರಕ್ಷಣೆಯನ್ನು ವಹಿಸಿದ ದೇವತೆಯಾಗಿದ್ದಾನೆ. ಲಕ್ಷ್ಮಿಯು (ಜಗತ್ತೀ) ಅವನ ಸತಿಯು. ವಿಷ್ಣು ಶಬ್ದವೇ ವಿಶ್ (ಪ್ರವೇಶಿಸು) ಧಾತುವಿಗೆ 'ಷ್ಣು' ಎಂಬ ಕರ್ತ್ರರ್ಥಕ ಪ್ರತ್ಯಯ ಸೇರಿ ಆಗಿದೆ. [ಉದಾಃ ಸಹಿಷ್ಣು, ವರ್ಧಿಷ್ಣು ಮುಂತಾದವುಗಳಂತೆ] ಆದುದರಿಂದ ಪ್ರಪಂಚ ಭೋಗವನ್ನೇ ತನ್ನ ಮುಖ್ಯ ಗುರಿಯಾಗಿಟ್ಟುಕೊಂಡು ಅದರಲ್ಲಿ ಪ್ರವೇಸಿಸುವವನು ಅವನು. ಮೇಲಾಗಿ ಅದರ ರಕ್ಷಣೆಯ ಹೊಣೆಯ ಹೊಣೆಯನ್ನು ಹೊತ್ತವನು. ಅವನ ಭಕ್ತರಾದವರು ಕೂಡ ಅಂತಹರೇ! ಈ ಅಗಾಧವಾದ ಪ್ರಪಂಚ ಪಂಕದಲ್ಲಿ ಒಮ್ಮೆ ಒಳಿತಾಗಿ ಮುಳುಗಿದವನು ಕಿತ್ತೇಳುವುದು ಪರಮ ಕಷ್ಟವು. ಇವರು ಹೆಚ್ಚಾಗಿ ಭವಿಗಳಾಗುವುದೇ ಸ್ವಾಭಾವಿಕ. ಅಂತೇ ವೀರಶೈವರು, ಪ್ರಪಂಚದ ಬಗೆಗೆ ವಿರಕ್ತನೂ ಕಲ್ಯಾಣಕರನೂ (ಲಿಂಗಾಂಗ ಸಾಮಂಸ್ಯರೂಪ ಧ್ಯೇಯ ಸಾಧನೆಗೆ ಹೆಚ್ಚು ಸಾನುಕೂಲವೂ) ಆದ ಶಿವನನ್ನು ತಮ್ಮ ಇಷ್ಟದೇವತೆಯೆಂದು ಹಿಂಬಾಲಿಸಿದುದು ಹೆಚ್ಚು ಯೋಗ್ಯವಾದುದು. ಆದುದರಿಂದಲೇ ವೀರಶೈವರು ಆ ಶಿವನಂತೆ, ಪ್ರಪಂಚವನ್ನು ತಾತ್ಪಾರ್ತಿಕವಾಗಿ ಅಲಿಪ್ತರೀತಿಯಿಂದ ಸ್ವೀಕರಿಸಿರುವರು. ಹಾಗು ಅದು ತಮ್ಮ ಧ್ಯೇಯಕ್ಕೆ ಅಡ್ಡ ಬರಬಾರದೆಂದು ಅಲ್ಲದೆ ಸಹಕಾರಿಯಾಗಬೇಕೆಂದು ಬಹು ಎಚ್ಚರಗೊಂಡು ಅದರ ಏರ್ಪಾಡು ಮಾಡಿರುವರು. ಅವರು ಶಿವಭಕ್ತರಾದರೂ ತಾವು ಪೂಜಿಸುವ ಲಿಂಗದಲ್ಲಿ ಇನ್ನೊಂದು ನೆನಪಿಡತಕ್ಕ ಮಾರ್ಪಾಟು ಮಾಡಿರುವರು. ಶೈವರು ಪೂಜಿಸುವ ಸ್ಥಾವರ ಲಿಂಗವು ಭೇದ ಭಾವನೆಗೆ ಆಸ್ಪದವೀಯುವದು. ಪೂಜ್ಯ ಪೂಜಕರಲ್ಲಿ ಅಭೇದ ಬುದ್ಧಿಯು ಇರುವದಿಲ್ಲ. ಆದರೆ ವೀರಶೈವರ ಇಷ್ಟಲಿಂಗವು, ಗುರುವಿನಿಂದ ಅವರ ಶಿರೋಗತ ಶಿವಚಿತ್ಕಳೆಯು ಬಹಿಷ್ಕರಿಸಲ್ಪಟ್ಟು ಸಾಕಾರತೆದಳೆದು, ಕರಗತವಾಗಿರುತ್ತದೆ ಹೀಗೆ ಆರಾಧ್ಯ ಆರಾಧಕರಲ್ಲಿ ಐಕ್ಯಸ್ವರೂಪವಿರುತ್ತದೆ. ಇದು ಅವರ ಸಮರಸತೆಯ ಧ್ಯೇಯಪ್ರಾಪ್ತಿಗೆ ಮತ್ತಿಷ್ಟು ಅನುಕೂಲವನ್ನು ನೀಡುವುದು. ಈ ಇಷ್ಟ

ಲಿಂಗ ಪೂಜೆಯಲ್ಲಿ ಕರ್ಮದ ಅದಾವ ಹೆಚ್ಚಿನ ಜೋಂಜಾಟವೂ ಇಲ್ಲ, ವ್ರತ-ಉಪೋಷಣಾದಿಗಳೂ ಇಲ್ಲ. ಇದು ಪ್ರಖರ ಭಕ್ತಿಯುಕ್ತವಾದ ಜ್ಞಾನ ಕರ್ಮ (ಕಾಯಕ) ಸಮನ್ವಯವುಳ್ಳ ಧರ್ಮವಾಗಿದೆ. ಇಂತಹ ಉಚ್ಚತರ ಧರ್ಮಿಗಳು ತಾವೆಂಬುದನ್ನು ಸತತವಾಗಿ ನೆನೆಸುತ್ತಿರಬೇಕು. “ಉಂಡುಂಡು ಸ್ವರ್ಗಕ್ಕೈದಲಿಕ್ಕದನೇನು ರಂಡೆಯಾಳುವಳೆ?” ಎಂದು ಸರ್ವಜ್ಞ ಮೂರ್ತಿಗಳು ನುಡಿದುದನ್ನು ಸಹಸಾ ಮರೆಯಬಾರದು. “ಏಕೇನ ಜನ್ಮನಾ ಮುಕ್ತಿರ್ವೀರಾಣಾಂತು ಮಹೇಶ್ವರಿ” ಎಂದು ಶಿವನಿಂದ ಅಭಿವಚನ ಪಡೆದ ಧರ್ಮವಿದು! ಇದನ್ನು ಬಹು ಸಾವಧಾನವಾಗಿ ಆಚರಿಸಿ ಭಕ್ತರೆಂದು ನಾವು ತಳೆದ ಹೆಸರನ್ನು ಅನ್ವರ್ಥಗೊಳಿಸಬೇಕು. ಅದಕ್ಕೆ ಸುಕರತೆಯುಂಟಾಗಲೆಂದೇ ಇದರಲ್ಲಿ ಬಗೆ ಬಗೆಯ ಅನುಕೂಲಗಳಾದರೂ ಕಲ್ಪಿಸಲ್ಪಟ್ಟಿವೆ. ಅಷ್ಟಾವರಣಗಳೇ ಅವುಗಳಲ್ಲಿ ಪ್ರಮುಖವಾಗಿವೆ.

ಭಕ್ತಿ ಹುಟ್ಟಲಿಕ್ಕೆ ಶಿವಕೃಪೆಯೂ ಶಿವಕೃಪೆಯುಂಟಾಗಲಿಕ್ಕೆ ಭಕ್ತಿಯೂ ಬೀಜವೃಕ್ಷ ನ್ಯಾಯದಂತೆ, ಪರಸ್ಪರ ಆಧಾರಾಧೇಯಗಳಾಗಿರುತ್ತವೆ. ಶಿವನೋರ್ವನೆ ಗುರು ಲಿಂಗ ಜಂಗಮವೆಂಬ ಮೂರು ರೂಪದಿಂದ ಜಗತ್ತಿನಲ್ಲಿ ವ್ಯವಹರಿಸುತ್ತಿರುವದರಿಂದ, ಅವುಗಳಲ್ಲಿ ಭಕ್ತನು ಅತಿ ನಿಕಟವಾದ ಭಕ್ತಿಯನ್ನು ಅವಲಂಬಿಸಿ, ಅವುಗಳ ಕೃಪೆಯನ್ನು ಪಡೆಯುವದೇ ಅತ್ಯಂತ ಅವಶ್ಯವಿರುವದು. ಈ ಕೃಪೆಯೇ ಪಾದೋದಕವೆಂದೂ ಕರುಣಾಮೃತವೆಂದೂ ಹೇಳಲ್ಪಡುತ್ತದೆ. ಈ ಪಾದೋದಕ ಸೇವನೆಯು, ಗುರು ಲಿಂಗ ಜಂಗಮದ ಅನುಗ್ರಹ ಪಡೆಯುವ ಒಂದು ಉಚ್ಚತರದ ಆಕರ್ಷಕ ಸಾಧನವಾಗಿದೆ. ಆದಕಾರಣ ಪಾದೋದಕ ಪಡೆಯುವದೆಂದರೆ ತನ್ನ ಧ್ಯೇಯಸಾಧನೆಗೆ ತಕ್ಕ ಅನುಕೂಲತೆಯನ್ನು ಹೊಂದುವುದೆಂಬದು ಸ್ಪಷ್ಟವಾಗುವದು. ಇದೇ ಅರ್ಥವು (ಕರುಣೆ, ಅನುಗ್ರಹ) ವ್ಯವಹಾರಿಕ ರೀತಿಯಿಂದ ಪಾದೋದಕಕ್ಕೆ ಒಪ್ಪುವುದೆಂದು ಹೇಳಲಿಕ್ಕೆ ಅಡ್ಡಿ ಇಲ್ಲ.

## ಪ್ರಸಾದ.

ಪ್ರಸಾದವೆಂಬುದೇ ಇಷ್ಟವಾದ ಫಲವು, ಇಲ್ಲವೆ ಧ್ಯೇಯ ಸಿದ್ಧಿಯು. ಲಿಂಗಾಂಗಸಾಮರಸ್ಯವೇ ವೀರಶೈವನ ಪರತರ ಗುರಿಯಾಗಿರುವದರಿಂದ, ಅದೇ ಗುರು ಲಿಂಗ ಜಂಗಮದ ಕೃಪೆಯಿಂದ ಹೊಂದುವ ಪರಮೋ

ಚ್ಛವಾದ ಪ್ರಾಪ್ತವ್ಯವು. ಇಂತಹ ಪ್ರಸಾದವನ್ನು ದಯಪಾಲಿಸಬೇಕಾದರೆ, ಸ್ವತಃ ಆ ಗುರು ಜಂಗಮರು ಸದಾಚಾರಿಗಳೂ ಮಹಾಜ್ಞಾನಿಗಳೂ ಪ್ರಪಂಚದಿಂದ ಅಲಿಪ್ತರೂ ಜೀವನ್ಮುಕ್ತರೂ ಭಕ್ತೋದ್ಧಾರಶೀಲರೂ ಆಗಿರಬೇಕೆಂಬುದು ತಾನೇ ವ್ಯಕ್ತವಾಗುವುದು. ಈ ಮಾತು ಹಿಂದೆಯೇ ಶಿ. ಭ. ದಲ್ಲಿ ಪ್ರಕಟಿತವಾದ ಗುರು ಲಿಂಗ ಜಂಗಮದ ಲೇಖ ಮಾಲೆಯಲ್ಲಿ ವಿಶದವಾಗಿ ನಿರೂಪಿಸಲ್ಪಟ್ಟಿದೆ. ಭಕ್ತರಾದರೂ "ಮಹತಾ ಪುಣ್ಯ ಪಣ್ಯೇನ ಕ್ರೀತೇಯಂ ಕಾಯನೌಃ ಎಂಬುದನ್ನು ಸ್ಮರಿಸಿ, ದುಃಖರೂಪವಾದ ಅಗಾಧ ಭವ ಸಾಗರವನ್ನು ಜ್ಞಾನಯುಕ್ತವಾದ ನರದೇಹದ ನೆರವಿನಿಂದ ದಾಟುವ ಸಾಹಸವನ್ನು ಮಾಡಲೇ ಬೇಕು. ಇಲ್ಲದೆ ಹೋದರೆ ಪಶ್ವಾದಿಗಳಿಗಿಂತ ಅವರ ಜನ್ಮಕ್ಕೆ ಹೆಚ್ಚಿನ ಬೆಲೆ ಬರಲಾರದು. ಪ್ರಸಾದ ಪಡೆಯುವದೇ ಅವರ ಮುಖ್ಯ ಕರ್ತವ್ಯವು. ಅದನ್ನು ಕರುಣಿಸಲಿಕ್ಕೆ ಸಮರ್ಥರಾದ ಗುರು ಜಂಗಮರನ್ನೇ ಶೋಧಿಸಿ ಅರಿಸಿ, ಅವರ ಪಾದೋದಕ ಪಡೆದು ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಸಂಪನ್ನರಾಗಿ ಕೃತಕೃತ್ಯರಾಗಬೇಕು.

ಈಗ ವ್ಯವಹಾರದಲ್ಲಿ ನಾವು ಅನೇಕ ಜನ ಪ್ರಸಾದಿಗಳನ್ನು ಕಾಣುತ್ತೇವಷ್ಟೇ. ಅವರು ಗುರುಕರುಣದಿಂದ ಪ್ರಸಾದವನ್ನು ಪಡೆದುದೇನೋ ನಿಜ. ಆದರೆ ಅವರ ಪ್ರಸಾದದ ಅರ್ಥವೇ ವಿಚಿತ್ರವಾಗಿದೆ. ಪರಿಶುದ್ಧವಾದ ಸಮಂತ್ರಕ ಹಸ್ತಸ್ಪರ್ಶದಿಂದ ಪಾವನನಾದ ಗುರುಲಿಂಗ ಜಂಗಮದ ಒಕ್ಕ ಮಿಕ್ಕ ಅನ್ನವನ್ನೇ ಪ್ರಸಾದವೆಂದು ಅವರಲ್ಲಿ ಎಷ್ಟೋ ಜನರು ಊಹಿಸಿದಂತೆ ತೋರುತ್ತದೆ. ಇದು ಕ್ರಿಯಾಪ್ರಸಾದವೆಂಬುದು ದಿಟವಾದುದಾದರೂ ಬರೇ ಭಾವಿಕತನದಿಂದ ಅದರದಷ್ಟೇ ಸೇವನೆಯನ್ನು ಮಾಡಿ ಸಂತುಷ್ಟವಾಗುವುದು ಅನಿಷ್ಟವಾದುದು. ಯಾಕಂದರೆ ಈ ಅನ್ನಮಯ ಪ್ರಸಾದದಿಂದ ದೇಹರಕ್ಷಣ ಮಾತ್ರವಾದೀತು; ಅದಕ್ಕೆ ಪ್ರಸಾದ ದೊರೆಯುವುದರಲ್ಲೇನೂ ಸಂದೇಹವಿಲ್ಲ. ಆದರೆ ಅದರೊಳಗಿರುವ ಜೀವರೂಪಿಯಾದ ಆತ್ಮಕ್ಕೆ ಈ ಜಡ ಪ್ರಸಾದದಿಂದ ಏನು ಉಪಯೋಗವಾಗುವುದು ? ಬರೇ ಶರೀರ ಪೋಷಣೆಯೇ ನಮ್ಮ ಗುರಿಯಲ್ಲ, ಆತ್ಮೋದ್ಧಾರವೇ ಮುಖ್ಯ ಧ್ಯೇಯವಾಗಿದೆ. ಅದನ್ನು ಸಾಧಿಸದಿದ್ದರೆ ಏನು ಮಾಡಿದರೂ ಅದು ವ್ಯರ್ಥವಾದುದು. ಆದುದರಿಂದ ಈ ಪ್ರಸಾದ ಸಂಸ್ಕಾರ ಹೊಂದಿದುದು ಮುಂದಿನ ನಿಜವಾದ ಪ್ರಸಾದ

ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ಪಡೆಯುವದಕ್ಕೆಂದು. ಅದನ್ನು ಮರೆತು "ನಾನು ಪ್ರಸಾದಿಯಾದೆನು, ಇನ್ನು ನನ್ನ ಜನ್ಮ ಸಫಲವಾಯಿತು." ಎಂದರಿಯುವುದು ಬಹು ಘಾತಕವಾದುದು. ಒಣ ಯಾವ ಸಂಸ್ಕಾರದಿಂದಲೂ ಅದರ ಸಿದ್ಧಿಯು ತತ್ಕಾಲದಲ್ಲಾಗಲಿ ಕಾಲಾಂತರದಿಂದಾಗಲಿ, ತನ್ನಿಂದ ತಾನೇ ಎಂದೂ ಆಗುತ್ತಿರುವದಿಲ್ಲ. ಅದಕ್ಕೆ ಬಹುದಿನಗಳವರೆಗೆ ಅದರ ಸಾಧನೆಯನ್ನು ಒಳ್ಳೇ ಜಾಗರೂಕತೆಯಿಂದಲೂ ನಿಗ್ರಹದಿಂದಲೂ ನಡಿಸಿ, ಸಾಹಸಪೂರ್ವಕವಾಗಿ ಅದನ್ನು ಸಾಧಿಸಿಕೊಳ್ಳಬೇಕಾಗುವುದು. ಸಂಸ್ಕಾರ ಹೊಂದುವುದರಿಂದ ಆ ವಿಷಯಕ ಬಾಗಿಲು ಮಾತ್ರ ತೆರೆಯಲ್ಪಡುವವು ಸರಿ! ಸಂಸ್ಕಾರಿಯು ಆ ಬಾಗಿಲಲ್ಲೇ ನಿಂತು ಅತ್ತಿತ್ತ ನೋಡುತ್ತ, ಏಸು ಕಾಲ ಕಳೆದರೇನು ? ಒಳಗಿನ ವಸ್ತುವನ್ನು ಅವನೆಂದೂ ಕಾಣಲಾರನು ! ಪಡೆಯುವುದಂತೂ ದೂರೇ ಉಳಿಯಿತು. ಹಾಗೆ ಮಾಡದೆ ಕುತೂಹಲ ಪೂರ್ವಕ ಒಳಸೇರಿ, ಎಲ್ಲೆಡೆ ತಿರುಗಾಡಿ, ಎಲ್ಲೆಲ್ಲಿ ಏನಿರುವುದೆಂಬುದನ್ನು ಕಂಡುಹಿಡಿದು, ಅವನ್ನು ತಕ್ಕೊಂಡು ಅನುಭವಿಸಿದರೆ ಮಾತ್ರ ಸುಖವು ತೋರುವುದು; ಸಂಸ್ಕಾರ ಹೊಂದಿದುದಕ್ಕೆ ಫಲವಾಗುವುದು. ಆದುದರಿಂದ ಸಂಸ್ಕಾರಿಗಳು, ಇಲ್ಲಿ ಪ್ರಸಾದಿಗಳು, ತಮ್ಮ ಸಂಸ್ಕಾರಕ್ಕೆ ಅನುರೂಪವಾದ ಸಾಧನವನ್ನಾಶ್ರಯಿಸಿ ಮುನ್ನಡೆಯುತ್ತ ಪ್ರಾಣಲಿಂಗಿಗಳಾಗಿ, ಬಳಿಕ ಶರಣತ್ವವನ್ನು ಹೊಂದಿ, ಪ್ರಸಾದ ಲಿಂಗಾರ್ಚನೆಯಿಂದ ತದ್ರೂಪತೆ ಪಡೆದರೆ ಮಂತ್ರಪ್ರಸಾದಿಗಳೆಂಬ (ಪ್ರಸಾದ ಲಿಂಗರೂಪ ಪಡೆದವರೆಂಬ) ಹೆಸರಿಗೆ ನಿಜವಾಗಿಯೇ ತಕ್ಕವರಾಗುವರು. ಇವರೇ ದಿಟವಾದ ಪ್ರಸಾದಿಗಳು. ವೀರಶೈವರೆಲ್ಲರೂ ಇಂತಹ ಪ್ರಸಾದಿಗಳೇ ಆಗುವುದು ಇಷ್ಟವೂ ಅವರ ಪವಿತ್ರ ಕರ್ತವ್ಯವೂ ಅಲ್ಲವೇ !

## ವಿಭೂತಿ.

ವಿಭೂತಿಯು ಅಪ್ರತಿಮವಾದುದೊಂದು ಐಶ್ವರ್ಯಯುಕ್ತವಾದ ಪದಾರ್ಥವಾಗಿದೆ. ಸಾಕ್ಷಾತ್ ಈಶ್ವರತ್ವವು ಇದರಲ್ಲಿ ಸನ್ನಿಧವಾಗಿದೆ. ಇದರಂತಹ ಪವಿತ್ರ ವಸ್ತುವೇ ಇಹದಲ್ಲಿಲ್ಲ. ನಿರ್ದಿಷ್ಟವಾದ ಗೋಮಯವನ್ನು ಒಳಿತಾಗಿ ಒಣಗಿಸಿ, ಸಮಂತ್ರಕವಾಗಿ ಉರಿಸಿ ಶೋಧಿಸಿ ಸಂಗ್ರಹಿಸಿ ಗಟ್ಟಿಯನ್ನು ಮಾಡಿರುವರು. ಇದು ಅಗ್ನಿಸಂಸ್ಕಾರದಿಂದ ನಿರ್ಮಲವೂ ಅತಏವ ಪರಿಶುದ್ಧವೂ ಏಕರೂಪವೂ ಆಗಿರುವುದು. ಇದನ್ನು

ಗುರುಹಸ್ತದಿಂದ ಪಡೆದು, ಮೇಲೆ ಕೇಳಿದ ಭಾವನಾಯುಕ್ತನಾಗಿ ಭಕ್ತಿಯಿಂದ ಧರಿಸಿದರೆ, ನಿಜವಾಗಿಯೂ ಭಕ್ತನು ನಿರ್ಮಲ (ಮಲತ್ರಯರಹಿತ) ನೂ ಪಾವನಕರವಾದ ಅಂಗೋಪಾಂಗಗಳುಳ್ಳವನೂ ನಿಷ್ಕಲಂಕ ಆಚರಣೆಯುಳ್ಳವನೂ ಪವಿತ್ರಾಂತಃಕರಣಿಯೂ ಆಗುವದರಲ್ಲೇನೂ ಸಂದೇಹವಿಲ್ಲ. ವಿಭೂತಿಯನ್ನು ಧರಿಸುವುದರ ಉದ್ದೇಶವು, ಈ ವಿಧದ ಉನ್ನತ ಗುಣಗಳನ್ನು ತನ್ನಲ್ಲಿ ತಂದುಕೊಳ್ಳುವುದೇ ಇರುವುದೆಂಬುದನ್ನು ವೀರಶೈವರು ಯಾವಾಗಲೂ ಲಕ್ಷದಲ್ಲಿಡಬೇಕು. ಇದು ಶಿವನ ವೈವೆಳಗ. ತಾವೂ ಶಿವರೂಪ ಪಡೆಯಲು ಇದು ಬಲು ಸಹಕಾರಿಯೆಂದೇ ಧರಿಸಬೇಕು. ಪೂರ್ವಿಕರು—" ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್‌ಸ್ವರೂಪಕಂ। ಚಿದಂಗಂ ವೃಷಭಾಕಾರಂ ಚಿದ್ಭಸ್ಮಂ" ಇತ್ಯಾದಿಯಾಗಿ ವರ್ಣಿಸಿದ್ದಾರೆ. ಇದರಿಂದ ವಿಭೂತಿಯ ಮಾಹಾತ್ಮ್ಯವು ತಾನೇ ಕಂಡುಬರುವುದು. ವಿಭೂತಿ ಧಾರಣದಿಂದ ನಮ್ಮ ಭಾವನೆಯನ್ನು ಬಲಿಸುತ್ತ ಹೋಗಿ ಕಡೆಗೆ ನಿಜವಾಗಿಯೂ ವಿಭೂತಿಗಳಾದ ಮಹಾಪುರುಷರೇ ಆಗಬೇಕು. ಇಲ್ಲದಿದ್ದರೆ, ಒಲೆಯ ಬೂದಿ ಬಳದುಕೊಂಡಂತೆಯೂ ಬೂದಿ ಚೆಲ್ಲಿದ ತಿಪ್ಪೆಯಲ್ಲಿ ಹೊರಳಾಡಿದ.........ಯೂ ನಮ್ಮ ಗತಿಯಾಗುವುದು.

## ರುದ್ರಾಕ್ಷಿ.

ರುದ್ರಾಕ್ಷಿಯೆಂದರೆ ರುದ್ರನ ಕಣ್ಣು ಶಿವನಿಗೆ ಮೂರು ಕಣ್ಣುಗಳಿರುವವು. ಅವುಗಳಲ್ಲಿ ಮುಖ್ಯವಾಗಿ ಇದು ಹಣೆಯಲ್ಲಿರುವ ಅಗ್ನಿನೇತ್ರವೆಂದೇ ಅರಿಯಬೇಕು. ಅದು ನಿಜವಾಗಿ ತಾಪದಾಯಕವಾದ ಉಷ್ಣತೆಯುಳ್ಳ ಬೆಂಕಿಯಲ್ಲ, ಜ್ಞಾನನಿಕ್ಷೇಪವೇಂದೇ ತಿಳಿಯಬೇಕು. ಅದಕ್ಕೆ "ಉರಿಗಣ್ಣು" ಎಂದು ಹೆಸರು ಬೀಳಲಿಕ್ಕೆ ಕಾರಣವೇನಂದರೆ. ಆ ನಿರ್ಮಲ ಜ್ಞಾನ ದೃಷ್ಟಿಯಿಂದ ಈ ಜಗತ್ತಿನೊಳಗಿನ ಅಗಣಿತ ವಸ್ತುಗಳನ್ನು ನಿರೀಕ್ಷಿಸಿದರೆ, ಅವುಗಳ ನಾನಾವಿಧ ಗುಣಗಳೂ ನಾಮರೂಪಗಳೂ ಮಾಯವಾಗಿ, ಒಂದೇ ಒಂದು ವಸ್ತುವು ಅರ್ಥಾತ್ ಬ್ರಹ್ಮವು-ಲಿಂಗವು-ಉಳಿದು ಬಿಡುವುದು. ಈ ರೀತಿ ಜಗತ್ತು ಅಳಿದು ಹೋಗುವದನ್ನೇ ಉರಿಯುವುದೆಂದು ಕಲ್ಪಿಸಿದ್ದಾರೆ. ತ್ರಿಪುರ ಸಂಹಾರ ಮಾಡುವ ಕಾಲದಲ್ಲಿ ಪರಮಾತ್ಮನ ಕಣ್ಣಿನಿಂದ ಉದುರಿದ ಭಾಷ್ಪಗಳೇ ರುದ್ರಾಕ್ಷಿಯಾದುವೆಂದು ಹೇಳಿದ್ದಾರೆ. (ತ್ರಿಪುರ ಸಂಹಾ

ರದ ತಾತ್ವಿಕಾರ್ಥದ ಲೇಖವನ್ನು ಮಲತ್ರಯವೆಂಬ ಶಿರೋಲೇಖದಿಂದ ಶಿವಾನುಭವದ ೧೫ ನೆಯ ಸಂಪುಟದ ೧ ನೆಯ ಸಂಚಿಕೆಯಲ್ಲಿ ಪ್ರಸಿದ್ಧಿಸಿದೆ, ಅದನ್ನು ಇಷ್ಟವುಳ್ಳವರು ನೋಡಬಹುದು.)

ಈಗ ನಾವು ಬಹಿರಂಗದಲ್ಲಿ ಮೈಮೇಲೆ ಧರಿಸುವ ರುದ್ರಾಕ್ಷಿಗಳು ರುದ್ರಾಕ್ಷಿ ವೃಕ್ಷದ ಬೀಜಗಳು. ನೇಪಾಳದಲ್ಲಿ ಈ ಗಿಡಗಳು ಹೆಚ್ಚಾಗಿ ಬೆಳೆಯುವವು. ಇವುಗಳಲ್ಲಿ ಏಕಮುಖ ದ್ವಿಮುಖ ಪಂಚಮುಖ ಮುಂತಾದ ಪ್ರಕಾರಗಳಿರುವವು. ಇವುಗಳ ಧಾರಣೆಯಿಂದ ಆರೋಗ್ಯಕ್ಕೂ ಸಹಾಯವಾಗುವದು. ರುದ್ರಾಕ್ಷಿಯನ್ನು ಧರಿಸುವದೆಂದರೆ ಅದೇನೂ ಆಟವಲ್ಲ. ಅದರಲ್ಲಿ ಹೊರಗಿರುವ ಪವಿತ್ರ ಕಲ್ಪನೆಯನ್ನು ಭಾವಿಸಿ ಭಕ್ತಿಯಿಂದ ಧರಿಸಬೇಕು. ಹಾಗೂ ತಾನೂ ಅವುಗಳ ಧಾರಣದಿಂದ ಜ್ಞಾನ-ಹಣೆಗಣ್ಣು ಪಡೆದು, ಆಣವ-ಮಾಯಾ-ಕಾರ್ಮಿಕ ಮಲಗಳಿಂದ ಮುಕ್ತನಾಗಬೇಕು. ಹೀಗೆ ವಿಮಲನಾಗದಿದ್ದರೆ ಲಿಂಗಾಂಗ ಸಾಮರಸ್ಯ ಹೊಂದುವದು ಶಕ್ಯವೇ ಇಲ್ಲ. ಈ ಧ್ಯೇಯಕ್ಕೆ ಅವು ನಮ್ಮನ್ನು ಒಯ್ಯದಿದ್ದರೆ ಅವುಗಳಿಗೂ ಔಡಲಕಾಯಿಗಳಿಗೂ ಅಭ್ಯಂತರವೇನು? ನಮಗೂ ಔಡಲ ಗಿಡಕ್ಕೂ ಭೇದವೇನು!

## ಮಂತ್ರ.

ಮಂತ್ರವೆಂದರೆ ಅದೊಂದು ಗುಪ್ತವಾಗಿ ಇರಿಸಿದ ವಿಷಯ, ದೇವರಿಗೆ (ಪರವಸ್ತುವಿಗೆ) ಸಂಬಂಧಿಸಿದ ಮಾತು. ಆ ದೇವನು ಸರ್ವತ್ರ ವ್ಯಾಪಿಸಿದಂತೆ ತನ್ನಲ್ಲಿಯೂ ಇರುವನು. ಅವನನ್ನು ಶೋಧಿಸಿ ಕಾಣುವುದೇ ಮನುಷ್ಯನ ಮುಖ್ಯ ಕರ್ತವ್ಯ. ಹಾಗೆ ತನ್ನಲ್ಲಿಯೇ ಶೋಧಿಸಿ ಕಾಣುವ ಕುರಿತು, ಈ ಮಂತ್ರವೆಂಬ ಗುಪ್ತ ಮಾತು ಗುರುವಿನಿಂದ ಬೋಧಿಸಲ್ಪಡುವದು. ಈ ಶಿವಮಂತ್ರವು ಅಲಭ್ಯವಾದುದು. ಕೇವಲ ಬೀಜ ರೂಪದಲ್ಲಿರುವದು. ಆದರೂ ಅದರ ಮರ್ಮವನರಿತು ಪಠಿಸಿ ಜಪಿಸಿ, ಅದರ ಸಾಂಗೋಪಾಂಗ ಅಭ್ಯಾಸವನ್ನು ಮಾಡಿ ತನ್ನಲ್ಲಿರುವ ಶಿವನನ್ನು ಕಂಡು ಹಿಡಿಯಬೇಕು. ತರುವಾಯ ಅವನೇ ಸೃಷ್ಟಿಯಲ್ಲೆಲ್ಲ ವ್ಯಾಪಿಸಿರುವದನ್ನು ಮನಗಂಡು, ತದನುಸಾರ ವರ್ತಿಸಿ ಆ ಶಿವನೊಳು ಐಕ್ಯರಾಗತಕ್ಕದು. ಇದೇ ಲಿಂಗಾಂಗಸಾಮರಸ್ಯವು. ಇಂತಹ ಏಕೈಕವೃತ್ತಿಯನ್ನು ಪಡೆದವನಿಗೆ ಭವವು ಹಿಂಗುವದಲ್ಲದೆ, ಶಾಶ್ವತವೂ ಅನುಪಮವೂ ಆದ ಆನಂದವು ಪ್ರಾಪ್ತವಾಗುವದೆಂದು, ನಮ್ಮ ಧರ್ಮ

ಶಾಸ್ತ್ರಗಳು ಹೇಳುತ್ತವೆ. ನಮ್ಮ ಧ್ಯೇಯವನ್ನು-ಸ್ವಸ್ವರೂಪವನ್ನು-ತೋರಿಸಲಿಕ್ಕೆ ಈ ಮಂತ್ರವೇ ದಿವ್ಯವಾದ ಜ್ಯೋತಿಯಾಗಿರುವದು. "ಮನನಾತ್ ತ್ರಾಯತೇ ಇತಿ ಮಂತ್ರಃ" ಎಂದು ಇದರ ನಿರುಕ್ತವು. ಅರಿಯುವದರಿಂದ-ಅರಿತು ಆಚರಿಸುವದರಿಂದ-ರಕ್ಷಿಸುವದೆಂದು ಇದರಿಂದ ಸ್ಪಷ್ಟವಾಗುವದು.

ಹೀಗೆ ಗುರು ಲಿಂಗ ಜಂಗಮಗಳನುಳಿದು ಮುಂದಣ ಐದು ಅಷ್ಟಾವರಣಗಳ ಸ್ವರೂಪವು. ಇವನ್ನೇ ಕ್ರಮವಾಗಿ ದೇಹದಲ್ಲಿರುವ ರಸನೆ ನಾಸಿಕ, ತ್ವಚೆ, ನಯನ, ಶ್ರೋತ್ರಗಳೆಂಬ ಜ್ಞಾನೇಂದ್ರಿಯಗಳೆಂದು ಹೇಳಿದ್ದಾರೆ. ಇವೇ ಅಂತರಂಗದ ಅಷ್ಟಾವರಣಗಳು. ಇವೇ ಜಂಗಮದ (ಜ್ಞಾನದ-ಪರಶಿವನ) ಪಂಚಮುಖಗಳು. ಹೀಗೆ ದೇಹ-ಪ್ರಾಣ-ಜ್ಞಾನ-ಜ್ಞಾನೇಂದ್ರಿಯ ಪಂಚಕಗಳು ನಮಗೆ ಸುದೈವದಿಂದ ಪ್ರಾಪ್ತವಾಗಿರಲು, ಈ ಮಾನವ ಜನ್ಮದ ಸದುಪಯೋಗ ಮಾಡಿಕೊಂಡು, ಐಹಿಕ ಆಮುಷ್ಮಿಕ ಹಿತ ಸಾಧಿಸಿಕೊಂಡು ಮುಕ್ತರಾಗುವದು ಬುದ್ಧಿವಂತಿಕೆಯ ಲಕ್ಷಣ. ಇನ್ನು ಹೆಚ್ಚಿಗೆ ಬೆಳಸದೆ ಎಂಟೂ ಆವರಣಗಳ ಸತ್ಯ ಸ್ವರೂಪವು ಹೃದಯದಲ್ಲಿ ಸ್ಪಷ್ಟವಾಗಿ ಒಡಮೂಡುವಂತೆ, ಒಂದೇ ವಾಕ್ಯದಲ್ಲಿ ಸಾರಾಂಶ ರೂಪದಿಂದ ಬರೆದು, ಈ ವಿಷಯವನ್ನು ಮುಗಿಸುವೆನು. ಅದುಃ— ನಮಗೆ ಜನ್ಮತಃ ಪ್ರಾಪ್ತವಾಗಿರುವ ಗುರು (ಕಾಯ)-ಲಿಂಗ (ಪ್ರಾಣ)-ಜಂಗಮ (ಜ್ಞಾನ) ದ ಸೇವೆಯನ್ನು ಮಾಡಿ (ಸದುಪಯೋಗ ಮಾಡಿಕೊಂಡು), ಅವರ ಪಾದೋದಕ (ಅನುಕೂಲತೆ) ಪಡೆದು, ವಿಭೂತಿಯನ್ನು ತಳೆದು (ನಿರ್ಮಲ ಮನಸ್ಕರಾಗಿ), ರುದ್ರಾಕ್ಷಿಯನ್ನು ಧರಿಸಿ (ಜ್ಞಾನಾಗ್ನಿಯನ್ನು ಹೊಂದಿ), ಮಂತ್ರವ ಜಪಿಸಿ (ಸ್ವಸ್ವರೂಪದ-ಪರಶಿವನೇ ತಾನೆಂಬುದ-ನಿಶ್ಚಯಿಸಿ), ಪ್ರಸಾದವನ್ನು (ಲಿಂಗಾಂಗ ಸಾಮರಸ್ಯವನ್ನು) ಅಳವಡಿಸಿಕೊಂಡು ಧನ್ಯರಾಗಬೇಕು. ಇದೇ ಅಷ್ಟಾವರಣಗಳ ಗುಟ್ಟು.

ಅಷ್ಟಾವರಣಗಳ ವಸ್ತುಸ್ಥಿತಿಯು ಹೀಗಿರುವದನ್ನು ಬಗೆಯದೆ, ಅರುವುಗೇಡಿಗಳು ಅವನ್ನು ತಿರಸ್ಕರಿಸಿ ನಡೆಯುತ್ತಿರುವದು ವೀರಶೈವರಲ್ಲಿ ಈಗ ಅಳತಿಗೆಡಹತ್ತಿದೆ. ಇದಕ್ಕೆ ಮೂಲಕಾರಣವು, ನಾವು ಶಿವದೀಕ್ಷೆಯನ್ನು ಅನಾದರಿಸಿದುದೇ! ಶಿವದೀಕ್ಷೆಯಿಲ್ಲವಾದರೆ, ಅಷ್ಟಾವರಣಗಳೆಲ್ಲಿಯವು? ಕ್ರಿಯೆ ಎಲ್ಲಿಯದು? ಸಜ್ಞಾನಾವಸ್ಥೆಯಲ್ಲಿ ವಿಧ್ಯುಕ್ತವಾಗಿ

ಮನಂಬುಗುವಂತೆ ಈ ಅಷ್ಟಾವರಣ ಧಾರಣೆಹೊಂದುವದೇ ಕ್ರಿಯಾ
ಸ್ವೀಕಾರವು. ಅಯ್ಯಗಳೆಂದೆನಿಸುವವರು ಹೆಸರಿಗೇ ದೀಕ್ಷೆಹೊಂದಿದಂತೆ
ಮಾಡಿದರೂ, ಅದನ್ನು ಆಗಲೇ ಮರೆತು ಎಂದಿನಂತೆಯೇ ನಡೆಯು
ವರು. ಉಳಿದ ಸಮಾಜವಂತೂ ಅದರ ಗೋಜಿಗೇ ಹೋಗುವದಿಲ್ಲ.
ಒಟ್ಟಿಗೆ ಎಲ್ಲರೂ ಒಂದೇ ಮಾಲೆಯೊಳಗಿನ ಕುಣಿಗಳು. "ಅಂತೂ
ಇಂತೂ ಕುಂತಿಯ ಮಕ್ಕಳಿಗೆ ರಾಜ್ಯವಿಲ್ಲ." ಎಂಬಂತೆ ನಮ್ಮ ವೀರ
ಶೈವರ ಅವಸ್ಥೆಯಾಗಿದೆ. ಈಗ ಆಂಗ್ಲೇಯ ಶಿಕ್ಷಣ ಹೊಂದುತ್ತಿರುವ
ಹುಡುಗರಂತೂ ಹೇಳಿ ಕೇಳಿ, ಲಿಂಗ-ವಿಭೂತಿಗಳನ್ನು ಸಹ ಅವು ಮತ
ಚಿಹ್ನೆ ಎಂದು ಧರಿಸಲಿಕ್ಕೆ ಸಹ ಒಪ್ಪಲೊಲ್ಲರು. ಅವರ ಈ ತಪ್ಪಿನ
ಬಹುಭಾಗದ ಹೊಣೆಯು ಸಮಾಜದ ಮೇಲೆಯೇ ಇರುವುದು. ಯಾಕಂ
ದರೆ:—ಮೂಲತಃ ಸಮಾಜವೇ ಅಷ್ಟಾವರಣಗಳ ಬಗೆಗೆ ಎಚ್ಚರದಪ್ಪಿ
ನಡೆಯುತ್ತಿರುವದು. ಸಮಾಜದ ಮುಂದಾಳುಗಳೆನಿಸುವವರೇ ಅಜ್ಞ ಜೀವಿ
ಗಳಂತೆ, ತೀರ ಬಹಿರ್ಮುಖರಾಗಿ, ಪ್ರಪಂಚಕ್ಕೆ ಮೋಹಿಸಿ, ಅಷ್ಟಾವರ
ಣಗಳ ಮರ್ಮವರಿಯದೆ ಪರಿವೆಯಿಲ್ಲದವರಾಗಿ, ವಿಷಯ-ಭೋಗಗಳ
ಲ್ಲಿಯೇ ತಲ್ಲೀನರಾಗಿ, ಭವದ ದಾಸರಾಗಿರುವರು; ತಮ್ಮ ಅಮೌಲ್ಯ
ಜನ್ಮವನ್ನು ವ್ಯರ್ಥ ಹಾಳುಮಾಡಿಕೊಳ್ಳುತ್ತಿರುವರು. ಇನ್ನೂ ಕೆಲಜನ
ಬೇರೆ ಪಂಡಿತರು ಇದಕ್ಕೂ ಮುಂದೆ ನುಗ್ಗಿ, ಪವಿತ್ರ ಶಿವಲಾಂಛನವೆ
ನಿಸುವ ಲಿಂಗ-ವಿಭೂತಿ-ರುದ್ರಾಕ್ಷಿ-ಕಾವಿಬಟ್ಟೆಗಳನ್ನು ಹೆಚ್ಚಾಗಿ ಎದ್ದು
ಕಾಣುವಂತೆ ಹೊದ್ದು, ಒಳ್ಳೇ ಸೋಗುಮಾಡಿಕೊಂಡು, ಬಾಯಲ್ಲಿ
"ಶಿವ ಶಿವಾ-ಶಿವ ಶಿವಾ" ಎಂದು ನುಡಿಯುತ್ತ, ಭಾವಿಕರನ್ನು ಮೋಸ
ಗೊಳಿಸುತ್ತ, ಹೊಟ್ಟೆಯ ಪಾಡಿಗಾಗಿ ಸಂಚರಿಸುವದು ಎಲ್ಲೆಡೆಗೆ ಕಂಡು
ಬರುತ್ತದೆ. ಇಂತಹ ಹೇಡಿತನದ ನೀಚಕೃತ್ಯದಿಂದ ಇವರು ತಮ್ಮ
ಕತ್ತನ್ನು ತಾವೇ ಕೊಯ್ದುಕೊಂಬುದು ಅದೇಕೆ ತಿಳಿಯಲೊಲ್ಲದೋ!
ಬಲು ಸೋಜಿಗವೇ ಸರಿ!! "ಕರ್ಮಣೋ ಗಹನೋ ಗತಿಃ" ಎಂದು
ಭವಿಗಳು ಹೇಳುವ ಮಾತು ಇಲ್ಲಿ ನಿದರ್ಶನಕ್ಕೆ ಬರುತ್ತದೆ. ಹೀಗೆ
ಅಷ್ಟಾವರಣಗಳ ದುರುಪಯೋಗ ಮಾಡುವದೆಂದರೆ, ಅವುಗಳ ದುರುಪ
ಯೋಗವಲ್ಲದೆ ಮತ್ತೇನು? ಇರಲಿ. ಕೊನೆಗೆ ಅಷ್ಟಾವರಣಗಳ ಪಟ
ವನ್ನು ಸಂಕ್ಷಿಪ್ತವಾಗಿ ವಿವರಣೆಯೊಡನೆ ಕೊಟ್ಟು ಈ ಲೇಖವನ್ನು
ಮುಗಿಸುವೆನು.

# ಅಷ್ಟಾವರಣಗಳ ಪಟವು.

| ಸಂ. | ಹೆಸರು | ತಾತ್ವಿಕಾರ್ಥ (ಧರಿಸತಕ್ಕಭಾವನೆ) | ಕ್ರಿಯಾ. ಅಷ್ಟಾವರಣಗಳು | ಬಹಿರಂಗ ಅಷ್ಟಾವರಣಗಳು | ಅಂತರಂಗ. ಅಷ್ಟಾವರಣಗಳು | ಜ್ಞಾನ. ಅಷ್ಟಾವರಣಗಳು | ಐಕ್ಯ. ಅಷ್ಟಾವರಣಗಳು |
|---|---|---|---|---|---|---|---|
| ೧ | ಗುರು. | 'ಗು' ಕಾರಂಗುರು ರೂಪಂಚ 'ರೂಪಾತೀತಂ 'ರು' ಕಾರಂ (ಗುಣಾತೀತ ರೂಪಾತೀತ ಅವಸ್ಥೆ) | -- ಗುರು — ಅಷ್ಟಾವರಣಗಳ ಮೂಲಕ ವೀರಶೈವ ದೀಕ್ಷೆಯನಿತ್ತ ಮಹಿಮನಿವನು. | ಕ್ರಿಯೆ. ಅಷ್ಟಾವರಣಗಳನ್ನು ಪೂಜಿಸಿ ಅವುಗಳ ಪ್ರಸನ್ನತೆ ಪಡೆವುದು. | — ಅರುಹು. — ಸಂಸಾರದಲ್ಲಿ ಸುಖವಿಲ್ಲೆಂದು ಮನಗಂಡು ಅದರಿಂದ ಪರಾಙ್ಮುಖನಾಗುವ ಬುದ್ಧಿ. | — ತನು — ಅರುಹುದೋರಲಿಕ್ಕೆ ಕಾರಣವಾದ ನರಜನ್ಮವೇ ತನು. | — ಸತ್ — ಅಲಭ್ಯವಾದ ನರಜನ್ಮದ ಮೂಲಕ ಪ್ರಾಪ್ತವಾದ ಅರುಹನ್ನು ಬೆಳಿಸಿಕೊಂಡು ಸ್ವಸ್ವರೂಪ ಜ್ಞಾನ ಪಡೆವುದು. |
| ೨ | ಲಿಂಗ | " ಲೀಯತೇ ಗಮ್ಯತೇಯತ್ರ ಜಗದೇತಚ್ಚರಾಚರಂ । ತದೇವಲಿಂಗಂ " | — ಲಿಂಗ — ಶಿಷ್ಯನ ಶಿರೋಗತಕ್ಕಿರುವ ಚಿತ್ಕಳೆ ಹಾಗು ಸೃಷ್ಟಿ ಶಿವ ಚೈತನ್ಯ ಇವುಗಳಿಂದಯುಕ್ತವಾದ ಗುರುದತ್ತ ಇಷ್ಟಲಿಂಗ. | — ಕರ — ಇಷ್ಟಲಿಂಗಕ್ಕೆ ಗದ್ದಿಗೆಯಾಗಿ ಅದನ್ನು ಪೂಜಿಸುವ ಕರ್ಮೇಂದ್ರಿಯ. | — ಪ್ರಾಣ — ದೇಹ ಸಂಗದಿಂದ ಜೀವ ಭಾವ ಹೊಂದಿದ ಆತ್ಮ (ಪ್ರಾಣ) | — ಮನ — ನಿರ್ಮಲವಾಗಿ "ಆತ್ಮವತ್ ಸರ್ವ ಭೂತಾನಿಎಂಬ ಸಮಭಾವವುಳ್ಳವರಾಗಿ ಪ್ರಾಣಲಿಂಗದ ಗದ್ದಿಗೆಯಾದ ಅಂತಃಕರಣ. | — ಚಿತ್ — ಮನವು ಆತ್ಮರೂಪದಲ್ಲಿ ತಲ್ಲೀನವಾಗಿ ಕೇವಲ ಜ್ಞಾನ ರೂಪವಾಗುವುದೇ ಚಿತ್. |

| | | | | | | | |
|---|---|---|---|---|---|---|---|
| ೩ | ಜಂಗಮ. | 'ಜಾನಂತ್ಯತಿಶಯ ಸ್ಯೇತು ಶಿವಂ ವಿಶ್ವ ಪ್ರಕಾಶಕಂ। ಸ್ವಸ್ವರೂಪತಯಾ ತೇ' ಇಂತಹ ಅವಸ್ಥೆ (ಲೋಕೋಪಕಾರಕ್ಕೆ ಜನ್ಮವೆತ್ತಿದವ.) | — ಜಂಗಮ — ಸದಾಚಾರ ಸುಜ್ಞಾನ ವೈರಾಗ್ಯಾದಿಯುಕ್ತನಾಗಿ ಜೀವನ್ಮುಕ್ತನೆನಿಸುವ ಶರಣನು. | — ಆಚರಣೆ — ತಾಮಸನಿರಸನ ಶೀಲ ಸಂಪಾದನಗಳಂ ಹೊಂದಿ, ಲವಮಾತ್ರವೂ ಅವುಗಳಿಂದ ಕದಲದಿರುವುದು. | — ಸುಜ್ಞಾನ — ದೇಹವೇ ನಾನೆಂಬುದಂತ್ಯಜಿಸಿ ಆತ್ಮನೇ ನಾನೆಂಬುದಂ ನಿಶ್ಚಯಿಸಿಕೊಳ್ಳುವುದೆ ಸುಜ್ಞಾನ. | — ಧನ — ಸಂಸಾರದ ನಾನಾವಿಧ ವಸ್ತುಗಳೇ ಧನ ಅವುಗಳ ನಾಮರೂಪಗಳೆದು ಮೂಲದಲ್ಲಿರುವ ತತ್ವ ಲಿಂಗವ ಕಂಡು ಹಿಡಿವುದೇ ಧನ. | — ಆನಂದ — ಜಗವೆಲ್ಲ ಲಿಂಗ ರೂಪ ಸ್ವಸ್ವರೂಪವಾಗುವುದರಿಂದುಂಟಾಗುವ ಶಾಂತಿ ಸಮಾಧಾನಗಳ ಮೂಲಕ ಲಭಿಸುವ ವೃತ್ತಿ |
| ೪ | ಪಾದೋದಕ. | 'ಪ' ಕಾರಂ, ಪರಮಂ ಜ್ಞಾನಂ 'ದೋ' ಕಾರಂ ದೋಷ ವರ್ಜಿತಂ। 'ದ' ಕಾರಂ ದಹತೇ ಜನ್ಮ 'ಕ' ಕಾರಂ ಕರ್ಮನಾಶನಂ. | — ಪಾದೋದಕ — ಜಂಗಮ ಪಾದಾಂಗುಷ್ಠದಿಂ ಪುನೀತವಾದ ವಿಧಾನ ಪೂರ್ವಕ ಸಿದ್ಧಗೊಳಿಸಿದ ಚರಣಜಲ. | — ಪಾದ (ಪದ) — ಪಾದೋದಕಕ್ಕೆ ಆಶ್ರಯ.ವಾದಕರ್ಮೇಂದ್ರಿಯವೆನಿಸುವ ಅಂಘ್ರಿ | — ಜಿಹ್ವೆ — ಜಲತತ್ವವುಳ್ಳ ಸ್ವಾದವನರಿವ ಜ್ಞಾನೇಂದ್ರಿಯ. | — ಜ್ಞಾನ — ಶರಣರ ಸಹವಾಸದಲ್ಲಿದ್ದು ಅವರ ಯೋಗದಿಂದ ಲಿಂಗದ ಸ್ವರೂಪದ ನೆಲೆಯ ನರಿವ ಜ್ಞಾನ. | — ನಿತ್ಯ — ಎಲ್ಲೆಲ್ಲಿಯೂ ತನ್ನ ಸ್ವರೂಪವನೇ ಕಂಡು ತಾನು ಅಮರ (ನಿತ್ಯ) ನೆಂದು ಭಾವಿಸುವಿಕೆ. |
| ೫ | ಪ್ರಸಾದ. | ಗುರು, ಲಿಂಗ, ಜಂಗಮದ ಶುದ್ಧ-ಸಿದ್ಧ ಪ್ರಸಿದ್ಧವೆಂಬ ಮೂರು ತೆರವಾದ ಉನ್ನತಿಯಂ ಸಾಧಿಸುವದು. | — ಪ್ರಸಾದ — ಜಂಗಮನ ಸಮಂತ್ರ ಹಸ್ತ ಸ್ಪರ್ಶದಿಂದ ಪುನೀತವಾದ ಉಚ್ಛಿಷ್ಟ (ಒಕ್ಕುಮಿಕ್ಕ) ಅನ್ನವು | — ಜಿಹ್ವೆ — ವಕ್ತ್ರ ಮತ್ತು ತದಂತರ್ಗತ ರಸನೆ. ಪ್ರಸಾದ ಸೇವನೆಯ ಬಹಿರಂಗ ಅವಯವ. | — ಘ್ರಾಣ — ಪ್ರಸಾದದ ಗಂಧ ವಿಷಯವ ನರಿವ ಪೃಥ್ವಿ ತತ್ವವುಳ್ಳ ನಾಸಿಕ. | — ಭಾವ — "ಜಗತ್ತು ಸ್ವಸ್ವರೂಪವಾದ ಮೇಲೆ ಎಂಜಲೆಂಬದು ಇಲ್ಲೇ ಇಲ್ಲ ಎಂದರಿಯುವದೇ ಭಾವ. | — ಪರಿಪೂರ್ಣ — ಅಣೋರಣೀಯಾನ ಮಹತೋ ಮಹೀಯಾನ್ ಆಗಿ, ಲಿಂಗವು ಎಲ್ಲೆಲ್ಲಿಯೂ ಪರಿಪೂರ್ಣವಾಗಿದೆಂಬ ದೃಢವಿಶ್ವಾಸ. |

| | | | | | | | |
|---|---|---|---|---|---|---|---|
| ೬ | ವಿಭೂತಿ | " ಅನಾದಿ ಶಾಶ್ವತಂ ಶಾಂತಂ ಚೈತನ್ಯಂ ಚಿತ್ ಸ್ವರೂಪಕಂ ಚಿದಂಗಂ ವೃಷಭಾಕಾರಂ ಚಿದ್ಭಸ್ಮ " (ಶಿವನ ವೈಭವಗಳು) | — ವಿಭೂತಿ — ಸಮಂತ್ರಗೋಮಯ ತಂದು ಒಣಗಿಸಿ, ಸುಟ್ಟು ಸೋಸಿ ಕಟ್ಟಿದ ಶುಭ ಘಟ್ಟಿ (ಗುರುದತ್ತ) | — ಲಲಾಟ — ತ್ರಿಪುಂಡ್ರಧಾರಣೆಗೆ ಪ್ರಧಾನ ಸ್ಥಾನವಾದುದೀ ಅವಯವ. | — ತ್ವಕ್ಕು — ವಿಭೂತಿ ಲೇಪನವನರಿವ, ಸ್ಪರ್ಶನಾಮಕ ಜ್ಞಾನೇಂದ್ರಿಯವು | — ಮೂಲ — ಜಗದುತ್ಪತ್ತಿಗೆ ಕಾರಣವಾದ ಸಾಕ್ಷದನಾದಿ ಮೂಲ ಚಿತ್ತುವಿನ ಪ್ರಕಾಶವೆಂದರಿಯುವಿಕೆ. | — ಚಿದ್ಭಸಿತ — ಪರಶಿವನ ಚಿದಂಗವಾದ ಮಹಾಜ್ಞಾನ ಸ್ವರೂಪ ಚಿಚ್ಛಕ್ತಿಯೇ ವಿಭೂತಿ ಎಂದರಿವುದು. |
| ೭ | ರುದ್ರಾಕ್ಷಿ | ರುದ್ರನ ಹಣೆಗಣ್ಣಾದ ಜ್ಞಾನಾಗ್ನಿಯು ತ್ರಿಪುರಸಂಹಾರ ಕಾಲದಲ್ಲಿ ಪರಶಿವನ ಕಣ್ಣಿಂದುದುರಿದ ಬಾಷ್ಪ | — ರುದ್ರಾಕ್ಷಿ — ರುದ್ರಾಕ್ಷಿ ವೃಕ್ಷದ ಬೀಜ ಗುರುಕರುಣದಿಂದ ಆತನ ಹಸ್ತಮೂಲಕವಾಗಿ ಪ್ರಾಪ್ತವಾದವುಗಳು | — ಕೊರಳು — ರುದ್ರಾಕ್ಷಿ ಧಾರಣೆಗೆ ಮುಖ್ಯಾಧಾರವಾದ ಬಾಹ್ಯಸ್ಥಾನವು. | — ನೇತ್ರ — ರುದ್ರಾಕ್ಷಿಯರೂಪವನರಿವ ಅಗ್ನಿತತ್ತ್ವವುಳ್ಳ ಜ್ಞಾನೇಂದ್ರಿಯುಗಳು. | — ಬುದ್ಧಿ — ಸುವಿವೇಕದಿಂದ ಆತ್ಮಾನಾತ್ಮವನರಿದು, ನಿಶ್ಚಯಿಸುವ ಅಂತಃಕರಣವಿದು | — ಕಂಠಾದಿ — ಅಂತಃಕರಣ ಪಂಚಕ ಹಾಗು ದಶೇಂದ್ರಿಯಗಳು ಶುದ್ಧವಾಗಿ ಜ್ಞಾನಸ್ವರೂಪವಾಗುವಿಕೆ. |
| ೮ | ಮಂತ್ರ | 'ಮನನಾತ್ ತ್ರಾಯತೇ ಇತಿ ಮಂತ್ರಃ' ಆದುದರಿಂದ ಸ್ವಸ್ವರೂಪ ಸಿದ್ಧಿಯನೀವ ಮಹಾ ಸಾಧನ. | — ಮಂತ್ರ — ಗುರುಬೋಧಿತ ಶಿವ ಪಂಚಾಕ್ಷರಿ ಇಲ್ಲವೆ ಷಡಕ್ಷರಿಯೇ ಇದು | ವಾಕ್ಯ (ವಕ್ತ್ರ) ಮಂತ್ರ ಪಠಣಕ್ಕೆ ವಕ್ತ್ರ (ವಾಕ್ಯ) ವೇ ಕಾರಣವಾದ ಸ್ಥಾನ ಅಥವಾ ಸಾಧನೆ | — ಶ್ರೋತ್ರ — ಗುರುವಿನಿಂದ ಮಂತ್ರಶ್ರವಣ ಮಾಡುವ ಸಾಧನ. ಆಕಾಶ ತತ್ತ್ವವುಳ್ಳದ್ದು ಜ್ಞಾನೇಂದ್ರಿಯ | — ಅರುಹು — 'ತತ್ತ್ವಮಸಿ' ಮಹಾವಾಕ್ಯಾನುಸಾರ ನಾನು ತತ್ ಸ್ವರೂಪನೆ ಆಹುದೆಂಬ ಸ್ಥಿರವಾದ ಮಹಾಜ್ಞಾನ. | — ಚಿನ್ನಾದ — ಅಂತಹ ಅರಿವುತತ್ ವಸ್ತುವಿನಲ್ಲಿ ಬೆರೆದು ತಾದಾತ್ಮ್ಯ ಹೊಂದುವ ಸ್ಥಿತಿಯೇ ಚಿನ್ನಾದವು. |

ಬೆಳಗಾವಿ ತಾ|| ೨೩-೮-೪೩

ಬಸವಪ್ಪ ಚನ್ನಪ್ಪ-ಪಟ್ಟೇದ ವಂಟಮುರಿ.

# ಬಸವಣ್ಣನವರಲ್ಲಿ ಹಾಗೂ ಗುರುಪಟ್ಟಾಧಿಕಾರಿಗಳಲ್ಲಿ ಅನ್ಯೋನ್ಯವಿದ್ದ ಆದರ ಭಾವ.

( ಲೇಖಕರು:— ಶ್ರೀ ಬಸವದೇವರು-ಶಿವಯೋಗಮಂದಿರ. ಬದಾಮಿ )

ಕೃಪಯಾ ಶಿವಸದ್ಭಕ್ತಿರ್ಯೇನ ವಿಯೇನ ಪ್ರಕಾಶಿತಾ ।
ದ್ವಿತೀಯ ಶಂಭುಂ ಭಕ್ತ್ಯಾ ತಂ ಪ್ರಣಮಾಮಿ ಬಸವೇಶ್ವರಂ ॥

ಭಕ್ತಿಸಾಮ್ರಾಜ್ಯ ಧುರಂಧರರಾದ ಬಸವಣ್ಣನವರು ಭರತ ಖಂಡದಲ್ಲಿ ಆಗಿಹೋದ ಮಹಾ ವ್ಯಕ್ತಿಗಳಲ್ಲಿ ಪರಿಗಣಿಸಲ್ಪಟ್ಟ ಒಬ್ಬ ಧರ್ಮಸುಧಾರಕರಾದ ಅಸಾಧಾರಣ ವ್ಯಕ್ತಿಗಳು, ಇವರು ವೀರಶೈವ ಸಮಾಜೋದ್ಧಾರಕರೂ ವೀರಶೈವ ಷಟ್‌ಸ್ಥಲ ತತ್ವ ಸ್ಥಿರೀಕರಣ ಕಾರ್ಯಕರ್ತೃಗಳೂ ಆಗಿದ್ದಾರೆ. 'ಅಂಗದ ಮೇಲೆ ಲಿಂಗವುಳ್ಳವರೆಲ್ಲರ ಸಂಗವು ನಾಥನೆಂದು ಕಾಂಬೆ' ಎಂಬ ಉದಾರ ಭಾವದಿಂದ ವರ್ತಿಸುತ್ತ ವೀರಶೈವ ಸಮಾಜವು ಸಂಘಟನೆಯ ಸ್ಥಿತಿಗೆ ಬರುವಂತೆ ಸಂಪೂರ್ಣ ಪ್ರಯತ್ನ ಮಾಡಿದರು. ಕಂಡ ಭಕ್ತರಿಗೆ ಕೈಮುಗಿವಾತನೇ ಭಕ್ತನೆಂಬ ತತ್ವವನ್ನು ಹರವುತ್ತ ಸಮಾಜದ ಜನತೆಯಲ್ಲಿ ಪರಸ್ಪರ ಪ್ರೇಮಾದರ ಭಾವಗಳನ್ನು ನೆಲೆಗೊಳಿಸಲಿಕ್ಕೂ ಹೆಚ್ಚಾಗಿ ಹವಣಿಸಿದರು. ಒಳ್ಳೇ ಮಹತ್ವಪೂರ್ಣವಾದ ಶಿವಾನುಭವ ಮಂಟಪವನ್ನು ಸ್ಥಾಪಿಸಿ ತನ್ಮುಖಾಂತರ ಮತತತ್ವಗಳನ್ನು ಪ್ರಕಾಶಪಡಿಸುವದಲ್ಲದೆ ಜನಸಾಮಾನ್ಯರಲ್ಲಿದ್ದ ಅಜ್ಞಾನವನ್ನು ದೂರೀಕರಿಸಿ ಜ್ಞಾನಾಭಿರುಚಿಯನ್ನು ಬೆಳೆಸುತ್ತ ಸಮಾಜವನ್ನು ಒಂದು ತರಹದ ಅಭಿವೃದ್ಧಿಸ್ಥಿತಿಗೆ ತಂದರು. ಹೀಗೆ ಸಮಾಜೋದ್ಧಾರ ಧರ್ಮಾಭಿವೃದ್ಧಿಗಳೇ ತಮ್ಮ ಜೀವಿತ ಫಲಗಳೆಂದು ಬದ್ಧಕಂಕಣರಾಗಿ ಶ್ರಮಪಟ್ಟ ಬಸವಣ್ಣನವರು ಗುರುಗಳನ್ನು ಮನ್ನಿಸುತ್ತಿದ್ದರೇ ಇಲ್ಲವೆ? ಹಾಗೂ ಗುರುಗಳಾದವರು ಬಸವಣ್ಣನವರನ್ನು ಆದರಿಸುತ್ತಿದ್ದರೇ ಇಲ್ಲವೆ? ಎಂಬುದೊಂದು ವಿಚಾರವಿದೆ. ಹಲವು ಜನಗಳು ಅವರು ಗುರುಗಳಾದವರನ್ನು ಅಷ್ಟೊಂದು ಮನ್ನಿಸದೆ ಜಂಗಮಮೂರ್ತಿಗಳನ್ನೇ ಮಾನಿಸುತ್ತಿದ್ದರು. ಅವರನ್ನೇ ಪೂಜಿಸುತ್ತಿದ್ದರೆಂದು ನುಡಿಯುವರು. ಆದರೆ ಗುರು ಜಂಗಮ ಇವುಗಳ ವಿಷಯವಾಗಿ ಅವರಲ್ಲಿದ್ದ ಇದು ಒಂದು ತಪ್ಪು ಗ್ರಹಿಕೆಯೆಂದು ಹೇಳಬಹುದು.

'ಎನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ ನಿಮ್ಮ ಪಾದವೇ ಸಾಕ್ಷಿ ಎನ್ನ ಮನವೇ ಸಾಕ್ಷಿ ಎನಗಿದೇ ದಿವ್ಯ ಕೂಡಲಸಂಗಮದೇವ' ಎಂದು ಸಾರುವ ಭಕ್ತವರ್ಯರಾದ ಆ ಮಹಾನುಭಾವರು ಗುರುಗಳಾದವರನ್ನು ಮನ್ನಿಸದೆ ಇರುವದು ಎಂದಿಗಾದರೂ ಸಾಧ್ಯವೇ? ಸಮಾಜ ಸುಧಾರಕರಾದ ಮಹಾಪುರುಷರು ಈ ತರಹ ಆಚರಿಸುವದಾದರೂ ಉಂಟೆ? ಇಲ್ಲ. ಅವರು ಗುರುಗಳಾದವರನ್ನು ಅತ್ಯಂತ ಮನ್ನಿಸುತ್ತಿದ್ದರು. ತಮ್ಮ ವಚನ ಗ್ರಂಥದಲ್ಲಿ ಷಟ್‌ಸ್ಥಲಗಳೊಂದೊಂದಕ್ಕೆ ಸ್ಥಾನವನ್ನು ಕೊಟ್ಟಂತೆ ಗುರುವಿಗೂ ಮಾಹಾತ್ಮ್ಯವನ್ನು ಕೊಟ್ಟು ಅದರಲ್ಲಿ "ಮಡಿಕೆಯ ಮಾಡುವರೆ ಮಣ್ಣೇ ಮೊದಲು ತೊಡಿಗೆಯ ಮಾಡುವರೆ ಹೊನ್ನೇ ಮೊದಲು ಶಿವಪಥವನರಿವಡೆ ಗುರುಪಥವೇ ಮೊದಲು ಕೂಡಲ ಸಂಗಮದೇವರನರಿವಡೆ ಶರಣರ ಸಂಗವೇ ಮೊದಲು" "ನೋಡಿ ನೋಡಿ ಮಾಡುವ ನೇಮ ಸಲ್ಲವು ಸಲ್ಲವು ತನು ಉದ್ದೇಶ ಮನ ಉದ್ದೇಶವಾಗಿ ಮಾಡುವ ನೇಮ ಸಲ್ಲವು ಸಲ್ಲವು ಗುರುಪಥವ ಮೀರಿ ಮಾಡುವ ನೇಮ ಸಲ್ಲವು ಸಲ್ಲವು ಕೂಡಲಸಂಗಮದೇವ ಇವು ನಿಮ್ಮ ನಿಜದೊಳಗೆ ನಿಲ್ಲವು ನಿಲ್ಲವು" ಗುರು ವಚನವಲ್ಲದೆ ಲಿಂಗವೆಂದೆನಿಸದು ಗುರು ವಚನವಲ್ಲದೆ ನಿತ್ಯವೆಂದೆನಿಸದು ಗುರು ವಚನವಲ್ಲದೆ ನೇಮವೆಂದೆನಿಸದು ತಲೆ ಇಲ್ಲದಟ್ಟಿಗೆ ಪಟ್ಟವ ಕಟ್ಟುವ ಉಭಯ ಭ್ರಷ್ಟರ ಮೆಚ್ಚುವನೇ ನಮ್ಮ ಕೂಡಲಸಂಗಮದೇವ" ಮುತ್ತು ಪವಣಿಸಿದಂತಿರುವ ಈ ಮೂರು ವಚನಗಳಿಂದ ಗುರುಗಳಾದವರಿಗೆ ಗೌರವ ಪೂರ್ಣ ಮನ್ನಣೆ ಮಾಡಿದ್ದಾರೆ. ಇವುಗಳಲ್ಲಿರುವ ಶಿವಪಥವನರಿವಡೆ ಗುರುಪಥವೇ ಮೊದಲು. ಗುರುಪಥವ ಮೀರಿ ಮಾಡುವ ನೇಮ ಸಲ್ಲವು. ಗುರುವಚನವಲ್ಲದೆ ಲಿಂಗವೆಂದೆನಿಸದು. ಈ ನುಡಿಗಳಿಂದ ಬಹು ಮಾರ್ಮಿಕವಾಗಿ ಗುರುತತ್ವದ ಸಮರ್ಥನೆ ಮಾಡಿ ಅದರ ಅವಶ್ಯಕತೆಯನ್ನು ಸ್ಫುಟವಾಗಿ ಹೇಳಿದ್ದಾರೆ.

ಮಹಾದೇವಿಯಕ್ಕನು ಬಸವಣ್ಣನವರ ಗುಣವರ್ಣನೆ ಮಾಡುವಾಗ ಗುರುಕಾರುಣ್ಯವೇದ್ಯನು, ಗುರುಭಕ್ತಿ ಸಂಪನ್ನನು, ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನ ಮುಂತಾದವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ" ಎಂಬುದಾಗಿ ಅವರ ಗುರುಭಕ್ತಿ ಸಂಪನ್ನತೆಯನ್ನು ಚನ್ನಾಗಿ ಕೊಂಡಾಡಿರುವಳು. ಬಸವಣ್ಣನವರೇ ಮತ್ತೊಂದು

ವಚನದಲ್ಲಿ "ನಾನು ಆರಂಬವ ಮಾಡುವೆನಯ್ಯ ಗುರುಪೂಜೆಗೆಂದು, ನಾನು ವ್ಯವಹಾರವ ಮಾಡುವೆನಯ್ಯ ಲಿಂಗಾರ್ಚನೆಗೆಂದು, ನಾನು ಪರಸೇವೆಯ ಮಾಡುವೆನಯ್ಯ ಜಂಗಮದಾಸೋಹಕ್ಕೆಂದು" ಎಂಬುದಾಗಿ ಗುರುಪೂಜೆಯಲ್ಲಿದ್ದ ವಿಶ್ವಾಸಾತಿಶಯವನ್ನು ವ್ಯಕ್ತ ಮಾಡಿದ್ದಾರೆ. ಕೆಲವರು 'ಗುರುವಿನ ಗುರು ಜಂಗಮ' ಇತ್ಯಾದಿ ನುಡಿಗಳಿದ್ದುದರಿಂದಲೇ ಅವರು ಗುರುಗಳಲ್ಲಿ ಭಕ್ತಿಯುಳ್ಳವರಾಗಿರಲಿಲ್ಲವೆಂದು ಭಾವಿಸಿದ್ದಾರೆ. ಆದರೆ ಗುರು ಜಂಗಮ ಇವರ ಸಂಬಂಧವನ್ನು ಅವರು ಅರಿತಿಲ್ಲ. ಸಿದ್ಧಾಂತ ಶಿಖಾಮಣಿಯಲ್ಲಿ ಸಹ ಗುರುಮಾಹಾತ್ಮ್ಯ ಲಿಂಗ ಮಾಹಾತ್ಮ್ಯಗಳಂತೆ ಜಂಗಮ ಮಾಹಾತ್ಮ್ಯವನ್ನು ಹೇಳಿ 'ಗುರುಶಿಷ್ಯ ಸಮಾರೂಢ ಲಿಂಗಮಾಹಾತ್ಮ್ಯ ಸಂಪದಃ। ಸರ್ವಂ ಚಿದ್ರೂಪ ವಿಜ್ಞಾನಾಜ್ಜಂಗಮಾಧಿಕ್ಯಮುಚ್ಯತೆ' ಎಂಬ ಶ್ಲೋಕದಿಂದ ಜಂಗಮದ ಮಹತ್ವವನ್ನು ತೋರಿಸಿದ್ದಾರೆ. ನೀಲಕಂಠ ಶಿವಾಚಾರ್ಯಪ್ರಣೀತವಾದ ಕ್ರಿಯಾಸಾರದ ೨೮ ನೇ ಉಪದೇಶದಲ್ಲಿ ಗುರುಜಂಗಮ ಮೂರ್ತಿಗಳ ತಾರತಮ್ಯವನ್ನು ವಿವರಿಸುತ್ತ ಬಂದು "ಚರಮೂರ್ತೇರ್ಗುರುತ್ವಂಹಿ ಗುರೋರಪ್ಯಧಿಕಂ ಭವೇತ್" ಎಂದು ಹೇಳಿ ಗುರುವಿಗಿಂತ ಜಂಗಮವು ಅಧಿಕವೆಂಬುದನ್ನು ಶಾಸ್ತ್ರ ಪ್ರಮಾಣಗಳಿಂದ ಸ್ಪಷ್ಟೀಕರಿಸಿದ್ದಾರೆ. ಹೀಗೆ ವೀರಶೈವ ಸಿದ್ಧಾಂತ ಸಿದ್ಧವಾದ ಜಂಗಮಾಧಿಕ್ಯವನ್ನು ಉಸುರಿರುವರೇ ಹೊರತು ಗುರುಗಳಲ್ಲಿ ತಿಲಮಾತ್ರವೂ ಸಂಕೋಚ ಭಾವವುಳ್ಳವರಾಗಿರಲಿಲ್ಲ ಅವರನ್ನು ಮನಸಾ ಮನ್ನಿಸುತ್ತಿದ್ದರು, ಪೂರ್ಣಭಕ್ತಿಯಿಂದ ಪೂಜಿಸುತ್ತಲೂ ಇದ್ದರು.

ಗುರುಗಳಾದವರೂ ಕೂಡ ಬಸವಣ್ಣನವರನ್ನು ಗೌರವ ಬುದ್ಧಿಯಿಂದ ಕಾಣುತ್ತಿದ್ದರು. ಇದಕ್ಕೆ ಸೋಮಾರಾಧ್ಯರು ಪಂಡಿತಾರಾಧ್ಯರು ಷಡಕ್ಷರ ಕವಿಗಳೇ ಪ್ರಮಾಣ. ಸೋಮಾರಾಧ್ಯರು ಬಸವಪುರಾಣ ಬಸವಲಿಂಗ ನಾಮಾವಳಿಗಳನ್ನು ರಚಿಸಿ "ಸಾರವೀರಶೈವ ಸಮಯ ಚಕ್ರವರ್ತಿ ಬಸವಲಿಂಗ, ಘೋರಪಾಪದೋಷ ಪುಂಜಕುಜಕುಠಾರ ಬಸವಲಿಂಗ, ನುಡಿದ ವಾಕ್ಯ ತಪ್ಪದಂತೆ ನಡೆದು ಮೆರೆದೆ ಬಸವಲಿಂಗ," ಎಂದು ಒಳ್ಳೇ ಮಹತ್ವಪೂರ್ಣವಾದ ವಿಶೇಷಣಗಳನ್ನು ಕೊಟ್ಟು ಮನದಣಿ ಹೊಗಳಿದ್ದಾರೆ. ಶ್ರೀಜಗದ್ಗುರು ಮಲ್ಲಿಕಾರ್ಜುನ ಪಂಡಿತಾರಾಧ್ಯರು ಬಸವೇಶ್ವರನು ಕಳುಹಿಸಿಕೊಟ್ಟಿದ್ದ ಭಸ್ಮವನ್ನು ವಿಶ್ವಾಸದಿಂದ ಧರಿಸಿ

ಕೊಂಡು ಆತನನ್ನು ಕಾಣಲು ಕುತೂಹಲದಿಂದ ಕಲ್ಯಾಣಕ್ಕೆ ಹೊರ ಟಾಗ ಮಧ್ಯದಲ್ಲೇ ಸಂಗಮೇಶ್ವರನಲ್ಲಿ ಐಕ್ಯನಾದನೆಂಬ ವಾರ್ತೆಯನ್ನು ಕೇಳಿ "ತಚ್ಛ್ರುತ್ವಾ ಸಂಭ್ರಮಾಕ್ರಾಂತೋ ಮಲ್ಲಿಕಾರ್ಜುನ ಪಂಡಿತಃ। ಇತಿ ಶ್ರೀಬಸವಾಮಾತ್ಯಂ ವಿಲಲಾಪಾತಿ ದುಃಖಿತಃ॥ ಬಸವಾಮಾತ್ಯ ಬಸವ ಕುಮಾರ ಬಸವೇಶ್ವರ। ಪ್ರಭೋ ಬಸವಲಿಂಗ ಶ್ರೀ ಭಂಡಾರಿ ಬಸವೇಶ್ವರ॥ ಮತ್ ಸ್ವಾಮಿನ್ ಸಂಗನಬಸವಣ್ಣ ಸಾಧು ಜನ ಪ್ರಿಯ। ಸಂವಿತ್ಪ್ರದೀಪ ಶಮಿತ ಪುಷ್ಪಚಾಪನಿರಂಕುಶ॥ ಸತ್ಯಪ್ರಲಾಪವಿನುತ."

ಎಲೋ ಬಸವಮಂತ್ರಿಯೇ ಬಸವಕುಮಾರನೇ ಪ್ರಭುವೇ ಬಸವ ಲಿಂಗನೇ ಶ್ರೀಭಂಡಾರಿ ಬಸವೇಶ್ವರನೇ ನನ್ನ ಸ್ವಾಮಿಯೇ ಸಂಗನಬಸ ವಣ್ಣನೇ ಸಾಧುಜನ ಪ್ರಿಯನೇ ಜ್ಞಾನಪ್ರದೀಪನೇ ಮದನಧ್ವಂಸಿಯೇ ನಿರಂಕುಶನೇ ಸತ್ಯವಚಸ್ಕನೇ ಎಂದು ಪರಿಪರಿಯಿಂದ ಶೋಕಿಸಿ "ಸದ್ಧರ್ಮಗಾತ್ರ ಷಡ್ವರ್ಗಜೈತ್ರ ಪ್ರಮಥಾವತಾರಂ ಸತ್ಯ ಶಾಂಭವ ಧರ್ಮಾವತಾರಂ ಪ್ರಸಿದ್ಧ ಸದ್ವೀರಭಕ್ತಿಸ್ಥಲಾಚಾರಂ ಜಂಗಮವ್ಯೂಹಸು ಪಥಪ್ರಕಾಶಂ ಲಿಂಗಸಾಮ್ರಾಜ್ಯ ಪದವೀಪಟ್ಟ ಬದ್ಧಂ" ಸದ್ಧರ್ಮ ಶರೀ ರಿಯು ಅರಿಷಡ್ವರ್ಗಜಯಶೀಲನೆ ಪ್ರಮಥಾವತಾರನೂ ಸತ್ಯಶಿವಧರ್ಮ ಕ್ಕೋಸ್ಕರ ಅವತಾರ ಮಾಡಿದವನೂ ಪ್ರಸಿದ್ಧವಾದ ವೀರಶೈವ ಭಕ್ತಿಸ್ಥ ಲಾಚರಣೆಯುಳ್ಳವನೂ ಜಂಗಮ ಸಮೂಹವು ಬೆಸಸಿದ ಸನ್ಮಾರ್ಗ ಪ್ರಕಾಶಕನೂ ಲಿಂಗಸಾಮ್ರಾಜ್ಯ ಪದವಿಯಲ್ಲಿ ಪಟ್ಟ ಕಟ್ಟಿಸಿಕೊಂಡವನೂ ಆದ ನೀನು ಸಂಗಮೇಶನಲ್ಲಿ ಐಕ್ಯನಾದೆಯಾ ಎಂದು ಬಹುವಿಧದಿಂದ ಕೊಂಡಾಡಿದ ವಿಷಯವು ಪಂಡಿತಾರಾಧ್ಯ ಚರಿತ್ರಗ್ರಂಥದಲ್ಲಿ ವಿಸ್ತಾರವಾಗಿ ಬಂದಿದೆ. ಶ್ರೀ ಪಂಡಿತಾರಾಧ್ಯರ ಸಂಪ್ರದಾಯದವರೂ ಪಂಡಿತಾರಾಧ್ಯ ಚರಿತಗ್ರಂಥಕರ್ತೃಗಳೂ ಆದ ಗುರುರಾಜ ಕವಿಗಳು ತಮ್ಮ ಗ್ರಂಥದ ಆದಿಯಲ್ಲಿ "ಕೃಪಯಾ ಶಿವಸದ್ಭಕ್ತಿರ್ಭುವಿಯೇನ ಪ್ರಕಾಶಿತಾ। ದ್ವಿತೀಯ ಶಂಭುಂಭಕ್ತ್ಯಾತಂನಮಾಮಿ ಬಸವೇಶ್ವರಂ ಭೂಲೋಕದಲ್ಲಿ ಶಿವಭಕ್ತಿ ಪ್ರಕಾಶಕನೂ ದ್ವಿತೀಯಶಂಭುವೂ ಆದ ಬಸವೇಶ್ವರನನ್ನು ನಮಸ್ಕರಿಸು ವೆನೆಂದು ಮಂಗಲವನ್ನು ಮಾಡಿದ್ದಾರೆ.

ಕವಿಸಾರ್ವಭೌಮರೂ ಷಟ್ಸ್ಥಾಧ್ಯಕ್ಷರೂ ಆದ ಷಡಕ್ಷರಿದೇವರು ಬಸವಣ್ಣನವರ ಮಹಿಮಾತಿಶಯದಿಂದೊಪ್ಪುವ ವೃಷಭೇಂದ್ರ ವಿಜಯ ವೆಂಬ ಗ್ರಂಥವನ್ನು ಬರೆದು ಅದರಲ್ಲಿ "ಶರಣರಕ್ಕೈಯಕೈಪಿಡಿಯನಾದಿಯ

ಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಆದಿಶಕ್ತಿ ಚಿತ್ಶಕ್ತಿ. ಇನ್ನು ಶರಣನ ಷಡ್ವಿಧ ಭಕ್ತಿಯ ವಿವರ— ಆನಂದ ಶ್ರದ್ಧೆ ನೈಷ್ಠೆ ಸಾವಧಾನ ಅನುಭಾವ ಸಮರಸ. ಇನ್ನು ಶರಣನ ಷಡ್ವಿಧ ಪದಾರ್ಥದ ವಿವರ— ಶಬ್ದ ಗಂಧ ರಸ ರೂಪು ಸ್ಪರುಶನ ಪರಿಣಾಮ. ಇನ್ನು ಶರಣನ ಷಡ್ವಿಧ ಪ್ರಸಾದದ ವಿವರ— ಶಬ್ದಪ್ರಸಾದ, ಗಂಧಪ್ರಸಾದ, ರಸಪ್ರಸಾದ, ರೂಪು ಪ್ರಸಾದ, ಸ್ಪರುಶನಪ್ರಸಾದ, ಪರಿಣಾಮಪ್ರಸಾದ.

ಇನ್ನು ಪಷ್ಮಮದಲ್ಲಿ ಆ ಐಕ್ಯನ ಷಟ್‌ಸ್ಥಲದ ವಿವರ— ಐಕ್ಯ ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ. ಇನ್ನು ಐಕ್ಯನ ಷಡ್ವಿಧ ಲಿಂಗದ ವಿವರ—ಮಹಾಲಿಂಗ, ಆಚಾರಲಿಂಗ, ಗುರುಲಿಂಗ. ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ. ಇನ್ನು ಐಕ್ಯನ ಷಡ್ವಿಧ ಹಸ್ತದ ವಿವರ— ಸದ್ಭಾವ ಸುಚಿತ್ತ ಸುಬುದ್ಧಿ ನಿರಹಂಕಾರ ಸುಮನ ಸುಜ್ಞಾನ. ಇನ್ನು ಐಕ್ಯನ ಷಡ್ವಿಧ ಮುಖದ ವಿವರ— ಹೃದಯ ಘ್ರಾಣ ಜಿಹ್ವೆ ನೇತ್ರ ತ್ವಕ್ಕು ಶ್ರೋತ್ರ.

ಇನ್ನು ಐಕ್ಯನ ಷಡ್ವಿಧ ಶಕ್ತಿಯ ವಿವರ— ಚಿತ್ಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿ ಇಚ್ಛಾಶಕ್ತಿ ಆದಿಶಕ್ತಿ ಪರಾಶಕ್ತಿ. ಇನ್ನು ಐಕ್ಯನ ಷಡ್ವಿಧ ಭಕ್ತಿಯ ವಿವರ— ಸಮರಸ ಶ್ರದ್ಧೆ ನೈಷ್ಠೆ ಸಾವಧಾನ ಅನುಭಾವ ಆನಂದ. ಇನ್ನು ಐಕ್ಯನ ಷಡ್ವಿಧ ಪದಾರ್ಥದ ವಿವರ— ಪರಿಣಾಮ ಗಂಧ ರಸ ರೂಪು ಸ್ಪರುಶನ ಶಬ್ದ. ಇನ್ನು ಐಕ್ಯನ ಷಡ್ವಿಧ ಪ್ರಸಾದದ ವಿವರ— ಪರಿಣಾಮಪ್ರಸಾದ, ಗಂಧಪ್ರಸಾದ, ರಸಪ್ರಸಾದ, ರೂಪು ಪ್ರಸಾದ, ಸ್ಪರುಶನಪ್ರಸಾದ, ಶಬ್ದಪ್ರಸಾದ.

ಇಂತಿವೆಲ್ಲವೂ ಅರ್ಪಿತವಾಗಲೊಡನೆ ಏಕಮೇವ ಪರಬ್ರಹ್ಮ ತಾನೆಯಾಗಿ ಉಳಿದ ಉಳುಮೆಯೇ ಬಸವಣ್ಣ. ಆ ಬಸವಣ್ಣನೇ ಎನಗೆ ಇಷ್ಟಬ್ರಹ್ಮವು. ಆ ಇಷ್ಟಬ್ರಹ್ಮದಲ್ಲಿ ಎನ್ನಂಗಮನ ಪ್ರಾಣ ಇಂದ್ರಿಯ ವಿಷಯ ಕರಣಂಗಳೆಲ್ಲವು ನಿರವಯಲಾದ ಭೇದ ಹೇಗೆಂದಡೆ:—

ವಾರಿ......ದು ವಾರಿಕಲ್ಲಾಗಿ ವಾರಿಯಾದ ಹಾಗೆ ಉಪ್ಪಿನ ಪೊಟ್ಟಣವಪ್ಪುವಿನೊಳು ಬಯಚಿಟ್ಟ ಹಾಗೆ ಉರಿ ಕರ್ಪುರ ಸಂಯೋಗವಾದ ಹಾಗೆ ಎನ್ನ ಅಂಗ ಮನ ಲಿಂಗ ಏಕರಸವಾದ ಭೇದವನು

ಸಿದ್ಧೇಶ್ವರನು ತೋರಿ ...ರಣ ಪರಂಜ್ಯೋತಿ ಮಹಾಲಿಂಗ ಗುರುಸಿದ್ಧ ಲಿಂಗ ಪ್ರಭುವಿನಲ್ಲಿ ಬಸವೇಶ್ವರನ ಶ್ರೀಪಾದದಲ್ಲಿ ಮನಮಗ್ನಯೋಗ ಎನಗಾಯಿತ್ತಯ್ಯ ಬೋಳಬಸವೇಶ್ವರಾ, ನಿಮ್ಮ ಧರ್ಮ ನಿಮ್ಮ ಧರ್ಮ.

---

(೩) ಸದ್ಗುರು ಸ್ವಾಮಿ ಕೃಪೆ ಮಾಡಿಕೊಟ್ಟ ಪಂಚಾಕ್ಷರ ಷಡಕ್ಷರ ಏಕಾಕ್ಷರವೇ ಇಷ್ಟ ಪ್ರಾಣ ಭಾವವೆನಗೆ. ಇಷ್ಟವೇ ಬಸವಣ್ಣ, ಪ್ರಾಣವೇ ಚೆನ್ನಬಸವಣ್ಣ, ಭಾವವೇ ಪ್ರಭುವು. ಅದು ಹೇಗೆಂದಡೆ, ಸಾಕಾರ ಮೂರು ಮೂವತ್ತೊಂದು ಪ್ರಕಾರವನೊಳಕೊಂಡು ಎನ್ನ ಕಾಯದಲ್ಲಿ ಸಂಗವಾದನಯ್ಯಾ ಬಸವಣ್ಣ. ನಿರಾಕಾರ ಮೂರು ತ್ರಯೋದಶ ಸ್ವರೂಪನೊಳಕೊಂಡು ಎನ್ನ......ಸಂಗವಾದನಯ್ಯಾ ಚೆನ್ನ ಬಸವಣ್ಣ. ನಿಷ್ಕಲ ನಿರವಯ ಚಿದದ್ವಯ ಜಂಗಮವೇ ಎನ್ನ ಇಂದ್ರಿಯಂಗಳಲ್ಲಿ ಸಂಗವಾದನಯ್ಯಾ ಪ್ರಭು ದೇವರು. ಅದು ಹೇಗೆಂದಡೆ ಅಂಗ ಪ್ರಾಣ ಇಂದ್ರಿಯಂಗಳೇ ಗುರು ಲಿಂಗ ಜಂಗಮ, ಆ ಗುರು ಲಿಂಗ ಜಂಗ ಮವೇ ಗೋಳಕ, ಗೋಮುಖ, ವೃತ್ತಾಕಾರ. ಅದು ಹೇಗೆಂದಡೆ ಗುರುಲಿಂಗ ತ್ರಿವಿಧವನೊಳಕೊಂಡು ಎನ್ನಂಗದಲ್ಲಿ ಸಂಗವಾದನಯ್ಯಾ ಬಸವಣ್ಣ......ವಿಧವನೊಳಕೊಂಡು ಎನ್ನ ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನಬಸವಣ್ಣ. ಜಂಗಮಲಿಂಗ ತ್ರಿವಿಧವನೊಳಕೊಂಡು ಎನ್ನ ಇಂದ್ರಿ ಯಂಗಳಲ್ಲಿ ಸಂಗವಾದನಯ್ಯಾ ಪ್ರಭು ದೇವರು. ಜಂಗಮಲಿಂಗ ತ್ರಿವಿಧ ವನೊಳಕೊಂಡು ಎನ್ನ ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನಬಸವಣ್ಣ. ಕಾಯಲಿಂಗ ತ್ರಿವಿಧವನೊಳಕೊಂಡು, ಎನ್ನಂಗದಲ್ಲಿ ಸಂಗವಾದನಯ್ಯಾ ಬಸವಣ್ಣ. ಆಚಾರಲಿಂಗ ತ್ರಿವಿಧವನೊಳಗೊಂಡು, ಎನ್ನ ಇಂದ್ರಿಯಂಗ ಳಲ್ಲಿ ಸಂಗವಾದನಯ್ಯಾ ಪ್ರಭುದೇವರು. ಅನುಗ್ರಹ ಲಿಂಗ ತ್ರಿವಿಧವ ನೊಳಕೊಂಡು ಎನ್ನಂಗದಲ್ಲಿ ಸಂಗವಾದನಯ್ಯಾ ಬಸವಣ್ಣ. ಅರ್ಪಿತ ತ್ರಿವಿಧವನೊಳಕೊಂಡು ಎನ್ನ ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನ ಬಸವಣ್ಣ. ತನುಗುಣಲಿಂಗ ತ್ರಿವಿಧವನೊಳಕೊಂಡು ಎನ್ನ ಇಂದ್ರಿ ಯಂಗಳಲ್ಲಿ ಸಂಗವಾದನಯ್ಯಾ ಪ್ರಭುದೇವರು. ಒಲವು ಲಿಂಗ ತ್ರಿವಿಧವನೊಳಕೊಂಡು ಎನ್ನ ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನ ಬಸವಣ್ಣ. ನಿರೂಪು ಲಿಂಗ ತ್ರಿವಿಧವನೊಳಕೊಂಡು, ಎನ್ನಂಗದಲ್ಲಿ

ಸಂಗವಾದನಯ್ಯಾ ಬಸವಣ್ಣ. ಪ್ರಸಾದಲಿಂಗ ತ್ರಿವಿಧವನೊಳಕೊಂಡು ಎನ್ನ ಇಂದ್ರಿಯಂಗಳಲ್ಲಿ ಸಂಗವಾದನಯ್ಯಾ ಪ್ರಭುದೇವರು. ಪಾದೋದಕಲಿಂಗ ತ್ರಿವಿಧವನೊಳಕೊಂಡು ಎನ್ನ ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನಬಸವಣ್ಣ. ಇಷ್ಟಲಿಂಗ ತ್ರಿವಿಧವನೊಳಕೊಂಡು ಎನ್ನಂಗದಲ್ಲಿ ಸಂಗವಾದನಯ್ಯಾ ಬಸವಣ್ಣ. ಆಕಾಶಲಿಂಗ ತ್ರಿವಿಧವನೊಳಕೊಂಡು, ಎನ್ನ ಇಂದ್ರಿಯಂಗಳಲ್ಲಿ ಸಂಗವಾದನಯ್ಯಾ ಪ್ರಭುದೇವರು. ಪ್ರಕಾಶಲಿಂಗ ತ್ರಿವಿಧವನೊಳಕೊಂಡು ಎನ್ನ ಬುದ್ಧೀಂದ್ರಿಯಂಗಳಲ್ಲಿ ಸಂಗವಾದನಯ್ಯಾ ಪ್ರಭುದೇವರು. ಕೋಡುದು ಪ್ರಸಾದ, ನಿಂದುದೋಗರ, ಚರಾಚರ ನಾಸ್ತಿ, ಎಂಬ ತ್ರಿವಿಧವನೊಳಕೊಂಡು ಪ್ರಾಣದಲ್ಲಿ ಸಂಗವಾದನಯ್ಯಾ ಚೆನ್ನ ಬಸವಣ್ಣ. ಭಾಂಡಭಾಜನ ಅಂಗಲೇಪನವೆಂಬ ತ್ರಿವಿಧವನೊಳಕೊಂಡು ಎನ್ನಂಗದಲ್ಲಿ ಸಂಗವಾದನಯ್ಯಾ ಬಸವಣ್ಣ. ಇಂತೀ ಗುರು ಲಿಂಗಜಂಗಮದ ಏಕಾರ್ಥವೇ ಸಚ್ಚಿದಾನಂದ ಬ್ರಹ್ಮ. ಸಚ್ಚಿದಾನಂದ ಬ್ರಹ್ಮವೇ ಸಿದ್ಧೇಶ್ವರನು. ಆ ಸಿದ್ಧೇಶ್ವರನೇ ಪಿಂಡಬ್ರಹ್ಮಾಂಡದೊಳಹೊರಗೆ ಪರಿಪೂರ್ಣವಾಗಿ ತೊಳಗಿ ಬೆಳಗುವ ಭೇದವನ್ನು ಬೋಳಬಸವೇಶ್ವರನು ಎನ್ನ ಅಂತರಂಗ ಬಹಿರಂಗ ಹಿಂದು ಮುಂದು ಎಡ ಬಲ ಅಡಿಯಾಕಾಶ ತತ್ಪರಿಪೂರ್ಣ ಸಮರಸೈಕ್ಯ ಏಕಾರ್ಥವ ಮಾಡಿಕೊಟ್ಟ ಕಾರಣ ಪರಂಜ್ಯೋತಿ ಮಹಾಲಿಂಗ ಗುರುಸಿದ್ಧಲಿಂಗ ಪ್ರಭುವಿನಲ್ಲಿ ವಾಯುವಿನಪ್ಪಿದ ಪರಿಮಳದಂತೆ ಅಂಬುಧಿಯೊಳಗೆ ಮುಳುಗಿದ ವಾರಿ ಕಲ್ಲಿನಂತೆ ಉರಿ ಉಂಡ ಕರ್ಪೂರದಂತಾದೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ.

---

(೪) ಶ್ರೀಗುರು ಸ್ವಾಮಿ ಕರುಣಿಸಿಕೊಟ್ಟ ಇಷ್ಟಬ್ರಹ್ಮವೇ ಬಸವಣ್ಣನೆನಗೆ. ಆ ಬಸವಣ್ಣನೇ ನವಲಿಂಗ ಸ್ವರೂಪಾಗಿಪ್ಪನಯ್ಯಾ. ಅದು ಹೇಗೆಂದಡೆ, ತನುತ್ರಯಂಗಳಲ್ಲಿ ಇಷ್ಟಪ್ರಾಣಭಾವವೆಂದು, ಇಂದ್ರಿಯಂಗಳಲ್ಲಿ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗವೆನಿಸಿಪ್ಪನಯ್ಯಾ, ಅದು ಹೇಗೆಂದಡೆ ಅಂಗ ಲಿಂಗ ಸಂಗ ಚತುರ್ವಿಂಶತಿ ಸ್ವರೂಪನೊಳಕೊಂಡು ಆಚಾರಲಿಂಗವಾಗಿ, ಎನ್ನ ನಾಸಿಕದಲ್ಲಿ ಇಂಬುಗೊಂಡನಯ್ಯಾ ಬಸವಣ್ಣ. ಅಂಗ ಲಿಂಗ ಸಂಗ ಅಷ್ಟಾದಶ ಸ್ವರೂಪನೊಳಕೊಂಡು ಗುರುಲಿಂಗವಾಗಿ ಎನ್ನ ಜಿಹ್ವೆಯಲ್ಲಿ ಇಂಬು

ಗೊಂಡನಯ್ಯಾ ಬಸವಣ್ಣಾ. ಅಂಗ ಲಿಂಗ ಸಂಗ ಷೋಡಶ ಸ್ವರೂಪ ನೊಳಕೊಂಡು ಶಿವಲಿಂಗವಾಗಿ, ಎನ್ನ ನೇತ್ರದಲ್ಲಿ ಇಂಬುಗೊಂಡನಯ್ಯಾ ಬಸವಣ್ಣಾ. ಅಂಗ ಲಿಂಗ ಸಂಗ ಸಪ್ತಾದಶಸ್ವರೂಪನೊಳಕೊಂಡು ಜಂಗ ಮಲಿಂಗವಾಗಿ ಎನ್ನ ತ್ವಕ್ಕಿನಲ್ಲಿ ಇಂಬುಗೊಂಡನಯ್ಯಾ ಬಸವಣ್ಣಾ. ಎನ್ನ ಅಂಗ ಲಿಂಗ ಸಂಗ ತ್ರಿದಶಸ್ವರೂಪನೊಳಕೊಂಡು ಪ್ರಸಾದಲಿಂಗವಾಗಿ ಎನ್ನ ಶ್ರೋತ್ರದಲ್ಲಿ ಇಂಬುಗೊಂಡನಯ್ಯಾ ಬಸವಣ್ಣಾ. ಅಂಗ ಲಿಂಗ ಸಂಗ ತ್ರಯೋದಶ ಸ್ವರೂಪನೊಳಕೊಂಡು, ಮಹಾಲಿಂಗವಾಗಿ ಎನ್ನ ಹೃದ ಯದಲ್ಲಿ ಇಂಬುಗೊಂಡನಯ್ಯಾ ಬಸವಣ್ಣಾ. ಇಂತೀ ಬಸವಣ್ಣಾನ ಅಂಗ ಲಿಂಗ ಹಸ್ತ ಮುಖ ಶಕ್ತಿ ಭಕ್ತಿ ಪದಾರ್ಥ ಪ್ರಸಾದ ಇಂತಿವನರಿದು ಅರ್ಪಿಸಿದೆನಾಗಿ ಎನ್ನ ತನುವಿನಲ್ಲಿ ಶುದ್ಧಪ್ರಸಾದವಾಗಿ ಇಂಬುಗೊಂಡ ನಯ್ಯಾ ಬಸವಣ್ಣಾ. ಎನ್ನ ಮನದಲ್ಲಿ ಸಿದ್ಧಪ್ರಸಾದವಾಗಿ ಇಂಬುಗೊಂಡ ನಯ್ಯಾ ಬಸವಣ್ಣಾ. ಎನ್ನ ಮನದಲ್ಲಿ ಪ್ರಸಿದ್ಧಪ್ರಸಾದವಾಗಿ ಇಂಬು ಗೊಂಡನಯ್ಯಾ ಬಸವಣ್ಣಾ. ಇಂತೀ ಶುದ್ಧ ಸಿದ್ಧ ಪ್ರಸಿದ್ಧದೊಳಗೆ ಮುಳು ಗಿದ್ದ ಭೇದವನರಿದು ಬೋಳ ಬಸವೇಶ್ವರನ ಅನುಭಾವ ಸಂಪರ್ಕದಿಂದ ಸಿದ್ಧೇಶ್ವರನ ಘನಪ್ರಕಾಶ ಸಾಧ್ಯವಾಯಿತ್ತಾಗಿ, ಪರಂಜ್ಯೋತಿ ಮಹಾ ಲಿಂಗ ಗುರುಸಿದ್ಧಲಿಂಗ ಪ್ರಭುವಿನಲ್ಲಿ ಎರಡರಿಯದಿರ್ದೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ.

---

(೫) ಎನ್ನ ಕಂಗಳ ದೃಕ್ಕಿನಲ್ಲಿ ಅಂಗ ಲಿಂಗ ಸಂಗ ನಾಲ್ವತ್ತೆರಡು ಭೇದವನೊಳಕೊಂಡು ಎನ್ನ ಕಾಯದ ಕರಸ್ಥಲದಲ್ಲಿ ಮೂರ್ತಗೊಂಡ ನಯ್ಯಾ ಬಸವಣ್ಣಾ. ಎನ್ನ ಮನದ ದೃಕ್ಕಿನಲ್ಲಿ ಅಂಗ ಲಿಂಗ ಸಂಗ ಮೂವತ್ತು ಮೂರು ಭೇದವನೊಳಕೊಂಡು ಎನ್ನ ಮನದ ಕರಸ್ಥಲದಲ್ಲಿ ಮೂರ್ತ ಗೊಂಡನಯ್ಯಾ ಚೆನ್ನಬಸವಣ್ಣಾ. ಎನ್ನ ಭಾವದ ದೃಕ್ಕಿನಲ್ಲಿ ಅಂಗ ಲಿಂಗ ಸಂಗ ಷಡುವಿಂಶತಿ ಸ್ವರೂಪನೊಳಕೊಂಡು ಎನ್ನ ಭಾವದ ಕರಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಪ್ರಭುದೇವರು. ಇಂತೀ ಮೂವರು ಒಂದ ನೊಂದನಳವಡಿಸಿಕೊಂಡ ಕಾರಣ ಎನಗೇನೂ ಇಲ್ಲದೆ ಪರಂಜ್ಯೋತಿ ಮಹಾಲಿಂಗ ಗುರುಸಿದ್ಧಲಿಂಗಪ್ರಭುವಿನಲ್ಲಿ ಸಿದ್ಧೇಶ್ವರನ ನಿಜಪದವ ಬೆರಸಿ ಮನ ಮಗ್ನನಾಗಿದ್ದೆನಯ್ಯಾ ಬೋಳ ಬಸವೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ.

(೬) ಪ್ರಥಮದಲ್ಲಿ ವಾಙ್ಮನಕ್ಕೆ ಬಾರದ ಸಚ್ಚಿದಾನಂದ ನಿತ್ಯ ಪರಿಪೂರ್ಣ ಲಕ್ಷಣವನುಳ್ಳ ನಿಷ್ಕಲ ದೇವರು, ದ್ವಿತೀಯದಲ್ಲಿ ಪರಂ ಗೂಢಂ ಶರೀರಸ್ಥಂ ಲಿಂಗಕ್ಷೇತ್ರಮನಾದಿವತ್ ಎಂಬ ಪಂಚಸಂಜ್ಞೆಯನುಳ್ಳ ಮಹಾಲಿಂಗದೇವರು, ತೃತೀಯದಲ್ಲಿ ಕರ್ಮ ಕರ್ತೃ ಮೂರ್ತಿ ಅಮೂರ್ತಿ ಶಿವಸಾದಾಖ್ಯವನುಳ್ಳ ಸದಾಶಿವದೇವರು, ಚತುರ್ಥದಲ್ಲಿ ಭವ ಶರ್ವ ರುದ್ರ ಭೀಮ ಸದಾಶಿವ ಉಗ್ರ ಸೋಮ ಪಶುಪತಿ ಎಂಬ ಎಂಟು ಪ್ರಕಾರವನುಳ್ಳ ಈಶ್ವರದೇವರು, ಪಂಚಮದಲ್ಲಿ ಶರ್ವ ಶಿವ ಮಹಾದೇವ ನೀಲಕಂಠ ವೃಷಭಧ್ವಜ ಈಶಾನ ಶಂಕರ ಭೀಮ ಪಿನಾಕಿ ಚಂದ್ರಶೇಖರ ಕಪರ್ದಿ ವಿರೂಪಾಕ್ಷ ವಾಮದೇವ ವೃಢ ಭೂತೇಶ ಶೂಲಿ ಸರ್ವಜ್ಞ ಸ್ಥಾಣು ಪಾರ್ವತೀಪ್ರಿಯ ಮಹಾಕಾಳ ಮಹಾದೀರ್ಘ ಮಹಾತಾಂಡವ ಗಂಗಾಧರ ಗಣೇಶ್ವರ ಗಜಧ್ವಂಸೀ ಎಂಬ ಇಪ್ಪತ್ತೈದು ಪ್ರಕಾರವನುಳ್ಳ ಮಹೇಶ್ವರದೇವರು, ಷಷ್ಠಮದಲ್ಲಿ ಶಿವ ಮಹೇಶ್ವರ ರುದ್ರ ಶ್ರೀಕಂಠ ಶಂಭು ಈಶ್ವರ ಮಹಾದೇವ ಪಶುಪತಿ ನೀಲಕಂಠ ವೃಷಭಧ್ವಜ ಪರಮೇಶ್ವರನೆಂಬ ಹನ್ನೊಂದು ಪ್ರಕಾರವನುಳ್ಳ ರುದ್ರದೇವರು, ಸಪ್ತಮದಲ್ಲಿ ಭವ ವೃಢ ಹರನೆಂಬ ಮೂರು ಪ್ರಕಾರವನುಳ್ಳ ತ್ರಯಾವಯವ ದೇವರು, ಅಷ್ಟಮದಲ್ಲಿ ಭಯಂಕರವನುಳ್ಳ ವಿರಾಟ್ಮೂರ್ತಿದೇವರು, ನವಮದಲ್ಲಿ ಸರ್ವ ಚೈತನ್ಯಾತ್ಮಕವನುಳ್ಳ ಹಿರಣ್ಯದೇವರು, ದಶಮದಲ್ಲಿ ಸುಷುಪ್ತಾವಸ್ಥೆಯನುಳ್ಳ ಪ್ರಾಜ್ಞದೇವರು, ಏಕಾದಶದಲ್ಲಿ ಸ್ವಪ್ನಾವಸ್ಥೆಯನುಳ್ಳ ತೈಜಸದೇವರು, ದ್ವಾದಶದಲ್ಲಿ ಜಾಗ್ರಾವಸ್ಥೆಯನುಳ್ಳ ವಿಶ್ವೇಶ್ವರದೇವರು, ಇಂತೀ ನಾಮ ಪರಿಯಾಯಂಗಳನೆಲ್ಲವ ಬಸವೇಶ್ವರನೇ ಅಲಂಕರಿಸಿ ಏಕಮೂರ್ತಿಸ್ತ್ರಯೋಭಾಗವೆಂಬ ಶ್ರುತಿ ಪ್ರಮಾಣದಿಂದ ಎನ್ನ ಸಾಕಾರ ಮೂರು ಮೂರು, ನವವಿಂಶತಿ ನವವಿಂಶತಿ ಸ್ವರೂಪವನೊಳಕೊಂಡು ಎನ್ನ ಬಹಿರಂಗರಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ನಿರಾಕಾರ ಮೂರು ಮೂರು ವಿಂಶತಿ ವಿಂಶತಿ ಸ್ವರೂಪನೊಳಕೊಂಡು ಎನ್ನ ಅಂತರಂಗಲ್ಲಿ ಮೂರ್ತಿಗೊಂಡನಯ್ಯಾ ಚೆನ್ನಬಸವಣ್ಣ. ನಾಮ ರೂಪು ಕ್ರಿ ಏನೂ ಏನೂ ಇಲ್ಲದ ಸಚ್ಚಿದಾನಂದ ಲಕ್ಷಣವನುಳ್ಳ ಬ್ರಹ್ಮವೇ ಉಭಯ ಸಂಗದಲಿ ಸನ್ನಿಹಿತನಾದನಯ್ಯಾ ಪ್ರಭುದೇವರು. ಇಂತೀ ಪಿಂಡಾದಿ ಜ್ಞಾನ ಶೂನ್ಯಾಂತವಾದ ಸ್ಥಲಕುಳದ ಭೇದವನು ಸಿದ್ಧೇಶ್ವರದೇವನೆನಗೆ ಅರುಹಿ ತನ್ನ ನಿಜಪದದೊಳಗೆ

ಇಂಬಿಟ್ಟುಕೊಂಡ ಕಾರಣ ಪರಂಜ್ಯೋತಿ ಮಹಾಲಿಂಗ ಗುರು ಸಿದ್ಧಲಿಂಗ ಪ್ರಭುವಿನಲ್ಲಿ ಸಿದ್ಧೇಶ್ವರನ ಘನವು ಎನಗೆ ವಾರಿಕಲ್ಲ ಪುತ್ಥಳಿಯನಪ್ಪಿ ಕೊಂಡಂತಾಯಿತ್ತಯ್ಯಾ ಚೋಳಬಸವೇಶ್ವರಾ, ನಿಮ್ಮ ಧರ್ಮ ನಿಮ್ಮ ಧರ್ಮ.

---

(೭) ಎನ್ನ ಉನ್ಮನಿಯ ತತ್ವದ ಮೇಲೆ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿತ್ಪರಮಲಿಂಗವನು ಮೆಲ್ಲ ಮೆಲ್ಲನೆ ಎನ್ನ ಭಾವಸ್ಥಲದಲ್ಲಿ ತಂದು ಇಂಬಿಟ್ಟನಯ್ಯಾ ಶ್ರೀ ಗುರು. ಎನ್ನ ಭಾವಸ್ಥ ಲದಲ್ಲಿ ಥಳ ಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿತ್ಕಲಾ ಲಿಂಗವನು ಮೆಲ್ಲ ಮೆಲ್ಲನೆ ಎನ್ನಾತ್ಮಸ್ಥಲದಲ್ಲಿ ತಂದು ನ್ಯಸ್ತವ ಮಾಡಿ ದನಯ್ಯಾ ಶ್ರೀ ಗುರು. ಎನ್ನಾತ್ಮಸ್ಥಲದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿದಾನಂದಲಿಂಗವನು ಮೆಲ್ಲಮೆಲ್ಲನೆ ಎನ್ನಾಕಾಶ ತತ್ವದಲ್ಲಿ ತಂದು ಸ್ಥಾಪ್ಯಗೊಳಿಸಿದನಯ್ಯಾ ಶ್ರೀಗುರು. ಎನ್ನಾಕಾಶ ತತ್ವದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿನ್ಮಯ ಲಿಂಗವನು ಮೆಲ್ಲ ಮೆಲ್ಲನೆ ಎನ್ನ ವಾಯುತತ್ವದಲ್ಲಿ ನ್ಯಸ್ತವಾಗಿ ತಂದಿರಿ ಸಿದನಯ್ಯಾ ಶ್ರೀಗುರು. ಎನ್ನ ವಾಯುತತ್ವದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್‌ಪ್ರಕಾಶ ಚಿನ್ಮೂರ್ತಿಲಿಂಗವನು ಮೆಲ್ಲಮೆಲ್ಲನೆ ಎನ್ನ ಅಗ್ನಿತತ್ವದಲ್ಲಿ ತಂದು ಆನುಗೊಳಿಸಿದನಯ್ಯಾ ಶ್ರೀಗುರು. ಎನ್ನ ಅಗ್ನಿ ತತ್ವದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶಲಿಂಗವನು ಮೆಲ್ಲಮೆಲ್ಲನೆ ಎನ್ನ ಅಪ್ಪುತತ್ವದಲ್ಲಿ ತಂದು ನೆಲೆಗೊಳಿಸಿದನಯ್ಯಾ ಶ್ರೀಗುರು. ಎನ್ನ ಅಪ್ಪು ತತ್ವದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿದ್ರೂಪ ಲಿಂಗವನು ಮೆಲ್ಲಮೆಲ್ಲನೆ ಎನ್ನ ಪೃಥ್ವೀ ತತ್ವದಲ್ಲಿ ತಂದು ಹುದುಗೊಳಿಸಿದನಯ್ಯಾ ಶ್ರೀಗುರು. ಎನ್ನ ಪೃಥ್ವೀ ತತ್ವದಲ್ಲಿ ಥಳಥಳನೆ ಹೊಳೆವುತ್ತಿಹ ಚಿತ್ಪೂರ್ಣ ಚಿತ್ಪ್ರಕಾಶ ಚಿದದ್ವಯ ಲಿಂಗವನ್ನು ಮೆಲ್ಲಮೆಲ್ಲನೆ ಎನ್ನ ಭಾವ ಮನ ದೃಕ್ಕಿಗೆ ಕರತಳಾಮಳಕವಾಗಿ ಎನ್ನ ಕರಸ್ಥಲದಲ್ಲಿ ಮೂರ್ತಗೊಳಿಸಿದನಯ್ಯಾ ಶ್ರೀಗುರು. ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡ ಇಷ್ಟ ಬ್ರಹ್ಮವೇ ಬಸವಣ್ಣನೆನಗೆ. ಆ ಬಸವಣ್ಣನೇ ಎನ್ನ ಆಧಾರ ಚಕ್ರದಲ್ಲಿ ಆಚಾರಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ

ಬಸವಣ್ಣ. ಎನ್ನ ಸ್ವಾಧಿಷ್ಠಾನಚಕ್ರದಲ್ಲಿ ಗುರುಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಮಣಿಪೂರಕ ಚಕ್ರದಲ್ಲಿ ಶಿವಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಅನಾಹತ ಚಕ್ರದಲ್ಲಿ ಜಂಗಮಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ವಿಶುದ್ಧಿ ಚಕ್ರದಲ್ಲಿ ಪ್ರಸಾದಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಆಜ್ಞಾ ಚಕ್ರದಲ್ಲಿ ಮಹಾಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಬ್ರಹ್ಮರಂಧ್ರದಲ್ಲಿ ನಿಃಕಲಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ ಎನ್ನ ಶಿಖಾಚಕ್ರದಲ್ಲಿ ಶೂನ್ಯಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಪಶ್ಚಿಮಚಕ್ರದಲ್ಲಿ ನಿರಂಜನಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಸ್ಥೂಲಾಂಗದಲ್ಲಿ ಇಷ್ಟಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಸೂಕ್ಷ್ಮಾಂಗದಲ್ಲಿ ಪ್ರಾಣಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಕಾರಣಾಂಗದಲ್ಲಿ ಭಾವಲಿಂಗ ಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ನಾಸಿಕದಲ್ಲಿ ಆಚಾರಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ ಎನ್ನ ಜಿಹ್ವೆಯಲ್ಲಿ ಗುರುಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ನೇತ್ರದಲ್ಲಿ ಶಿವಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ತ್ವಕ್ಕಿನಲ್ಲಿ ಜಂಗಮಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ ಎನ್ನ ಶ್ರೋತ್ರದಲ್ಲಿ ಪ್ರಸಾದಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಹೃದಯದಲ್ಲಿ ಮಹಾಲಿಂಗಸ್ವರೂಪವಾಗಿ ಮೂರ್ತಿಗೊಂಡನಯ್ಯಾ ಬಸವಣ್ಣ ಎನ್ನ ಪೃಥ್ವೀ ಸಂಬಂಧವಾದ ಅಷ್ಟಾದಶ ಪದಾರ್ಥಂಗಳ ಕೈಕೊಂಡು ಆಚಾರಲಿಂಗವಾಗಿ ಎನ್ನ ಭಕ್ತಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಅಪ್ಪುಸಂಬಂಧವಾದ ಅಷ್ಟಾದಶಪದಾರ್ಥಂಗಳ ಕೈಕೊಂಡು ಗುರುಲಿಂಗವಾಗಿ ಎನ್ನ ಮಹೇಶ್ವರ ಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಅಗ್ನಿಸಂಬಂಧವಾದ ಅಷ್ಟಾದಶ ಪದಾರ್ಥಂಗಳ ಕೈಕೊಂಡು ಶಿವಲಿಂಗವಾಗಿ ಎನ್ನ ಪ್ರಸಾದಿ ಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ವಾಯುಸಂಬಂಧವಾದ ಅಷ್ಟಾದಶ ಪದಾರ್ಥಂಗಳ ಕೈಕೊಂಡು ಜಂಗಮಲಿಂಗವಾಗಿ

ಎನ್ನ ಪ್ರಾಣಲಿಂಗಿ ಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಆಕಾಶಸಂಬಂಧವಾದ ಅಷ್ಟಾದಶ ಪದಾರ್ಥಂಗಳ ಕೈಕೊಂಡು ಪ್ರಸಾದ ಲಿಂಗವಾಗಿ ಎನ್ನ ಶರಣಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಎನ್ನ ಆತ್ಮಸಂಬಂಧವಾದ ಅಷ್ಟಾದಶ ಪದಾರ್ಥಂಗಳ ಕೈಕೊಂಡು ಮಹಾಲಿಂಗವಾಗಿ ಎನ್ನ ಐಕ್ಯಸ್ಥಲದಲ್ಲಿ ಮೂರ್ತಿಗೊಂಡನಯ್ಯಾ ಬಸವಣ್ಣ. ಇಂತೀ ನಾನಾ ಪ್ರಕಾರವನೊಳಕೊಂಡ ಬಸವಣ್ಣನೇ ಇಷ್ಟ ಬ್ರಹ್ಮವೆನಗೆ. ಆಯುಷ್ಯಬ್ರಹ್ಮವೇ ಎನ್ನ ಅಂಗ ಮನ ಪ್ರಾಣ ಇಂದ್ರಿಯ ಸಕಲ ಕರಣಂಗಳ ಕೊನೆಯ ಮೊನೆಯ ಮೇಲೆ ಥಳಥಳನೆ ಬೆಳಗುತ್ತಿಪ್ಪ ಭೇದವನು ಸಿದ್ಧೇಶ್ವರನೆನಗೆ ಅರುಹಿದ ಕಾರಣ ಪರಂಜ್ಯೋತಿ ಮಹಾಲಿಂಗ ಗುರು ಸಿದ್ಧಲಿಂಗ ಪ್ರಭುವಿನಲ್ಲಿ ಉರಿವುಂಡ ಕರ್ಪುರದಂತಾದೆನಯ್ಯಾ ಬೋಳಬಸವೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ.

---

(೮) ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು ಎನ್ನ ಅಂತರಂಗ ಬಹಿರಂಗವ ಶುದ್ಧಾತ್ಮನ ಮಾಡಿದನಯ್ಯಾ ಮಡಿವಾಳಯ್ಯ. ಎನ್ನ ಸಾಕಾರ ಮೂರು ಮೂರು, ಹದಿನೆಂಟು ಹದಿನೆಂಟು ಪ್ರಕಾರವನೊಳಕೊಂಡು ಎನ್ನ ನಿರಾಕಾರ ಮೂರು ಮೂರು, ಹದಿನೆಂಟು ಹದಿನೆಂಟು ಪ್ರಕಾರವನೊಳಕೊಂಡು ಎನ್ನ ಅಂತರಂಗದಲ್ಲಿ ಸ್ವಾಯತವಾದನಯ್ಯಾ ಚೆನ್ನಬಸವಣ್ಣ. ನಿರಾಳ ನಿರ್ವಾಯ ನಿಃಶೂನ್ಯಬ್ರಹ್ಮವೇ ಉಭಯಸಂಗದಲ್ಲಿ ಸನ್ನಿಹಿತನಾದನಯ್ಯಾ ಪ್ರಭುದೇವರು. ಇಂತೀ ಅಂತರಂಗ ಬಹಿರಂಗ ಆತ್ಮಸಂಗವನರುಹಿ ಬೋಳಬಸವೇಶ್ವರನು ಸಿದ್ಧೇಶ್ವರನ ನಿಜಪದವನೊರೆದೊರೆದು ತೋರಿದ ಕಾರಣ ಎನ್ನ ತನು ಬಯಲಾಯಿತ್ತು ಎನ್ನ ಮನ ಬಯಲಾಯಿತ್ತು ಎನ್ನ ಪ್ರಾಣ ಬಯಲಾಯಿತ್ತು ಎನ್ನ ಇಂದ್ರಿಯ ಬಯಲಾಯಿತ್ತು ಎನ್ನ ವಿಷಯ ಬಯಲಾಯಿತ್ತು. ಇಂತಿವರೊಳಗೆ ನಾನು ಬಯಲಾದೆನು. ಪರಂಜ್ಯೋತಿ ಮಹಾಲಿಂಗ ಗುರು ಸಿದ್ಧಲಿಂಗಪ್ರಭುವಿನಲ್ಲಿ ಹಿಂದು ಮುಂದು ಎಡ ಬಲ ಆಡಿಯಾಕಾಶವೆಂಬವನರಿಯದೆ ಮುಳುಗಿ ನಿಶ್ಶಬ್ದ ಬ್ರಹ್ಮಮುಚ್ಯತೆ ಎಂಬ ನುಡಿಯಡಗಿತಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ.

ವಿಜಾಪುರ ಜಿಲ್ಲೆಯ ದಕ್ಷಿಣ ಭಾಗದಲ್ಲಿರುವ ಮಲಪ್ರಭಾ, ಘಟಪ್ರಭಾ, ಮತ್ತು ಕೃಷ್ಣಾನದಿಗಳು ಮತ್ತು ನಿಜಾಮನ ರಾಜ್ಯದಲ್ಲಿರುವ ಕೃಷ್ಣಾ, ಭೀಮಾ, ತುಂಗಭದ್ರಾ ನದಿಗಳು ಇದ್ದ ಪ್ರದೇಶಗಳು ವಿಜಾಪುರ ಬಾದಶಹರ ರಾಜ್ಯದ ಮೇರೆಯಲ್ಲಿದ್ದು ಅವು ಅವರಿಗೆ ಆಯಕಟ್ಟಿನ ಸ್ಥಾನಗಳಾದದ್ದರಿಂದ ಅಲ್ಲಿದೇಸಗತಿಗಳು ಅನೇಕವಿದ್ದು ಅವು ಮಹತ್ವದವೂ ಇರುತ್ತವೆ. ಈ ದೇಸಗತಿಯವರು ಯುದ್ಧಕ್ಕೆ ಯಾವಾಗಲೂ ಸಿದ್ಧರಾಗಿರಬೇಕಾಗುತ್ತಿತ್ತು. ಇಲ್ಲಿಯ ರಕ್ಕಸಗಿ, ಕೆಲೂರ, ಕರಡಿ, ಅಮರಾವತಿ, ಹುಲ್ಲಳ್ಳಿ, ಹುಲ್ಯಾಳ, ಸುಳ್ಳ, ಸಿರಗುಪ್ಪಿ, ಈ ಗ್ರಾಮಗಳ ವೀರಶೈವ ದೇಸಗತಿಗಳೂ, ಮೊದಲು ಬೇಡರಿದ್ದರೂ ಹಿಂದುಗಡೆ ವೀರಶೈವವನ್ನು ಹೊಂದಿದ ಐಹೊಳೆ ದೇಸಗತಿಯೂ, ಇವರಂತೆಯೇ ಇರುವ ಛತ್ರಿಯರಾದ ಕೋಟೆಕಲ್ಲಿನ ದೇಸಗತಿಯೂ, ಛತ್ರಿಯರಾದ ನೀರಬೂದೀಹಾಳ, ಬೇಡರಾದ ಜಾಲೀಹಾಳ ದೇಸಗತಿಗಳೂ, ರಡ್ಡೀ ಸಮಾಜಕ್ಕೆ ಹೊಂದಿದ ಕೆರಕಲಮಟ್ಟಿ ದೇಸಗತಿಯೂ, ಈ ಮೇರೆಯ ಪ್ರಾಂತದಲ್ಲಿ ಮಹತ್ವದವಾಗಿದ್ದವು. ಈಗ ನಿಜಾಮನ ರಾಜ್ಯದಲ್ಲಿರುವ ಸುರಪುರ, ದೇವದುರ್ಗ ಮತ್ತು ಗುಡುಗುಂಟಿ ಇವುಗಳಲ್ಲಿಯ ಬೇಡರ ರಾಜರು ವಿಜಾಪುರ ರಾಜ್ಯದ ಗಡಿಯನ್ನು ರಕ್ಷಿಸುವವರಾಗಿದ್ದರು. ಸುರಪುರ ಸಂಸ್ಥಾನದಲ್ಲಿ ನಿಶ್ಶೀ ಕಡ್ಲೆಪ್ಪ ಮತ್ತು ನಿಶ್ಶೀ ವೀರಪ್ಪ ಎಂಬುವರು ೫೦-೬೦ ವರ್ಷ ಪ್ರಧಾನಿಗಳಾಗಿ ಅತ್ಯುತ್ತಮ ರೀತಿಯಿಂದ ರಾಜ್ಯವಾಳಿದರು. ಈ ಎಲ್ಲ ದೇಸಗತಿಗಳ ಹೆಸರುಗಳನ್ನು ಮಾತ್ರ ನಾವು ಇಲ್ಲಿ ನಿರ್ದೇಶಮಾಡುತ್ತೇವೆ.

**ವಿಜಾಪುರ ಜಿಲ್ಲೆ:** (೧) ರಕ್ಕಸಗಿ (೨) ಕೋಲ್ಹಾರ (೩) ಎಳವೇಲಿ (೪) ಕೋಟೇಕಲ್ಲು (೫) ಐಹೊಳೆ (೬) ಪಟ್ಟದಕಲ್ಲು (೭) ಕೊಣ್ಣೂರ (೮) ಜಂಬಿಗಿ (೯) ಬಸರಕೋಡ (೧೦) ಹೊನ್ನೀಹಾಳ (೧೧) ಕಲಕೇರಿ (೧೨) ನಾಲತವಾಡ (೧೩) ಜೈನಾಪೂರ (೧೪) ಎಡೆಹಳ್ಳಿ (೧೫) ಬಲದಿನ್ನಿ (೧೬) ಸೊನ್ನ (೧೭) ಕೆಲೂರ (೧೮) ಕುಂಚಗನೂರ (೧೯) ಕೇಸಾಪೂರ (೨೦) ಕರಡಿ (೨೧) ಅಮರಾವತಿ (೨೨) ಹುಲ್ಯಾಳ (೨೩) ಹುಲ್ಲಳ್ಳಿ (೨೪) ಟಕ್ಕಳಕಿ (೨೫) ಯರಝರಿ (೨೬) ಸುಳ್ಳ (೨೭) ಶಿರಗುಪ್ಪಿ (೨೮) ಹುಲಗಿನಹಾಳ (೨೯) ಮದರಿ (೩೦) ಕಡಿವಾಲ ಇವೆಲ್ಲವೂ ವೀರಶೈವ ದೇಸಗತಿಗಳು. (೩೧) ಗಣಿ (೩೨)

ನೀರಬೂದಿಹಾಳ ಇವು ಛತ್ರಿಯರವು (೩೩) ಕೆರಕಲಮಟ್ಟಿ ಇದು ರೆಡ್ಡಿಗಳದು (೩೪) ಮನ್ನೀಕೇರಿ ಇದು ಬ್ರಾಹ್ಮಣರದು ಇರುತ್ತವೆ.

**ಕಲಬುರ್ಗಿ ಜಿಲ್ಲೆ:—** (೧) ಕೋಡಂಗಲ್ಲು (೨) ಕಲ್ಲೂರು (೩) ಯಾಗಂಟಿ (೪) ಮದನಾ (೫) ಚಿಂತಪಳ್ಳಿ (೬) ಕಕ್ಕಲವಾರ (೭) ಮಲಖೇಡ (೮) ಚಿಟಗುಪ್ಪಾ (೯) ಬಿಜಾಸಪುರ (೧೦) ಹೆಮ್ಮ ನೂರು (೧೧) ನೀರಗುಡಿ (೧೨) ಹಿರೋಳಿ (೧೩) ಖೈರಾಟ (ಸಂ ಅಕ್ಕ ಲಕೋಟ) ಈ ಪ್ರಕಾರ ವೀರಶೈವ ದೇಸಗತಿಗಳು ಇಲ್ಲಿ ಇರುತ್ತವೆ.

**ರಾಯಚೂರ ಜಿಲ್ಲೆ:—** ಇಲ್ಲಿ ಇರುವ ವೀರಶೈವ ದೇಸಗತಿ ಗಳು (೧) ಮೊದಕಿನಹಾಳ (೨) ಹುದಗಬಾಳ (೩) ಇಟಗಿ (೪) ಆಗೆದಾಳ (೫) ಗೆಜ್ಜಲಗಟ್ಟಿ (೬) ಚಳ್ಳಗಿರಿ (೭) ಶಾಂತಗಿರಿ (೮) ಉಂಗಲೂಟಿ (೯) ಕಾಟಾಪೂರ (೧೦) ಉದಬಾಳ (೧೧) ಜವಳಗೇರಿ (೧೨) ಪೋತನಾಳು (೧೩) ಜೀನೂರ (೧೪) ಬೆಳವಿನೂರ (೧೫) ಪಾಮನಕಲ್ಲೂರ (೧೬) ಮಚೇಡು (೧೭) ಗಣೇಕಲ್ಲು (೧೮) ನೀರ ಲಕೇರಿ ಈ ಪ್ರಕಾರ ಇರುತ್ತವೆ. ಬೇಡರ ಸಂಸ್ಥಾನಗಳು (೧೯) ಸುರ ಪುರ (೨೦) ದೇವದುರ್ಗ (೨೧) ಗುಡಗುಂಟಿ ಹೀಗೆ ಇರುತ್ತವೆ.

**ಇತರ ನಿಜಾಮನ ರಾಜ್ಯ:—** ಬೀದರ ಜಿಲ್ಲೆಯಲ್ಲಿ (೧) ಬೀದರ (೨) ಖಡಕಾ (೩) ಭಾಲಕಿ; ಕೊಪ್ಪಳಜಿಲ್ಲೆಯಲ್ಲಿ (೪) ಮುಧೋಳ; ನಾಂದೇಡ ಜಿಲ್ಲೆಯಲ್ಲಿ (೫) ದೇಲೋಲಿ; ನಿಜಾಮಾಬಾದ ಜಿಲ್ಲೆಯಲ್ಲಿ (೬) ಬೋಧನ್; ಆದಲಾ ಜಿಲ್ಲೆಯಲ್ಲಿ (೭) ಗುರಜ; ಆತರಫಾ ಬಾಲ್ದಾ ಜಿಲ್ಲೆಯಲ್ಲಿ (೮) ಧಾರೂರ; ಹೈದ್ರಾಬಾದಿನ ಸಮೀಪದಲ್ಲಿ (೯) ಮುಧೋಳ ಈ ಪ್ರಕಾರ ವೀರಶೈವ ದೇಸಗತಿಗಳು ಬೇರೆ ಬೇರೆ ಜಿಲ್ಲೆಗಳಲ್ಲಿರುತ್ತವೆ. ಇವೆಲ್ಲವೂ ಬಹುತರವಾಗಿ ವಿಜಾಪುರ ಅಥವಾ ಬೀದರ ಬಾದಶಹರ ಕಾಲದಲ್ಲಿ ಉತ್ಪನ್ನವಾಗಿರುತ್ತವೆ.

ಈ ದೇಸಗತಿಗಳಲ್ಲಿ ಅನೇಕ ಶೂರಪುರುಷರೂ, ಮುತ್ಸದ್ದಿಗಳೂ, ವಿದ್ವಾಂಸರೂ ಆಗಿಹೋಗಿದ್ದು ಅವರ ವೃತ್ತಾಂತವನ್ನು ನಾವು ಮುಂದೆ ವಿವರಿಸುವೆವು.

## ದುರ್ಗಗಳ ಮತ್ತು ಕೋಟೆಗಳ ನಿರ್ಮಾಣ.

ಈ ದೇಸಗತಿಗಳು ಇದ್ದ ಕರ್ನಾಟಕ ಭಾಗದ ಪೂರ್ವಕ್ಕೆ ನಿಜಾಮನು, ಉತ್ತರಕ್ಕೆ ಪೇಶ್ವೆಯವರು ಮತ್ತು ದಕ್ಷಿಣಕ್ಕೆ ಹೈದರಲ್ಲಿ ಮತ್ತು ಟೀಪುಸುಲ್ತಾನರು ಇವರ ಪ್ರಬಲವಾದ ರಾಜ್ಯಗಳಿದ್ದದರಿಂದ ಅವುಗಳನ್ನು ಎದುರಿಸುವಷ್ಟು ಸಾಮರ್ಥ್ಯವು ಇವುಗಳಲ್ಲಿ ಯಾವುದಕ್ಕೂ ಇರಲಿಲ್ಲ. ದೇಶದಲ್ಲಿ ಅಶಾಂತತೆ ಇದ್ದದರಿಂದ ಅವುಗಳ ಅಧಿಪತಿಗಳು ಅಲ್ಲಲ್ಲಿ ದುರ್ಗಮವಾದ ಕೋಟೆಗಳನ್ನು ಕಟ್ಟಿಕೊಂಡು ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳುವ ಸ್ಥಿತಿಯು ಪ್ರಾಪ್ತವಾಯಿತು. ದಕ್ಷಿಣದಲ್ಲಿ ಧಾರವಾಡ, ಕಿತ್ತೂರ ಮತ್ತು ಬಂಕಾಪೂರ ಈ ಗ್ರಾಮುಗಳಲ್ಲಿ ಬಲವಾದ ನೆಲಕೋಟೆಗಳುಂಟಾದವು. ಮಧ್ಯ ಸೀಮೆಯಲ್ಲಿ ಪರಸಗಡ ಅಥವಾ ಸವದತ್ತಿ, ನರಗುಂದ, ಮತ್ತು ಬದಾಮಿ ಇಲ್ಲಿಯ ಬಿಕ್ಕಟ್ಟಿನ ಮತ್ತು ಕಡಿದಾದ ಬೆಟ್ಟಗಳ ಮೇಲೆ ಬಲವಾದ ಕೋಟೆಗಳು ಕಟ್ಟಲ್ಪಟ್ಟವು. ಬಳ್ಳಾರಿ ಜಿಲ್ಲೆಯಲ್ಲಿ ಕೊಪ್ಪಳ ಮತ್ತು ಬಹಾದ್ದೂರಬೆಂಡಾ ಈ ಸ್ಥಳಗಳಲ್ಲಿ ದುರ್ಗಮವಾದ ದುರ್ಗಗಳು ಉಂಟಾದವು. ಇವಲ್ಲದೆ ಅಲ್ಲಲ್ಲಿ ಸಣ್ಣ ಸಣ್ಣ ಕೋಟೆಗಳು ಉಂಟಾಗಿ ಜನರು ಇವುಗಳ ಆಶ್ರಯವನ್ನು ಹಿಡಿದುಕೊಂಡು ಕಳ್ಳಕಾಕರ ಮತ್ತು ಪರರಾಜರ ದಾಳಿಗಳಿಂದ ತಮ್ಮ ಸಂರಕ್ಷಣೆಯನ್ನು ಮಾಡಿಕೊಳ್ಳಬೇಕಾಯಿತು.

## ವ್ಯಾಪಾರೋದ್ಯೋಗಗಳು.

ಈ ಪ್ರಕಾರ ಬಲಾಢ್ಯ ರಾಜರು ಮೇಲಿರದಿದ್ದರೂ, ಅಲ್ಲಲ್ಲಿಯ ದೇಸಗತಿಯವರು ತಮ್ಮ ತಮ್ಮ ಭಾಗಗಳಲ್ಲಿ ಸುವ್ಯವಸ್ಥೆಯನ್ನಿಟ್ಟುಕೊಂಡು ತಮ್ಮ ಆಡಳಿತೆಯನ್ನು ಸಾಗಿಸುತ್ತ ಬರುತ್ತಿದ್ದದ್ದು ಕಂಡು ಬರುತ್ತದೆ. ಈ ಕಠಿಣ ಕಾಲದಲ್ಲಿ ಸಾಮಾನ್ಯಜನರೂ ಗ್ರಾಮಾಧಿಕಾರಿಗಳೂ ದೇಸಗತಿಯವರೂ ಪರಸ್ಪರ ಸಹಕಾರದಿಂದ ವರ್ತಿಸುತ್ತಿದ್ದದರಿಂದ ದೇಶದಲ್ಲಿ ಅಂತಸ್ಥ ಶಾಂತತೆಯು ಇರುತ್ತಿತ್ತು. ಇಷ್ಟೇಅಲ್ಲ, ಈ ಭಾಗಗಳಲ್ಲಿ ಉಂಟಾಗುತ್ತಿದ್ದ ಜೀನಸುಗಳ ವ್ಯಾಪಾರವು ಕಾರವಾರ ಜಿಲ್ಲೆಯ ಬಂದರಗಳ ಮೂಲಕ ಪರದೇಶಗಳ ಕೂಡ ಅವ್ಯಾಹತವಾಗಿ ನಡೆಯುತ್ತಿತ್ತು. ಕೆಳದಿ ಮತ್ತು ಸ್ವಾದಿ ಅರಸರ ಸುವ್ಯವಸ್ಥಿತ ರಾಜ್ಯಗಳು

ಸಮುದ್ರ ದಂಡೆಗುಂಟ ಮಧ್ಯಮಾರ್ಗದಲ್ಲಿದ್ದುದರಿಂದ ವ್ಯಾಪಾರಾಭಿವೃದ್ಧಿಗೆ ಬಹಳ ಸಹಾಯವಾಯಿತು. ಆದ್ದರಿಂದ ಮಹತ್ವದ ಅನೇಕ ವ್ಯಾಪಾರೀ ಪಟ್ಟಣಗಳು ಉತ್ತರ ಕರ್ನಾಟಕವಲ್ಲಿ ಉತ್ಪನ್ನವಾದವು. ಅವು. ಯಾವವೆಂದರೆ, ದಕ್ಷಿಣದಲ್ಲಿ ಹಾವೇರಿ, ಬ್ಯಾಡಗಿ,ಶಿರಸಿ ಈ ಪಟ್ಟಣಗಳು, ಮಧ್ಯಭಾಗದಲ್ಲಿ ಹುಬ್ಬಳ್ಳಿ, ನಂದಗಡ, ಸಾಂಬ್ರಾಣಿ, ಹಲ್ಯಾಳಗಳು, ಉತ್ತರದಲ್ಲಿ ಗೋಕಾವಿ ಮತ್ತು ಅಥಣಿ ಗ್ರಾಮಗಳು ಅಭಿವೃದ್ಧಿಗೆ ಬಂದವು. ಇವೆಲ್ಲವು ಈ ೧೭ನೇ ೧೮ನೇ ಶತಮಾನಗಳಲ್ಲಿ ಒಳ್ಳೇ ಶ್ರೀಮಂತಿಕೆಯನ್ನ ಪಡೆದವು. ಒಂದು ಕಾಲದಲ್ಲಿ ಶಿವಾಜಿಯು ಹುಬ್ಬಳ್ಳಿಯನ್ನೂ ಸಂಭಾಜಿಯು ಕಾರವಾರ ಜಿಲ್ಲೆಯ ಬಂದರಗಳನ್ನೂ ಕೊಲ್ಲಾಪುರದ ರಾಜರು ಮತ್ತು ಪಟವರ್ಧನರು ಗೋಕಾವಿಯನ್ನೂ ಆಗಿಂದಾಗ್ಗೆ ಸುಲಿಯಲಿಕ್ಕೆ ಮೊದಲು ಮಾಡಿದ್ದು ಕಂಡುಬರುತ್ತದೆ. ಉತ್ತರ ಕರ್ನಾಟಕದ ವ್ಯಾಪಾರವು ಕಾರವಾರ, ಮಿರ್ಜಾನ, ಹೊನ್ನಾವರ, ಭಟಕಳ, ಈ ಬಂದರಗಳ ಮಾರ್ಗವಾಗಿ ನಡೆಯುತ್ತಿತ್ತು. ಈ ಬಂದರಗಳಲ್ಲಿ ಪೋರ್ತುಗೀಜರು ಇಂಗ್ಲಿಷರು ಮತ್ತು ಅರಬರು ತಮ್ಮ ತಮ್ಮ ಅಂಗಡಿಗಳನ್ನು ಸ್ಥಾಪಿಸಿಕೊಂಡು ಕರ್ನಾಟಕದ ಮುಖ್ಯ ಸರಕುಗಳನ್ನು ಪರದೇಶಗಳಿಗೆ ಕಳಿಸುತ್ತಿದ್ದರು.

## ವಾಙ್ಮಯಾಭಿವೃದ್ಧಿಯ ಕಾರ್ಯಗಳು.

ಇಂಥ ಸ್ಥಿತಿಯಲ್ಲಿ ವಾಙ್ಮಯಾಭಿವೃದ್ಧಿಯ ಕಾರ್ಯಗಳು ಸರಿಯಾಗಿ ನಡೆಯುವದು ದುಸ್ತರವೇ ಸರಿ. ಆದರೂ ಹಲಕೆಲವು ಪ್ರಸಿದ್ಧ ಗ್ರಂಥಕಾರರು ಈ ಕಾಲದಲ್ಲಿ ಇಲ್ಲಿ ಉಂಟಾಗಿದ್ದಾರೆ. ಕಿತ್ತೂರ ಸಂಸ್ಥಾನಿಕರು ಗ್ರಂಥಕಾರರಿಗೆ ಬಹಳ ಉತ್ತೇಜನವನ್ನು ಕೊಡುತ್ತಿದ್ದರು. ರಾಘವಾಂಕನ ಕಾವ್ಯವನ್ನು ಬರೆದ ಸಿದ್ಧ ನಂಜೇಶನು ಸವದತ್ತಿಗೆ ಸಮೀಪವಿರುವ ಹೂಲೀ ಗ್ರಾಮದವನು. ಪ್ರೌಢರಾಯನ ಕಾವ್ಯವನ್ನು ಬರೆದ ಅದ್ರೀಶ ಕವಿಯು ವಿಜಾಪುರ ಜಿಲ್ಲೆಯಲ್ಲಿರುವ ಕೊಲ್ಹಾರ[೧] ದೇಸಾಯರು. ಹೀಗೆ ಹಲಕೆಲವು ಗ್ರಂಥಕಾರರು ಕಂಡು ಬಂದರೂ ದಕ್ಷಿಣ ಕರ್ನಾಟಕದಲ್ಲಿಯಂತೆ ಈ ಭಾಗದಲ್ಲಿ ವೀರಶೈವ

---

(೧) ಕೆಲವರು ಕೊಲ್ಹಾರ ಎಂದರೆ ಕೊಲ್ಲಾಪುರವೆಂದು ತಿಳಿದಿದ್ದು. ಇದು ತಪ್ಪು.

ಗ್ರಂಥಕಾರರಾಗಲಿ ಇಲ್ಲವೆ ಬ್ರಾಹ್ಮಣ, ಜೈನ ಗ್ರಂಥಕಾರರಾಗಲಿ ಆದದ್ದು ಬಹಳ ಕಡಿಮೆ.

## ಮಠಾಧಿಕಾರಿಗಳ ಯುಗವು.

ಆದರೆ ನಾವು ಹಿಂದೆ ಹೇಳಿದಂತೆ ಈ ಕಾಲವು ಮಠಾಧಿಕಾರಿಗಳ ಯುಗವೆಂದು ಹೇಳಬಹುದು. ದಕ್ಷಿಣ ಕರ್ನಾಟಕದಲ್ಲಿಯಂತೆಯೇ ಈ ಭಾಗದಲ್ಲಿ ಅನೇಕ ಮಹತ್ವದ ಧಾರ್ಮಿಕ ಪುರುಷರು ಈ ಶತಮಾನಗಳಲ್ಲಿ ಆಗಿಹೋಗಿದ್ದಾರೆ. ಬೆಳಗಾವ ಜಿಲ್ಲೆಯಲ್ಲಿ ದುರುದುಂಡಿ ಮತ್ತು ನಿಡಸೋಸಿ ಮಠಗಳು, ಹಾಗೆಯೇ ಅಂಕಲಗಿ ಮಠವು ಮತ್ತು ಕಾಡಸಿದ್ಧೇಶ್ವರರ ಕೊಣ್ಣೂರ ಸಿದ್ಧಗಿರಿ ಎಡೂರ ಮಠಗಳು, ಕಿತ್ತೂರಲ್ಲಿಯ ಕಲ್ಮಠವು, ಹೀಗೆ ಅನೇಕ ಮಹತ್ವದ ಮಠಗಳು ಉಂಟಾಗಿರುತ್ತವೆ. ಧಾರವಾಡ ಜಿಲ್ಲೆಯಲ್ಲಿ ಹುಬ್ಬಳ್ಳಿ, ಗದಗ, ಇಲ್ಲಿಯ ಸಿಂಹಾಸನ ಮಠಗಳೂ, ಶಿರಹಟ್ಟಿ, ಮುಂಡರಗಿಯಲ್ಲಿಯ ಪ್ರಸಿದ್ಧ ಮಠಗಳೂ ಮುಂದೆ ಬಂದವು. ವಿಜಾಪುರ ಜಿಲ್ಲೆಯಲ್ಲಿ ಸಾರಂಗದೇವರ ಅನೇಕ ಮಠಗಳು ಮಹತ್ವದ ಧಾರ್ಮಿಕ ಕಾರ್ಯಗಳನ್ನು ಮಾಡಿವೆ. ನೀಲಗುಂದ ಇಲ್ಲಿಯ ಶಿವಪ್ಪಯ್ಯನ ಮಠವು, ಚಿತ್ತರಗಿಯ ಮಹಾಂತ ಸ್ವಾಮಿಗಳ ಮಠವು, ತಾಳೀಕೋಟೆಯ ಖಾಸಗತ ಸ್ವಾಮಿಗಳ ಮಠವು, ಹೀಗೆ ಮಹತ್ವದ ಮಠಗಳು ವಿಜಾಪುರ ಜಿಲ್ಲೆಯಲ್ಲಿ ಉಂಟಾಗಿ ಅವುಗಳ ಶಾಖೋಪಶಾಖೆಗಳು ವಿಜಾಪುರ ಜಿಲ್ಲೆ ಮತ್ತು ನಿಜಾಮ ಇಲಾಖೆಯಲ್ಲಿ ಪಸರಿಸಿರುತ್ತವೆ. ಇದೇಪ್ರಕಾರ ನಿಜಾಮ ಇಲಾಖೆಯಲ್ಲಿ ಸಹ ಕೊಪ್ಪಳ, ನೇರಡಗುಂಭ ಮೊದಲಾದ ಅನೇಕ ಮಹತ್ವದ ಮಠಾಧೀಶರು ಆಗಿರುತ್ತಾರೆ. ಇವರ ಮೂಲಕ ಉತ್ತರ ಕರ್ನಾಟಕದಲ್ಲಿ ವೀರಶೈವ ಸಂಸ್ಕೃತಿಯು ಆಗಿಂದಾಗ್ಗೆ ಉತ್ತೇಜನ ಹೊಂದುತ್ತ ಬಂದಿರುತ್ತದೆ.

# ೧೫ ನೇ ಪ್ರಕರಣ.

## ಕೆಳದಿಯ ರಾಜರು.

ಕೆಳದಿಯ ರಾಜರು ಈಗ ಶಿವಮೊಗ್ಗೆ ಜಿಲ್ಲೆಯಲ್ಲಿರುವ ಕೆಳದಿ, ಇಕ್ಕೇರಿ ಮತ್ತು ಬಿದನೂರುಗಳನ್ನು ಬೇರೆ ಬೇರೆ ಕಾಲಗಳಲ್ಲಿ ತಮ್ಮ ರಾಜಧಾನಿಗಳನ್ನಾಗಿ ಮಾಡಿಕೊಂಡು, ೧೪೯೯ರಿಂದ ೧೭೬೩ ವರೆಗೆ ೨೬೫ ವರುಷ ರಾಜ್ಯವಾಳಿದರು. ಈ ರಾಜವಂಶದಲ್ಲಿ ಒಟ್ಟು ೧೮ ಜನರು ರಾಜರಾಗಿದ್ದು, ಅವರು ಯಾವಾಗಲೂ ವೀರಶೈವ ಧರ್ಮವನ್ನು ಪಾಲಿಸುತ್ತ ಬಂದಿದ್ದಾರೆ. ಅವರ ಹೆಸರುಗಳನ್ನು ನಾವು ಕೆಳಗೆ ಕೊಟ್ಟಿದ್ದೇವೆ.

೧. ಚೌಡಪ್ಪನಾಯಕ--ಮೂಲಪುರುಷನು --೧೪೯೯—೧೫೧೩

೨. ಸದಾಶಿವನಾಯಕ--೧ನೆಯವನ ಮಗನು--೧೫೧೩—೧೫೪೫

೩. ೧ನೇ ಸಂಕಣ್ಣನಾಯಕ--೨ನೆಯವನ ಮಗ--೧೫೪೫—೧೫೫೮

೪. ೨ನೇ ಸಂಕಣ್ಣನಾಯಕ--೩ನೆಯವನ ತಮ್ಮ-೧೫೫೮—೧೫೭೦

೫. ರಾಮರಾಜನಾಯಕ--೩ನೆಯವನ ಮಗ --೧೫೭೦—೧೫೮೨

೬. ೧ನೇ ವೆಂಕಟಪ್ಪನಾಯಕ-೫ನೆಯವನ ತಮ್ಮ-೧೫೮೨—೧೬೨೯

೭. ವೀರಭದ್ರನಾಯಕ--೬ನೆಯವನ ಮೊಮ್ಮಗ--೧೬೨೯—೧೬೪೫
ಇವನ ತಂದೆಯ ಹೆಸರು ಭದ್ರಪ್ಪ

೮. ಶಿವಪ್ಪನಾಯಕ--ನಾಲ್ಕನೆಯವನ ಮೊಮ್ಮಗ--೧೬೪೫—೧೬೬೦
ಇವನ ತಂದೆಯ ಹೆಸರು—ಸಿದ್ದಪ್ಪ

೯. ೨ನೇ ವೆಂಕಟಪ್ಪನಾಯಕ-೮ನೆಯವನ ತಮ್ಮ-೧೬೬೦—೧೬೬೧

೧೦ ಭದ್ರಪ್ಪನಾಯಕ--೮ನೆಯವನ ಮಗ --೧೬೬೧—೧೬೬೩

೧೧. ಸೋಮಶೇಖರನಾಯಕ-೧೦ನೆಯವನ ತಮ್ಮ-೧೬೬೩—೧೬೭೧

೧೨. ಚೆನ್ನಮ್ಮಾಜಿ-೧೧ನೆಯವನ ವಿಧವೆ -.೧೬೭೧—೧೬೯೭

೧೩. ೧ನೇ ಬಸವಪ್ಪ -೧೨ನೆಯವಳ ದತ್ತಕ ಮಗನು --೧೬೯೭—೧೭೧೪

೧೪. ೨ನೇ ಸೋಮಶೇಖರನಾಯಕ-೧೩ನೆಯವನ -೧೭೧೪ — ೧೭೩೯
ಮಗ

೧೫. ೨ನೇ ಬಸವಪ್ಪನಾಯಕ-೧೪ನೆಯವನ -೧೭೩೯—೧೭೫೪
ತಮ್ಮನ ಮಗ-ಮತ್ತುವೀರಭದ್ರಪ್ಪನಾಯಕನ ಮಗ

೧೬. ಚನ್ನಬಸಪ್ಪನಾಯಕ-೧೫ನೆಯವನ --೧೭೫೪ — ೧೭೫೭
ದತ್ತಕ ಮಗ

೧೭. ವೀರಮ್ಮಾಜಿ-೧೫ನೆಯವನ ವಿಧವೆ ೧೭೫೭—೧೭೬೩

೧೮. ೩ನೇ ಸೋಮಶೇಖರ ನಾಯಕ ಸಂಸ್ಥಾನವು ಹೈದರ
೧೭ನೆಯವಳ ದತ್ತಕ ಮಗನು ನಾಯಕನಿಂದ ಆಕ್ರ
ಮಿಸಲ್ಪಟ್ಟಿತು.

ಈ ರಾಜರಲ್ಲಿ ಅತ್ಯಂತ ಖ್ಯಾತಿಯನ್ನು ಪಡೆದವರು (೧) ಚೌಡಪ್ಪನಾಯಕ (೨) ಸದಾಶಿವ ನಾಯಕ (೩) ೧ನೇ ಸಂಕಣ್ಣನಾಯಕ (೪) ೧ನೇ ವೆಂಕಟಪ್ಪ ನಾಯಕ (೫) ಶಿವಪ್ಪ ನಾಯಕ (೬) ಭದ್ರಪ್ಪ ನಾಯಕ (೭) ಚನ್ನಮ್ಮಾಜಿ (೮)೧ನೇ ಬಸಪ್ಪನಾಯಕ (೯) ೨ನೇ ಸೋಮಶೇಖರ ನಾಯಕ ಈ ಪ್ರಕಾರ ಇರುತ್ತಾರೆ.

**ಚೌಡಪ್ಪನಾಯಕ:—** ಶಿವಮೊಗ್ಗೆ ಜಿಲ್ಲೆಯಲ್ಲಿರುವ ಕೆಳದಿ ಎಂಬ ಗ್ರಾಮಕ್ಕೆ ಸಮೀಪವಾಗಿ ಪಳ್ಳಿಯಬಯಲು ಎಂಬ ಗ್ರಾಮವಿದ್ದು ಅಲ್ಲಿ ಬಸಪ್ಪ ಮತ್ತು ಅವನ ಸತಿಯಾದ ಬಸವಾಂಬೆ ಎಂಬವರು ಇರುತ್ತಿರಲು ಅವರಿಗೆ ಚೌಡಪ್ಪನೆಂಬುವನೊಬ್ಬ ಪುತ್ರನು ಜನಿಸಿದನು. ಚೌಡಪ್ಪನು ಯೌವ್ವನಸ್ತನಾದ ಬಳಿಕ ಒಂದು ದಿನ ಅವನ ಸ್ವಪ್ನದಲ್ಲಿ ಕೆಳದಿಗೆ ಸಮೀಪವಿರುವ ಸೀಗೆವಳ್ಳಿ ಎಂಬ ಸ್ಥಳದಲ್ಲಿ ರಾಮೇಶ್ವರನೆಂಬ ದಿವ್ಯಲಿಂಗವಿದೆ, ಅದು ಭೂಮಿಯಲ್ಲಿ ಹುಗಿದಿದ್ದು ಅದನ್ನು ಹೊರಗೆ ತೆಗೆದು ಅದರ ಪೂಜಾರ್ಚನೆಗಳನ್ನಳವಡಿಸು, ಅದರಮೇಲೆ ನಿನ್ನ ಮನೆಯ ಆಕಳು ದಿನಾಲು ಹಾಲು ಕರೆವುತ್ತಿದೆ, ಇದೇ ಆ ಸ್ಥಳದ ಗುರುತು ಎಂದು ಒಬ್ಬ ವೃದ್ಧ ಜಂಗಮನು ಹೇಳಲು, ಚೌಡಪ್ಪನು ಆ ರೀತಿ ಜರಗುತ್ತಿರುವುದನ್ನು ಅಲ್ಲಿ ಕಂಡು, ಭೂಮಿಯನ್ನು ಅಗಿದು ನೋಡಲು ಅಲ್ಲಿ ಒಂದು ಲಿಂಗವಿರುವುದನ್ನು ಕಂಡು, ಅದನ್ನು ಹೊರಗೆ ತೆಗೆದು, ಅದರ

ಮೇಲೆ ಒಂದು ತೃಣಕುಟಿಯನ್ನು ನಿರ್ಮಿಸಿ, ಅದು ರಾಮೇಶ್ವರ ಲಿಂಗವೆಂದು ಆರಾಧಿಸಹತ್ತಿದನು. ಮುಂದೆ ಈ ದೇವಾಲಯದ ಸಮೀಪದಲ್ಲಿ ಅವನಿಗೆ ಭೂಮಿಯಲ್ಲಿ ಒಂದು ನಿಧಿಯೂ ದೊರಕಲು, ಆದರ ಸಹಾಯದಿಂದ ಅವನು ಹೆಚ್ಚಾಗಿ ಭೂಮಿಯನ್ನು ಸಂಪಾದಿಸಿ ಅಭಿವೃದ್ಧಿ ಸ್ಥಿತಿಯನ್ನು ಹೊಂದುತ್ತ ಹೋದದ್ದಲ್ಲದೆ, ಪರಿಜನರನ್ನೂ ಅಂಗರಕ್ಷಕರನ್ನೂ ಇಟ್ಟುಕೊಂಡು ಸ್ವಲ್ಪಕಾಲದಲ್ಲಿ ಬಲಾಢ್ಯನೆನಿಸಿಕೊಂಡನು. ಆಗ ವಿಜಯನಗರದಲ್ಲಿ ಕೃಷ್ಣರಾಯನು ಆಳುತ್ತಿದ್ದು ಅವನು ಚೌಡಪ್ಪನ ಈ ವೃತ್ತಾಂತವನ್ನು ತಿಳಿದು ಅವನನ್ನು ತನ್ನಲ್ಲಿಗೆ ಬರಮಾಡಿಕೊಂಡು ಅವನಿಂದ ಎಲ್ಲ ಸಂಗತಿಗಳನ್ನು ತಿಳಿದವನಾಗಿ ಇವನು ಒಬ್ಬ ವರದೀ ಪುರುಷನೆಂದು ಭಾವಿಸಿ, ನೀನು ಒಬ್ಬ ಕಾರಣಪುರುಷನು, ನಿನ್ನ ಪ್ರಾಂತದಲ್ಲಿ ತುಂಟ ಜನರ ಪ್ರಾಬಲ್ಯವು ಹೆಚ್ಚಾಗಿದ್ದು ಅವರು ಜನರಿಗೆ ಬಹಳ ಉಪದ್ರವ ಕೊಡುತ್ತಾರೆ, ಅವರನ್ನು ತಗ್ಗಿಸಬೇಕೆಂದು ನಿಯಮಿಸಿ, ಅವನಿಗೆ ಉಡುಗೊರೆಗಳನ್ನು ಕೊಟ್ಟು ಕಳಿಸಲು, ಅವನು ತನ್ನ ಸೀಮೆಗೆ ಬಂದು ಹೆಚ್ಚಿಗೆ ಸೈನ್ಯವನ್ನು ಕೂಡಿಸಿ ದುಷ್ಟರನ್ನು ನಿಗ್ರಹಿಸುತ್ತ ಪರಾಕ್ರಮಶಾಲಿಯಾಗಿ ಹೆಚ್ಚುತ್ತ ಬಂದನು. ಆಗ ಕೃಷ್ಣರಾಯನು ಅವನನ್ನು ತನ್ನಲ್ಲಿಗೆ ಪುನಃ ಬರಮಾಡಿಕೊಂಡು ಅವನು ಮಾಡಿದ ಕಾರ್ಯಗಳನ್ನು ತಿಳಿದು ಸಂತುಷ್ಟನಾಗಿ ತನ್ನ ರಾಜ್ಯದ ಗಡಿಸೀಮೆಯನ್ನು ಸಂರಕ್ಷಿಸುವ ಭಾರವನ್ನು ಅವನಿಗೆ ವಹಿಸಿ, ಚಂದ್ರಗುತ್ತಿ, ಕೆಳದಿ ಈ ಮೊದಲಾದ ಎಂಟು ಮಾಗಣಿಗಳನ್ನು ಅವನಿಗೆ ಉಂಬಳಿಯಾಗಿ ಕೊಟ್ಟನು. ಆಗ ಚೌಡಪ್ಪನು ತನ್ನ ಗ್ರಾಮಕ್ಕೆ ತಿರುಗಿ ಬಂದು ತನಗೆ ದೊರಕಿದ ಭೂಮಿ ಸೀಮೆಯಲ್ಲಿ ನೆಲೆಯಾಗಿ ನಿಂತು, ಕೆಳದಿಯಲ್ಲಿ ಒಂದು ಬಲವಾದ ಕೋಟೆಯನ್ನೂ ಅರಮನೆಯನ್ನೂ ಕಟ್ಟಿಸಿ, ರಾಮೇಶ್ವರದೇವರಿಗೆ ಶಿಲಾಮಯವಾದ ಒಂದು ಗುಡಿಯನ್ನು ಕಟ್ಟಿಸಿದನು. ಚೌಡಪ್ಪನು ಹೀಗೆ ತನ್ನ ಸೀಮೆಯನ್ನು ಆಳುತ್ತಿರಲು ಮುಂದೆ ಅದರಲ್ಲಿಯೇ ಇದ್ದ ಇಕ್ಕೇರಿಯ ಗ್ರಾಮವನ್ನು ತನ್ನ ಮುಖ್ಯ ರಾಜಧಾನಿಯನ್ನಾಗಿ ಮಾಡಿಕೊಂಡು ಅಲ್ಲಿ ಕೋಟೆಯನ್ನೂ ಅರಮನೆಯನ್ನೂ ಕಟ್ಟಿಸಿ ಅಲ್ಲಿ ವಾಸಿಸಲಿಕ್ಕೆ ಹತ್ತಿದನು. ಈ ಪ್ರಕಾರ ಚೌಡಪ್ಪನು ಈ ಭಾಗದಲ್ಲಿ ರಾಜ್ಯವಾಳಿ ಕ್ರಿ. ಶ. ೧೫೧೦ರಲ್ಲಿ ಮರಣಹೊಂದಿದನು. ಈತನ ಸಮಾಧಿಯು

ಇಕ್ಕೇರಿಯ ಅರಮನೆಯಲ್ಲಿಯೇ ಇದೆ. ಈಪ್ರಕಾರ ಚೌಡಪ್ಪನು ವಿಜಯ ನಗರದ ರಾಜರಿಂದ ಮನ್ನಣೆಯನ್ನು ಹೊಂದಿ ಅವರ ಗಡಿನಾಡನ್ನು ರಕ್ಷಿಸುತ್ತ ಒಂದು ಭಾಗದ ಒಡೆಯನಾಗಿದ್ದನು. ಅವನು ಧಾರ್ಮಿಕನೂ ಶೂರನೂ ಆಗಿ ಒಂದು ಮಹತ್ವದ ರಾಜ್ಯದ ಸಂಸ್ಥಾಪಕನಾಗಿದ್ದಾನೆ.

**ಸದಾಶಿವನಾಯಕ:**—ಚೌಡಪ್ಪನಾಯಕನ ಮಗನಾದ ಸದಾಶಿವ ರಾಯನು ಅವನ ತರುವಾಯ ಪಟ್ಟವೇರಿದನು. ಇವನು ಬಹು ಪರಾಕ್ರಮಿಯು. ಇವನು ವಿಜಯನಗರದ ರಾಜರು ಮುಸಲ್ಮಾನರೊಡನೆ ನಡಿಸಿದ ಕಾಳಗಗಳಲ್ಲಿ ಅತ್ಯಂತ ಶೌರ್ಯವನ್ನು ತೋರಿಸಿದ್ದರಿಂದ ಅವರಿಂದ ಹೆಚ್ಚಿಗೆ ರಾಜ್ಯವನ್ನು ಸಂಪಾದಿಸಿದನು. ಕೆಳದೀರಾಜವಂಶದವರಿಗೆ ಅನೇಕ ಬಿರುದುಗಳಿದ್ದು ಅವುಗಳಲ್ಲಿ ಬಹುತರ ಎಲ್ಲವುಗಳನ್ನು ಈ ಸದಾಶಿವರಾಯನೇ ತನ್ನ ಸಾಮರ್ಥ್ಯದಿಂದ ದೊರಕಿಸಿಕೊಂಡಿದ್ದಾನೆ. ಸದಾಶಿವರಾಯನು ವಿಜಯನಗರದ ಕೃಷ್ಣರಾಜ, ಅಚ್ಯುತರಾಯ ಮತ್ತು ರಾಮರಾಜ ಇವರ ಮಹತ್ವದ ಆಳಿಕೆಗಳಿಗೆ ಒಳಪಟ್ಟು ಸಾಮಂತ ಭೂಪತಿಯಾಗಿ ಆಳುತ್ತಿದ್ದವರಿಂದ ಈ ರಾಜರು ಹೂಡಿದ ಅನೇಕ ಯುದ್ಧಗಳಲ್ಲಿ ಇವನು ಬಹು ಖ್ಯಾತಿಯನ್ನು ಪಡೆದನು. ಅವನು ಕೃಷ್ಣರಾಯನ ಅಪ್ಪಣೆಯ ಮೇರೆಗೆ ದಕ್ಷಿಣ ಕನ್ನಡ ಮತ್ತು ಮಲಾಬಾರ ಪ್ರಾಂತಗಳನ್ನು ಅಭಿಯೋಗಿಸಿ ಅಲ್ಲಿಯ ತುಳುವ ಅರಸರನ್ನು ಪಾದಾಕ್ರಾಂತ ಮಾಡಿದನು. ಮತ್ತು ತಾನು ಸಂಪಾದಿಸಿದ ಜಯದ ಕುರುಹಿಗಾಗಿ ಕಾಸರಗೋಡೆಯಲ್ಲಿ ಒಂದು ಜಯಸ್ತಂಭವನ್ನು ನಡಿಸಿದನು. ಕೆಳದಿ ರಾಜಧಾನಿಗೆ ಸಮೀಪವಿರುವ ಚಂದ್ರಗುತ್ತಿಯ ಸಾಳುನಾಯಕೇಂದ್ರ ಅಲ್ಲದೆ ಜಿಂಜಿಯ ಕೃಷ್ಣಪ್ಪನಾಯಕ ಮತ್ತು ಬಂಕಾಪುರದ ಮಾದಣ್ಣ ಒಡೆಯರು ಇವರು ಸ್ವತಂತ್ರವಾಗಿ ಆಳಹತ್ತಿದ್ದರಿಂದ ಅವರೆಲ್ಲರನ್ನು ಕೃಷ್ಣರಾಜನ ಅಪ್ಪಣೆಯ ಮೇರೆಗೆ ಗೆದ್ದು ಅವರ ಸೀಮೆಗಳನ್ನು ವಿಜಯನಗರದ ರಾಜ್ಯಕ್ಕೆ ಸೇರಿಸಿದನು. ಜಿಂಜಿಯ ಕೋಟೆಯನ್ನು ಸಾಧಿಸಿದ್ದರಿಂದ 'ಬಲವಂತ' ಎಂಬ ಬಿರುದನ್ನು ಹೊಂದಿದನು. ಮತ್ತು ಬಂಕಾಪುರವನ್ನು ತೆಗೆದುಕೊಂಡದ್ದಕ್ಕೋಸ್ಕರ ೧೮ ಕಂಪಣ ವಿಸ್ತಾರವಾದ ಪ್ರದೇಶವನ್ನು ಕೃಷ್ಣರಾಜನಿಂದ ಬಹುಮಾನವಾಗಿ ಪಡೆದನು. ಮುಂದೆ ರಾಮರಾಜನ ಆಳಿಕೆಯಲ್ಲಿ ಅಹಮ್ಮದನಗರ ಮತ್ತು ವಿಜಾಪುರ ಬಾದಶಹರ ಸಂಯುಕ್ತ ಸೇನೆಯೊಡನೆ ಯುದ್ಧ ಮಾಡುವ

ಪ್ರಸಂಗವು ಒದಗಿತು. ಆಗ ಜಮುಖಂಡಿಯ ನೆರೆಯಲ್ಲಿ ವಿಜಾಪುರ ಬಾದಶಹನ ದಂಡಿನೊಡನೆ ಯುದ್ಧವಾಗಲು ಮೊದಲು ವಿಜಯನಗರದ ದಂಡು ಹಿಂದೆಗೆಯುವದರಲ್ಲಿ ಇರಲು ಸದಾಶಿವರಾಯನು ಪರಾಕ್ರಮವನ್ನು ತೋರಿಸಿ ವೈರಿಗಳನ್ನು ಚವರಿಸಿ ಮುಸಲ್ಮಾನರ ದಂಡಿನ ಸೇನಾಪತಿಗಳಲ್ಲಿ ಮುಖ್ಯನಾದ ಜೊಕ್ಕಸಿಂಗನೆಂಬುವನನ್ನು ಹಿಡಿದು ಅರಸನಿಗೆ ಒಪ್ಪಿಸಿದನು. ಹೀಗೆ ಈ ಕಾಳಗದಲ್ಲಿ ಜಯುವನ್ನು ಸಂಪಾದಿಸಿ ವೈರಿರಾಜ್ಯದಲ್ಲಿ ಮುಂದೆ ಸಾಗಿಹೋಗಿ ಕಲ್ಯಾಣ ಕೋಟೆಯನ್ನು ಮುತ್ತಲು ಸದಾಶಿವರಾಯನು ಕೋಟೆಗೆ ಲಗ್ಗೆ ಏರಿ ಒಳಹೊಕ್ಕು ವೈರಿಗಳನ್ನು ಹಿಂದಕ್ಕಟ್ಟಿ ಕೋಟೆಯ ಹೆಬ್ಬಾಗಿಲನ್ನು ತೆರೆಯಲು ಕೋಟೆಯು ರಾಯನ ವಶವಾಯಿತು. ಮುಂದೆ ಕಲಬುರಿಗೆಯ ಕೋಟೆಯನ್ನೂ ತೆಗೆದುಕೊಂಡನು. ಈ ಕಾಲದಲ್ಲಿ ಸದಾಶಿವರಾಯನು ತೋರಿಸಿದ ಪರಾಕ್ರಮಕ್ಕೋಸ್ಕರ ವಿಜಯನಗರದ ಅರಸನು ಅವನಿಗೆ 'ಕೋಟೆ ಕೋಲಾಹಲ' ಮತ್ತು 'ರಾಯನಾಯಕ' ಎಂಬ ಬಿರುದುಗಳನ್ನು ಕೊಟ್ಟನು. ಅಲ್ಲದೆ ಗುತ್ತಿ ಬಾರ್ಕೂರು ಮತ್ತು ಮಂಗಳೂರು ಪ್ರಾಂತಗಳನ್ನೂ ಕೊಟ್ಟನು. ಮುಂದೆ ವಿಜಯನಗರದ ರಾಯನಿಗೆ ಬೀದರದ ಬರೀದಪಾದಶಹನ ಕೂಡ ಯುದ್ಧ ಮಾಡುವ ಪ್ರಸಂಗವು ಉಂಟಾಗಲು ಅದರಲ್ಲಿ ಸದಾಶಿವರಾಯನು ಇದಿರಾಳಿಗಳ ಸೇನೆಯನ್ನು ಸದೆಬಡಿದು ಬಾದಶಹನನ್ನು ಸೆರೆಹಿಡಿದು ಅರಸನಿಗೆ ತಂದೊಪ್ಪಿಸಿದನು. ಆಗ ಅವನಿಗೆ 'ಅರಿವಲೆ ಮೇಘಾಡಂಬರ ದಿವಾಪ್ರತಾಪ ಬರೀದ ಸಪ್ತಾಂಗಹರಣ' ಎಂಬ ಬಿರುದು ಕೊಡಲ್ಪಟ್ಟಿದ್ದಲ್ಲದೆ ಅರುಣಧ್ವಜವೂ ವಾದ್ಯಪಂಚಕವೂ ಕೊಡಲ್ಪಟ್ಟವು. ಮುಂದೆ ನಿಜಾಮಶಹನ ಕೂಡ ಬನೇಯುದ್ಧವು ಪ್ರಾರಂಭವಾಗಲು ಅದರಲ್ಲಿಯೂ ಸದಾಶಿವರಾಯನು ತೋರಿಸಿದ ಪರಾಕ್ರಮಕ್ಕಾಗಿ ಅವನು 'ಏಕಾಂಗವೀರ' ಎಂಬ ಬಿರುದನ್ನು ಹೊಂದಿದನು. ಸುರಪುರಕ್ಕೆ ನೆರೆಸೀಮೆಯಾಗಿ ಈಗ ಬಾದಾಮಿ ತಾಲೂಕಿನಲ್ಲಿ ಜಾಲೀಹಾಳು ಎಂಬ ಪ್ರಸಿದ್ಧ ದೇಸಗತಿಯು ಇದ್ದು ಅಲ್ಲಿ ಎಡವ, ಮುರಾರಿ ಎಂಬಿಬ್ಬರು ಬೇಡರ ದೊರೆಗಳು ಪರಾಕ್ರಮಿಗಳಾಗಿದ್ದು ಅವರನ್ನು ಸದಾಶಿವರಾಯನು ಜಯಿಸಿದ್ದರಿಂದ ಅವನಿಗೆ 'ಎಡವ ಮುರಾರಿ' ಎಂಬ ಬಿರುದು ಕೊಡಲ್ಪಟ್ಟಿತು. ಈ ಮೇರೆಗೆ ಸದಾಶಿವರಾಯನು ವಿಜಯನಗರದ ರಾಜನಿಗೆ ಅನೇಕ ಕಾಳಗಗಳಲ್ಲಿ ಬಹಳ ಸಹಾಯ ಮಾಡಿದನು.

ಇದಲ್ಲದೆ ಸದಾಶಿವರಾಯನು ಅತ್ಯಂತ ಧರ್ಮನಿಷ್ಠನಾಗಿ ಅನೇಕ ಧಾರ್ಮಿಕ ಕೃತ್ಯಗಳನ್ನು ನೆರವೇರಿಸಿದ್ದಾನೆ. ಕೆಳದಿಯ ಸುಪ್ರಸಿದ್ಧ ರಾಮೇಶ್ವರ ದೇವಾಲಯವನ್ನು ಮನೋಹರವಾಗಿ ಕಟ್ಟಿಸಿದನು. ಕೆಳದಿಯಲ್ಲಿ ಹಿರಿಯ ಮಠವನ್ನು ಸ್ಥಾಪಿಸಿ ಅದಕ್ಕೆ ಉಂಬಳಿಯನ್ನು ಹಾಕಿ ಕೊಟ್ಟನು. ಕುಶಾವತೀ ನದೀತೀರದಲ್ಲಿ ಸದಾಶಿವಪುರವೆಂಬ ಅಗ್ರಹಾರವನ್ನು ಬ್ರಾಹ್ಮಣರಿಗೋಸ್ಕರ ಕಟ್ಟಿಸಿದನು. ಮದಗಮಾಸೂರು ಎಂಬ ಕೆರೆಯು ಮೊದಲು ಅಪೂರ್ಣವಾಗಿದ್ದು ಅದನ್ನು ಪೂರ್ಣಮಾಡಿದನು. ಹೀಗೆ ಸದಾಶಿವರಾಯನು ೩೨ ವರ್ಷ ರಾಜ್ಯಭಾರಮಾಡಿ ಚೌಡಪ್ಪನು ನೆಲೆಗೊಳಿಸಿದ ಸಂಸ್ಥಾನವನ್ನು ಸ್ಥಿರಪಡಿಸಿದನು. ಅವನ ಸಮಾಧಿಯು ಜಗ್ಗಿಪಾಳ್ಯ ಎಂಬಲ್ಲಿ ಇರುತ್ತದೆ.

**೧ನೇ ಸಂಕಣ್ಣನಾಯಕ**:— ೧ನೇ ಸಂಕಣ್ಣನಾಯಕನು ಸದಾಶಿವರಾಯನ ಮಗನು. ಇವನು ಶೂರನೂ ಧರ್ಮಿಷ್ಠನೂ ಆಗಿದ್ದನು. ವಿಜಯನಗರದ ರಾಜನು ಮತ್ತು ಪೋರ್ತುಗೀಜರು ಇವರ ಮಧ್ಯದಲ್ಲಿ ವಿರೋಧಗಳುಂಟಾಗಲು ಗೋವೆಯನ್ನು ತೆಗೆದುಕೊಳ್ಳಲು ಇವನು ವಿಜಯನಗರದ ಸೇನಾಪತಿಯಾದ ರಾಮರಾಜನಿಗೆ ಬಹಳ ಸಹಾಯ ಮಾಡನು. ಇದಕ್ಕೋಸ್ಕರ ಅವನು 'ಭುಜಕೀರ್ತಿ' ಎಂಬ ಬಿರುದನ್ನು ಹೊಂದಿದ್ದಲ್ಲದೆ, ಮಾಳೀನಹಳ್ಳಿ ಎಂಬ ಹೋಬಳಿಯನ್ನು ರಾಜನು ಅವನಿಗೆ ಉಂಬಳಿಯಾಗಿ ಕೊಟ್ಟನು.

ಸಂಕಣ್ಣನಾಯಕನು ದೇಶದಲ್ಲಿಯ ಪುಣ್ಯಕ್ಷೇತ್ರಗಳನ್ನು ನೋಡಬೇಕೆಂಬ ಅಭಿಲಾಷೆಯುಳ್ಳವನಾಗಿ ಅವನು ತನ್ನ ರಾಜ್ಯಭಾರವನ್ನು ತನ್ನ ತಮ್ಮ ಚಿಕ್ಕಸಂಕಣ್ಣನಾಯಕನಿಗೆ ಒಪ್ಪಿಸಿ ತಾನು ಒಬ್ಬ ಜಂಗಮನ ವೇಷವನ್ನು ಧಾರಣ ಮಾಡಿಕೊಂಡು ತೀರ್ಥಾಟನಕ್ಕೆ ಹೊರಟನು. ಅವನು ಮೊದಲು ದಕ್ಷಿಣ ದೇಶಕ್ಕೆ ಹೊರಟು ಶಿವಗಂಗೆ, ಕಂಚಿ, ಚಿದಂಬರಂ, ಕುಂಭಕೋಣಂ ಇವುಗಳನ್ನು ನೋಡುತ್ತ ರಾಮೇಶ್ವರದ ವರೆಗೂ ಹೋಗಿ ಮುಂದೆ ಉತ್ತರಕ್ಕೆ ತಿರುಗಿ ವಿಜಾಪುರ, ಗೋವಳಕೊಂಡ, ಅಹಮುದನಗರ ಇಲ್ಲಿಯ ಬಾದಶಹರನ್ನು ಕಂಡು ಮೊಗಲ ಬಾದಶಹರು ಆಳುತ್ತಿದ್ದ ದಿಲ್ಲಿ ಪಟ್ಟಣಕ್ಕೆ ಬಂದನು. ಅಲ್ಲಿ ಬಾದಶಹನ ಇದಿರಿನಲ್ಲಿ ಅಂಕುಶಖಾನನೆಂಬ ಮಲ್ಲನನ್ನು ಜಯಿಸಿದನು. ಈ ಪಟ್ಟಣದಲ್ಲಿ ಒಂದು ಮಠವನ್ನು ಕಟ್ಟಿಸಲು ಬಾದಶಹನಿಂದ ಒಪ್ಪಿಗೆ

ಯನ್ನು ಹೊಂದಿ 'ಚಾವಲಿಕೆಮುಂಡ್ಯೆ' ಎಂಬ ಅಲ್ಲಿಯ ಪೇಟೆಯಲ್ಲಿ ಒಂದು ಸ್ಥಳವನ್ನು ಪಡೆದು ಅಲ್ಲಿ ಒಂದು ಮಠವನ್ನು ಕಟ್ಟಿಸಿದನು. ಅಲ್ಲಿಂದ ಅವನು ಆಗ್ರಾ, ಕಾಶೀ, ಪ್ರಯಾಗ, ಗಯಾ ಈ ಮೊದಲಾದ ಪುಣ್ಯಕ್ಷೇತ್ರಗಳಿಗೆ ಹೋಗಿ ಅಲ್ಲಿಯೂ ಮಠಗಳನ್ನು ಸ್ಥಾಪಿಸಿದನು. ಮುಂದ ಅವನು ಹಿಮಾಲಯಕ್ಕೆ ತೆರಳಿ ಕೇದಾರ ದೇವಸ್ಥಾನವನ್ನು ಕಂಡು ನೇಪಾಳ ಮತ್ತು ಕಾಶ್ಮೀರ ಇಲ್ಲಿಯ ಅನೇಕ ಸ್ಥಳಗಳನ್ನು ನೋಡುತ್ತ ತನ್ನ ನಾಡಿನ ಕಡೆಗೆ ತೆರಳಿದನು. ಬರುವ ಮಾರ್ಗದಲ್ಲಿ ಪೈಠಣದಲ್ಲಿಯ ಅಘೋರೇಶ್ವರನ ಮೂರ್ತಿ ಮತ್ತು ತನ್ನ ರಾಜ್ಯವಾದ ಮಾಸೂರು ಸೀಮೆಯಲ್ಲಿಯ ಆಲಪಳ್ಳಿ ಎಂಬಲ್ಲಿಯ ವೀರಭದ್ರಮೂರ್ತಿ ಇವುಗಳ ಮನೋಹರ ಸ್ವರೂಪಗಳನ್ನು ನೋಡಿದವನಾಗಿ ತನ್ನ ಕೆಳದಿಯ ರಾಜಧಾನಿಗೆ ಬಂದ ಬಳಿಕ ರಾಮೇಶ್ವರ ದೇವಾಲಯದ ಪಕ್ಕದಲ್ಲಿಯೇ ಒಂದು ದೇವಾಲಯವನ್ನು ಕಟ್ಟಿಸಿ ತಾನು ತೆಗೆದುಕೊಂಡುಬಂದ ವೀರಭದ್ರ ಮೂರ್ತಿಯನ್ನು ಸ್ಥಾಪಿಸಿದನು. ಮತ್ತು ಪೈಠಣದಲ್ಲಿ ತಾನು ನೋಡಿದ ಅಘೋರೇಶ್ವರ ಮೂರ್ತಿಯಂತೆಯೇ ಇನ್ನೊಂದು ಮೂರ್ತಿಯನ್ನು ಸಿದ್ಧಪಡಿಸಿ ಅದಕ್ಕೂ ಒಂದು ದೇವಾಲಯವನ್ನು ರಾಮೇಶ್ವರ ದೇವಾಲಯದ ಸಮೀಪದಲ್ಲಿಯೇ ಕಟ್ಟಿಸಿ ಅದನ್ನು ಅಲ್ಲಿ ಸ್ಥಾಪಿಸಿದನು.

ಹೀಗೆ ಈ ರಾಜನು ಬಹುಕಾಲ ಪರದೇಶದಲ್ಲಿದ್ದದರಿಂದ ಅವನ ರಾಜ್ಯದಲ್ಲಿಯ ಕೆಲವು ಪಾಳ್ಯಗಾರರು ಸ್ವತಂತ್ರರಾಗಿ ಆಳಹತ್ತಿದ್ದರು. ಇಂಥವರಲ್ಲಿ ಜಂಬೂರಿನ ಅಧಿಪತಿಯೂ, ಕಾರ್ಕಳದ ಭೈರಸ ಒಡೆಯರು ಮತ್ತು ಸಾಳುವ ತಿಮ್ಮ ಇವರು ಇದ್ದು ಅವರನ್ನು ಸೋಲಿಸಿ ತನ್ನ ಅಧೀನದಲ್ಲಿಟ್ಟುಕೊಂಡನು. ಈ ಪ್ರಕಾರ ಈ ರಾಜನು ೧೩ ವರ್ಷ ರಾಜ್ಯವಾಳಿದನು.

**ವೆಂಕಟಪ್ಪನಾಯಕನು:** — ವೆಂಕಟಪ್ಪನಾಯಕನು ಕೆಳದಿಯ ರಾಜರಲ್ಲಿ ಅತ್ಯಂತ ಪ್ರಸಿದ್ಧನು. ಅವನು ೪೭ ವರ್ಷ ರಾಜ್ಯಭಾರ ಮಾಡಿ ಕೆಳದಿಯ ರಾಜ್ಯಕ್ಕೆ ಸ್ಥಿರವಾದ ತಳಹದಿಯನ್ನು ಹಾಕಿದನು. ಅವನು ಸಿಂಹಾಸನವನ್ನು ಆರೋಹಿಸುವ ಪೂರ್ವದಲ್ಲಿ ಐವರು ಮುಸಲ್ಮಾನ ಬಾದಶಹರು ಸಮ್ಮಿಲಿತರಾಗಿ ವಿಜಯನಗರದ ರಾಜ್ಯವನ್ನು ತಾಳೀಕೋಟೆ ಯುದ್ಧದಲ್ಲಿ ಮುಗಿದಿಕ್ಕಿದ್ದರು. ಅವರು ಮುಂದೆ ದಕ್ಷಿಣ

ಹಿಂದುಸ್ತಾನದಲ್ಲಿ ಆಳುತ್ತಿದ್ದ ಪಾಳೆಯಗಾರರ ಮೇಲೆ ಬೀಳುತ್ತ ಅವರ ರಾಜ್ಯಗಳನ್ನು ಸೆಳೆಯುತ್ತ ಸೆರೆಸೂರೆ ಮಾಡುವ ಕ್ರಮವನ್ನು ಅನುಸರಿಸಿದರು. ಗೋವಳಕೊಂಡದ ಬಾದಶಹರು ಅದರ ಪಶ್ಚಿಮ ಭಾಗವನ್ನು ಆಕ್ರಮಿಸಬೇಕೆಂದು ಗೊತ್ತುಮಾಡಿಕೊಂಡಿದ್ದರು. ಆದ್ದರಿಂದ ಪ್ರತಿವರ್ಷ ವಿಜಾಪುರ ಬಾದಶಹರ ದಂಡಾಳುಗಳು ಈಗಿನ ಮೈಸೂರು ಮತ್ತು ಕೆಳದಿಯ ರಾಜ್ಯಗಳ ಮೇಲೇರಿ ಹೋಗುವ ಕ್ರಮವನ್ನು ಅನುಸರಿಸಿದ್ದರು. ಆದ್ದರಿಂದ ವೆಂಕಟಪ್ಪನಾಯಕನು ವಿಜಾಪುರ ಬಾದಶಹರೊಡನೆ ಯುದ್ಧ ಮಾಡುವ ಪ್ರಸಂಗಗಳು ಉಂಟಾದವು.

ಈ ಕಾಲದಲ್ಲಿ ಅವನ ವಶದಲ್ಲಿ ಈಗಿನ ರಾಣೇಬಿನ್ನೂರು ಮತ್ತು ಹಾನಗಲ್ಲು ತಾಲೂಕುಗಳ ಬಹುಭಾಗವು ಇದ್ದಿತು. ಮುಸಲ್ಮಾನರ ದಂಡುಗಳು ಈ ಭಾಗವನ್ನೆಲ್ಲ ಆಕ್ರಮಿಸಿ ಜಡೆ ಎಂಬ ಗ್ರಾಮವನ್ನು ಮುತ್ತಿದವು. ಆಗ ವೆಂಕಟಪ್ಪನಾಯಕನು ತನ್ನ ಸೈನ್ಯದೊಂದಿಗೆ ಅಲ್ಲಿಗೆ ಹೋಗಿ ಮುತ್ತಿಗೆಯನ್ನು ಎಬ್ಬಿಸಿದನು. ಮತ್ತು ಮದಗ ಮಸೂರಿನಲ್ಲಿದ್ದ ಮುಸಲ್ಮಾನರ ದಂಡಾಳುಗಳನ್ನು ಹಿಂದಕ್ಕಟ್ಟಿದನು. ಇದಲ್ಲದೆ ಆ ಕಾಲಕ್ಕೆ ಹಾನಗಲ್ಲು ಮತ್ತು ಚಂದ್ರಗುತ್ತಿಯ ಕೋಟೆಗಳು ಸಹ ಮುಸಲ್ಮಾನರಿಂದ ಮುತ್ತಲ್ಪಟ್ಟಿದ್ದವು. ವೆಂಕಟಪ್ಪನಾಯಕನು ಅಲ್ಲಿಂದಲೂ ಅವರನ್ನು ಚದರಿಸಿ ತನ್ನ ರಾಜ್ಯದ ಹೊರಗೆ ಶತ್ರುಗಳನ್ನು ನೂಕಿದನು. ಆದರೆ ಇಷ್ಟಕ್ಕೆ ಮುಸಲ್ಮಾನರು ತಮ್ಮ ಪ್ರಯತ್ನಗಳನ್ನು ಬಿಡಲಿಲ್ಲ. ಅವರು ಇಕ್ಕೇರಿಯ ರಾಜ್ಯಕ್ಕೆ ಸಮೀಪವಾಗಿದ್ದ ಕೆಂಗೆಯ ಹನುಮನಾಯಕನಿಗೆ ವೆಂಕಟಪ್ಪನಾಯಕನ ವಿರುದ್ಧವಾಗಿ ಯುದ್ಧ ಹೂಡಲು ಪ್ರೇರೇಪಿಸಿದರು. ಆಗ ಈ ಕೆಂಗೆಯ ಹನುಮನು ಮಂಜುಳಖಾನನ ಸಹಾಯವನ್ನು ತೆಗೆದುಕೊಂಡು ಇಕ್ಕೇರಿ ರಾಜ್ಯದಲ್ಲಿ ನುಗ್ಗಿದನು. ಆಗ ವೆಂಕಟಪ್ಪನಾಯಕನ ಮೊಮ್ಮಗನೂ ಯುವರಾಜನೂ ಆದ ವೀರಭದ್ರನಾಯಕನು ಹೊಳೆಹೊನ್ನೂರಿನಲ್ಲಿ ಸುತ್ತುಗಟ್ಟಲ್ಪಟ್ಟನು. ಇದು ವೆಂಕಟಪ್ಪನಾಯಕನಿಗೆ ತಿಳಿದ ಕೂಡಲೆ ಅವನು ಕೆಲವು ಸ್ವಾರರನ್ನು ತೆಗೆದುಕೊಂಡು, ಶೂರತನದಿಂದ ಕಾದಾಡಿ ಮಂಜುಳಖಾನನ ದಂಡನ್ನು ಹಿಂದಕ್ಕಟ್ಟಿದನು. ರಣಭೂಮಿಯಿಂದ ಹನುಮನಾಯಕನು ಓಡಿಹೋದನು. ಅವನ ಹಿರಿಯ ಮಗನು ವೆಂಕಟಪ್ಪನಾಯಕನ ಕೂಡ ಸಂಧಿಯನ್ನು ಮಾಡಿಕೊಂಡು ಶಿವ

ಮೊಗ್ಗೆ, ಲಕ್ಕುವಳ್ಳಿ ಗಾಜನೂರು ಈ ಸೀಮೆಗಳನ್ನು ಅವನಿಗೆ ಒಪ್ಪಿಸಿ ಶರಣಾಗತನಾದನು. ವೆಂಕಟಪ್ಪನಾಯಕನು ಹೀಗೆ ಜಯವನ್ನು ಸಂಪಾದಿಸಿದ ಸ್ಮರಣಾರ್ಥವಾಗಿ ಅವನು ತನ್ನ ಗಡಿ ಸೀಮೆಯಲ್ಲಿ ಮುಖ್ಯ ಪಟ್ಟಣವಾದ ಹಾನಗಲ್ಲಿನಲ್ಲಿ ಒಂದು ಜಯಸ್ತಂಭವನ್ನು ನಡಿಸಿದನು. ಈ ಕಾಲದಲ್ಲಿ ಹಾನಗಲ್ಲು, ರಾಣೇಬನ್ನೂರು, ಶಿವಮೊಗ್ಗೆ ಮತ್ತು ಕಡೂರು ಜಿಲ್ಲೆಗಳ ಬಹುಭಾಗಗಳು ಅವನಿಗೆ ಅಂಕಿತವಾದವು.

ಈ ಕಾಲಕ್ಕೆ ಉತ್ತರ ಕನ್ನಡ ಜಿಲ್ಲೆ ಅಂದರೆ ಈಗಿನ ಕಾರವಾರ ಜಿಲ್ಲೆಯಲ್ಲಿ ಭೈರಾದೇವಿಯು ಅವನಿಗೆ ಮುಖ್ಯ ಇದಿರಾಳಿಯಾಗಿ ಗೆರಸೊಪ್ಪೆಯಲ್ಲಿ ರಾಜ್ಯವಾಳುತ್ತಿದ್ದಳು. ಅವಳ ರಾಜ್ಯವು ಸಮುದ್ರ ತೀರದ ವರೆಗೂ ಹಬ್ಬಿತ್ತು. ಅದು ಬಹು ವಿಸ್ತಾರವಾದದ್ದೂ ಧನಾಢ್ಯವೂ ಇದ್ದದರಿಂದ ಅವಳು 'ಏಕಲಕ್ಷ ದೇಶದ ದೊರೆ' ಎಂಬ ಬಿರುದನ್ನು ಹೊಂದಿದ್ದಳು. ಆಗ ವೆಂಕಟಪ್ಪನಾಯಕನು ತನ್ನ ದಳವಾಯಿಯಾದ ಲಿಂಗಣ್ಣನಾಯಕನನ್ನು ಆಕೆಯ ಮೇಲೆ ಕಳಿಸಿದನು. ಅವನು ಅವಳನ್ನು ಯುದ್ಧದಲ್ಲಿ ಸೋಲಿಸಿ ಸೆರೆಹಿಡಿದನು. ಮತ್ತು ಗೆರಸೊಪ್ಪೆಯ ಪಟ್ಟಣವನ್ನು ಹಾಳುಮಾಡಿ ಆಕೆಯು ಆಳುತ್ತಿದ್ದ ಪ್ರಾಂತವನ್ನೂ ಆಕೆಯ ವಸ್ತುವಾಹನ ಕೋಶಾದಿಗಳನ್ನೂ ಸ್ವಾಧೀನಪಡಿಸಿಕೊಂಡನು. ಅಂದಿನಿಂದ ಆಕೆಯ ರಾಜ್ಯವೇ ನಿಂತುಹೋಯಿತು.

ವೆಂಕಟಪ್ಪನಾಯಕನ ರಾಜ್ಯದಲ್ಲಿ ಭಟಕಳ, ಹೊನ್ನಾವರ ಬಂದರಗಳು ಇದ್ದದರಿಂದ ಅವುಗಳ ಮಾರ್ಗವಾಗಿ ಪರದೇಶಗಳ ಕೂಡ ವ್ಯಾಪಾರವು ಅಭಿವೃದ್ಧಿ ಸ್ಥಿತಿಯನ್ನು ಹೊಂದಹತ್ತಿತ್ತು. ಅವನ ರಾಜ್ಯವು ಅರಣ್ಯ ಪ್ರದೇಶದಲ್ಲಿದ್ದರೂ ಅವನು ಒಳನಾಡುಗಳಿಂದ ತನ್ನ ಬಂದರಗಳ ವರೆಗೆ ಅತ್ಯುತ್ತಮ ಮಾರ್ಗಗಳನ್ನು ಕಲ್ಪಿಸಿ ಪ್ರವಾಸಿಗರಿಗೆ ಅನುಕೂಲತೆಗಳನ್ನು ಮಾಡಿಕೊಟ್ಟಿದ್ದನು. ಇದರಿಂದ ಅವನ ರಾಜ್ಯದಲ್ಲಿ ವ್ಯಾಪಾರೋದ್ಯೋಗಗಳು ಬೆಳೆದು ಜನರು ಅತ್ಯಂತ ಶ್ರೀಮಂತಿಕೆಯನ್ನು ಹೊಂದಿದವರಾಗಿದ್ದರು.

ಹೀಗೆ ಅವನು ರಾಜ್ಯವನ್ನು ವಿಸ್ತರಿಸಿದ ಬಳಿಕ ಮಂಗಳೂರು ಜಿಲ್ಲೆಯನ್ನು ೧೬೦೮ ರಲ್ಲಿ ಅಭಿಯೋಗಿಸಿದನು. ಮೊದಲು ಅವನು ಹೊನ್ನೆಯ ಕುಂಬಳೆರಾಜರ ರಾಜ್ಯದಲ್ಲಿ ಶಂಕರನಾರಾಯಣಭಟ್ಟನೆಂಬ

ವನು ಪ್ರಬಲನಾಗಿ ಅವನ ರಾಜ್ಯವನ್ನು ಆಕ್ರಮಿಸಿದ್ದನು. ಅವನನ್ನು ವೆಂಕಟಪ್ಪನಾಯಕನು ಪೂರ್ಣವಾಗಿ ಸೋಲಿಸಿ ಸೆರೆಹಿಡಿದನು. ಕಾರಕಳದ ಭೈರಸ ಒಡೆಯರು ಗಟ್ಟದ ಮೇಲೇರಿ ಶ್ರೀಂಗೇರಿ ಸ್ವಾಮಿಗಳ ಪ್ರದೇಶವನ್ನು ಅಭಿಯೋಗಿಸಿ ಅವರನ್ನು ಬಹಳ ಉಪದ್ರವಪಡಿಸಿದ್ದನು. ಆಗ ವೆಂಕಟಪ್ಪನಾಯಕನು ಸ್ವಾಮಿಗಳ ಸಹಾಯಕ್ಕೆ ಬಂದು ವೈರಿಗಳನ್ನು ಸೋಲಿಸಿ ಸ್ವಾಮಿಗಳಿಗೆ ಅವರ ಸೀಮೆಯನ್ನು ತಿರುಗಿಕೊಟ್ಟದ್ದಲ್ಲದೆ ಅವರಿಗೆ ಬಹಳ ಭೂಸ್ವಾಸ್ಥೆಯನ್ನು ಕೊಟ್ಟು ಅವರ ಮಠವನ್ನು ಜೀರ್ಣೋದ್ಧಾರ ಮಾಡಿದನು.

ಮೂಡಬಿದಿರೆಯ ಚೌಟರಾಜನಿಗೂ ಕಾರ್ಕಳದ ಇಮ್ಮಡಿ ಭೈರವ ರಾಜನಿಗೂ ಅತ್ಯಂತ ದ್ವೇಷಭಾವವು ಇದ್ದುದರಿಂದ ಭೈರವ ರಾಜನ ವಿರುದ್ಧವಾಗಿ ಚೌಟರಾಜನು ವೆಂಕಟಪ್ಪನಾಯಕನ ಸಹಾಯವನ್ನು ಕೋರಿದನು. ಆಗ ವೆಂಕಟಪ್ಪನಾಯಕನು ಒಂದು ದೊಡ್ಡ ಸೈನ್ಯದೊಡನೆ ಕಾರ್ಕಳಕ್ಕೆ ಬರಲು ಅವನೊಡನೆ ಆದ ಯುದ್ಧದಲ್ಲಿ ಭೈರವರಾಯನು ಮಡಿದು ಬಿದ್ದನು. ಮತ್ತು ಅವನ ರಾಜ್ಯವನ್ನೆಲ್ಲ ವೆಂಕಟಪ್ಪನಾಯಕನು ಸ್ವಾಧೀನಪಡಿಸಿಕೊಂಡನು. ಇದರ ತರುವಾಯ ಕಾರ್ಕಳದ ರಾಜ ವಂಶವು ನಷ್ಟವಾಯಿತು.

ಮುಂದೆ ವೆಂಕಟಪ್ಪನಾಯಕನು ಮಂಗಳೂರಿಗೆ ನಡೆದು ಒಂದು ಸುತ್ತಲಿನ ಚಿಕ್ಕ ಚಿಕ್ಕ ಪಾಳೆಯಗಾರರನ್ನು ಅಂಕಿತ ಮಾಡುವ ಕಾರ್ಯದಲ್ಲಿ ತೊಡಗಿದನು. ಅಲ್ಲಿಯ ಜೈನ ಅರಸರೆಲ್ಲ ಅವನ ಕೂಡ ಕೌಲು ಕರಾರು ಮಾಡಿಕೊಂಡರು. ವೇಣೂರಿನ ಅಜಿಲನೂ, ಮಂಗಳೂರಿನ ಬಂಗರ ರಾಜನೂ, ವಿಟ್ಲದ ಹೆಗ್ಗಡೆಯೂ, ಕುಂಬಳೆಯ ದಾಶಿಂಗ ಅರಸನೂ, ಬೈಲಂಗಡಿಯ ಮೂಲರಸನೂ ತಾವು ಕೊಡತಕ್ಕ ಕಪ್ಪವನ್ನು ಗೊತ್ತುಪಡಿಸಿಕೊಂಡು ತಮ್ಮ ತಮ್ಮ ರಾಜಧಾನಿಗಳಿಗೆ ತೆರಳಿದರು.

ಮುಂದೆ ಮೂಲ್ಕಿಯ ಮೇಲೆ ಅಭಿಯೋಗಮಾಡಲಾಗಿ ಅವನ ಸೈನ್ಯವು ವೆಂಕಟಪ್ಪನಾಯಕನ ಸೈನ್ಯವನ್ನು ಅಡ್ಡಗಟ್ಟಲು, ಪಟ್ಟೆ ಎಂಬ ಗ್ರಾಮದಲ್ಲಿ ಅವನನ್ನು ಸೋಲಿಸಿದನು. ಆಮೇಲೆ ಬಾರಕೂರಿಗೆ ಹೋಗಿ ಉಡಿಪಿ, ಕುಂದಾಪುರ ತಾಲೂಕುಗಳನ್ನು ಆಳುತ್ತಿದ್ದ ಸುರಾಳ ತೋಲಾರರನ್ನು ಸೋಲಿಸಿ, ಅವರು ಕೊಡತಕ್ಕ ಕಪ್ಪವನ್ನು ಗೊತ್ತುಪಡಿಸಿಕೊಂಡನು.

ಈಮೇಲಿಗೆ ವೆಂಕಟಪ್ಪನಾಯಕನು ಸ್ವಪರಾಕ್ರಮದಿಂದ ಒಂದು ವಿಸ್ತಾರವಾದ ರಾಜ್ಯವನ್ನು ಸಂಪಾದಿಸಿದನು. ಪಶ್ಚಿಮ ಸಮುದ್ರದ ಮೇರೆಯಲ್ಲಿ ಮಲಾಬಾರದಿಂದ ಕುಮಠೆಯ ವರೆಗೆ, ಉತ್ತರಕ್ಕೆ ಕುಮಠೆಯಿಂದ ಹಾನಗಲ್ಲಿನ ವರೆಗೆ, ಪೂರ್ವಕ್ಕೆ ಹಾನಗಲ್ಲಿನಿಂದ ರಾಣೀಬಿನ್ನೂರು, ಚಿಕ್ಕಮಗಳೂರು ಇಷ್ಟು ಪ್ರದೇಶವೆಲ್ಲ ಅವನ ಅಂಕಿತವಾಯಿತು. ಈ ಭಾಗವು ಈ ಕಾಲಕ್ಕೆ ಅತ್ಯಂತ ಬೆಳೆಯುಳ್ಳದ್ದೂ ವ್ಯಾಪಾರೋದ್ಯೋಗಗಳಿಂದ ಶ್ರೀಮಂತಿಕೆಯುಳ್ಳದ್ದೂ ಎಂದು ಬಹು ಹೆಸರಾಗಿತ್ತು. ಮುಂದಿನ ಇಕ್ಕೇರಿ ರಾಜರು ಈ ಪ್ರದೇಶವನ್ನು ತಮ್ಮ ಅಂಕಿತದಲ್ಲಿಟ್ಟುಕೊಂಡು ಬಹಳ ಜಾಣತನದಿಂದ ರಾಜ್ಯಭಾರ ಮಾಡಿದರು.

**ಪೋರ್ತುಗೀಜರು:—** ಈ ಕಾಲದಲ್ಲಿ ದೇಶದಲ್ಲೆಲ್ಲ ಪೋರ್ತುಗೀಜರ ಹಾವಳಿಗಳು ಬಹಳ ಹೆಚ್ಚಾಗಿದ್ದವು. ಅವರು ಒಂದು ಬಲವಾದ ಹಡಗುಪಡೆಯನ್ನು ಇಟ್ಟುಕೊಂಡು ಬಂದರಗಳಲ್ಲಿ ನುಗ್ಗಿ ಜನರನ್ನು ಪೀಡಿಸುತ್ತಿದ್ದರು. ಅವರು ಮಂಗಳೂರಿನ ಸಮೀಪದಲ್ಲಿರುವ ದೀಪಸ್ತಂಭದ ಹತ್ತಿರ ಒಂದು ಕೋಟೆಯನ್ನು ಕಟ್ಟಿಸಿ ತಮ್ಮ ದಂಡನ್ನು ಅಲ್ಲಿ ಇಟ್ಟರು. ಮಂಗಳೂರಿನ ಅರಸನಾದ ಕಾಮರಾಯನು ಪೋರ್ತುಗೀಜರಲ್ಲಿ ಸೇರಿಕೊಂಡು ವೆಂಕಟಪ್ಪನಾಯಕನಿಗೆ ತಾನು ಸಲ್ಲಿಸತಕ್ಕ ಕಪ್ಪವನ್ನು ಕೊಡುವದನ್ನು ನಿಲ್ಲಿಸಿದನು. ಪೋರ್ತುಗೀಜರ ಹಾವಳಿಗಳಿಂದ ರಾಜ್ಯಕ್ಕೆ ಸಲ್ಲತಕ್ಕ ಬಂದರ ಸುಂಕವೂ ಕೂಡ ಕಡಿಮೆಯಾಗಹತ್ತಿತು. ಆದ್ದರಿಂದ ವೆಂಕಟಪ್ಪನಾಯಕನು ೧೨ ಸಾವಿರ ಸೈನ್ಯವನ್ನು ತೆಗೆದುಕೊಂಡು ಮಂಗಳೂರಿಗೆ ಹೋಗಿ ಪೋರ್ತುಗೀಜರನ್ನು ಸೋಲಿಸಿ ಅವರು ಕಟ್ಟಿದ್ದ ಕೋಟೆಯನ್ನು ಹಿಡಿದುಕೊಂಡನು. ಆಗ ಉಭಯತರಲ್ಲಿ ಒಪ್ಪಂದವಾಗಿ, ಪೋರ್ತುಗೀಜರು ರಾಜ್ಯದಲ್ಲಿ ತಮ್ಮ ಹಾವಳಿಯನ್ನು ನಿಲ್ಲಿಸಬೇಕೆಂತಲೂ ತಮ್ಮ ವ್ಯಾಪಾರವನ್ನು ನಡಿಸಲು ಅವರಿಗೆ ವೆಂಕಟಪ್ಪನಾಯಕನು ತೊಂದರೆ ಮಾಡಬಾರದೆಂತಲೂ ಕರಾರುಗಳಾದವು.

ಆದರೆ ಪೋರ್ತುಗೀಜರು ರಾಜ್ಯದಲ್ಲಿ ಮೇಲಿಂದಮೇಲೆ ಆತಂಕಗಳನ್ನುಂಟುಮಾಡಬಹುದೆಂದು ಎಣಿಸಿ, ವೆಂಕಟಪ್ಪನಾಯಕನು ರಾಜ್ಯದಲ್ಲಿರುವ ಮುಖ್ಯ ಗ್ರಾಮಗಳಲ್ಲೆಲ್ಲ ಕೋಟೆಗಳನ್ನು ಕಟ್ಟಿಸಿದನು.

## ಮುಂಬಯಿ ಸರಕಾರದವರು

## ಪಾಸ ಮಾಡಿದ "ಲ್ರೋಣಿ" ಇವರ ಗ್ಯಾಸ ಪ್ಲಾಂಟಗಳನ್ನೇ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯು ಖರ್ಚು ಬಹಳೇ ಕಡಿಮೆ ಇದ್ದು, ಬೇಗನೆ ಸ್ಟಾರ್ಟವಾಗಿ ಬರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳೇ ಸುಲಭ. ಮ.ಶಿನರಿಗಳಿಗೆಬಿಲಕೂಲ ಅಪಾಯುವಿಲ್ಲ. ದೃಷ್ಟಿಗೆ ಶುಭ್ರ. ಇದಲ್ಲದೆ ಟುಯಿರಿಂಗ ಕಾರ್ಸ ಮತ್ತು ಆಯಿಲ್ ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟಿವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

**ದಿ ಲೋಣಿ ಇಂಜನಿಯರಿಂಗ ವರ್ಕ್ಸ ಸೋಲಾಪೂರ.**

---

**BOOK-POST.** R. N. B. 2554

ಶ್ರೀ. ರಾ॥ ರಾ॥ ಚನ್ನಪ್ಪ ಶಿವಲಿಂಗಪ್ಪ ಮೆಟಗುಡ್ಡ
ಪೋ. ಬೈಲಹೊಂಗಲ
ಜಿ. ಬೆಳಗಾವಿ

*From,*
**Shivanubhava**
**Office**
**Bijapur.**



ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ರಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ಗಿಟಿಂ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

## ಶಿವಾನುಭವ ಸಹಾಯ ಧನ.

ರೂ.

| | | ರೂ. |
|---|---|---|
| (೧) | ಶ್ರೀಮಂತ ಪಾರದ ಸೊಲ್ಲಾಪುರ | ೨೫ |
| (೨) | ಶ್ರೀ ರಾಮಣ್ಣಪ್ಪ ಚುಂಚಾನಸೂರಿ — ಕಾಸಾರ ಶಿರಶಿ (ನಿಜಾಮಸ್ಟೇಟ) | ೧೦ |
| (೩) | ಶ್ರೀ. ಮಠದ ಬಸವಯ್ಯ ಮು. ಪುಣಬಗಟ್ಟಿ ಜಿ. ಬಳ್ಳಾರಿ | ೫ |
| (೪) | ಶ್ರೀ ಬಸಪ್ಪಗೌಡ ಚನವೀರಪ್ಪಗೌಡ ಪಟೇಲ ಮು. ದೇವನಹಳ್ಳಿ (ಮೈಸೂರ ಸ್ಟೇಟ) | ೫ |
| (೫) | ಶ್ರೀ. ಫಕೀರಪ್ಪ ಜಂಪಪ್ಪ ಮಡಿವಾಳರ ಸಾ। ಮುತ್ತಿಗಿ ತಾ. ಕಲಘಟಗಿ | ೨ |
| (೬) | ಶ್ರೀ. ಬಸಪ್ಪ ನಾಗಪ್ಪ ರೂಗಿ ಸಾ। ಹೆಬ್ಬಳ್ಳಿ ತಾ. ಧಾರವಾಡ ಇವರು ತಮ್ಮ ತಾಯಿಯವರಾದ ಶ್ರೀ ಬಸಮ್ಮನವರು ಇವರು ತಾ. ೨-೩-೪೪ಕ್ಕೆ ಲಿಂಗೈಕ್ಯರಾದ ಸಮಯದಲ್ಲಿ ಅವರ ಸ್ಮರಣಾರ್ಥವಾಗಿ ಕಳಿಸಿದ್ದು. | ೫ |
| (೭) | ಶ್ರೀ ಕುದರೀ ಪ್ರಭಪ್ಪ ಜವಳೀ ಅಂಗಡಿ—ಹುಬ್ಬಳ್ಳಿ ಇವರು ತಮ್ಮ ತಂದಿ ವೀರಭದ್ರಪ್ಪನವರು ಲಿಂಗೈಕ್ಯರಾದ ಕಾಲಕ್ಕೆ ಸದ್ಭಕ್ತರಿಂದ ಸಮಾಧಿಕ್ರಿಯೆ ಜರಗಿಸಿ ಆ ಕಾಲಕ್ಕೆ ಕೊಟ್ಟಿದ್ದು. | ೫ |

ಮೇಲಿನ ಎಲ್ಲ ಮಹನೀಯರಿಗೂ ನಾವು ಅತ್ಯಂತ ಕೃತಜ್ಞರಾಗಿರುತ್ತೇವೆ.

ಸಂಪಾದಕರು— ಶಿವಾನುಭವ

---

**ಸೂಚನೆಃ—** ಪ್ರೆಸ್ಸಿನ ವಿಶೇಷ ಕೆಲಸಗಳ ಮೂಲಕ ಮಾರ್ಚ ತಿಂಗಳಿನ ಸಂಚಿಕೆಯನ್ನು ಸಕಾಲಕ್ಕೆ ಹೊರಡಿಸಲು ಆಗದ್ದಕ್ಕೆ ನಾವು ವಾಚಕರ ಕ್ಷಮಾಪಣೆಯನ್ನು ಬೇಡಿಕೊಳ್ಳುತ್ತೇವೆ. ಈಗ ಮಾರ್ಚ ಮತ್ತು ಎಪ್ರೆಲ್ ಈ ತಿಂಗಳುಗಳ ಸಂಯುಕ್ತ ಸಂಚಿಕೆಯನ್ನು ಹೊರಡಿಸಿದ್ದು ಕಡಿಮೆಯಾದ ಪುಟಗಳನ್ನು ಮೇ ತಿಂಗಳಿನ ಸಂಚಿಕೆಗಳಲ್ಲಿ ಪೂರ್ತಿ ಮಾಡುತ್ತೇವೆ.

—ಸಂಪಾದಕ.

# ಶಿವಾನುಭವ

ವರ್ಷ ೧೮ | ಮಾರ್ಚ ೧೯೪೪. | ಸಂಚಿಕೆ ೬-2

## ಶ್ರೀಮದಲ್ಲಮಪ್ರಭುಗಳು.

(ಶ್ರೀಬಸವದೇವರು ವ್ಯಾಕರಣಶಾಸ್ತ್ರಿಗಳು—ಮು. ಶಿವಯೋಗಮಂದಿರ, ಬದಾಮಿ)

ಬಸವೇಶ್ವರ ಚನ್ನಬಸವೇಶ್ವರಾದಿ ಶರಣ ಪ್ರಾಣನಾಯಕರೂ ಷಟ್‌ಸ್ಥಲತತ್ವ ಸಾಮ್ರಾಜ್ಯ ಸಂಸ್ಥಾಪಕರೂ ವಚನಶಾಸ್ತ್ರಾಬ್ಧಿ ಸುಧಾಕರರೂ ಆದ ಶ್ರೀಮದಲ್ಲಮಪ್ರಭುಗಳ ಜಯಶೀಲಜೀವನವು ಶರಣ ಸಂಕುಲದಲ್ಲೆಲ್ಲ ಅತ್ಯುಚ್ಚವಾದುದು. ಆಚಾರ ಅನುಭವಬೋಧೆಗಳಿಂದ ಸಮಸ್ತ ಶರಣರ ಸುಂದರ ಜೀವನ ಚಿತ್ರಕ್ಕೆ ಚೈತನ್ಯಕಳೆಯನ್ನು ತುಂಬಿರುವ ಆ ಮಹಾತ್ಮರ ಚಾರುಚರಿತೆಯು ವೀರಶೈವ ಮಹಾಪುರುಷರ ಚಾರಿತ್ರಗಳಲ್ಲೇ ಅಭೂತಪೂರ್ವವಾದುದು. ಅವರ ಘನತರ ವೈರಾಗ್ಯ ಅನುಪಮವಾದ ಅನುಭವ ವಿಚಾರಚಾತುರ್ಯ ಅಪ್ರತಿಹತವಾದ ಶಿವಯೋಗ ಸಾಮರ್ಥ್ಯಗಳು ಎಂಥವರನ್ನಾದರೂ ನೆಚ್ಚಿಸಿಮೆಚ್ಚಿಸಿ ಅಚ್ಚರಿಗೊಳಿಸುವವು.

ಅದ್ವೈತ ತತ್ವಗಳ ಆಚೆಗೆ ಹೋಗಿರುವ ಅವರ ಅಸದೃಶವಾದ ಜ್ಞಾನಪ್ರಕಾಶವು ಮಾನವ ಕುಲದ ತಮೋಭ್ರಮೆಗಳನ್ನು ದೂರೀಕರಿಸಿ ಹೃದಯಕಮಲಗಳನ್ನು ಅರಳಿಸಿಬಿಡುವದು ಸುಪ್ತಶಕ್ತಿಗಳನ್ನೆಲ್ಲ ಚೇತರಿಸಿ ತಥ್ಯಮಿಥ್ಯಗಳ ತುಲನೆಯಿಂದ ಸತ್ಯಸ್ವರೂಪವನ್ನು ಸಾಕ್ಷಾತ್ಕರಿಸುವದು ವಿಲಕ್ಷಣವಾದ ಓಜಸ್ಸು ತೇಜಸ್ಸುಗಳನ್ನು ತುಂಬಿ ವಿಚಾರ ಸ್ವಾತಂತ್ರ್ಯ ಆತ್ಮಸ್ವಾತಂತ್ರ್ಯಗಳ ವಿಶಿಷ್ಟಸ್ಫೂರ್ತಿಯನ್ನು ತಂದುಕೊಡು

ವದು. ಗಹನ-ಗಂಭೀರತಮ ತತ್ವವಿಚಾರಗಳಿಂದ ಪರಿಪೂರ್ಣವಾಗಿರುವ ಆ ಮಹಾನುಭಾವರ ವಚನಗಳನ್ನು ಓದಿದರೆ ಪಂಡಿತೋತ್ತಮರೂ ಕೂಡ ಚಕಿತರಾಗುವರು. ಸಂದುಸಂಶಯಗಳಿಗಿಂಬಿಲ್ಲದೆ ಸತ್ಯಸಂದರ್ಶನದಿಂದ ಪ್ರಕಾಶಮಾನಗಳಾಗಿ ಸರ್ವತಂತ್ರ ಸ್ವತಂತ್ರತೆಯಿಂದ ಹೊರಹೊಮ್ಮುವ ಆ ವಚನಗಳು ಮಹಾಮೇಧಾವಿಗಳನ್ನೂ ಕೂಡ ಮುಗ್ಧರನ್ನು ಮಾಡುವವು

"ಸ್ವತಂತ್ರ ಪರತಂತ್ರಕ್ಕೆ ಆವುದು ಚಿನ್ಹನೋಡಾ? ತಾನೆಂಬುದಳಿದು ಇದಿರೆಂಬುದಮರೆದು ಭಾವದಗ್ಧವಾಗಿರಬಲ್ಲರೆ ಅದು ಸ್ವತಂತ್ರ. ನೀನೆಂಬುದ ಧಿಕ್ಕರಿಸಿ ತಾನೆಂಬುದ ಸ್ವೀಕರಿಸಿ ಉಭಯಭಾವದಲ್ಲಿ ಸನ್ನಿಹಿತನಾಗಿರಬಲ್ಲರೆ ಪರತಂತ್ರ. ಪರತಂತ್ರ ಸ್ವತಂತ್ರವೆಂಬೆರಡನು ವಿವರಿಸದೆ ತನ್ನ ಮರೆದಿಪ್ಪನೆ ಉಪಮಾತೀತನು ಗುಹೇಶ್ವರನ ಶರಣರು ದೇಹವಿಲ್ಲದ ನಿರ್ದೇಹಿಗಳೆಂಬುದು ಇಂದೆನಗೆ ಕಾಣಬಂದಿತ್ತು ನೋಡಾ ಸಿದ್ಧರಾಮಯ್ಯ."

ಈ ವಚನವು ಎಷ್ಟು ಪ್ರಾಸಬದ್ಧ ಅರ್ಥಶುದ್ಧ ತತ್ವಸಿದ್ಧವಾಗಿವೆ. ಇದರಲ್ಲಿರುವ ಸ್ವತಂತ್ರ ಪರತಂತ್ರ ಉಪಮಾತೀತ ಲಕ್ಷಣಗಳು ನೈಯಾಯಿಕರು ನಿರ್ಣಯಿಸುವಂತೆ ಅತಿವ್ಯಾಪ್ತಿ ಅವ್ಯಾಪ್ತಿ ಅಸಂಭವರೂಪ ದೂಷಣತ್ರಯರಹಿತ ಲಕ್ಷ್ಯತಾವಚ್ಛೇದಕ ಸಮನಿಯತ ಅಸಾಧಾರಣ ಧರ್ಮಾತ್ಮಕ ಲಕ್ಷಣ ಲಕ್ಷಿತಗಳಾಗಿ ಎಷ್ಟು ಹೃದಯಂಗಮವಾಗಿ ನಿಷ್ಕರ್ಷಿಸಲ್ಪಟ್ಟಿವೆ?

"ಭೂಮಿಯಾಕಾಶ ಒಂದು ಜೀವನುದರ ಅಲ್ಲಿ ಘನವನು ಘನವೆನ್ನದವಂಗೆ, ಕಿರಿದನು ಕಿರಿದೆನ್ನದವಂಗೆ, ಆ ಘನವು ಮನಕ್ಕೆ ಗಮಿಸಿದಡೆ ಇನ್ನುಪರಿಯುಂಟೆ ಗುಹೇಶ್ವರಾ"

ಅಲ್ಪಾಕ್ಷರ ಅರ್ಥಗಾಂಭೀರ್ಯಗಳಿಂದ ಸೂತ್ರದೋಪಾದಿಯಲ್ಲಿರುವ ಈ ವಚನದ ಟೀಕು — ಪಿಂಡಾಂಡ ಬ್ರಹ್ಮಾಂಡಯೋರೈಕ್ಯಂ ಎಂದುದಾಗಿ ಬ್ರಹ್ಮಾಂಡದೊಳಗುಳ್ಳುದೆಲ್ಲವು ಒಂದು ಜೀವನ ಪಿಂಡದೊಳಗೆ ಉಂಟೆಂಬುದೀಗ ಭೂಮಿಯಾಕಾಶ ಒಂದು ಜೀವನ ಉದರವೆಂಬ ಶಬ್ದಕ್ಕರ್ಥ. ಇದನರಿತು ತನ್ನ ತನುವ ಕಿರಿದೆನ್ನದೆ ಆ ಬ್ರಹ್ಮಾಂಡವ ಘನವೆನ್ನದಿಪ್ಪುದೀಗ ಅಲ್ಲಿ ಘನವನು ಘನವೆನ್ನದವಂಗೆ ಕಿರಿದನು ಕಿರಿದೆನ್ನದವಂಗೆ

ಎಂಬ ಶಬ್ದಕ್ಕರ್ಥ. ಆ ಘನತತ್ವವು ತಾನೆಂದರಿದು ಮನೋಮೂರ್ತಿ ತಾನಾದಡೆ ಪ್ರತಿಕಲ್ಲವೆಂಬುದೀಗ ಆ ಘನವು ಮನಕ್ಕೆ ಸಾಧ್ಯವಾದಡೆ ಇನ್ನು ಸರಿಯುಂಟೆ ಎಂಬ ಶಬ್ದಕ್ಕರ್ಥ. ಇದರಲ್ಲಿ ವೇದಾಂತದ ತಿರುಳನ್ನೇ ತಿಳಿಸಿ 'ಆ ಘನವು ಮನಕ್ಕೆ ಗಮಿಸಿದಡೆ' ಎಂಬ ಪದಗಳಿಂದ ಭುವನವೆಲ್ಲ ಶಿವಮಯವೆಂದು ತಿಳಿದು ತದಾಕಾರವನ್ನು ತಾಳುವ ಶರಣಮಾರ್ಗವನ್ನು ಸಾರಿದ್ದಾರೆ. ವೇದಾಂತಿಗಳು ಆ ವಸ್ತುಸ್ವರೂಪವನ್ನು ತಿಳಿಯಬೇಕೆಂದು ಹೇಳಿದರೆ ಶರಣರು ತಿಳಿದು ತತ್ಸ್ವರೂಪನಾಗಬೇಕೆಂದು ಹೇಳುವರು. (ಜೀವತ್ವವಳಿದು ಶಿವತ್ವವು ಬಳವಡಬೇಕು.) ಇದೇ ವೀರಶೈವಸಿದ್ಧಾಂತ ಅದು ಆಚಾರವಿಲ್ಲದ ಬರಿ ಅರಿವಿನಿಂದ ಸಮನಿಸದು ಆದಕ್ಕಾಗಿ ಆಚಾರವಿಶಿಷ್ಟ ಅರುವುಬೇಕು. ಅದು ಇಲ್ಲಿ ಹೇಳಲ್ಪಟ್ಟಿದೆ.

ಲೋಕದಲ್ಲಿ ಉತ್ತಮರಾಗಬೇಕಾದವರು ಹ್ಯಾಗೆ ಮದ್ಯಮಾಂಸಗಳನ್ನು ಸೇವಿಸಬಾರದೋ ಹಾಗೆ ಮೋಕ್ಷಾಪೇಕ್ಷಿಗಳು ಅಷ್ಟಮದಗಳೆಂಬ ಮದ್ಯವನ್ನೂ ಸಂಸಾರಸಂಗವೆಂಬ ಮಾಂಸವನ್ನೂ ಸೇವಿಸಬಾರದು. ಅದಕ್ಕೆ ಪ್ರಭುಗಳು "ಮದ್ಯಮಾಂಸಾದಿಗಳ ಮುಟ್ಟೆನೆಂದೆಂಬರಿ ನೀವು ಕೇಳಿರೆ ಮದ್ಯವಲ್ಲವೇನು? ಅಷ್ಟಮದಂಗಳು. ಮಾಂಸವಲ್ಲವೇನು? ಸಂಸಾರಸಂಗವು. ಈ ಉಭಯವನತಿಗಳೆದಾತನೆ ಗುಹೇಶ್ವರ ಲಿಂಗದಲ್ಲಿ ಲಿಂಗೈಕ್ಯನು" ಎಂದು ಒಳ್ಳೇ ರೂಪಕವಾಗಿ ಹೇಳಿರುವರು. ವೇದಾಂತವು ಸಂಸಾರವೇ ತ್ಯಾಜ್ಯವೆಂದರೆ ಇವರು ಸಂಸಾರ ಸಂಗವು ತ್ಯಾಜ್ಯವೆಂದು ಬೋಧಿಸುತ್ತಾರೆ. ಸಂಸಾರ-ಸಂಗವು (ಅಭಿರತಿಯು) ಬಾಧಿಸುವಂತೆ ಕೇವಲ ಸಂಸಾರವು ಬಾಧಿಸುವದಿಲ್ಲೆಂದು ಅವರ ಅಭಿಪ್ರಾಯ. ಹೀಗೆ ಅರಿವು ಆಚಾರ ತತ್ವಬೋಧೆಗಳಲ್ಲಿ ಪ್ರಭುಗಳು ಮಿಗಿಲಾದ ಪ್ರತಿಭಾಸಂಪನ್ನರಾಗಿದ್ದರು.

ಅವರು ಯೋಗದಲ್ಲಿಯೂ ಬಹು ಬಲ್ಲಿದರಿದ್ದರು. ಅವರಲ್ಲಿ ಪೂರ್ಣ ಫಲಿಸಿದ್ದ ಶಿವಯೋಗಸಿದ್ಧಿಯು ಅದ್ವಿತೀಯವಾದುದಿತ್ತು. ಸೊನ್ನಲಾಪುರಿಗೆ ಹೋದಾಗ ಗುಡಿಗೋಪುರಾದಿ ಜಡಕರ್ಮನಿರತರಾದ ಸಿದ್ಧರಾಮೇಶ್ವರರನ್ನು ಶಿವಾನುಭವಪಥಕ್ಕೆ ತರಬೇಕೆಂದು ಜರಿದು ನುಡಿಯಲು ಅವರು ಅವರ ಶಿಷ್ಯರು ಪ್ರಭುಗಳನ್ನು ಶಿಕ್ಷಿಸಲಿಕ್ಕೆ ಪ್ರಯತ್ನಿಸಿದಾಗ್ಗೆ ತೋರಿದ ಯೋಗ ಮಹಿಮೆಯೂ ಶ್ರೀಗಿರಿಗೆ ಹೋದಾಗ ಗೋರಕ್ಷನಾಥನ ಕೂಡ ವಾದಿಸುತ್ತ ತಮ್ಮ ದೇಹಕ್ಕೆ ಆತನು ಖಡ್ಗದಿಂದ ಹೊಡೆ

ಯಲು ಬಯಲಲ್ಲಿ ಬೀಸಿದಂತೆ ತೋರಿದ ಶಿವಯೋಗಮಹಿಮೆಯೂ ಅತ್ಯಾಶ್ಚರ್ಯಕರವಾದವುಗಳು.

ಇವರ ಯೋಗದ ಮಹತ್ವಾತಿಶಯವನ್ನು ಕಂಡು ಪರಮತಿಯರೂ ಕೂಡ "ಕಾನೇರೀ ಪೂಜ್ಯಪಾದಶ್ಚ ನಿತ್ಯನಾಥೋನಿರಂಜನಃ। ಕಪಾಲೀ ಬಿಂದುನಾಥಶ್ಚ ಕಾಕಚಂಡೀಶ್ವರಾಹ್ವಯಃ॥ ಅಲ್ಲಮಃಪ್ರಭುದೇವಶ್ಚ ಘೋಡಾ ಚೋಲೀಚ ಟಿಂಟಿಣಿಃ। ಭಾನುಕೀ ನಾರದೇವಶ್ಚ ಖಂಡಃ ಕಾಪಾಲಿಕಸ್ತಥಾ॥ ಇತ್ಯಾದಯೋ ಮಹಾಸಿದ್ಧಾ ಹಠಯೋಗ ಪ್ರಭಾವತಃ। ಖಂಡಯಿತ್ವಾ ಮಹಾಕಾಲಂ ಬ್ರಹ್ಮಾಂಡೇವಿಚರಂತಿತೇ॥ ಎಂದು ಹಠಯೋಗ ಪ್ರದೀಪಿಕೆಯಲ್ಲಿ ಮಹಾ ಸಿದ್ಧರಾದ ಯೋಗಿವರ್ಯರಲ್ಲಿ ಇವರ ಹೆಸರನ್ನು ಪರಿಗಣಿಸಿದ್ದಾರೆ.

ಇಂಥ ಮಹಾಯೋಗಸಿದ್ಧರಾದ ಪ್ರಭುಗಳು ಈ ಜ್ಞಾನಯೋಗಾದಿಗಳುಳ್ಳವರಷ್ಟೇ ಅಲ್ಲದೆ ಪೂರ್ಣಾತ್ಮರೆಲ್ಲರಿಗೆ ಬೇಕಾದ ಪರಮಶಾಂತಿ, ವಿಶಾಲಹೃದಯ, ವಿಶ್ವಪ್ರೇಮಾದಿ ಲಕ್ಷಣಗಳುಳ್ಳವರೂ ಆಗಿದ್ದರು ಇವನ್ನು ನಾವು ಅವರ ವಚನಗ್ರಂಥಾದಿಗಳ ಮೇಲಿಂದ ಚನ್ನಾಗಿ ಅರಿತುಕೊಳ್ಳಬಹುದು. ಹಾಗೂ 'ಇಚ್ಛಾಜ್ಞಾನಕ್ರಿಯಾಶಕ್ತಿತ್ರಯಂ ಯಸ್ಯಾಸ್ತಿಸಪ್ರಭುಃ' ಅನ್ನುವಂತೆ ಇಚ್ಛಾ-ಜ್ಞಾನ-ಕ್ರಿಯಾಶಕ್ತಿತ್ರಯ ಸಮನ್ವಿತರಾಗಿ ಪ್ರಭುಗಳೆಂಬ ಅನ್ವರ್ಥಕನಾಮವನ್ನು ಪಡೆದು, ಪರಮಸಮರ್ಥರೂ ಪರಶಿವಸ್ವರೂಪಿಗಳೂ ಎಂದೆನ್ನಿಸಿಕೊಂಡು ಶರಣಸ್ತೋಮದಿಂದ ಪೂಜಿಸಿಕೊಳ್ಳಲ್ಪಟ್ಟರು. ಬಸವಣ್ಣನವರು "ಎನ್ನ ಮನವು ನಿಮ್ಮ ಚರಣವ ಕಂಡು ಬಳಿಕ ಬೆರಸಿಯಲ್ಲದೆ ಅಗಲಿ ಸೈರಿಸಲಾರದಯ್ಯಾ! ತ್ರಾಹಿ' ತ್ರಾಹಿ? ಘನಮಹಿಮ ನಿಮ್ಮ ಪಾದಾರ್ಚನೆಯೆ ಎನ್ನ ಪರಮಾನಂದ ಜಲವ ತುಂಬುವದಯ್ಯ ಪೂಜೆಯ ಮಾಡುವರೆ ಎನ್ನ ಹೃದಯ ಕಮಲವನಲರಿಸುವೆ ಅರತಿಯಿಂದ ಆರತಿಯನೆತ್ತುವೆ ಎನ್ನ ಮಹಪ್ರಕಾಶದ ಧೂಪವ ಬೀಸುವೆ. ಎನ್ನ ಸ್ವಾನುಭವದ ನೈವೇದ್ಯವನೀವೆ. ಈ ತೆರನಲ್ಲದೆ ಅಷ್ಟವಿಧಾರ್ಚನೆ ಷೋಡಶೋಪಚಾರವೆಂಬುದಕ್ಕೆ ಬೇರೆ ತೆರನಕಾಣೆನಯ್ಯ ಕೂಡಲಸಂಗಮದೇವಯ್ಯ ಪ್ರಭುವೆನ್ನ ಪ್ರಾಣಲಿಂಗವೆಂಬುದು ಎನಗಿಂದು ಕಾಣಬಂದಿತು ನೋಡಯ್ಯ." ಶೂ. ಸಂ.

ಚನ್ನಬಸವಣ್ಣನವರು "ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂಬ ಭಾವನೆ ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ

ನೋಡಾ? ಲಿಂಗೈಕ್ಯ ಶರಣರ ಕಂಡರೆ ನಂಬಿನಚ್ಚಿ ಅವರ ಪಾದಕ್ಕೆರ
ಗುವದೆನ್ನ ಮನವು ಅವರ ಕಂಡರೆ ಕರುಣಾಮೃತವು ಸುರಿವುದೆನಗೆ
ಅವರ ಪಾದಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುವು
ದೆನ್ನ ಮನವು ಕೂಡಲಚನ್ನಸಂಗಮದೇವ ನಿಮ್ಮ ಪ್ರಭುವೆಂಬ ಜಂಗ
ಮವ ಕಂಡು ಪೂಜಿಸಿ ಪೂಜಿಸಿದಣಿಯದೆನ್ನ ಮನವು” ಶೂನ್ಯಸಂಪಾದನೆ.

“ಅಂಗದಲ್ಲಿ ಲಿಂಗವರತು, ಲಿಂಗದಲ್ಲಿ ಅಂಗವರತು, ಒಡಲುಪಾಧಿ
ಎಂಬುದಿಲ್ಲ ನೋಡಾ ನಿಂದಡೆನೆಳಲಿಲ್ಲ. ಸುಳಿದಡೆ ಹೆಜ್ಜೆಯಿಲ್ಲ. ಅಪರಿ
ಮಿತ ಘನಮಹಿಮನನೇನೆಂಬೆನಯ್ಯಾ? ಶಬ್ದವರಿದು ಸಾರಾಯನಲ್ಲ. ಗತಿ
ವಿಡಿದು ಜಡನಲ್ಲ. ಎರಡು ಅಳಿದುಳಿದ ನಿಶ್ಚಿಂತನು ತನಗೆ ತಾನೆ ನಿಜ
ವಾದ ಕೂಡಲಚನ್ನಸಂಗಯ್ಯನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ
ಎನುತಿರ್ದೆನು” ಶೂನ್ಯಸಂಪಾದನೆ.

ಮಡಿವಾಳಮಾಚಯ್ಯಗಳು “ಸ್ಥೂಲಕಂಥೆ, ಸೂಕ್ಷ್ಮಟೊಪ್ಪರ, ಸತ್ಯ
ದಂಡ, ಶಾಂತಿಭಸಿತ, ಸುಚಿತ್ತಮಣಿ, ತತ್ವಕರ್ಪರ, ವೈರಾಗ್ಯಪಾವುಗೆ,
ಮನವೃಢನೇಕೌಪೀನ, ಆಚಾರವೇ ಕಂಕಣ, ಶಮೆದಮೆಯು ಕರ್ಣ
ಕುಂಡಲ ಇಂತಿವೆರಸಿ ಸುಳಿವನು, ಜಗತ್ಪಾವನ ಮಾಡಲೆಂದು, ತನ್ನ
ಒಲುಮೆಯ ಶರಣರಿಗೆ ನಿಜಸುಖವನೀಯಲೆಂದು ಕಲಿದೇವ ನಿಮ್ಮ
ಶರಣ ಪ್ರಭುದೇವರ ಶ್ರೀಪಾದವ ಕಂಡು ಅರ್ಚಿಸಿ ಪೂಜಿಸಿ ನಿಶ್ಚಿಂತ
ನಾದೆನು” ಮಡಿವಾಳಮಾಚಿದೇವರ ವಚನಗ್ರಂಥ.

ಸೊಡ್ಡಳಬಾಚರಸರು “ಏಕಮೇವನದ್ವಿತೀಯ ಬ್ರಹ್ಮನೆಂಬ ಘನ
ಮಹಿಮನ ಕಂಡಾಕ್ಷಣದಲ್ಲಿಯೆ ಮನ ಮನ ಬೆರಸಿ ತನುತನುಕರಗಿ
ಕರಣಂಗಳೆಲ್ಲ ತರಹರವಾದವಯ್ಯಾ. ದೀರ್ಘದಂಡ ನಮಸ್ಕಾರಂ ನಿರ್ಲಜ್ಜಂ
ಗುರುಸನ್ನಿಧೌ। ಶರೀರಮರ್ಥಪ್ರಾಣಂಚ ಸದ್ಗುರುಭ್ಯೋನಿವೇದಯೇತ್॥
ಎಂದುದಾಗಿ ಶರಣು ಹೊಕ್ಕೆನಾನು. ಎನ್ನ ಶರೀರ ನಿಮ್ಮ ಚರಣದಲ್ಲಿ
ಬಿಡಿಸಬಾರದಸಂಗ ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರ ಕಂಡು
ಎನ್ನ ಭವದ ಬಳ್ಳಿಯ ಬೇರ ಹರಿಯಿತ್ತಯ್ಯಾ” ಶೂನ್ಯಸಂಪಾದನೆ.

ಸಿದ್ಧರಾಮೇಶ್ವರರು “ಲಿಂಗಯ್ಯಾ ನೋಟದೊಳು ಕಂಗಳು ನೆಟ್ಟು
ಕಂಗಳ ತೇಜ ಹಿಂಗದು. ಲಿಂಗಪ್ರಭೆಯೊಳಗೆ ಅಂಗವೆಲ್ಲ ಲಿಂಗಲೀಯ
ವಾಗಿ ಸಂಗನಿಸ್ಸಂಗವೆಂಬ ದಂದುಗಹರಿದು ಹಿಂದುಮುಂದೆಂಬ ಭಾವ

ಉಳಿದು ನಿಂದನಿಜದಲ್ಲಿ ನಿರಾಳದಲ್ಲಿ ಪ್ರಾಣಸಮರತಿಯಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಎನ್ನ ಗುರುಚನ್ನಬಸವಣ್ಣನವರೆ" ಸಿದ್ಧರಾಮೇಶ್ವರ ವಚನಗ್ರಂಥ.

ಹೀಗೆ ಶರಣರೆಲ್ಲ ಪರಿಪರಿಯಿಂದ ತನುದುಂಬಿ ಮನದುಂಬಿ ಪೂಜಿಸಿ ಪೂಜಿಸಿ ತುತಿಸಿನುತಿಸಿ ನಲಿನಲಿದಾಡಿರುವರು. ಅನುಭವ ಮಂಟಪದ ಅಧ್ಯಕ್ಷಪದಾರೂಢನನ್ನು ಮಾಡಿಕೊಂಡು ಅವರ ಅನುಭವಾಮೃತವನ್ನು ಕೇಳಿ ನಿತ್ಯತೃಪ್ತರೂ ಆದರು. ಆ ಕಾಲದ ಬಸವಾದಿ ಪ್ರಮಥರೆಲ್ಲ ತಮ್ಮ ಸುಗುಣಾದಿಗಳಿಂದ ಪ್ರಭುಗಳ ಒಲ್ಮೆನಲ್ಮೆಗಳನ್ನು ಪಡೆಯಲು ಹವಣಿಸುತ್ತಿದ್ದರು. ಪ್ರಭುಗಳಾದರೂ ಎಲ್ಲರನ್ನು ಕೂಡಿಕೊಂಡು ಅವರು ತಪ್ಪಿದಲ್ಲಿ ತಿದ್ದುತ್ತ ತಾವು ಸೂತ್ರಧಾರಿಗಳಾಗಿದ್ದು ವೀರಶೈವ ಸಮಾಜದ ಮಹತ್ವಪೂರ್ಣವಾದ ಕಾರ್ಯಕಲಾಪಗಳನ್ನು ಮಾಡಿಸಿದರು. ಈ ಮೇರೆಗೆ ಪರಮವಿಭೂತಿಗಳೂ ವೀರಶೈವ ಸಮಾಜದ ಪರಮಕಾರಣಿಕ ಪುರುಷರೂ ಆದ ಪ್ರಭುಗಳು ಮಾಯಾಮರ್ದನರೇ? ಅಲ್ಲವೇ? ಎಂಬುವದೊಂದು ವಿಮರ್ಶಿಸಲ್ಪಡತಕ್ಕ ವಿಷಯ. ನಮ್ಮ ಯಾವತ್ತು ಶರಣರು ಮಾಯಾಮರ್ದನ ಮಾಯಾಕೋಳಾಹಳ ನಿರ್ಮಾಯ ನಿರಂಜನರೆಂದು ಏಕಕಂಠದಿಂದ ಹೇಳುವರು.

ಬಸವಣ್ಣನವರು "ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ತ್ವಕ್ಕಿನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನಾಸಿಕದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಇಂತೀ ಪಂಚೇಂದ್ರಿಯಂಗಳಲ್ಲಿ ಬ್ರಹ್ಮಚಾರಿಯಾಗಿ ಕೂಡಲಸಂಗಮದೇವರಲ್ಲಿ ಎನ್ನನಾಗು ಮಾಡಲಿಕ್ಕೆ ಬ್ರಹ್ಮಚಾರಿಯಾದರು ಪ್ರಭುದೇವರು" ಶೂನ್ಯಸಂಪಾದನೆ (ಪುಟ ೩೫೨).

ಚನ್ನಬಸವಣ್ಣನವರು "ಹೆಣ್ಣಿಂಗೆ ಬಂದಾತನಲ್ಲ. ಹೊನ್ನಿಂಗೆ ಬಂದಾತನಲ್ಲ. ಮಣ್ಣಿಂಗೆ ಬಂದಾತನಲ್ಲ. ಅಶನಕ್ಕೆ ಬಂದಾತನಲ್ಲ. ವ್ಯಸನಕ್ಕೆ ಬಂದಾತನಲ್ಲ. ಕೂಡಲಚನ್ನಸಂಗಯ್ಯನಲ್ಲಿ ಭಕ್ತಿಪಥವ ತೋರಬಂದನಯ್ಯ ಪ್ರಭುದೇವರು" ಶೂನ್ಯಸಂಪಾದನೆ (ಪುಟ ೩೫೩).

ಮಡಿವಾಳಯ್ಯಗಳು "ಸಂಸಾರಸಾಗರಾಯದ ತನಿರಸವಹಿಂಡಿ ಹಿಡಿದಾಡಿದರಯ್ಯ ಸವಂಕೊಂಡು ಹರಿದು ಹತ್ತವನಲ್ಲ ಮರಳಿ ನೋಡುವನಲ್ಲ. ಇಂತಪ್ಪ ವೀರರುಂಟೆ? ಇಂತಪ್ಪ ಧೀರರುಂಟೆ? ಇಂತಪ್ಪ ಪೌರುಷಚೇತನಾಗಿ ಮಾಯೆಯ ಹಂಗಿಸಿ ಮುಯ್ಯಾಂತು ಮುಂದಣ ಸಿಲವನಾಗು ಮಾಡಿದ ನಿಜೈಕ್ಯನಿರ್ಣಯದ ನಿಷ್ಪತ್ತಿಗೆ ನಿಜವಾಗಿ ನಿರಾಳದೊಳಗೆ ತಾನೇ ತೋಲುತ್ತಿರ್ದನು ಕಲಿದೇವ ನಿಮ್ಮ ನಿಜೈಕ್ಯ ಪ್ರಭುದೇವರ ಶ್ರೀಪಾದದಲ್ಲಿ ಭೃಂಗನಾಗಿಪ್ಪೆನು" ಶೂನ್ಯ ಸಂಪಾದನೆ (ಪು. ೩೪೯).

ಪ್ರಭುಗಳ ಸ್ವಯವಚನ "ಬ್ರಹ್ಮವಿಷ್ಣುಗಳ ಮಾಯೆ ತೊತ್ತಳದುಳಿದಂದು. ದೇವದಾನವ ಮಾನವರ ಮಾಯೆ ಅಗಿದಗಿದು ತಿಂಬಂದು ರುದ್ರಗಣ ಪ್ರಮಥಗಣಂಗಳೆಂಬವರ ಮಾಯೆ ಮರುಳ್ಮಾಡಿ ಕಾಡುವಂದು ನೊಸಲಕಣ್ಣ ಪಂಚಮುಖ ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು ಅಷ್ಟಶತಸಹಸ್ರ ಋಷಿಗಳ ಮಾಯೆ ತಪೋಮದದಲ್ಲಿ ಕೆಡಹುವಂದು. ನಾನು ಮಾಯಕೋಲಾಹಳನಾಗಿರ್ದೆ ಕಾಣಾ ಗುಹೇಶ್ವರಾ" ಶೂನ್ಯಸಂಪಾದನೆ (ಪು. ೫).

ಬಸವಾದಿಪ್ರಮಥರನ್ನು ಹಿಡಿದು ಷಡಕ್ಷರಿ ಕವಿಗಳ ವರೆಗೂ ಇರುವ ನಮ್ಮ ಶರಣರೆಲ್ಲ ಅಲ್ಲಮಪ್ರಭುಗಳು ನಿರ್ಮಾಯರೆಂದೇ ನುತಿಸಿರುವರು.

ವಿಷಮನಿರ್ಮಾಯಲಕಾಯವನಾಂತು ಧರೆಗೆ ಪಾ। ಲಿಸಲೆಂದು ಒಂದು ವಸುಯತಿಯೋಹ ಸ್ಫೂರ್ತಿ॥ ವಿಸರವಂ ಪಾವನಂಗೆಯ್ದು ನಿಂದೊಡೆಪೆಚ್ಚಿ ಸುಳಿದೊಡಂ ನೆಳಲಿಲ್ಲದೆ॥। ಜಸವೆತ್ತು ಚರಿಸಿ ಸುಜ್ಞಾನ ಪ್ರಕಾಶದಿಂ। ಬಸವ ಮೊದಲಾದ ಶರಣರ ಹೃದಯದಲ್ಲಿ ರಾ॥ ಜಿಸುವ ನಿರ್ಮಾಯನೆನಿಪಲ್ಲಮಪ್ರಭುರಾಯನೊಸೆದು ರಕ್ಷಿಸುದೆಮ್ಮನು॥ ತೋಂಟದ ಸಿದ್ಧೇಶ್ವರರು.

ಬಲ್ಲಿತಹ ಹರಿವಿರಿಂಚಾದಿಗಳ ಮುನಿವರರ। ಸಲ್ಲಲಿತ ಚಿತ್ತಮಂ ತಲ್ಲಣಂಗೊಳಿಸಿ ಜಗ॥ ವೆಲ್ಲಮಂ ಕೊರಚಾಡಿ ಕಾಡಿಯಾಡಿಪ ಮಾಯೆಯಾರ್ಭಟನತಿಗಳೆದಾವಗಂ॥। ಉಲ್ಲಾಸದಿಂದ ಖಂಡಿತ ರೂಪನಾಗಿ ಚಿ। ದ್ವಲ್ಲಭನೆನಿಸಿ ರಂಜಿಪಲ್ಲಮ ಪ್ರಭುವರನ। ಮೆಲ್ಲಡಿಯ ನೆನೆವ ವಿದ್ಯಾವಲ್ಲರಿಯ ಚಿಲ್ಲವಿತ್ರದಿಂ ಭೇದಿಸುವೆನು॥ ತೋಂಟದ ಸಿದ್ಧಲಿಂಗಯತಿಗಳು

ಅಲ್ಲಮಪ್ರಭುವೆಂಬ ಸಂಯಮಿ । ವಲ್ಲಭಂ ಲೋಕಪ್ರಪಂಚಕೆ ॥
ದುರ್ಲಭಂ ಚರಲಿಂಗಮೂರ್ತಿಸಮುಜ್ವಲಿತ ಕೀರ್ತಿ ॥ ಬಲ್ಲಿಹರ ಬಲ್ಲಹನು
ವಿರತೋ । ತ್ಫಲ್ಲ ಮುಖಕಮಲಂಜಮಂಗೆವೆ । ದಲ್ಲಣನುಭಯ ಕರ್ಮಸೃಂ
ತನಕರ್ಮಕರ್ಮಠನೂ ॥ ಭೀಮಕವಿ.

ದರ್ಪಣದೊಳೆಸೆವ ಪ್ರತಿಬಿಂಬದಂತಾಗಳದೊ । ಳಿರ್ಪಸುರಚಾಪದಿರ
ವೆಂತಂತೆದಗ್ಧಪಟ । ತೋರ್ಪಂತೆ ಘನಮಾರೀಚಿಯು ನಿಲುವಿನಂತಾಲಿವರ
ಲಂತೆ ಮಿಸುಪ । ಕರ್ಪೂರಂ ಶಿಖಿಯೊಳಡಮೆರದಂತೆ ವಿಶ್ರುತನಿತ । ಸರ್ಪಿ
ಯೊಳಗಣ ರೂಪಿನಂತಂತೆ ಮೆರೆದು ಕಂ । ದರ್ಪನಂ ಸುಟ್ಟ ತುಳಸಿಮಾರ್
ಯನಲ್ಲಮಪ್ರಭುರಾಯ ಸಲಹೆಂಮ್ಮನು ॥ ವಿರೂಪಾಕ್ಷಪಂಡಿತ.

ಜಿತಮಾಯಂ ನಿರಪಾಯನನ್ವಿತಚಿದಂಗಂ ಸದ್ದಯಾಪಾಂಗನೂ ।
ರ್ಜಿತಶೀಲಂ ಶ್ರುತಿಮೂಲನಾತ್ತ ಶಿವಮಂತ್ರಂಪ್ರೋಕ್ತತಂತ್ರಂಕುಶಂ ।
ಸ್ಮೃತಿದೂರಂಗಣಸಾರನಸ್ಯ ಸಮಯಾಹಂಕಾರಶಂಕಾಹರಂ । ಸತತಂ
ಮಾಳ್ಕೆಮಗಲ್ಲಮಪ್ರಭುವರಂ ವೈರಾಗ್ಯ ಸೌಭಾಗ್ಯಮಂ ॥ ಷಡಕ್ಷರಕವಿ.

ಇದರ ತೆ ಇನ್ನೂ ಗುಬ್ಬಿಮಲ್ಲಣಾರ್ಯ ಸಿದ್ಧಾದೃಶ್ಯಕವಿ. ಸುರಂಗ
ಕವಿಗಳೇ ಮೊದಲಾದವರೆಲ್ಲ ಜಿತಮಾಯರೆಂದೇನುತಿಸಿರುವರು.

## ಅನುಭವಮಂಟಪದ-ಅಸ್ತಿತ್ವ.

ಇಲ್ಲಿ ಶಿವಾನುಭವಮಂಟಪವೆಂಬುವದೊಂದು ೧೫ ನೇ ಶತಮಾನದಲ್ಲಿ ವಿಜಯನಗರದ ಪ್ರೌಢದೇವರಾಯನ ಕಾಲಕ್ಕೆ ಆಗಿಹೋದ ಅಸ್ತವ್ಯಸ್ತವಾಗಿ ಬಿದ್ದಿದ್ದ ವಚನ ವಾಙ್ಮಯದ ಉದ್ಧರಣಕಾರ್ಯಕರ್ತೃಗಳಾದ ಲಕ್ಕಣ್ಣದಂಡೇಶ ಜಕ್ಕಣಾಚಾರ್ಯ ಚಾಮರಸಾದಿ ವಿದ್ವನ್ಮಣಿಗಳಿಂದ ಕಲ್ಪಿಸಲ್ಪಟ್ಟ ಕಾಲ್ಪನಿಕ ಸಂಘವೆಂದು ಯಾರೂ ಭಾವಿಸಕೂಡದು ಅದು ಕಾಲ್ಪನಿಕಸಂಘವಾಗದೆ ಬಸವಾದಿ ಪ್ರಮಥ ಪುಂಗವರಿಂದ ನಿರ್ಮಿಸಲ್ಪಟ್ಟ ನಿಶ್ಚಿತ ಸಂಘವೇ ಆಗಿದೆ.

ಶೂನ್ಯ ಸಂಪಾದನೆಯಲ್ಲಿ “ ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದಿತಯ್ಯಾ ಶಿವನ ಪ್ರತಾಪ. ಆ ಬೆಳಗಿನೊಳು ಒಪ್ಪುತ್ತಿರ್ದರಯ್ಯಾ ಅಸಂಖ್ಯಾತ ಭಕ್ತ ಮಹಾಗಣಂಗಳು.

ಶಿವಭಕ್ತರಿರ್ದ ಕ್ಷೇತ್ರ ಅವಿಮುಕ್ತಕ್ಷೇತ್ರವೆಂಬುದು ಹುಸಿಯೆ ? ಶಿವಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೆ ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯರು ಸಂಗನಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ. ” (ಸಿದ್ಧರಾಮೇಶ್ವರ ವಚನದಲ್ಲಿ ಪುಟ ೫೦)

“ಪ್ರಭುದೇವರು ಸಿದ್ಧರಾಮದೇವರನು ಕಲ್ಯಾಣಕ್ಕೆ ಕರಕೊಂಡು ಹೋಗಿ ಕೆಲವು ವಚನಗಳಿಂದ ತಾನು ಸಿದ್ಧರಾಮೇಶ್ವರನಿಗೆ ಲಿಂಗ ವಿರಹಿತ ಅಂಗಕ್ಕೆ ಮೋಕ್ಷವಿಲ್ಲೆಂದು ಹೇಳಿ ಬಸವಣ್ಣ ಚನ್ನಬಸವಣ್ಣ ಮಡಿವಾಳಮಾಚಿ ಮೊದಲಾದ ಶರಣರಿಂ ಧಿಕ್ಕರಿಸಿ ನುಡಿಸಿದಲ್ಲಿ ಸಿದ್ಧರಾಮೇಶ್ವರದೇವರು ತಮ್ಮ ಜ್ಞಾನದೃಷ್ಟಿಯಿಂದರಿದರಿದು ಅವರೊಡನೆ ಎನಗೆ ಇಷ್ಟಲಿಂಗ ಸಂಬಂಧವ ಮಾಡಬೇಕೆಂದು ಹಾಡಿದ ವಚನಗಳ ಮೇಲಿಂದ ಅನುಭವಮಂಟಪವು ಇತ್ತೆಂದು ಪ್ರತೀತಿಯಾಗುತ್ತದೆ.

ವಚನಗಳನ್ನು ಶೋಧಿಸಿ ತೆಗೆಯುತ್ತ ಅಷ್ಟೊಂದು ಕಷ್ಟಪಡುವದಾದರೂ ಯಾಕೆ ? ಕಲ್ಯಾಣ ಪಟ್ಟಣದಲ್ಲಿ ಈಗಲೂ ತೋರಿಬರುವ ಅನುಭವ ಮಂಟಪದ ಸ್ಥಳಕ ಐತಿಹ್ಯವೇ ಪ್ರಬಲಪ್ರಮಾಣವಾಗಿದೆ. ಆ ಮಂಟಪದಲ್ಲಿ ಪ್ರಭುಗಳು ಬಸವಣ್ಣನವರು ಕುಳಿತುಕೊಳ್ಳುತ್ತಿದ್ದ ಸ್ಥಾನವೂ ಸಹ ಇದೇ ಎಂದು ಅಲ್ಲಿಯ ಜನರು ನಿರ್ದೇಶಮಾಡಿ ತೋರಿಸುತ್ತಾರೆ. ಅಲ್ಲಲ್ಲಿ ಇರುವ ಶರಣರ ಗವಿಗಳೂ ಪ್ರಭುಗಳ ಮಠವೂ ಸಾಕ್ಷೀಭೂತಗಳಾಗಿವೆ. ಇವನ್ನೆಲ್ಲ ಸಂಶೋಧಕರು ಅಲ್ಲಿಗೆ ಹೋಗಿ ಪ್ರತ್ಯಕ್ಷಮಾಡಿಕೊಳ್ಳಬಹುದು.

# ವೀರಶೈವರ ಪಂಚಾಚಾರಗಳು.

( ಲೇಖಕರು— ಶ್ರೀಯುತ ಬಸವಪ್ಪ ಚನ್ನಪ್ಪ ಪಟ್ಟೇದ. )

---

"ಆಚಾರಃ ಪ್ರಥಮೋಧರ್ಮಃ" ಎಂಬ ಸುಭಾಷಿತ ವಾಕ್ಯವು ಆಚಾರದ ಮಹತ್ವವನ್ನು ಚೆನ್ನಾಗಿ ವ್ಯಕ್ತಗೊಳಿಸುತ್ತದೆ. ಮನುಷ್ಯನು ಯಾವ ಧರ್ಮವನ್ನು ಪಾಲಿಸಿದರೂ, ಅವನು ಆಚಾರವಂತನಾಗಿರಲೇಬೇಕು. ಅನಾಚಾರಿಯಾಗಿ ನಡೆಯುಲಿಕ್ಕೆ ಯಾವ ಧರ್ಮವೂ ಹೇಳಲಾರದು. ಇದರಿಂದ ಆಚಾರವೇ ಧರ್ಮದ ತಳಹದಿಯಾಗಿರುವದೆಂಬದು, ಒಡೆದು ಕಾಣುವದು. ಇಂತಹ ಆಚಾರವನ್ನು ಸೂಕ್ಷ್ಮರೀತಿಯಿಂದ ನಿರೀಕ್ಷಿಸಿ, ನಮ್ಮ ವೀರಶೈವರು ಅದನ್ನು ಐದು ಭಾಗವಾಗಿ ವಿಭಾಗಿಸಿರುವರು. ಅವಕ್ಕೆ ಪಂಚಾಚಾರಗಳೆಂದು ಹೆಸರು ಅವು:—ಲಿಂಗಾಚಾರ, ಶಿವಾಚಾರ, ಸದಾಚಾರ, ಗಣಾಚಾರ, ಭೃತ್ಯಾಚಾರ, ಇವನ್ನು ಕುರಿತು ಶ್ರೀಚೆನ್ನಬಸವೇಶ್ವರ ದೇವರು ಹೀಗೆ ಬಣ್ಣಿಸಿರುವರು:

"ಲಿಂಗವೇ ಪರವೆಂದರಿದು ಅನ್ಯದೇವರ ಭಜನೆಯಿಲ್ಲದಿರ್ಪುದೇ ಲಿಂಗಾಚಾರ। ಅಂಗದ ಮೇಲೆ ಲಿಂಗವಿರ್ಪ ಶಿವಭಕ್ತನೇ ಶಿವನೆಂದರಿದು ಅವರ ಮಂದಿರವ ಹೊಕ್ಕು ಮಿಕ್ಕುದನು ಉಂಬುವದೇ ಶಿವಾಚಾರ। ಸತ್ಯಾಯುಕದಿಂದ ಧನವ ಸಂಪಾದಿಸಿ ಗುರು ಲಿಂಗ ಜಂಗಮ ದಾಸೋಹ ಧಾನ ಪರೋಪಕಾರ ಮಾಡುದೇ ಸದಾಚಾರ। ಶಿವನಿಂದೆಯ ಕಿವಿಗೊಟ್ಟು ಕೇಳದಿರುವದೇ ಗಣಾಚಾರ। ಶಿವಭಕ್ತನ ಶಿಶುವು ತೊಟ್ಟಿಲಲ್ಲಿರ್ಪುದ ಕಂಡು ಯಜಮಾನನೆಂದರಿದು ನಮ್ರಭಾವದಿಂದ ನಡೆದುಕೊಂಬುದೇ ಭೃತ್ಯಾಚಾರ। ಇಂತೀ ಪಂಚಾಚಾರ ಸಹಿತನಾಗಿ ನಡೆಯುವ ಶಿವಭಕ್ತನೊಕ್ಕಿದ ನಿಕ್ಕಿ ಸಲಹೋ ಕೂ. ಚೆ. ಸಂ. ದೇವ"

ಈ ವಚನವನ್ನು ಕ್ರಮವಾಗಿ ಕೆಳಗೆ ವಿವರಿಸಿದರೆ, ಪಂಚಾಚಾರಗಳ ಮಹತ್ವವು ಮನದಲ್ಲಿ ಸರಿಯಾಗಿ ಒಡಮೂಡುವದು.

(೧) ಲಿಂಗಾಚಾರ—ಭಕ್ತನು ತನ್ನ ಕರದಲ್ಲಿ ಧರಿಸಿದ ಲಿಂಗವೇ ದೇವರು ಅಥವಾ ಪರವಸ್ತುವು. ಅದಕ್ಕೆ ಸರಿಯಾದ ಇಲ್ಲವೆ ಮಿಗಿಲಾದ

ದೇವರಾಗಲಿ ವಸ್ತುವಾಗಲಿ ಜಗತ್ತಿನಲ್ಲಿ ಇನ್ನೊಂದಿಲ್ಲ ಎಂಬ ಮಾತನ್ನು ಲಿಂಗಧಾರಿಯು ಅಂತಃಕರಣಪೂರ್ವಕನಾಗಿ ನಂಬಬೇಕು. ಏಕೆಂದರೆ-ಶ್ರೀಗುರು ದೇವನು ಶಿಷ್ಯನ ಶಿರೋಗತ ಚಿತ್ಕಳೆಯನ್ನು ಅರ್ಥಾತ್ ಜಗದ್ವ್ಯಾಪಿ ಚೈತನ್ಯವನ್ನೂ—ಆತನ ಪ್ರಾಣವನ್ನೂ ಆವಾಹಿಸಿ ಲಿಂಗಾಕಾರ ಮಾಡಿ, ಇಷ್ಟಲಿಂಗವೆಂದು ಕರದಲ್ಲಿ ಕೊಟ್ಟು ಪೂಜಿಸಲಿಕ್ಕೆ ಆಜ್ಞಾಪಿಸಿರುತ್ತಾನೆ. ಇದರಲ್ಲಿ ಪೂಜಕನಾದ ಶಿಷ್ಯನ ಪ್ರಾಣ ಸಹಿತವಾಗಿ ಸಕಲ ಜಗತ್ತು ಅಡಕವಾಗಿರುತ್ತದೆ. ಇನ್ನು ಹೊರಗೆ ಬೇರೆ ಯಾವ ವಸ್ತು ದೇವರೆಂದು ಉಳಿಯಿತು? ಉಳಿದಿದ್ದರಲ್ಲವೇ ಅಲ್ಲಿ ಹೋಗಿ ಅದನ್ನು ಪೂಜಿಸುವದು! ಉಳಿಯಲಿಲ್ಲೆಂದು ಒಪ್ಪಿದರೆ ಮೇಲಿನ ವಚನದಲ್ಲಿ ಅಪ್ಪಣೆ ಕೊಡಿಸಿದಂತೆ "ಲಿಂಗವೇ ಪರ" ವೆಂಬುದರಲ್ಲೇನು ಸಂದೇಹ! ಆದುದರಿಂದ ಲಿಂಗದ ವ್ಯತಿರಿಕ್ತವಾಗಿ ಬೇರೆ ಯಾವುದನ್ನೂ ಲಿಂಗವಂತನು ಪೂಜಿಸಲಿಕ್ಕೆ ಭವಿಗಳೋಪಾದಿ ಓಡಾಡಬಾರದು. ಭವಿಗಳಿಗೆ ವ್ಯಕ್ತಿಶಃ ಗುರುದತ್ತ ಲಿಂಗವಿಲ್ಲ. ಸಕಲರಿಗೂ ಸಾಮಾನ್ಯವಾಗಿ ಗ್ರಾಮಗಳಲ್ಲಿಯೂ ಕ್ಷೇತ್ರಗಳಲ್ಲಿಯೂ ದೇವರೆಂದು ಮೂರ್ತಿಗಳನ್ನು ಸ್ಥಾಪಿಸಿ ಅವನ್ನು ಆರಾಧಿಸಲಿಕ್ಕೆ ಅನುವು ಮಾಡಿಕೊಟ್ಟಿದ್ದಾರೆ. ಅವು ಪ್ರತಿಯೊಬ್ಬ ಮನುಷ್ಯನಿಗೆ ದಿನಾಲು (ಸರ್ವದಾ) ಪೂಜಿಸಲಿಕ್ಕೆ ಬರಲಾರವು. ಹಾಗೆ ಮಾಡ ಹೋದರೆ ಆಯುಷ್ಯ ನಿಂತು ನಿಂತು ಇದ್ದ ವೇಳೆಯನ್ನೆಲ್ಲ ಅದರಲ್ಲಿಯೇ ಕಳೆಯಬೇಕಾಗುವದು. ಆದುದರಿಂದ ಎಲ್ಲ ಜನರ ವತಿಯಿಂದ ಒಬ್ಬನನ್ನು "ಪೂಜಾರ್ಯ"ನೆಂದು ನೇಮಿಸುವರು ಅವನ ಹೊರತು ಮಾತ್ರ ಬೇಕಾದರೆ ಅಲ್ಪ ಸಲ್ಪ ಜನರೂ ಪೂಜಿಸಬಹುದು. ಹೀಗೆ ಪೂಜಿಸಿದವರಿಗೆ ಮಾತ್ರ ಅದರ ಫಲವು ಸಲ್ಲುವುದಲ್ಲದೆ, ಇತರರಿಗೆ ಎಂದೂ ಬರಲಾರದು. ಉಂಡವರ ಹೊಟ್ಟೆ ತುಂಬುವದಲ್ಲದೆ-ಉಣ್ಣುವವರ ಮೋರೆ ನೋಡಿದರೆ-ಉಳಿದವರಿಗೆ ತೃಪ್ತಿಯಾಗದು ಅಂತೇ ಶ್ರೀಬಸವಣ್ಣನವರು ಈ ವಚನವನ್ನು ನುಡಿದಿದ್ದಾರೆ.—

"ಹಸಿವಾದಡುಂಬುದನು ಸತಿಯ ಸಂಭೋಗವನು, ಆನಾಗಿ
ನೀ ಮಾಡೆಂಬುವರುಂಟೇ? ಮಾಡುವುದು ಮಾಡುವುದು ಮನಮುಟ್ಟಿ
ಮಾಡುವುದು ಮಾಡುವುದು ತನುಮುಟ್ಟಿ ತನುಮುಟ್ಟಿ ಮನಮುಟ್ಟಿ
ದಿರ್ದಡೆ ಕೂಡಲ ಸಂಗಮ ದೇವನೇತರಲ್ಲಿಯೂ ಇಲ್ಲ."

ನೋಡಿರಿ! ದಿನಾಲು ಇದರಿಂದ ದೇವಪೂಜೆಯನ್ನು ತನ್ನ ಉದ್ಧಾರ ಕ್ಕಾಗಿ ಪ್ರತಿಯೊಬ್ಬನು ಸ್ವತಃ ಮಾಡುವುದು ಅದೆಷ್ಟು ಅವಶ್ಯವೆಂಬುದು ಕಂಡು ಬರುತ್ತದೆ! ಇದೇ ತತ್ವವನ್ನು ನೆನೆದು ಪ್ರತಿಯೊಬ್ಬನಿಗೆ ವೀರ ಶೈವರಲ್ಲಿ ಲಿಂಗವನ್ನು ಧರಿಸುತ್ತಾರೆ. ಅವನು ಅದರ ಪೂಜೆಯನ್ನು ಸ್ವತಃ ತಪ್ಪದೆ ಮಾಡಿಯೇ ತೀರಬೇಕಾಗುವದು. ಅದರಿಂದಲೇ ಅವನಿಗೆ ಸ್ವಯಂಲಿಂಗವಾಗಲು ಅನುಕೂಲವಾಗುವದು. ಈ ಮರ್ಮವನ್ನರಿಯ ದವರು ತಮ್ಮಲ್ಲಿರುವ ಲಿಂಗವನ್ನು ತಿರಸ್ಕರಿಸಿ (ಮರೆದು) ಕ್ಷೇತ್ರ ಲಿಂಗ ಗಳಿಗೆ ಓಡಾಡುವರು. ಹಾಗೆ ಮಾಡಲಿಕ್ಕೆ ನಾವೇನು ಲಿಂಗವ ಕಾಣದ ಭವಿಗಳೇ! ಅವರಿಗೆ ಲಿಂಗವಿಲ್ಲದುದರಿಂದ ಅವರು ತೀರ್ಥಯಾತ್ರಾದಿಗ ಳನ್ನು ಗೆಯ್ಯುವರು. " ಪೆದ್ದನ ಕಂಡು ಪೆದ್ದ ಪ್ಯಾ ಪ್ಯಾ ಎಂದಂತೆಯೇ ಅನ್ಯ-ಕ್ಷೇತ್ರ-ದೈವಕ್ಕೆರಗುವವರ ಗತಿಯಾಗುವುದು ಕಂಡಿರಾ! ಇಂತಹ ರನ್ನು ಅಂಬಿಗರ ಚೌಡಯ್ಯ ಶರಣರು ಎಷ್ಟು ನಿಷ್ಠುರವಾಗಿ ಬೋಧಿಸಿ ರುವರು. ಗಮನಿಸಿರಿ.

> " ತನುದೇವರಿರೆ ಮತ್ತೆ ಮನೆದೇವರೇಕಯ್ಯ? ಕರಿದಿಷ್ಟ ವಿರಲು ಮತ್ತೆ ಗುಡಿಗುಂಡಾರವೇಕಯ್ಯ? ಅಂಗದ ಮೇಲೆ ಲಿಂಗ ವಿರೆ ಕ್ಷೇತ್ರಂಗಳೇಕಯ್ಯ? ಇಲ್ಲಿಹನೆ ಎಲ್ಲೆಡೆಗೆ ತಾನಿಹನೆಂಬ ರಿವು ಮೂಡದಲೆ ಮೂರ್ಖರ್ಕಳೆಡೆತಾಗಿ ಸಾವರಲಾ! ಪೋಡಿ ಭವಿಸಂಗದಿಂವ ಕೆಡುವರಿವರನುರೆ ನೋಡಿ ಕಿವಿ ಮೂಗು ಹಿಡಿದೆತ್ತಿ ಎಡಪಾದ ರಕ್ಷೆಯಿಂ ಜಡಿ ಜಡಿದು ತಿಳಿಸೆಂದನಂಬಿಗರ ಚೌಡಯ್ಯ "

ಆದುದರಿಂದ ಒಣಭ್ರಾಂತಿಯನ್ನು ಬಿಟ್ಟು ವೀರಶೈವರು ತಮ್ಮ ಲಿಂಗವೇ ಪರ (ಶ್ರೇಷ್ಠ)ವೆಂದರಿದು, ಅನ್ಯ ದೈವ ಭಜನೆಯನ್ನು ತ್ಯಜಿಸಬೇಕು. ಅವನ್ನು ಸಹಸಾ ಮರೆತು ಬಿಡಬೇಕು. ನಮ್ಮಲ್ಲಿ ಮತ್ತು ಒಂದು ವಿಶೇಷವೇನೆಂದರೆ---ಇಷ್ಟ ಲಿಂಗವು ಭವಿಗಳ ಲಿಂಗದಂತೆ; ತನ್ನಿಂದ ವ್ಯತಿರಿಕ್ತವಾದುದಲ್ಲ. ನೆಟ್ಟಲಿಂಗವನ್ನು ಪೂಜಿಸುವ ಅವರ ಭಾವನೆಯು " ಇದು ಬೇರೆ ತಾನು ಬೇರೆ " ಎಂದಿರುತ್ತದೆ. ಇವರು ಎಷ್ಟಾದರೂ ಅಣವಮಲ ಸಂಯುತರೇ! ಇವರು ದೇವರನ್ನು ಕಂಡರೂ ತಮಗೆ ಭಿನ್ನವಾದ ತಮಗಿಂತ ಉಚ್ಚ ಸ್ವರೂಪದವನನ್ನೇ ಕಾಂಬರಲ್ಲದೆ ಅವನೇ ತಾನಾಗಿ ಅವರಲ್ಲಿ ಬೆರೆದೇಕವಾಗುವ ಸಾಮರಸ್ಯ ಸುಖವನ್ನು ಎಂದೂ ಅರಿಯರು. ಇವರಿಗೆ ಸಾಲೋಕ್ಯ, ಸಾಮಿಪ್ಯ, ಸಾರೂಪ್ಯ, ಮುಕ್ತಿಯು

ಲ್ಲದೆ, ಸಾಯುಜ್ಯ ಕೈವಲ್ಯವನ್ನೆಂದೂ ಹೊಂದಲಾರರು. ಅಂತೇ ವೀರ ಶೈವರು "ಸ್ವತ: ಲಿಂಗವಾಗಿ ಲಿಂಗವನ್ನು ಪೂಜಿಸು" ಎಂದು ಹೇಳಿದ್ದಾರೆ.

(೨) ಶಿವಾಚಾರ—ಅಂಗದ ಮೇಲೆ ಲಿಂಗವಿರ್ಪ ಶಿವಭಕ್ತನೇ ಶಿವನೆಂದು ಅರಿದು, ಅವನೊಡನೆ ಆದಾವ ಭೇದ ಭಾವನೆಯನ್ನೂ ಧರಿಸದೆ, ಕೂಡಿಕೊಂಡು ಕೇವಲ ಸಮಾನತೆಯಿಂದ ನಡೆದುಕೊಂಬುವುದೇ ಶಿವಾಚಾರವೆಂದು ಹೇಳಲಾಗಿದೆ. ಇವರೆಲ್ಲರೂ ಪೂರ್ವಜನ್ಮವಳಿದು, ಗುರು ಕರದಲ್ಲಿ ಪುನರ್ಜಾತರಾದವರು. ತಾಯಿ ತಂದೆಗಳಿಂದ ಹುಟ್ಟಿರುವವೆಂಬ ಭಾವನೆಯೇ ಪೂರ್ವಜನ್ಮವು. ತಿಳಿವಳಿಕೆಯೊಡಮೂಡಿದ ಮೇಲೆ ಶ್ರೀಗುರುವಿಗೆ ಶರಣು ಹೋಗಿ, ಆತನಿಂದ ಶಿವದೀಕ್ಷೆ ಪಡೆವುದೇ ಪುನರ್ಜಾತನಾಗುವಿಕೆ. ಈ ದೀಕ್ಷೆಯುಲ್ಲಿ ಅವನಿಗೆ ಶಿವಚಿಹ್ನಗಳಾದ ಲಿಂಗ ವಿಭೂತಿ ರುದ್ರಾಕ್ಷಿಗಳು ಅಂಗದಲ್ಲಿ ಧರಿಸಲಿಕ್ಕೆ ದೊರೆಯುತ್ತವೆ. ಇದಲ್ಲದೆ ಆಗ ಶ್ರೀಗುರುವು ಶಿಷ್ಯನ ಜ್ಞಾನೇಂದ್ರಿಯ, ಕರ್ಮೇಂದ್ರಿಯ, ಅಂತಃಕರಣ, ರಕ್ತ ಮಾಂಸಾದಿ ಧಾತುಗಳನ್ನು ಇವುಗಳಲ್ಲೆಲ್ಲ ಪ್ರಣವರೂಪದಿಂದ ಲಿಂಗ ಸ್ಥಾಪನೆ ಮಾಡಿ, ಅವನನ್ನು ಒಳಹೊರಗೆಲ್ಲೆಡೆಯಲ್ಲಿಯೂ ಲಿಂಗಮಯವಾಗಿ ಮಾಡುವನು ಇದರಿಂದ ಅವನ ಮುಂಚಿನ ನರ ಜನ್ಮವು ಅಳಿದು ಹೋಗಿ, ಹೊಸದಾಗಿ ಹರ (ಲಿಂಗ) ಜನ್ಮವು ಪ್ರಾಪ್ತವಾಗುವದು. ದೇಹವು ಅಶುದ್ಧವಾದುದೆಂಬ ಗ್ರಹಿಕೆಯು ಇಲ್ಲದಂತಾಗಿ, ಅದು ಪವಿತ್ರವಾದ ಶಿವಮಂದಿರವಾಗುವುದು. ಜೀವಾತ್ಮನೇ ಒಳಗಿರುವ ಶಿವನಾಗುವನು. ಈ ವಿಧವಾಗಿ ಒಳಹೊರಗೆಲ್ಲ ಲಿಂಗರೂಪ ಶಿವರೂಪವಾಗುವದರಿಂದ, ಅಲ್ಲಿ 'ನಾನು' ಎಂಬುದಕ್ಕೆ ಆಸ್ಪದವುಳಿಯುವದಿಲ್ಲ. ಆದುದರಿಂದ ಅವನ ಅಹಂಕಾರವು ಕಳಚಿ ಬೀಳಲಿಕ್ಕೆ ದೊಡ್ಡ ಸಹಾಯವಾಗುವದು ಸಜ್ಞಾನ ಸ್ಥಿತಿಯಲ್ಲಿ, ಈ ಮೇರೆಗೆ ಗುರುವಿನಿಂದ ತನಗಾಗುವ ಸಂಸ್ಕಾರವನ್ನೆಲ್ಲ ಪ್ರತ್ಯಕ್ಷ ನೋಡಿ ಅರಿದು, ಅವನ ಮುಂಚಿನ ಗ್ರಹಿಕೆಗಳೆಲ್ಲ ನಷ್ಟವಾಗಿ ತಾನು ಇಂದು ಗುರುದೇವನಿಂದ ಪುನೀತನಾದೆನೆಂದು ಧನ್ಯತೆ ಹೊಂದುವನು. ಅದೇ ಭಾವನೆಯನ್ನು ಮುಂದೆ ಬಲಿಸುತ್ತ ಬಲಿಸುತ್ತ ಸಾಗಿ ಕಡೆಗೆ ನಿಜವಾಗಿಯೇ ಲಿಂಗದಲ್ಲಿ ಸಮರಸತೆ ಪಡೆಯುವನು. ಹೀಗೆ ಶಿವದೀಕ್ಷೆಯ ಮಹಿಮೆಯಿರುವದು. ಇಂತಹ ಶಿವದೀಕ್ಷೆ ಹೊಂದಿದ ಶಿವಭಕ್ತರನ್ನೆಲ್ಲ ಪ್ರತ್ಯಕ್ಷ ಶಿವನೆಂದರಿದು,

ಅವರೊಡನೆ ಪೂರ್ವದ ಜಾತಿ ಇಲ್ಲವೆ ಸದ್ಯದಲ್ಲಿ ಮಾಡುತ್ತಿರುವ ಕಾಯಕ ಮುಂತಾದುದೇನೂ ಲಕ್ಷಿಸದೆ, ಕೂಡಿಕೊಂಡು ನಡೆಸುಬೇಕು. ಅಂತೇ ಶ್ರೀ ಚೆನ್ನಬಸವಣ್ಣನವರು ತಮ್ಮ ಮೇಲಿನ ವಚನದಲ್ಲಿ "ಅವರ ಮಂದಿರ ಹೊಕ್ಕು ಮಿಕ್ಕಿದನುಂಬುವುದೇ ಶಿವಾಚಾರ" ವೆಂದು ಆಜ್ಞಾಪಿಸಿದ್ದಾರೆ. ಅದರಂತೆಯೇ ಶ್ರೀ ಬಸವಮಹಿಮರಾದರೂ ನುಡಿದಿರುವರೆಂಬುದು ಅವರ ಕೆಳಗಿನ ವಚನಗಳಿಂದ ತಾನೇ ಗೊತ್ತಾಗುವದು.

(ಅ) "ಎಂತವನಾದಡೇನು ಕುಲವಹುದು ತಪ್ಪದು ಲಿಂಗಮುಟ್ಟಿಲೊಡನೆ ಶಿವಕುಲವಹುದು ತಪ್ಪದು ಪರುಷ ಮುಟ್ಟಲೊಡನೆ ಕಬ್ಬಿನ ಹೊನ್ನಪ್ಪದು ತಪ್ಪದು ಕೂಡಲ ಸಂಗಮದೇವನೊಲ್ಲ ಸರ್ವಸಂದೇಹಿಗಳನು."

(ಬ) "ಶ್ರೀ ವಿಭೂತಿ ರುದ್ರಾಕ್ಷಿ ಇದ್ದವರ ಲಿಂಗವೆಂಬೆ ಕೂ. ಸಂ. ದೇವಾ ಸದುಭಕ್ತರನೀನೆಂಬೆ."

(ಕ) "ಪಟ್ಟವ ಕಟ್ಟಿದ ಒಳಿಕ ಲಕ್ಷಣವನರಸುವರೆ? ಲಿಂಗದೇವನ ಪೂಜಿಸಿ ಕುಲವನರಸುವರೆ? ಕೂ. ಸಂ. ದೇವ 'ಭಕ್ತಕಾಯ ಮಮಕಾಯ' ನೆಂದನಾಗಿ"

(ಡ) "......ಕೂಡಲಸಂಗಮದೇವರ ಭಕ್ತರನು ಅವರಿವರೆಂದಡೆ ಕುಂಭಿಪಾಕ ನಾಯಕನರಕ ತಪ್ಪದು ತಪ್ಪದಾಗಿ"

(ಇ) "ಆವ ಕುಲವನಾದಡೇನು? ಶಿವಲಿಂಗವಿದ್ದವನೇ ಕುಲಜನು. ಕುಲವನರಸುವರೆ ಶರಣರಲ್ಲಿ, ಜಾತಿ ಸಂಕರವಾದ ಮೇಲೆ ಒಕ್ಕುದನುಂಬೆನು, ಕೂಸ ಕೊಡುವೆನವರಲ್ಲಿ ಕೂ. ಸಂ. ದೇವ ನಂಬುವೆ ನಿಮ್ಮ ಶರಣರನು."

(ಫ) "ಉಂಬಲ್ಲಿ ಊಡುವಲ್ಲಿ ಕುಲವಳಿಯಿತ್ತೆಂಬರು, ಕೊಂಬಲ್ಲಿ ಕೊಡುವಲ್ಲಿ ಕುಲವನರಸುವರು ಎಂತಯ್ಯ ಅವರ ಭಕ್ತರೆಂಬೆನು? ಎಂತಯ್ಯ ಅವರ ಯುಕ್ತರೆಂಬೆನು? ಕೂ. ಸಂ. ದೇವ ಹೊಲತಿ ಶುದ್ಧ ನೀರ ಮಿಂದತಾಯಿತ್ತು."

ಮೇಲಿನ ವಚನಗಳನ್ನು ಮನಃಪೂರ್ವಕವಾಗಿ ಪರೀಕ್ಷಿಸಿದರೆ, ವೀರಶೈವ ದೀಕ್ಷೆಗೊಂಡ ಭಕ್ತನು ಮುಂಚೆ ಆದಾವ ಕುಲ ಜಾತಿಯವರಿದ್ದರೂ

ಅದನ್ನು ಎಷ್ಟು ಮಾತ್ರವೂ ಲಕ್ಷಿಸದೆ, ಅವನನ್ನು ಶಿವಕುಲಜನವನೆಂದು ನೆರೆನಂಬಿ ಅವನೊಡನೆ ಸಂಪೂರ್ಣ ಸಮಾನತೆಯಿಂದ ವರ್ತಿಸಬೇಕೆಂದು, ಸ್ಪಷ್ಟವಾಗಿ ನಿರೂಪಿಸಿದುದು ಕಂಡು ಬಾರದೆ ಇರಲಾರರು. "ಶಿವದೀಕ್ಷೆಯೆಂಬ ಪರುಷ ಮುಟ್ಟಲೊಡನೆ ಪೂರ್ವಜಾತಿ ಎಂಬ ಕಬ್ಬುನವು, ವೀರಶೈವ ಮತವೆಂಬ ಹೊನ್ನಪ್ಪುದು ತಪ್ಪದು." ಎಂಬ ದೃಷ್ಟಾಂತವೂ, "ಭಕ್ತಕಾಯ ಮಮಕಾಯ" ಎಂಬ ಆಗಮೋಕ್ತ "ಶಿವ" ವಾಕ್ಯವೂ, "ಕೂ. ಸಂ. ದೇವಾ ಸದ್ಭಕ್ತರನು ನೀನೆಂಬೆ" ಎಂಬ ಭಕ್ತಿಭಂಡಾರಿ ಬಸವೇಶ್ವರ ದೇವರ ಸದ್ವಿಶ್ವಾಸಪೂರಿತ ಪ್ರತಿಜ್ಞಾ ವಾಕ್ಯವೂ, ನಮ್ಮನ್ನು ಅದು ಹೇಗೆ ಬಡಿದು ಎಚರಿಸುವವೆಂಬುದನ್ನು ಒಳಿತಾಗಿ ಗಮನಿಸಬೇಕು. "ಪಟ್ಟವಕಟ್ಟಿದ ಬಳಿಕ (ಶಿವದೀಕ್ಷೆಯಾದ ಮೇಲೆ) ಲಕ್ಷಣವನರಸುವರೇ? ಲಿಂಗವ ಪೂಜಿಸಿ ಕುಲವನರಸುವರೇ?" ಎಂದು ಅವರು ಧಿಕ್ಕಾರ ಪೂರ್ವಕವಾಗಿ ಹಳಿದಿರುವರು. ಎಲ್ಲ ವೀರಶೈವರಲ್ಲಿಯೂ ಅನ್ನ ಕನ್ಯಾ ವ್ಯವಹಾರವನ್ನು ನಿಃಶಂಕರೀತಿಯಿಂದ ಜರಗಿಸಬೇಕೆಂದು ಒತ್ತಿ ಹೇಳಿದ್ದಾರೆ. ಇವೆಲ್ಲ ವಿಷಯಗಳು ವೀರಶೈವಾಗಮೋಕ್ತ ಪ್ರಕಾರ ಹೇಳಲ್ಪಟ್ಟಿರುವವೇ ಹೊರತು, ಮನಬಂದಂತೆ ಆಜ್ಞಾಪಿಸಲ್ಪಟ್ಟಿರುವದಿಲ್ಲೆಂಬದನ್ನು ಲಕ್ಷ್ಯದಲ್ಲಿಡಬೇಕು. ಹೀಗೆ ಧರ್ಮತತ್ವಗಳೂ ಆಜ್ಞೆಗಳೂ ಘಂಟಾಘೋಷವಾಗಿ ಸಾರುತ್ತಿರಲು, ನಾವು ಅವನ್ನೆಲ್ಲ ಮೂಲೆಗೊತ್ತಿ ಭವಿಗಳ ಆಚರಣೆಗಳನ್ನೇ ಮುಂದಿಟ್ಟುಕೊಂಡು, ಕಣ್ಣುಮುಚ್ಚಿ ಕುಂಗಳರಂತೆ ವರ್ತಿಸುವದು, ಅದೆಷ್ಟು ಲಾಂಛನವಾದುದೆಂಬರನ್ನು ಸಮಾಜವು ನೆನೆಯಬೇಕು. ಕಾಲಪರಿಸ್ಥಿತಿಯನ್ನು ಗಮನಿಸಿ ಇನ್ನಾದರೂ ಎಚ್ಚರಾಗಬೇಕು.

ಇಲ್ಲಿ ಹೇಳತಕ್ಕ ಇನ್ನೊಂದು ಸೋಜಿಗದ ಸಂಗತಿಯೇನಂದರೆ— ವಸ್ತುಸ್ಥಿತಿ ಹೀಗಿದ್ದರೂ ಪರಾನ್ನದಿಂದ ದೇಹವನ್ನು ರಕ್ಷಿಸಿಕೊಳ್ಳಲಿಕ್ಕೆ ಮುಚ್ಚಿದ ಗುರುವರ್ಗದ ಅನೇಕ ವ್ಯಕ್ತಿಗಳು ಮಹಾತ್ಮರು "ವೀರಶೈವರಲ್ಲಾದರೂ ಜನ್ಮಸಿದ್ಧವಾದ ಮೇಲು ಕೀಳುಗಳಿರುತ್ತವೆಂದೂ—ಅಥವಾ ಭವಿಗಳ ನಾಲ್ಕು ವರ್ಣಗಳುಂಟೆಂದು—ನಿರ್ಲಜ್ಜತನದಿಂದ ಪ್ರತಿಪಾದಿಸಲಿಕ್ಕೂ ಬೋಧಿಸಲಿಕ್ಕೂ ಎಷ್ಟು ಮಾತ್ರವೂ ಹಿಂಜರಿಯುವದಿಲ್ಲ. ಪಾಪ! ಏನೂ ಗೊತ್ತಿಲ್ಲದ ಅಜ್ಞಸಮಾಜವು "ಅವರು ಹೇಳುವದು ನಿಜ"ವೆಂದು ನಂಬಿ ಮೋಸಹೋಗುತ್ತಿರುವದು. ಹೀಗೆ ತಮ್ಮನ್ನು ನಂಬಿದ ತಮ್ಮ

ಶಿಷ್ಯವರ್ಗದ ಕುತ್ತಿಗೆ ಕೊಯ್ದು ಆತ್ಮಘಾತ ಮಾಡಲಿಕ್ಕೆ, ಈ ಸ್ವಾರ್ಥ ಪರರು ಎಷ್ಟೂ ಹೇಸುವದಿಲ್ಲ. ಮೇಲೆ ವಿವರಿಸಿದಂತೆ ಶಿವದೀಕ್ಷೆಯಾದ ಮೇಲೆ, ಮೇಲು ಕೀಳುಗಳಿಗೆ ತುಸುವಾದರೂ ಅವಸರವುಂಟೇ? ಸರ್ವರೂ ಅಂಬರಿ ಈಶ್ವರ (ಭಕ್ತ) ಮಾಹೇಶ್ವರರೂ ಸ್ತ್ರೀ—ಪುರುಷರೂ ಏಕರೂಪರೇ—ಶಿವರೂಪರೇ ಹೊರತು, ಚತುರ್ವರ್ಣಗಳಿಗೆ ಕಿಂಚಿತ್ತೂ ಆಸ್ಪದವಿಲ್ಲ. ಅಂತೇ ವೀರಶೈವರು ಅತಿವರ್ಣಗಳು — ವರ್ಣಗಳನ್ನಳಿದವರು— ಎನ್ನಿಸಿಕೊಳ್ಳುವರು.

(೧) ಸದಾಚಾರ—ಸದಾಚಾರವೆಂದರೆ ಒಳ್ಳೆಯ ನಡತೆ ರೀತಿ ಎಂದು ಸಾಧಾರಣವಾಗಿ ತಿಳಿಯುವದುಂಟು ಆದರೆ ಸತ್ ಶಬ್ದಕ್ಕೆ ಅದು ನಿಜವಾದ ಅರ್ಥವಲ್ಲ. ಸತ್ ಎಂಬುದೇ ಪರಮಾತ್ಮನ ಪಂಚ ಲಕ್ಷಣಗಳಲ್ಲಿ ಮೊದಲನೆಯದು. ಅದರ ಅರ್ಥವು "ಯಾವಾಗಲೂ ಇರತಕ್ಕಂತಹದು" ಎಂದಾಗುವದು. ಅಸ್ (ಇರು) ಧಾತುವಿನಿಂದ ಅದರ ಉಪಪತ್ತಿ ಆದಕಾರಣ ಸದಾಚಾರವೆಂದರೆ ಆ ಪರವಸ್ತುವಿನ ಪ್ರಾಪ್ತಿಗೆ ಅನುಕೂಲವಾಗುವಂತೆ ಆಚರಿಸೋಣ. ಎಂಬುದೇ ಅದರ ಯೋಗ್ಯವಾದ ಅರ್ಥವು. ಈಗ ತಿಳಿಯುವ (ಸತ್=ಒಳ್ಳೆಯದು) ದು ವ್ಯಾವಹಾರಿಕ ಅರ್ಥವು. ವೀರಶೈವರು ಅದನ್ನು ಪಾರಮಾರ್ಥಿಕವೂ ಆಳವೂ ಆದ ಅರ್ಥದಲ್ಲಿಯೇ ಎಣಿಸಬೇಕು. ಈ ದೃಷ್ಟಿಯಿಂದ ನೋಡಿದರೆ ಸದಾಚಾರದಲ್ಲಿ ಮೊತ್ತಮೊದಲು ಪ್ರತಿಯೊಬ್ಬ ವೀರಶೈವನು ಸ್ವಾವಲಂಬಿಯಾಗುವಂತೆ, ಒಂದು ಸಮಾಜೋಪಯುಕ್ತವಾದ ನೈತಿಕ ಕಾಯಕವನ್ನು ಕೈಕೊಂಡು ತನ್ನ ಸಂರಕ್ಷಣೆಗೋಸುಗ ಪ್ರಾಮಾಣಿಕತದಿಂದ ದುಡಿದು ಹಣ ಸಂಪಾದಿಸುವದು ಅನಿವಾರ್ಯವಾಗಿರುತ್ತದೆ. ಹೀಗೆ ಕಾಯಕಷ್ಟದಿಂದ ದುಡಿದು ಹುಟ್ಟಿಸಿದ ಬಳಿಕ ಅದರಲ್ಲಿ ತಾನು ಸಕುಟುಂಬ ಸಂರಕ್ಷಿತನಾಗುವುದಲ್ಲದೆ ಸತ್ಪಾತ್ರದಲ್ಲಿ ದಾನ ಪರೋಪಕಾರಗಳನ್ನು (ಗುರುಲಿಂಗ, ಜಂಗಮ ಸೇವೆಯನ್ನು) ಜರುಗಿಸಬೇಕಾಗುವದು ಅಂತೇ ಕಾಯಕವನ್ನು ನಮ್ಮ ವಚನಕಾರರು ಅತ್ಯಂತ್ಯವಾಗಿ ಶ್ಲಾಘಿಸಿದ್ದಾರೆ. ಅದಕ್ಕೆ ಹೆಚ್ಚು ಬೆಲೆ ಕೊಟ್ಟಿದ್ದಾರೆ. ಕಾಯಕವೇ ಕೈಲಾಸವನ್ನುವಷ್ಟು ಅದನ್ನು ಏರಿಸಿದ್ದಾರೆ. ಇಂಥ ಕಾಯಕದಲ್ಲಿ ತೊಡಗಿದಾಗ ಗುರುಜಂಗಮರಾಗಮಿಸಿದರೂ ಹಿಡಿದುದನ್ನು ಬಿಟ್ಟು ಹೋಗದಿದ್ದರೆ ಅದು ಕೂಡ ಕ್ಷಮ್ಯವೆಂದೇ ಎಣಿಸಿರುವರು. ಈ ಕಾಯಕವನ್ನು ಸಕಲರೂ ಗುರು ಜಂಗ

ವುರೂ ಸಹ ಮಾಡಿಯೇ ತೀರಬೇಕೆಂದು ಕಟ್ಟು ಮಾಡಿದ್ದಾರೆ. ಭಿಕ್ಷಾ ವೃತ್ತಿಯನ್ನೂ ಅವಲಂಬಿಸಬಾರದೆಂಬುದು ಅವರ ದೃಢವಾದ ಮತವು. ಇದರಿಂದ ಉಪಜೀವನಕ್ಕಾಗಿ ಭಿಕ್ಷೆ, ಕಳವು, ಪರದ್ರವ್ಯಾಪಹರಣ ಮುಂತಾದವುಗಳನ್ನು ಮಾಡಬಾರದೆಂಬುದೂ ತಾನೇ ವ್ಯಕ್ತವಾಗುತ್ತದೆ. ಇದೇ ಮೇರೆಗೆ ಸುಳ್ಳು, ವಂಚನೆ, ಪರದಾರಾಗಮನ, ಪರಹಿಂಸೆ, ನಿಂದೆ, ಅಳಿಯಾಸೆ, ಅಹಂಕಾರ ಇತ್ಯಾದಿ ನಿಷಿದ್ಧವಾದ ಯಾವ ಗುಣಗಳೂ ಲಿಂಗವಂತನಲ್ಲಿರಕೂಡದು. ಸತ್ಯ, ಪ್ರಾಮಾಣಿಕತನ, ಗುರುಲಿಂಗ ಜಂಗಮ ಭಕ್ತಿ, ದಯಾ, ಕ್ಷಮಾ, ಶೀಲ, ವಿದ್ಯಾ (ಪಾರಮಾರ್ಥಿಕ) ವಿನಯ, ಮನೋನಿಗ್ರಹ ಇವೇ ಆದಿಯಾದ ಯೋಗ್ಯ ಗುಣಗಳೂ ಅವುಗಳಿಗನುರೂಪವಾದ ವರ್ತನವೂ ಬೇರೂರಿ ನಿಲ್ಲಬೇಕು. ಸದಾಚಾರಕ್ಕಾಗಿಯೇ ಇವರಲ್ಲಿ ಅರವತ್ತುಮೂರು ಶೀಲಗಳು ಪ್ರತಿಪಾದಿಸಲ್ಪಟ್ಟವೆ. ಸಾರಾಂಶವೇನಂದರೆ-- ತಾಮಸಗುಣಗಳನ್ನೂ, ವೃತ್ತಿಗಳನ್ನೂ ತೊರೆದು ಸಾತ್ವಿಕಗುಣಗಳನ್ನೂ ವೃತ್ತಿಗಳನ್ನೂ ಅವಲಂಬಿಸಿಯೇ ನಡೆಯುವದು ಸದಾಚಾರವೆಂದು ಹೇಳಬಹುದು. ಈ ಸಂಬಂಧದ ಅನೇಕ ವಚನಗಳನ್ನು ಉದಾಹರಿಸಬಹುದು. ಆದರೆ ವಿಸ್ತಾರ ಭಯದಿಂದ ಹಾಗೆ ಮಾಡಲು ಶಕ್ಯವಿಲ್ಲ. ವೀರಶೈವರು ಈ ವಿಷಯದಲ್ಲಿ ಅವಶ್ಯ ಹೆಚ್ಚು ಜಾಗ್ರತೆ ವಹಿಸುವದು ಇಷ್ಟವಾಗಿದೆ.

(೪) ಗಣಾಚಾರ:— ಗಣವೆಂದರೆ ಸಮೂಹ ಇಲ್ಲವೆ ಸಮಾಜ. ಒಂದು ಮತವನ್ನನುಸರಿಸಿ ನಡೆಯುವ ಜನರ ಸಮುದಾಯವು ಆ ಮತದ ಗಣವೆನಿಸುವದು. ಇಂತಹ ಗಣಕ್ಕೆ ಸಂಬಂಧಿಸಿದ ಕರ್ತವ್ಯವೇ ಗಣಾಚಾರವು. ಅದು ತಾಂತ್ರಿಕವೆಂದೂ ವ್ಯಾವಹಾರಿಕವೆಂದೂ ಎರಡು ತೆರನಾಗಿರುವುದು. ಮೇಲಿನ ವಚನದಲ್ಲಿ "ಶಿವನಿಂದೆಯ ಕಿವಿಗೊಟ್ಟು ಕೇಳದಿರುವದೇ ಗಣಾಚಾರ'' ವೆಂದು ಹೇಳಿದುದು ತಾತ್ವಿಕ ಗಣಾಚಾರವು. ಈ ಚಿಕ್ಕವಾಕ್ಯವು ಸೂತ್ರರೂಪವಾಗಿದೆ. ಬಹಳ ಅರ್ಥವನ್ನೊಳಗೊಂಡ ಸಣ್ಣದೊಂದು ವಾಕ್ಯ. ಹಿಂದುಗಳಲ್ಲಿ ಎಂದಿನಿಂದಲೂ ಶಿವ, ವಿಷ್ಣುಗಳೀರ್ವರ ಪೂಜೆಯೂ ನಡೆಯುತ್ತಬಂದಿದೆ. ಆ ಮಹಾದೇವತೆಗಳ ಭಕ್ತರು "ತಮ್ಮ ತಮ್ಮ ದೇವತೆಯೇ ಸರ್ವೋತ್ತಮ" ವೆಂದೂ ಪರಮೋಚ್ಚತಮವಾದ ಶ್ರೇಯಸ್ಸನ್ನು ಮೋಕ್ಷವನ್ನು ಅನುಗ್ರಹಿಸುವದೆಂದೂ ದೃಢವಾಗಿ ನಂಬಿರುತ್ತಾರೆ. ಅವರ ಪರದರ್ಮಭಾವನೆಗಳೆಲ್ಲ ಅವರ

ಆರಾಧ್ಯ ದೇವರನ್ನೇ ಅವಲಂಬಿಸಿರುತ್ತವೆ; ಅವುಗಳಿಗೆ ಅವನೇ ಆಧಾರನು, ಪ್ರಾಣವು. ಆದುದರಿಂದ ಆ ದೇವರನ್ನು ಕುರಿತು ಅಶ್ರದ್ಧೆಯುಂಟಾಗ ವಂತೆ ಯಾರಾದರೂ ಪರಧರ್ಮದವರು ಇಲ್ಲವೆ ಅನ್ಯಮತೀಯರು ಪ್ರತಿಪಾದಿಸುತ್ತಿದ್ದರೆ, ಅವರೊಡನೆ ಪ್ರಸಂಗ ನಡಿಸಿ,ತನ್ನ ದೇವರ ಮತ್ತು ತತ್ವದ ವಿಜಯಧ್ವಜವನ್ನು ಅಲ್ಲಿ ನೆಡಬೇಕಾದುದು ಅವಶ್ಯ. ಆದರೂ ಇದು ಒಳ್ಳೇ ಬಲ್ಲಿದರಾದ ಪಂಡಿತರಿಗೆ ಮಾತ್ರ ಸಾಧ್ಯ! ಉಳಿದವರು "ಶಾಂತಂ ಪಾಪಂ" ಎನ್ನುತ್ತ ಅಲ್ಲಿಂದ ಪಲಾಯನಮಾಡುವುದೇ ಉತ್ತಮ. ಯಾಕಂದರೆ ಸ್ವಕೀಯ ಮತತತ್ವಗಳ ವಿಷಯವಾಗಿ ಅಜ್ಞರಾದ ಅವರು, ಪರಮತೀಯರ ನಿಂದಾಪ್ರಚುರವಾದ ಟೀಕೆಯನ್ನುಕೇಳಿ, ಭ್ರಮಿಸಿ ಮೋಸಹೋಗಿ, ತನ್ನಮತದಲ್ಲಿರುವ ನಂಬುಗೆಯನ್ನು ಕಳಕೊಂಡು ಅದನ್ನು ಬಿಟ್ಟು ಮತಾಂತರ ಹೊಂದುವ ಸಂಭವವೇ ಹೆಚ್ಚಾಗಿರುತ್ತದೆ. ಹೀಗಾಗುವದು ತೀರ ಅನಿಷ್ಟ. ವೀರಶೈವ ಮತತತ್ವಗಳು ಅತ್ಯಂತ ಉಜ್ವಲವಾದವುಗಳು, ಅವುಗಳ ರಹಸ್ಯ ಸಾಮಾನ್ಯ ಜನತೆಗೆ ತಿಳಿಯುವದು ಶಕ್ಯವೇ ಇಲ್ಲ. ಅಂತಹರು ಪರರ ಬಲೆಗೆ ಬಹು ಬೇಗ ಬೀಳುವರೆಂಬ ಅನುಭವವು ಎಲ್ಲರಿಗೂ ಉಂಟು. ಮುಸಲ್ಮಾನರು ಖ್ರಿಸ್ತಿಮಿಶನರಿಗಳು ಮುಂತಾದವರ ಕುಹಕ ಮಾತುಗಳನ್ನು ಕೇಳಿಯೋ ಅದೆಷ್ಟೋ ಕೀಳ ತರಗತಿಯ (ಅಶಿಕ್ಷಿತ) ಲಿಂಗಾಯತರು ತಮ್ಮ ಅತ್ಯುತ್ತಮ ಮತಕ್ಕೆ ಎರವಾಗಿದ್ದಾರೆ, ಆಗುತ್ತಾರೆ, ಆಗುವರು. ಇದರಿಂದ ವೀರಶೈವರ ಸಂಖ್ಯೆಯು ಎಡೆಬಿಡದೆ ಕರಗುತ್ತ ನಡೆದಿದೆ. ಇದೊಂದು ನಮ್ಮ ಸಮಾಜದ ಮೇಲೆ ಬಂದಿರುವ ಮಹದಾಪತ್ತು! ಇದನ್ನು ನಾವು ತಡೆಯದಿದ್ದರೆ ಕ್ರಮೇಣ ವೀರಶೈವರು ಹ್ರಾಸವಾಗಿ, ನಾಮಶೇಷವಾಗುವದರಲ್ಲೇನು ಸಂದೇಹವಿಲ್ಲ. ಆದಕಾರಣ ಗಣಾಚಾರವು ಅದೆಷ್ಟು ಮಹತ್ವದ್ದಿರುವುದೆಂಬುದು ಒಳಿತಾಗಿ ಹೊಳೆಯದಿರದು. ಈಗ ನಾವು ಇದನ್ನು ತೀರ ಮರೆತು ಬಿಟ್ಟಿರುವದು ಬಲು ಶೋಚನೀಯವಾದುದು.

"ಶಿವನಿಂದೆ" ಎಂಬ ಪುಟ್ಟಶಬ್ದದೊಳಗೆ ಶಿವನಿಗೆ ಸಂಬಂಧಿಸಿದ ಎಲ್ಲ ವಿಧದ ಗ್ರಂಥಗಳು(ಶಾಸ್ತ್ರಪುರಾಣಾದಿಗಳು) ಗುರುಲಿಂಗಜಂಗಮಾದ್ಯಷ್ಟಾವರಣಗಳು, ಪಂಚಾಚಾರ ಷಟ್‌ಸ್ಥಲಗಳು ಮುಂತಾದವುಗಳೆಲ್ಲ ಸಮಾವಿಷ್ಟವಾಗುತ್ತವೆಂದರಿಯಬೇಕು. ಸಾರಾಂಶ, ಯಾವುದನ್ನೇಆಗಲಿ ಯಾರೇಆಗಲಿ ಇಳಿಸಿ ಮಾತಾಡಿದ್ದು ಕಿವಿಗೆ ಬಿದ್ದರೆ ಅದನ್ನೆಂದೂ ಸಹನ

ಮಾಡಬಾರದು. ಈಗ ನಾವು ಇದಾವುದರ ಅರಿವಿಲ್ಲದೆ ಹೀರ ಕಣ್ಣು ಮುಚ್ಚಿ ನಡೆಯುತ್ತಿದ್ದೇವೆ. ಹೊರಗಿನವರಂತೂ ಒತ್ತಟ್ಟಿಗುಳಿಯಲಿ ಬಿಡಿರಿ! ಸ್ವತಃ ನಮ್ಮ ಸಮಾಜದೊಳಗಿರುವವರೇ ಹೀಗೆ ನಮ್ಮ ಅಷ್ಟಾವರಣಗಳನ್ನು ತಿರಸ್ಕರಿಸಿ ನಡೆಯುತ್ತಿರುವರೆಂಬುದನ್ನು ತುಸು ನೋಡಿರಿ! ಮಾಧ್ಯಮಿಕ ಶಾಲೆಗಳಲ್ಲಿಯೂ ಉಚ್ಚಶಿಕ್ಷಣಕೊಡುವ ವಿದ್ಯಾಲಯಗಳಲ್ಲಿಯೂ ಓದುವ ನಮ್ಮ ತರುಣ ವಿದ್ಯಾರ್ಥಿಗಳು ಬರೀ ಮೈಮೇಲೆ ಲಿಂಗವಿಭೂತಿಗಳನ್ನು ಧರಿಸುವವರು ಅದೆಷ್ಟು ಜನ ಕೂರರು ವರೆಂಬುದನ್ನು ಪರೀಕ್ಷಿಸಿದರೆ ನಮಗೆ ನಾಚಿ ತಲೆ ಕೆಳಗೆ ಮಾಡಬೇಕಾಗುವದಲ್ಲವೆ? ಇಂತಹ ಪರಿಸ್ಥಿತಿಯಲ್ಲಿ ಸಮಾಜವು ಹೊಯ್ದಾಡುವುದೂ ಹರಿದುಹೋಗುವದೂ ಅದಾವ ಆಶ್ಚರ್ಯ!! ಆದ್ದರಿಂದ ಈಗ ನಾವು ಗಣಾಚಾರವನ್ನು ಬಲವಾಗಿ ಬಳಕೆಗೆ ತರುವ ಪರಿಣಾಮಕಾರಕ ಉಗ್ರೋಪಾಯಗಳನ್ನು ಕಲ್ಪಿಸದಿದ್ದರೆ ನಿರ್ವಾಹವೇ ಇಲ್ಲ. ಆದಕಾರಣ ಪ್ರತಿಯೊಂದು ಕುಟುಂಬದ ಹಿರಿಯನು ತನ್ನ ಮನೆಯಲ್ಲಿ ಒಳಿತಾಗಿ ಲಕ್ಷ್ಯಗೊಟ್ಟು ತಿದ್ದಬೇಕು. ಇದಲ್ಲದೆ ಎಲ್ಲಿಡೆಗೆ ಶಿವಾನುಭವಮಂಟಪಗಳಾಗಿ ಮತತತ್ತ್ವಪ್ರಸಾರವನ್ನು ಸುಮಂತ್ರವಾಗಿ ಅವು ನಡಿಸುವಂತೆ ತಕ್ಕವಿರ್ವಾಡ ಮಾಗಬೇಕು.

ಇದೆಲ್ಲ ಗಣಾಚಾರದ ತಾತ್ವಿಕ ಮಗ್ಗುಲಿನ ವಿಚಾರವಾಯಿತು. ಇನ್ನು ವ್ಯಾವಹಾರಿಕ ಬದಿಯನ್ನು ತುಸು ಆಲೋಚಿಸುವಾ. ಇದರಲ್ಲಿ ಅನೇಕ ಸಂಗತಿಗಳ ಕಡೆಗೆ ಲಕ್ಷ್ಯಪೂರ್ವಕ ಸಬೇಕಾಗುವುದು. ಎಲ್ಲಕ್ಕೂ ಮೊದಲು ಸಮಾಜದಲ್ಲಿ ಬಲವಾದ ಐಕ್ಯವನ್ನುಂಟುಮಾಡಬೇಕಾಗುವದು. ಅದೇ ಎಲ್ಲ ಕಾರ್ಯಗಳಿಗೂ ಬುಡಕಟ್ಟಾಗಿದೆ. ಸಮಾಜವು ಕ್ಷೇಮದಿಂದ ಬಾಳಿ ಎಲ್ಲಬಗೆಯ ಉತ್ಕರ್ಷಗಳನ್ನು ಪಡೆಯಲಿಕ್ಕೆ ಅದೇ ಸಾಧನವು. ಅದೇ ಸಮಾಜದ ಜೀವಾಳವು. ಈ ಅಮೂಲ್ಯಶಕ್ತಿಯು ಬರಬೇಕಾದರೆ ಸಮಾಜದೊಳಗಣ ಪ್ರತಿಯೊಂದು ವ್ಯಕ್ತಿಯು ಪರಸ್ಪರವಾಗಿ ಸಹಾನುಭೂತಿ ಪ್ರೀತಿ ವಿಶ್ವಾಸಗಳಿಂದ ನಡೆದುಕೊಳ್ಳಲಿಕ್ಕೆಬೇಕು. ಅದುದರಿಂದಲೇ ಮೇಲೆ ಹೇಳಿದ ಶಿವಾಚಾರವನ್ನು ಭದ್ರವಾಗಿ ಪಾಲಿಸಲಿಕ್ಕೆ ಸಿದ್ಧರಾಗಬೇಕು. ಅದರಿಂದಲೇ ಸಾಮಾಜಿಕ ಒಕ್ಕಟ್ಟಿಗೆ ಬಹಳೇ ನೆರವಾಗುವದು. ಈ ವಿಷಯದಲ್ಲಿ ಜಪಾನ, ರಶಿಯಾಗಳ ಉದಾಹರಣೆಗಳನ್ನು ಮುಂದಿಟ್ಟುಕೊಳ್ಳಬೇಕು. ಹೀಗೆ ಒಮ್ಮೆ ಸಾಹಸದಿಂದ

ಒಕ್ಕಟ್ಟು ಒದಗಿಸಿಕೊಂಡರೆ ಎಲ್ಲ ಸುಖಗಳು ತಾವಾಗಿಯೇ ಬೆಂಬತ್ತು
ನವು. ಸಮಾಜವು ಸಂಪತ್ತಿಲ್ಲದೆ ಬಾಳುವದು ಅಶಕ್ಯ. ಎಲ್ಲರೂ
ಪ್ರಾಮಾಣಿಕತನದಿಂದ ಯೋಗ್ಯಕಾಯಕವನ್ನು ಸ್ವೀಕರಿಸಿ ಸಾಗಿಸಿ ವಿವೇಕ
ದಿಂದ ನಡೆಯಬೇಕು. "ದುಡಿಯೈ ಸುಖವಂ ಪಡೆಯೈ" ಎಂಬುದನ್ನು
ಎಲ್ಲರೂ ನೆನಿಸಬೇಕು. ಅಂತೇ ನಮ್ಮ ಕಾಯಕದ ಮಹತ್ವವನ್ನು
ಅಷ್ಟೊಂದು ಬಣ್ಣಿಸಿದ್ದಾರೆ ಅದನ್ನವಲಂಬಿಸುವದಕ್ಕಾಗಿಯೇ ಬಗೆಯಾದ
ಕಟ್ಟುಗಳನ್ನು ಯೋಜಿಸಿದ್ದಾರೆ. ನಿತ್ಯೋಪಯುಕ್ತವಾದ ಸಕಲವಸ್ತುಗಳು
ವೀರಶೈವ ಸಮಾಜಸ್ತರಿಂದಲೇ ಉಂಟಾದವುಗಳಿರಬೇಕೆಂದು ಶೀಲದಲ್ಲಿ
ಸಾರಿದ್ದಾರೆ ಯಾವ ಕಾಯಕವನ್ನೂ ಹಳಿಯದೆ ಅವಕ್ಕೆಲ್ಲ ಸಮಾನತ್ವ
ವನ್ನು ಹೇಳಿ ಆದರಿಸಿದ್ದಾರೆ. ವ್ಯಾಪಾರ, ಒಕ್ಕಲುತನ, ನೌಕಾರಿಕೆ,
ಮೊದಲಾದ ಸಕಲ ಕೈಗಾರಿಕೆಗಳೂ ನಮ್ಮಲ್ಲಿರುವದರಿಂದ ಸಮಾಜವು
ಒಕ್ಕಟ್ಟಿನಿಂದಿದ್ದರೆ ಸಂಪತ್ತಿಗೇನು ಕಡಿಮೆ! ಸಂಪತ್ತು ಮತ್ತು ಒಕ್ಕಟ್ಟು
ಗಳು ಸಂಯೋಗವಾದಲ್ಲಿ ಅಪ್ರಾಪ್ಯವಾದುದು ಯಾವುದಿರುವದು? ಆದಕಾ
ರಣ ತಮ್ಮಷ್ಟಕ್ಕೆ ಮಾತ್ರ ನೋಡಿಕೊಳ್ಳುವ ಈಗಿನ ಆಕುಂಚಿತಭಾವ
ನೆಯು ನೀಚಸ್ವಾರ್ಥವನ್ನು ಹೊಡೆಮೋಡಿಸಿ ಗಣಕ್ಕೆ ಹಿತವಾಗುವಂಥ
ಉದಾರ ಧೋರಣೆಯಲ್ಲಿ ಪ್ರವೃತ್ತರಾಗಿ ನಡೆಯುವದನ್ನು ನಾವೆಲ್ಲರೂ
ಕಲಿಯಬೇಕು. ಸಮಾಜಾಭಿವೃದ್ಧಿಯಲ್ಲೇ ವ್ಯಕ್ತಿಯ ಹಿತವೂ ಸುಖವೂ
ಅಡಕವಾಗಿರುವವು. ಪರದೇಶ ಪರಸಮಾಜಗಳ ಕಡೆಗೆ ದಿಟ್ಟಿಸಿದರೆ ಈ
ಮಾತು ನಿಚ್ಚಳವಾಗಿ ಹೊಳೆಯುವದು. ಇದಕ್ಕಾಗಿ ನಾವು ದುರಹಂಕಾರ
ಪರಸ್ಪರ ಮಾತ್ಸರ್ಯಗಳನ್ನು ಧೈರ್ಯದಿಂದ ಕೊಡೆದು ಹಾಕಲಿಕ್ಕೆ ಕಲಿ
ಯಬೇಕು.

(೫) ಭೃತ್ಯಾಚಾರ:— ತಾನು ಸೇವಕನೆಂಬ ಭಾವದಿಂದ ಇನ್ನೊ
ಬ್ಬರೊಡನೆ ವಿನಯಪೂರ್ವಕವಾಗಿ ವರ್ತಿಸುವದಕ್ಕೆ ಭೃತ್ಯಾಚಾರವೆನ್ನು
ವರು. ಇದನ್ನು ಮೇಲಿನ ವಚನದಲ್ಲಿ "ಶಿವಭಕ್ತರ ಶಿಸುವು ತೊಟ್ಟಿ
ಲಲ್ಲಿದ್ದುದ ಕಂಡು ಯಜಮಾನನೆಂದರಿದು ನಮ್ರಭಾವದಿಂದ ನಡೆದು
ಕೊಳ್ಳುವದೇ ಭೃತ್ಯಾಚಾರ" ವೆಂದು ಹೇಳಿದೆ. ಎಲ್ಲ ಶಿವಭಕ್ತರೊಡನೆ ತನ್ನ
ವಿಷಯಕ ಅಹಂಕಾರವನ್ನೆನಿತೂ ನೆನೆಯದೆ ಅವರ ಕಾಯಕ ಭಿನ್ನತೆ
ವಯೋಮಾನ, ಸ್ತ್ರೀಪುರುಷರೂಪ, ಬಡತನ, ಶಿರಿವಂತಿಕೆ ಮುಂತಾದು
ವೇನನ್ನೂ ನೋಡದೆ ಅವರೇ ತನ್ನ ಒಡೆಯರೆಂದು ಮನಃಪೂರ್ವಕ ಬಗೆದು

ಯಾವಾಗಲೂ ಮಮತೆಯಿಂದ ಪ್ರತಿಯೊಬ್ಬ ವೀರಶೈವನು ಸಮಾಜದಲ್ಲಿ ನಡೆಸುಕೊಳ್ಳಬೇಕು. ಇದು ಭೃತ್ಯಾಚಾರದ ನಿಜಸ್ವರೂಪವು. ಆದರೆ ಈಗ ನಾವು ಅದು ಹೇಗೆ ನಡೆಯುತ್ತಿರುವೆನೆಂಬುದನ್ನು ಪ್ರತಿಯೊಬ್ಬರು ತಮ್ಮ ಮನಸ್ಸಿನಲ್ಲಿ ತಾವೇ ನೆನೆದು ನೋಡಬೇಕು! ಬಹುಶಃ ಎಲ್ಲರೂ ಅಭಿಮಾನದಿಂದ ತುಂಬಿತುಳುಕುತ್ತಿರುತ್ತೇವೆ. ಅಹಂಕಾರದಿಂದ ಬಲವಾಗಿ ಬಿಗಿದುಕೊಂಡಿದ್ದೇವೆ. ಅಲ್ಲದೆ ದುರಭಿಮಾನಕ್ಕೊಳಗಾಗಿ ಇಲ್ಲದ ಮಾನಮರ್ಯಾದೆಯಿಂದ ಮೆರೆಯಲಿಕ್ಕೆ ಹವಣಿಸುತ್ತೇವೆ. ತದನುಸಾರವಾಗಿ ಜನರು ನಮ್ಮನ್ನು ಮನ್ನಿಸದಿದ್ದರೆ ಅವರ ಮೇಲೆ ಸಿಟ್ಟಿಗೆ ಮಾತ್ಸರ್ಯದಿಂದ ಅವರನ್ನು ಮಣಿಸಲಿಕ್ಕೆ ನಮ್ಮ ಪುಣ್ಯವನ್ನೆಲ್ಲ ವೆಚ್ಚ ಮಾಡುತ್ತೇವೆ ಈ ನಮ್ಮ ವರ್ತನೆಯು ಸರಿಯಾದುದೇ? ವೀರಶೈವ ತತ್ವಕ್ಕೆ ಶೋಭಿಸುವ ಮಾತೇ? "ಏಕೇನ ಜನ್ಮನಾ ಮುಕ್ತಿಃ" ಇದರಿಂದ ಸಿದ್ಧಿಸಬಲ್ಲುದೆ? ಎಂದೆಂದೂ ಶಕ್ಯವಿಲ್ಲ! "ನಾವು ಭವಿಗಳಲ್ಲ ಭಕ್ತರು" ಎಂಬ ಎಚ್ಚರು ಇದರಲ್ಲಿ ತುಸುವಾದರೂ ತೋರುವದೇ? ಆದಕಾರಣ ಪ್ರತಿಯೊಬ್ಬ ಲಿಂಗಾಂಗಿಯು ತಾನು ಕಾಯಕನಿಂದ ಆದಾವನೇ ಇರಲಿ, ಎಷ್ಟೇ ಧನಿಕನಿರಲಿ, ವಿದ್ಯಾವಂತನಿರಲಿ, ಆದರ ಗರ್ವವನ್ನು ಸಹಸಾ ಸೋಂಕಿಸಿಕೊಳ್ಳದೆ ತನ್ನಿಂದ ಇತರರಿಗೆ ಎಳ್ಳಷ್ಟು ಪೀಡೆಯಾಗದಂತೆಯೂ ಬಲು ಜಾಗರೂಕತೆಯಿಂದ ವರ್ತಿಸಬೇಕು. ಒಳಹೊರಗೂ ಪರಿಶುದ್ಧತೆಯೇ ಒಡೆದು ತೋರುತ್ತಿರಬೇಕು. ಎಲ್ಲರಿಗೂ ಬೆಲ್ಲದ ಹೇರಾಗಬೇಕು. ಅನ್ಯರಿಗೆ ಮರ್ಯಾದೆ ಕೊಟ್ಟು ಆದರಿಸುವದರಲ್ಲಿಯೇ ಯಾವಾಗಲೂ ಸಂತೋಷಿಸುತ್ತಿರಬೇಕು. ತನ್ನನ್ನು ಇನ್ನೊಬ್ಬರು ಸನ್ಮಾನಿಸಿದರೆ ಶ್ರೀ ಬಸವೇಶ್ವರದೇವರಂತೆ ಮಿಡುಕಬೇಕು. ಅವರು:—

(೧) "ಎನ್ನನ್ನು ಹೊಗಳಿ ಹೊಗಳಿ ಎಮ್ಮವರು ಹೊನ್ನಶೂಲಕ್ಕೇರಿಸುವರಯ್ಯಾ"

(೨) "ಎನ್ನನ್ನು ಭಕ್ತನೆಂಬರು. ನಾನೇನು ಕರ್ಮವ ಮಾಡಿರುವೆನೋ ಅರಿಯೆನಯ್ಯಾ"

ಎಂದು ವಿಷಾದವುಳ್ಳವರಾಗಿ "ಕೂ. ಸಂ. ದೇವಯ್ಯಾ ನೀನೆನಗೆ ಹಿತಕರ್ತನಾದಡೆ ಈ ಅವರ ಹೊಗಳತೆಗೆ ಅಡ್ಡಬಾರಯ್ಯಾ" ಎಂದು ಬಹು ಕಾಕುಳತೆಯಿಂದ ಬೇಡಿಕೊಂಡಿದ್ದಾರೆ. "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬುದೇ ಅವರ ದೃಢವಾದ ಭಾವನೆ. ಇತ್ಯಾದಿ

ಅವರ ಉದ್ಗಾರಗಳ ಕಡೆಗೆ ನಾವು ಒಳಿತಾಗಿ ಗಮನಿಸಬೇಕಾದುದು ಅವಶ್ಯವಾಗಿದೆ. ಶಿವನು ಒಮ್ಮೆ ಕೈಲಾಸದಲ್ಲಿ ಒಡ್ಡೋಲಗಂ ಗೊಟ್ಟಾಗ ಅಯ್ಯಾ ಬಸವಣ್ಣಾ ಲೋಕದಲ್ಲಿ ಭಕ್ತರಾರಾದರೂ ಉಂಟೆ? ಎಂದು ಕೇಳಿದುದಕ್ಕೆ ಪ್ರತಿಯಾಗಿ "ಸ್ವಾಮಿ ನಾನೊಬ್ಬನೇ ಭಕ್ತನು" ಎಂದು ಉತ್ತರಿಸಿದನಂತೆ. ಅದು ಓಲಗದೊಳಗಿನ ಇತರರಲ್ಲಿ ಕಳಕೋಳವನ್ನುಂಟುಮಾಡಿತು. ಅವರ ಭಾವವನ್ನರಿತು ಶಿವನು ಪುನಃ "ಅಪ್ಪಾ ಬಸವೇಶಾ ಇಲ್ಲಿ ನೆರೆದವರಲ್ಲಿ ಭಕ್ತರಿಲ್ಲವೆ?" ಎಂಬುದಕ್ಕೆ "ದೇವಾ ಅವರೆಲ್ಲರೂ ತಮ್ಮ ಸ್ವರೂಪ" ಎಂದು ನುಡಿದುದನ್ನು ಕೇಳಿ ಎಲ್ಲರೂ ಜರ್ರನೇ ತಲೆ ಕೆಳಗೆ ಮಾಡಿದರಂತೆ. ಎಂಬ ಪುರಾಣೋಕ್ತಿಯನ್ನು ನಾವು ಸರ್ವದಾ ಮುಂದಿಟ್ಟುಕೊಳ್ಳಬೇಕು. ಈ ಆ ಮಹಿಮರ ನಡೆಯೆತ್ತ! ಕ್ಷುದ್ರರಾದ ನಮ್ಮ ಬಿಂಕವೆತ್ತ!!

ಹೀಗೆ ಭೃತ್ಯಾಚಾರವಿಡಿದು ವರ್ತಿಸಿದರೆ ವ್ಯಕ್ತಿಗತವಾದ ಅದಾವ ಸಮಾನಗುಣವಾಗಲಿ, ಮಾನಮರ್ಯಾದೆಯಾಗಲಿ, ಸಮಾಜದಲ್ಲಿ ಲೋಪವಾಗದೆ ತಿರುಗಿ ಹೆಚ್ಚಿಗೆ ಪ್ರಕಾಶಮಾನವಾಗುತ್ತವೆ. ಬೇಡವೆಂದರೂ ದೊಡ್ಡಸ್ತಿಕೆಯೂ ಗೌರವವೂ ತಾವಾಗಿಯೇ ಬೆನ್ನಹತ್ತುತ್ತವೆ. ಇಂಥಹ ವ್ಯಕ್ತಿಗಳನ್ನು ಈಗಲೂ ನಾವು ಪ್ರತ್ಯಕ್ಷ ಕಾಣಬಹುದು. ತನ್ನಲ್ಲಿ ಏನೂ ಹುರುಳಿಲ್ಲದೆ ಸುಮ್ಮಸುಮ್ಮನೆ ಯಾರೂ ಮರ್ಯಾದೆಯನ್ನು ಬಯಸಬಾರದು. ತನ್ನ ನಿಜವಾದ ಗುಣಗಳನ್ನು ಕಂಡು ಜನರು ತಾವಾಗಿಯೇ ಮಾನ ಮರ್ಯಾದೆ ಮಾಡಿದರೂ ಅದನ್ನು ನಿರಾಕರಿಸಿ ಅನಿರ್ವಾಹ ಪಕ್ಷಕ್ಕೆ ಒಪ್ಪಬಹುದು. ಅದೇ ಭೂಷಣಕ್ಕೆ ಹಿತಪ್ರದವೂ ಅನ್ಯರಿಗೆ ಮಾರ್ಗದರ್ಶಕವೂ ಆಗುವುದು.

ಈ ವಿಧವಾಗಿ ಪಂಚಾಚಾರಗಳು ಎಲ್ಲರೀತಿಯಿಂದಲೂ ನಮ್ಮ ಹಾಗೂ ಸಮಾಜದ ಅಭಿವೃದ್ಧಿಗೆ ಅತ್ಯಂತ ಅವಶ್ಯವಾದವುಗಳಿರುತ್ತವೆ. ಅವೆಲ್ಲ ಪರಸ್ಪರ ಪೋಷಕಗಳಾಗಿರುವದರಿಂದ ಯಾವುದೊಂದನ್ನು ಸ್ವೀಕರಿಸಿದರೂ ಉಳಿದವುಗಳ ಅಸ್ತಿತ್ವಕ್ಕೆ ನೆರವಾಗುವುದು. ಆದಕಾರಣ ಇನ್ನು ಮೇಲೆ ಅಷ್ಟಾವರಣ ಷಟ್‌ಸ್ಥಲಗಳಂತೆಯೇ ಪಂಚಾಚಾರಗಳಿಗೂ ಸಮಾಜವು ಅತ್ಯವಶ್ಯವಾಗಿ ಲಕ್ಷಿಸಬೇಕು ಎಂದು ಸವಿನಯವಾಗಿ ಪ್ರಾರ್ಥಿಸಿ ಈ ವಿಷಯವನ್ನು ಮುಗಿಸುವೆನು.

# ಇಂದಿನ ನಮ್ಮ ಸಮಾಜ

(ಲೇಖಕರು— ಶ್ರೀಯುತ ಮುರುಸಾವಿರಪ್ಪ ಸಾದರಹಳ್ಳಿ ಹುಬ್ಬಳ್ಳಿ.)

ಆವುದಾನೊಂದು ಧರ್ಮವು ತನ್ನ ಉನ್ನತಾವಸ್ಥೆಯನ್ನು ಹೊಂದಬೇಕಾದರೆ ಆ ಧರ್ಮದ ನೀತಿಯೇ ಅದರ ಮುಖ್ಯ ತಳಹದಿಯಾಗಿದೆ. ಇಂಥ ನೀತಿಯು ಅಂದರೆ ಪಂಚಾಚಾರವೆಂಬ ಐದು ಸುತ್ತಿನ ಗೋಡೆಯು ಮಧ್ಯದಲ್ಲಿ ಅಷ್ಟಾವರಣವೆಂಬ ಹೊದಿಕೆಯಲ್ಲಿ ಹುದುಗಿಸಿ ಷಟ್‌ಸ್ಥಲವೆಂಬ ಕಟ್ಟಗಳಿಂದ ಬಂಧಿಸಿ ನಮ್ಮ ಲಿಂಗವಂತ ಮತವೆಂಬ ಕೋಟೆಯನ್ನು ಬಸವಾದಿ ಪ್ರಮಥರು ಬಹು ಭದ್ರವಾಗಿ ಕಟ್ಟಿರುವರು. ಮತ್ತು ಯಾರೂ ಈ ಕಟ್ಟುಪಾಡನ್ನು ಮೀರಬಾರದೆಂದು ಗೊತ್ತುಮಾಡಿರುತ್ತಾರೆ. ಆದರೆ ಕೆಲವು ನೀತಿಗಳನ್ನು ಅನ್ಯರಿಗೆ ತಿಳಿಯದಂತೆ ವ್ಯಕ್ತಿಯು ಉಲ್ಲಂಘಿಸಿ ನಡೆಯಬಹುದು. ಅಥವಾ ಶ್ರೇಷ್ಠನೆಂದು ಸಮಾಜವನ್ನು ದುರ್ಲಕ್ಷಿಸಿ ಉಲ್ಲಂಘಿಸಬಹುದು. ಇಂಥವರಿಗೆ ಇಹದಲ್ಲಿ ದಂಡನೆಯಾಗದಿದ್ದರೂ, ಪರದಲ್ಲಿ ಮಾತ್ರ ಆಗುವದೆಂದು ಆಸ್ತಿಕರಾದವರು ನಂಬುತ್ತಾರೆ.

ಯಾವ ಸಮಾಜದಲ್ಲಿ ಅನೀತಿಗೆ ದಂಡನೆ ಇಲ್ಲವೋ ಆ ಸಮಾಜವು ಉನ್ನತಾವಸ್ಥೆಯನ್ನು ಹೊಂದಲಾರದೆಂದು ಬಗೆದು ಶಿವಶರಣರಾದವರು ನೀತಿಯ ವಾಕ್ಯಗಳನ್ನು ಬರೆದು ಅವುಗಳನ್ನು ಬೇಸರಿಲ್ಲದೆ ಸಮಾಜದಲ್ಲಿ ಉಸುರಿರುವರು. ಅವುಗಳೇ ವಚನಗಳು. ಇವುಗಳಲ್ಲಿ ಅನೀತಿ ಅನಾಚಾರಗಳನ್ನು ಬಹು ಕಡುತರವಾಗಿ ಟೀಕಿಸಿದುದೂ ಉಂಟು. ಸದಾಚಾರ ಸನ್ಮಾರ್ಗವನ್ನು ಸುಲಭವಾಗಿಯೂ ಸರಸಾಗಿಯೂ ತಿಳಿಸಿದುದೂ ಉಂಟು. ಒಟ್ಟಾರೆ ವಚನಕಾರರು ಸತ್ಯವಾದುದನ್ನು ಸ್ಪಷ್ಟವಾಗಿ ಹೇಳಿರುವರು. ಯಾವ ಸಂಗತಿಗಳನ್ನು ಬಚ್ಚಿಡುವದರಿಂದ ಬಹುಜನರ ಹಿತ ಕೆಡುವದೋ ಆ ಸಂಗತಿಗಳನ್ನು ಎಂದೂ ಬಚ್ಚಿಡದಿರುವದು ವಿವೇಕಿಯ ಕರ್ತವ್ಯವಾಗಿದೆ. ಲೋಕಹಿತ ಘಾತುಕವಾದ ಸಂಗತಿಗಳನ್ನು ಮುಂದಿಡಲು ಹೊಂಚ್ಹಾಡುವವರು ಎಷ್ಟು ಧರ್ಮನಿರತರಾಗಿ ಕಾಣಿಸಿಕೊಂಡರೂ ಅವರಂತಹ ಕೇಡಿಗಳೂ ಕಲ್ಯಾಣ ಕಂಟ

ಕರೂ ಅವರೇ ಆಗಿರುವರು. ಕೆಲವರು ದೋಷಗಳನ್ನು ಮುಂದಿಡು
ವದು ನಿಂದೆಯೆಂದು ತಿಳಿಯುವರು. ಕಲ್ಯಾಣಕ್ಕೆ ಕಂಟಕವಾದ ದೋಷ
ಗಳನ್ನು ಹೆದರದೆ ಹೇಸದೆ ಮಾಡುವವರೂ ಮತ್ತು ಕಂಡೂ ಕಂಡು
ಹೊರಗಿಡಲಿಕ್ಕೆ ಹೆದರುವವರೂ ಶಿವನಿಂದಕರು. ಅವುಗಳ ಪರಿಹಾರಕ
ಉಪಾಯಗಳನ್ನು ಕೈಕೊಳ್ಳುವವರೇ ನಿಜವೀರರು ಅಥವಾ ಶರಣರು.

ಶಿವಶರಣರಾದವರು ತಮಗಾದ ಅನುಭವವನ್ನು ವಚನರೂಪದಲ್ಲಿ
ಬರೆದು ಅನುಭವ ಮಂಟಪದ ಮೂಲಕ ಸಮಾಜದಲ್ಲಿ ಪ್ರಸಾರಮಾಡಿ
ನಮ್ಮವರ ಉದ್ಧಾರಕ್ಕಾಗಿ ಯೋಗ್ಯವಾದ ಉಪಾಯಗಳನ್ನು ಕೈಕೊಂಡಿ
ರುವರು. ಮತ್ತು ಜನ ಜೀವನದಲ್ಲಿ ಹೊಸದೊಂದು ಕ್ರಾಂತಿಯ
ನ್ನುಂಟು ಮಾಡಿ ಶಿಕ್ಷಿತಸ್ತ್ರೀಯರಲ್ಲಿ ನವ ಧರ್ಮದ ತಿರುಳನ್ನು ಬಿತ್ತಿ
ಬೈಲಿಗೆಳೆದಿರುವರು. ಸ್ವಾತಂತ್ರ್ಯ ಬಂಧುಪ್ರೇಮ ಐಕ್ಯ ಸಮತಾಭಾವವನ್ನು
ಬೀರಿದರು. ನಮ್ಮ ಲಿಂಗವಂತ ಸಂಸ್ಕೃತಿಯ ನೆನಹು ನಮಗಿಂದು ಬರ
ಬೇಕಾದರೆ ಬಸವಯುಗದ ಮಹಾನುಭಾವಿಗಳಿಂದಲೇ ಎಂದು ಕೈ ಎತ್ತಿ
ಹೇಳಬಹುದು. ಅವರ ಒಂದೊಂದು ವಚನದಲ್ಲಿ ಇಡೀ ವಿಶ್ವದ ಸಾರ
ಸಂಗ್ರಹವು ಅಡಕವಾಗಿದೆ. ಇಂಥ ಶಿವಾನುಭವ ಮಂಟಪದ ಗುರಿಯನ್ನು
ನಾವಿಂದು ದುರ್ಲಕ್ಷಿಸಿದ ಕಾರಣದಿಂದಲೇ ಸಮಾಜದಲ್ಲಿ ಅನೀತಿ ಅನಾ
ಚಾರಗಳು ಬೆಳೆದು ಕಾಣಹತ್ತಿ ಪಂಚಾಚಾರ ಅಷ್ಟಾವರಣ ಷಟ್‌ಸ್ಥ
ಲಗಳು ಹೇಳ ಹೆಸರಿಲ್ಲದಾಗಿವೆ. ಇವು ಚಿಕ್ಕ ಚಿಕ್ಕ ಮಕ್ಕಳು ಗಂಡ
ಹೆಂಡರಾಗಿ ಆಡುವ ಗೊಂಬೆಯ ಆಟದಂತೆ ಆಗಿರುವವು. ಯಾಕಂ
ದರೆ ಆ ಸಂಸಾರದಿಂದ ಆ ಮಕ್ಕಳಿಗೆ ಸುಖವಿಲ್ಲ, ಮಕ್ಕಳ ಫಲವಿಲ್ಲ.
ಇದರಂತೆ ಮೇಲಿನ ಪಂಚಾಚಾರ ಅಷ್ಟಾವರಣ ಷಟ್‌ಸ್ಥಲಗಳು ಬಳ
ಕೆಯಲ್ಲಿರುವವು.

ಪಂಚಸೂತಕಗಳು ನಾಶವಾಗದೆ ಸಮಾಜದಲ್ಲಿ ಪಂಗಡಗಳೂ
ಜಾತಿಗಳೂ ಹೆಚ್ಚಾಗಿ ಪಂಚಾಚಾರಗಳು ನಷ್ಟವಾಗಿ ಬರೆ ಕೂಳು ನೀರಿನ
ಶೀಲ ಬಳಕೆಯೂ ಮಾಡಿ ಮೈಲಿಗೆಯ ಸ್ತೋಮವೂ ಹೆಚ್ಚಾಗ ಹತ್ತಿರು
ವವು. ಅಷ್ಟಾವರಣದ ಮರ್ಮ ತಿಳಿಯದೆ ಎಲ್ಲರೂ ಲಿಂಗವಿದ್ದ ಭವಿ
ಗಳಾಗಿರುವರು. ಗುರು ಲಿಂಗ ಜಂಗಮದ ಅರಿವು ತಪ್ಪಿ ಹೊನ್ನು ಹೆಣ್ಣು
ಮಣ್ಣುಗಳೇ ಗುರು ಲಿಂಗ ಜಂಗಮವಾಗಿ ಪಂಚ ಮಹಾಪಾತಕಗಳು
ಮನೆಮಾಡಿಕೊಂಡಿವೆ. ಈ ಅನಾಚಾರದಿಂದ ಅನೇಕ ಕಷ್ಟಗಳು ಸಂಭ

ಏಸಿ ಆ ಕಷ್ಟಪರಿಹಾರಕ್ಕಾಗಿ ಅನಂತ ದೇವತೆಗಳ ಉಪಾಸನೆಯು ಬಳ
ಕೆಯಲ್ಲಿ ಬಲವತ್ತರವಾಗಿರುವದು. ಇದರಿಂದ ಭಕ್ತಿಯು ಕೆಟ್ಟು ಪಟ್
ಸ್ಥಲದ ಹಿಡಿತವು ತಪ್ಪಿ ಉದ್ದಾಮತನವು ಹೆಚ್ಚಾಗಿರುವವು. ನಂಬುಗೆ
ಪ್ರಾಮಾಣಿಕತನ ಹಾಳಾಗಿ ಗಂಟುಗಳ್ಳತನ ಮನೆ ಮುರುಕುತನ ಮರೆ
ಮೋಸತನಗಳು ಹೆಚ್ಚು ಒಡೆದು ಕಾಣಹತ್ತಿರುವವು. ಸ್ವಾರ್ಥವಂತೂ
ಮಿತಿ ಮೀರಿ "ಆದಿ ಪೋಟೋಬಾ ನಂತರ ವಿಠೋಬಾ" ಎನ್ನುವ
ತತ್ವವು ಬಳಕೆಯಲ್ಲಿ ಬಂದಿರುವದು. ಹೆಂಡರು ಮಕ್ಕಳಿಲ್ಲದಂಥ ಹುಟ್ಟು
ಸನ್ಯಾಸಿಯರು ಕೂಡಾ ಅತಿಥಿ ಸತ್ಕಾರ ಮಾಡುವ ಸೊತ್ತಟ್ಟಿಗಿರಲಿ
ಇಳಿದು ಕೊಳ್ಳಲಿಕ್ಕೆ ಅನುವು ಸಹ ಕೊಡಲಾರದಾದರು. ಸಹಜ ದಾನ
ಧರ್ಮಗಳು ಕಲ್ಯಾಣದಲ್ಲಿಯೇ ಉಳಿದು ಒತ್ತಾಯದ ಹಾಗೂ ಮುರು
ವತ್ತಿನ ದಾನಧರ್ಮಗಳು ನಡೆದಿರುವವು.

ಶ್ರೀಮದ್ಬಸವಣ್ಣನ ನಿಜವರ್ತನದ ಪ್ರತ್ಯಕ್ಷಯೋಗವನ್ನೂ ಲಿಂಗಾಂಗಿ
ಧರ್ಮದ ಉದಾತ್ತ ತತ್ವಗಳನ್ನೂ ನೋಡುತ್ತಿರಲು ಈ ಸಮಾಜವು
ಎಂದೂ ಅವನತಿಯನ್ನು ಹೊಂದಬಾರದು. ಹೀಗಿದ್ದೂ ಕಳ್ಳರ
ಗ್ಯಾಂಗಿಗಿಂತಲೂ ಕಡೆಯಾಗಿ ( *Criminal tribe* ) ಗುನ್ಹೇಗಾರ
ಜಾತಿಯೆಂದೂ ಶೂದ್ರರೆಂದೂ ಅನ್ನಿಸಿ ಕೊಳ್ಳುವಂತಹ ಸ್ಥಿತಿಯು
ಬಂದೊದಗಬೇಕಾದರೆ ಅದರ ಪವಿತ್ರವಾದ ಸ್ಥಿತಿಯಿಂದ ಈಗಿನ ವರೆಗೆ
ಬಹಳ ಸೂಕ್ಷ್ಮ ದೃಷ್ಟಿಯಿಂದ ಶೋಧಿಸಿ ಕಾರಣಗಳನ್ನು ಬೈಲಿಗಿಡಬೇ
ಕಾಗುವದು. ಏಕೆಂದರೆ ಅಂದ ದೋಷಗಳನ್ನು ಕಾರಣ ಸಹಿತ ಕಿತ್ತು
ಹಾಕದಿದ್ದರೆ ನಟ್ಟು ಕಡಿಯುವದಾಗದೆ ಒರೇ ರಂಟೆ ಕುಂಟೆಗಳಿಂದ
ಬಿತ್ತುವ ಪೂರ್ತಿ ಹಸನು ಮಾಡಿಕೊಂಡ ಕರಿಕೆ ಹತ್ತಿದ ಹೊಲಗ
ಳಂತೆ ಆಗಿ ಅದರಿಂದ ಒಳ್ಳೇ ಪರಿಣಾಮವು ಆಗಲಾರದು. ಮತ್ತು
ಪುನಃ ಅಂತಹ ದೋಷಗಳು ಚಿಗಿಯದೆ ಇರಲಾರವು.

ಮೇಲಿನ ಶೂದ್ರತ್ವವನ್ನು ಮಾಜಿಸಬೇಕೆಂದು ಸಾಹಸವನ್ನು ಕೆಲ
ಮಹನೀಯರು ಕೈಕೊಂಡಿರುವರು. ಇದು ನಮ್ಮ ಸಮಾಜದ ಭಾಗ್ಯೋ
ದಯ. ಆದರೆ ನಮ್ಮಲ್ಲಿಯ ಪಂಡಿತರೇ ಸ್ವಕಪೋಲ ಕಲ್ಪಿತದಿಂದ
ಲಿಂಗಕೊಡುವವನು ವೀರಶೈವ ಲಿಂಗೀ ಬ್ರಾಹ್ಮಣನೆಂದೂ ಲಿಂಗಪ
ಡೆದುಕೊಳ್ಳುವನು ಶೂದ್ರನೆಂದೂ ಘಟ ಘೋಷವಾಗಿ ಸಾರುತ್ತಿರು
ವರಿಂದ ಬಳಿಕ ಸಂಸ್ಕಾರವವರು ಇದನ್ನು ಕಿತ್ತು ಹಾಕುವ ಬಗೆಯಾ

ವದು ? ಯಾವ ಕೊಡಲಿಯು ಕಾವು ವನದಲ್ಲಿ ಹುಟ್ಟಿ ಆ ವನವನ್ನೇ ಸಂಹಾರ ಮಾಡುತ್ತದೆಯೋ ಅದರಂತೆ ನಮ್ಮ ಸಮಾಜದಲ್ಲಿಯು ಸಂಡಿತರ ಬಾಳುವೆಯಾಗಿದೆ. ಸಮಾಜ ಬಾಂಧವರೆಲ್ಲರೂ ಶೂದ್ರತ್ವವನ್ನು ಹೊಂದಿ ವೀರಶೈವ ಲಿಂಗೀ ಬ್ರಾಹ್ಮಣರೆಂಬ ಅಭಿಧಾನವನ್ನು ಕಲ್ಪಿಸಿಕೊಂಡಂಥವರನ್ನು ಅಡ್ಡ ಉದ್ದ ಮೆರೆಯಿಸುವದು ನಿಜೇಷ್ಟ ಲಿಂಗಧಾರಿಗಳಿಗೆ ಯೋಗ್ಯವಾದೀತೆ ? ಹೀಗಾಗಲು ಕಾರಣವೇನಂದರೆ ನಮ್ಮ ಧರ್ಮ ತತ್ವದ ಅನುಭವವು ನಮಗೆ ಎಳ್ಳಷ್ಟೂ ಇಲ್ಲದಲೆ ನಿಜಭಕ್ತಿಯೋಗವು ಶರಣರ ಕೂಡೇ ಹೋದಂತೆ ಒಡೆದು ಕಾಣುತ್ತದೆ.

ಕರುಣಿಗಳರಸಾದ ಬಸವಣ್ಣನವರು ಬೋಧಿಸಿದ ಭಕ್ತಿಯು ಎಂಟುನೂರು ವರ್ಷಗಳಾದರೂ ಭಕ್ತರಲ್ಲಿ ಅಳುಕದೆ ತುಳುಕದೆ ಇರುವದನ್ನು ನೋಡಿದರೆ ಬಸವಣ್ಣನವರ ಭಕ್ತಿಯು ಯೋಗವು ಎಷ್ಟು ವಿಸ್ತೃತವಾಗಿತ್ತೆಂಬುವದು ಸೂಜ್ಞರಾದವರಿಗೆ ಹೊಳೆಯದೆ ಇರಲಾರದು. ಈ ಭಕ್ತಿಯೋಗದಿಂದ ಭಕ್ತರಲ್ಲಿ ನೆಲೆಸಿದ ಅಂಥ ಶ್ರದ್ಧೆಯು ಗುರುವರ್ಗದವರನ್ನು ಏನನೂ ಎದ್ದಿಣಸದೆ ಅವರ ಉಪಜೀವನದ ಸಾಧನಗಳನ್ನು ಇಂದಿನ ವರೆಗೆ ಸಾಯುತ್ತಾ ಕೆಡುತ್ತಾದರೂ ನಡೆಸುತ್ತಾ ಬಂದಿರುವದಷ್ಟೇ ? ಗುರುವರ್ಗವು ಈ ಅಂಥ ಶ್ರದ್ಧೆಯು ನಡುವಳಿಕೆಯನ್ನು ದುರುಪಯೋಗಿಸಿ ವಿದ್ಯಾಹೀನರೂ ಸ್ವೇಚ್ಛಾಚಾರಿಗಳೂ ಆಗಿರುವರು. ತಾವು ಹೇಗಿದ್ದರೂ ತಮ್ಮ ಪೂಜಾ ಪುನಸ್ಕಾರಾದಿಗಳು ಕೊರತೆಯಿಲ್ಲದೆ ಸಾಗಿರುವದನ್ನು ಕಂಡು ಅವರಿಗೆ ಹೆಚ್ಚಿನ ಜ್ಞಾನದ ಅವಶ್ಯಕತೆಯೇ ತೋರಲಿಲ್ಲ. ಅಜ್ಞಾನವು ಗುರುವರ್ಗದವರನ್ನು ಮುಚ್ಚಿ ಬಿಟ್ಟಿತು. ಇದು ಅವರಷ್ಟಕ್ಕೆ ಹೋಗದೆ ಭಕ್ತಕೋಟಿಯನ್ನೂ ಕೂಡ ಆವರಿಸಿತು. ಜಿಜ್ಞಾಸುಗಳಾದ ಸದ್ಭಕ್ತರು ಏನಾದರೂ ತಿಳಕೊಂಡು ಮುಂದೆ ಸಾಗಬೇಕೆಂದು ಅತ್ತಿತ್ತ ಹರಿದಾಡಿದರೂ ಹೆಚ್ಚಿನ ಬೋಧೆಯನ್ನು ಮಾಡುವವರು ಸಿಗದಾದರು. ಈ ಮಾತಿಗೆ ಎಷ್ಟೋ ಲಿಂಗವಂತ ಜಿಜ್ಞಾಸುಗಳು. ಜಾಣರಾದ ಭವಿಗಳಲ್ಲಿ ಏನಾದರೂ ಹೆಚ್ಚಿನ ಬೋಧೆಯು ಸಿಕ್ಕೀತೆಂದು ಹೋಗಹತ್ತಿರುವದೇ ಸಾಕ್ಷಿ ! ಗುರುವರ್ಗದವರು ತಮ್ಮ ಅಜ್ಞಾನವನ್ನು ಮುಚ್ಚಿಕೊಂಡು ಗೌರವವನ್ನು ಮೆರೆಯಿಸಲಿಕ್ಕೆ ಅನುಭವೋಕ್ತಿಯನ್ನು ಮುಂದೆ ಮಾಡಿದರು. ಅದಾವುದೆಂದರೆ "ದೀಕ್ಷೆಯನ್ನು ಹೊಂದದಂಥವರಿಗೆ ಲಿಂಗಾನುಭವದ ಯಾವ ಮಾತನ್ನೂ ಹೇಳಲಿಕ್ಕೆ ಬರುವದಿಲ್ಲ" ಉಪದೇ

ಶವನ್ನು ಪಡೆದಂಥ ಸತ್ಪುರುಷರು ಕೇಳಿದಲ್ಲಿ "ನಮ್ಮನ್ನೆ ಗುರು ತೋರಿಸಿದ ಮಾರ್ಗದಲ್ಲಿ ಮುಗ್ಧಭಾವದಿಂದ ಸಾಗುವದೊಂದೇ ದೊಡ್ಡದು. ಅದರಲ್ಲಿಯೇ ಎಲ್ಲವೂ ತಿಳಿಯುತ್ತ ಹೋಗುತ್ತದೆ." ಇತ್ಯಾದಿ ಹೀಗಾಗಿ ಮೂಢ ಭಕ್ತರು ಗಾಣದ ಎತ್ತಿನಂತೆ ಬರೇ ನಡೆಕೊಳ್ಳುವವರೇ ಆಗಿ ಕರ್ಮಠರಾಗಹತ್ತಿರುವರು. ನಡೆಕೊಂಬುವದು ಆಚಾರ, ಪಡಕೊಂಬುವದು ವಿಕಾರವಾಗಿ ಸಮಾಜದಲ್ಲಿ ಧರ್ಮದ ಆಚರಣೆಯಲ್ಲಿ ಜನರನ್ನು ರಕ್ಷಿಸಿ ತಮ್ಮ ಹೇತುವನ್ನು ಸಾಧಿಸಲಿಕ್ಕೆ ಉಪಯೋಗಿಸಹತ್ತಿತು. ಹೀಗಾಗಿ ಸಮಾಜದಲ್ಲಿ ಸರಳರಾರು ಠಕ್ಕರಾರು ಎಂದು ಗುರ್ತಿಸುವದು ಪರಮ ದುಸ್ತರವಾಯಿತು. ಇದನ್ನು ಕಂಡು ಹಿಡಿಯಬೇಕಾದರೆ ಪೂರ್ವದ ಅನುಭವ ಮಂಟಪವೆಂಬ ಒರೆಗಲ್ಲು ಇಂದಿಗೆ ಬೇಕಾದುದು ಅವಶ್ಯ. ಯಾಕೆಂದರೆ –

"ಅನುಭಾವವಿಲ್ಲದ ಭಕ್ತಿ ಅರುವಿಂಗೆ ಬಾರದು, ಅನುಭಾವವಿಲ್ಲದ ಲಿಂಗ ಸಂಗ ಸಮರಸ ಸುಖವನೀಯದು, ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೂಡದು, ಅನುಭಾವವಿಲ್ಲದೆ ಏನನೂ ಅರಿಯಬಾರದು, ತನ್ನಲ್ಲಿ ಸ್ವಾಯತ ಉಳ್ಳೊಡೆ ಶಿವಶರಣರ ಸಂಗವೇತಕ್ಕೆನಲುಂಟೆ? ಕೂಡಲಸಂಗಮದೇವಯ್ಯ ನಿಮ್ಮ ಶರಣರ ಅನುಭಾವ ಮಾತಿನ ಮಾಥನವೆಂದು ನುಡಿಯಲುಬಹುದೇ ಪ್ರಭುವೇ?"

ಎಂದು ಶ್ರೀಮದ್ಬಸವಣ್ಣನವರು ಹೃದಯಂಗಮವಾಗಿ ಚಿತ್ರಿಸಿರುವರು. ಅನುಭವವಿಲ್ಲದ ಭಕ್ತಿಯನ್ನು ಮಾಡಿ ಮಾಡಿ ಸಮಾಜವು ಈ ಪದಕ್ಕೆ ಮುಟ್ಟಿರುವದು. ಆಚಾರವು ಅಳವಟ್ಟು ಅಂಗದೋಷವು ಹಿಂಗದಿದ್ದರೆ ಲಿಂಗದ ನೆಲೆಯು ಆರಿಗೂ ನಿಲುಕಲಾರದು. ಲಿಂಗಾಂಗ ಸಾಮರಸ್ಯಯೋಗದಲ್ಲಿ ಲಿಂಗವಾಗಿ ಲಿಂಗದಲ್ಲಿ ಬೆರೆಯುವ ವರೆಗೆ ಅಂಗನು ತಮ್ಮ ತಮ್ಮ ಅಧಿಕಾರ ತಾರತಮ್ಯದಲ್ಲಿ ಷಟ್‌ಸ್ಥಲವನಾಚರಿಸದಿರುವದು ಇದರೆ ಸ್ಥಾನವಿಶೇಷದಲ್ಲಿ ಜನ್ಮವೆತ್ತಿದ ಮಾತ್ರದಿಂದ ಜನ್ಮತಃ ಆ ಸ್ಥಾನದ ಶುದ್ಧಾಂಗವು ತನಗಿರುವದೆಂದು ಭಾವಿಸುವದು ತಪ್ಪು. ಈ ತಪ್ಪು ಭಾವನೆಯಿಂದ ವಂಶಪರಂಪರವಾಗಿ ಆಯಾ ಅಂಗರಿಗೆ ಅಧಿಕಾರವಿಂಲಿ ಇಲ್ಲದಲಿ ಸಮಾಜ ಸೂತ್ರಗಳನ್ನು ಯೋಚಿಸುತ್ತ ಬಂದುದರಿಂದ ಅನಧಿಕಾರಿಗಳ ಕೈಯಲ್ಲಿ ಸೂತ್ರಾಧಿಕಾರವು ಬಿದ್ದು ಸಮಾಜವು ಈ ದುರವಸ್ಥೆಗೆ ಬಂದಿರುವದು. ಆದುದರಿಂದ ಷಟ್‌ಸ್ಥಲದ ದೃಢವು

ತಪ್ಪಿರುವದು. ಈ ಮಾತಿಗೆ ಸಿದ್ಧರಾಮ ಶಿವಯೋಗಿಗಳ ವಚನವೇ ಸಾಕ್ಷಿ:—

"ಸ್ಥಲವಿಡಿದಾಚರಿಸಬೇಕೆಂಬವನ ಭಾಷೆ ಬಾಲಭಾಷೆ, ಭಕ್ತನಾಗಿ ಭಕ್ತಸ್ಥಲವನಾಚರಿಸುವದದು ಯೋಗ್ಯವಯ್ಯಾ. ಭಕ್ತನಾಗಿ ಮಾಹೇಶ್ವರಸ್ಥಲ ಅಳವಡಬಾರದೇನಯ್ಯಾ? ಭಕ್ತನಾಗಿ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯಸ್ಥಲ ಅಳವಡಬಾರದೇನಯ್ಯಾ? ಮನೆಯಲಿತ್ತ ಮನೆಯ ಮೀರಿ ಮೀರಿ ಹಾರಬಾರದೇನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ"

ಎಂದು ಸಿದ್ಧರಾಮತಂದೆಗಳವರು ಚನ್ನಾಗಿ ಬುದ್ಧಿಯನ್ನು ಕಲಿಸಿರುವರು. ಈ ಅನುಭವವು ಅನುಭವ ಮಂಟಪದಲ್ಲಿಯೇ ಉಳಿದು ಮಹಾನುಭವಿಗಳ ಕೂಡೇ ಹೋದಂತಾಯಿತು. ಯಾಕಂದರೆ ಭಕ್ತ ಮಾಹೇಶ್ವರ ಸ್ಥಲಗಳು ಜಾತಿಸಿದ್ಧ ಜನ್ಮಸಿದ್ಧವೆಂದು ಸಾಧಿಸುತ್ತ ಬಂದಿರುವದೂ ಸಾಧಿಸುತ್ತಿರುವದೂ ಸಾಕ್ಷಿಯಾಗಿವೆ. ಪಟ್ಟಚರಾಧಿಪರಲ್ಲಿಯೂ ವಿರಕ್ತರಲ್ಲಿಯೂ "ನಾ ಗುರು ನೀ ಗುರು ನಾ ಹೆಚ್ಚು ನೀ ಹೆಚ್ಚು" ಎಂಬ ಕಲಹವು ಸಮಾಜವನ್ನೇ ಕೋಲಾಹಲ ಮಾಡಿರುವದು. ಪ್ರಸಾದಿಕರಲ್ಲಿಯೂ ಕೂಡಾ ಎಂಜಲ ಭಾವವು ಅಳಿಯುವದೊತ್ತಟ್ಟಿಗಿರಲಿ, ಜಾತಿಭಾವವು ಕೂಡಾ ನಾಶವಾಗದೆ ಜಾತಿ ಎಂಬ ಭೂತವನ್ನಾಶ್ರಯಿಸಿರುವದು. ಭಕ್ತರಲ್ಲಂತೂ ಹೇಳಿ ಕೇಳಿ ಮೂಢ ಜನರು. ಅಂದಮೇಲೆ ಕೇಳುವದೇನು, ನನ್ನ ಜಾತಿ ಹೆಚ್ಚು ನನ್ನ ಕುಲ ಹೆಚ್ಚೆಂದು ಅನೇಕ ಜಾತಿ ಪಂಗಡಗಳಾಗಿ ಕಲ್ಯಾಣದ ನಡೆಯು ಹಸಗೆಟ್ಟು ಹೋಗಿರುವದು. ಶ್ರೇಷ್ಠರು ನಡೆದಂತೆ ನಡೆಯುವದು ಲೌಕಿಕರ ಸ್ವಭಾವವು. ದೊಡ್ಡ ಜನರು ಹೋದ ದಾರಿಯಿಂದ ಜನರು ಸಾಗುವದು ಸ್ವಾಭಾವಿಕ. ಹೀಗಾಗಿ ನಮ್ಮ ಸಮಾಜವೆ "ನಾ ಹೆಚ್ಚು ನೀ ಹೆಚ್ಚೆಂದು" ಹುಚ್ಚರ ಆಸ್ಪತ್ರೆಯಾಗಿರುವದು.

ಹೇಗೆ ಕ್ರೈಸ್ತ ಧರ್ಮದವರು ಏಸುವು ಒಬ್ಬನೇ ಗುರು ನಮ್ಮ ಧರ್ಮಗ್ರಂಥವು ಬೈಬಲವೆಂದೂ, ಬೌದ್ಧರು ಬುದ್ಧನೊಬ್ಬನೇ ಗುರು ನಮ್ಮ ಧರ್ಮಗ್ರಂಥವು ಧರ್ಮಪದವೆಂತಲೂ, ಮುಹಮ್ಮದೀಯರು ಪೈಗಂಬರನೊಬ್ಬನೇ ಗುರು ನಮ್ಮ ಧರ್ಮಗ್ರಂಥವು ಕುರಾನವೆಂದೂ ಎಲ್ಲರೂ ಏಕಕಂಠದಿಂದ ಹೇಳುತ್ತಿರುವರೋ ಅದರಂತೆ ನಮ್ಮ ಸಮಾಜಕ್ಕೆ ಒಬ್ಬನೇ ಗುರು, ಒಂದೇ ಧರ್ಮಗ್ರಂಥವಾದರೆ ಮಾತ್ರ ಸಮಾಜದ ಏಳ್ಗೆಯಾಗುವದರಲ್ಲಿ

ಯಾವ ಸಂದೇಹವೂ ಇಲ್ಲ. ನಮ್ಮಲ್ಲಿ ಅನೇಕ ಜನ ಗುರುಗಳಾಗಿ ಅನೇಕ ಧರ್ಮಗ್ರಂಥಗಳಾಗಿರುವದು ಮೊದಲನೆಯ ತಪ್ಪು. ಗುರು ವರ್ಗವು ಐದು ಪೀಠಗಳನ್ನಾಗಿ ಮಾಡಿಕೊಂಡು ಐದು ಪಂಗಡಗಳನ್ನು ಮಾಡಿದುದು ಎರಡನೇ ತಪ್ಪು. ವಿರಕ್ತರು ಐದು ಸಿಂಹಾಸನ (ಮುರ-ಘಾ ಕೆಂಪಿನ, ಕುಮಾರ, ಚೀಲಾಳ, ಸಂಪಾದನೆ) ವನ್ನು ಮಾಡಿ ಐದು ಪಂಗ ಡಗಳನ್ನಾಗಿ ಮಾಡಿದುದು ಮೂರನೆಯ ತಪ್ಪು. ಗುರುಸ್ಥಲದವರು, ಹಿರೇಮಠ, ಚಿಕ್ಕಮಠವೆಂದು ಕಲ್ಪಿಸಿ ಇವರನ್ನು ಪಂಗಡಗಳನ್ನು ವಿಂಗ ಡಿಸಿದುದು ನಾಲ್ಕನೆಯ ತಪ್ಪು. ಒಬ್ಬನು ಶ್ರೀಕರಭಾಷ್ಯವು ನಮ್ಮ ಧರ್ಮಗ್ರಂಥವೆಂದು ನುಡಿಯುವದು ಐದನೆಯ ತಪ್ಪು. ಮತ್ತೊಬ್ಬನು ಸಿದ್ಧಾಂತ ಶಿಖಾಮಣಿಯು ನಮ್ಮ ಧರ್ಮಗ್ರಂಥವೆಂದು ಸಾಧಿಸುವದು ಆರನೆಯ ತಪ್ಪು. ಮಗದೊಬ್ಬನು ವಿವೇಕ ಚಿಂತಾಮಣಿಯು ನಮ್ಮ ಧರ್ಮಗ್ರಂಥವೆಂದು ಸಾರುವದು ಏಳನೆಯ ತಪ್ಪು ಇತ್ಯಾದಿ ಇತ್ಯಾದಿ ತಪ್ಪುಗಳ ಮಾಲೆಯಲ್ಲಿಯೇ ಸಮಾಜದ ಕಟ್ಟು ಒಡೆದು ಇಷ್ಟು ಪಂಗ ಡಗಳನ್ನಾಗಿ ಮಾಡಲಿಕ್ಕೆ ಹಚ್ಚಿದುದು ಮಹಾ ಅಕ್ಷಮ್ಯ ಅಪರಾಧ ವೆಂದು ಒತ್ತಿ ಹೇಳದಿರಲಾರೆನು.

ಯಾವ ಬಸವಾದಿ ಪ್ರಮಥ ಪುಂಗವರು ಒಂದೇ ಭಾವ ನೆಲೆ ಗೊಳ್ಳುವದಕ್ಕಾಗಿಯೇ ಒಂದೇ ಬಗೆಯ ಕುರುಹು ಒಂದೇ ಬಗೆಯ ಆಚಾರ ಒಂದೇ ಬಗೆಯ ಕ್ರಿಯೆ ಒಂದೇ ಬಗೆಯ ಮಂತ್ರವನ್ನು ಹೇಳಿ ನಮ್ಮೆಲ್ಲರನ್ನು ಒಂದುಮಾಡಿ ಬಂಧುಭಾವವನ್ನು ಬೆಳಯಿಸಿ "ನ ವೀರ ಶೈವ ಸದೃಶಂ ಮತಮಸ್ತಿ ಜಗತ್ರಯೆ" ಎಂದು ಸಾರಿ ತಮ್ಮ ನಂದೀ ಧ್ವಜವನ್ನೆತ್ತಿ ಮೆರೆಯಿಸಿದರೋ ಅಂಥ ಧರ್ಮವು ಮೇಲಿನ ಹೀನ ನಡ ತೆಯಿಂದ ಅನೇಕ ಪಂಗಡಗಳಾಗಿ ವಿಂಗಡಿಸಲಿಕ್ಕೆ ಕಾರಣವಾಯಿತೆಂದು ಇನ್ನೊಮ್ಮೆ ಒತ್ತಿ ಹೇಳಿದರೆ ತಪ್ಪೇನು? ಎಲ್ಲಿಯ ವರೆಗೆ ನಮ್ಮಲ್ಲಿ ಒಂದು ಭಾವ ನೆಲೆಗೊಳ್ಳಲಾರದೋ ಅಲ್ಲಿಯ ವರೆಗೆ ಬಂಧನವು ಬಿಟ್ಟದ್ದಲ್ಲ. ಅದ-ಕಾರಣ ಬಸವಯುಗದ ಮಹಾನುಭಾವರು ನಡೆದು ತೋರಿಸಿದ ಮಾರ್ಗದಲ್ಲಿ ನಾವೆಲ್ಲರೂ ಸಾಗಿದರೆ ಮಾತ್ರ ನಮ್ಮ ಸಮಾಜದ ಬಂಧ ನವು ತೊಲಗಿ ಬಂಧಮುಕ್ತರಾಗುವೆವು. ಇಲ್ಲವಾದರೆ ಸಮಾಜದಲ್ಲಿ ಒಡಕು ದುರ್ಬಲತೆಗಳು ಇನ್ನೂ ಹೆಚ್ಚಾಗಿ ಹಬ್ಬಹತ್ತುವವು. ಹೀಗಾ ಗುವದರಿಂದ ಸಮಾಜದ ಬಲವು ಕುಗ್ಗಿ ತಗ್ಗಿ ನುಗ್ಗಿ ಮುಗ್ಗಿ ಹೋಗು

ವದು. ಈ ಕಾರಣದಿಂದಲೇ ಮಹಾಸಭೆಯು ಜನ್ಮತಾಳಿತು. ಅಂದರೆ ಅದರ ಜನ್ಮವು ಒರೆ ಚಹ ಸಾರ್ಟಿಯಲ್ಲಿಯೇ ಉಳಿದು ಹೋಗಿರುವದೆಂದು ಹೇಳಲಿಕ್ಕೆ ಬಹು ವಿಷಾದವಾಗುತ್ತದೆ. ಈ ಸಭೆಯಲ್ಲಿ ಅನೇಕಸಾರೆ ಲಿಂಗಾಂಗಿಗಳಲ್ಲಿ ಜಾತಿ ಪಂಗಡಗಳಿಲ್ಲವೆಂದೂ ಇವುಗಳನ್ನು ಜಾಂತ್ಯಂಧಕರು ಕಲ್ಪಿಸಿಕೊಂಡಿರುವರೆಂದೂ ಠರಾವು ಪಾಸು ಮಾಡಿ ಅದು ಕಾಗದದಲ್ಲಿಯೇ ಉಳಿದು ಕೃತಿಯಲ್ಲಿ ತರಲಿಲ್ಲವೆಂದೂ ಹೇಳದಿರಲಾರೆನು. ಇದು ಗುಡ್ಡಿನಲ್ಲಿ ಹೆಗ್ಗಣನಿಂಸಿ ಗುದ್ದುವಮುಚ್ಚಲಿಕ್ಕೆ ಪ್ರಯತ್ನಪಟ್ಟ ಪೆದ್ದನ ಸ್ಥಿತಿಯಂತೆ ಈ ಸಭೆಯಾಗಿರುವದೆಂದರೆ ತಪ್ಪೇನಾಗಲಾರದು.

---

## ಪದ.

ದೇವಾ ! ಏನೊಂದು ಬೇಡೋ ।
ನಿನ್ನೊಳಡಗಿಹ ನೂರೊಂದ ನೀಡೋ ॥ಪ॥

> ನಿನ್ನಯ ರೂಪುಗಳ ಎನ್ನೊಳಿರುತಿರ್ಪ ।
> ಉನ್ನತಗುರುಗಳ ಕರುಣದೊಳಿರಿಸೋ ॥೧॥

ಅಂಗದೊಳು ಆಚಾರ ಲಿಂಗವೊಳು ಲೀಯತೆ ।
ತುಂಗಶಿವಶರಣರ ಸಂಗದೊಳಿರಿಸೋ ॥೨॥

> ಒಂದೇ ಮೂರಾಗಿ, ಮೂರೇ ಆರಾಗಿ ।
> ಅಂದಾದ ಆರ, ಆರುನೊಳಿರಿಸೋ ॥೩॥

ತನುವನು ಗುರುವಿಗೆ, ಮನವನು ಲಿಂಗಕೆ ।
ಧನವನು ಜಂಗಮಕೆ, ಅನುವಿಂದೀಯಿಸೋ ॥೪॥

> ಅಂಗಸ್ಥಳಗಳ, ಇಂಗಿತನರುಹಿ ।
> ಲಿಂಗಸ್ಥಳಗಳನ, ಹೊಳವಿನೊಳಿಳುಹೋ ॥೫॥

ಅಷ್ಟಾವರಣವ, ಗಟ್ಟಿಯಾಗಿರಿಸುತ ।
ಶ್ರೇಷ್ಠ ಶೀಷಂಗಳ ಕೊಟ್ಟು ಸಿಕಾಯೋ ॥೬॥

# ವಚನ

ಬಯಲ ತಲೆಯೊಳಗಿದ್ದು ಬಯಲ ಬಣ್ಣಕೆ ಬೆರಗಾಗಿ ಬಯಲಾಟದೊಳು ಬಿದ್ದು ಬಳಲುವ ಬೈತಲೆಯ ಭ್ರಾಂತರಿಗೆ ಬಯಲಿನ ಬಯಕೆಯಿಲ್ಲಿಯದೆಂದ ನಮ್ಮ ಸಿದ್ಧೇಶ್ವರಾ ॥೧॥

ಮಾಟದೊಳು ನಾಟದ ನೀಟವಂತನ ನೋಟದೊಳು ತೋರದೆ ಮಾಟದ ಆಟದೊಳು ನಟಿಸುವ ನಟಗಳಿಗೆ ಮಹಾ ಮಾಟದ ಕೂಟವೆಲ್ಲಿಹುದೆಂದ ನಮ್ಮ ಸಿದ್ಧೇಶ್ವರಾ ॥೨॥

ರೂಪುರುಚಿಗಳಿಗೊಲಿದು ಆಶೆರೋಷಗಳು ಬಲಿದು ತಾಪ ತಾಮಸಗಳೊಳಲಿದು ಸ್ವರೂಪಗೇಡಿಗಳಾದೊಡೆ ನಿಜರೂಪದ ನಿಲವುಯೆಲ್ಲಿಯದೆಂದ ನಮ್ಮ ಸಿದ್ಧೇಶ್ವರಾ ॥೩॥

ತತ್ವಗಳ ಗೊತ್ತುಗುರಿಗಳಿಲ್ಲದಲೆ ಭಕ್ತಿಶಕ್ತಿಗಳು ಬಳೆಯದೆ ಚಕ್ರಸ್ಥಳಕುಳಗಳಳವಡದೆ ತತ್ವಾತೀತನ ತಿಳಿವಿನ ಹೊಳವು ಎಲ್ಲಿಹುದೆಂದ ನಮ್ಮ ಸಿದ್ಧೇಶ್ವರಾ ॥೪॥

ಭೃತ್ಯಾಚಾರವಿಲ್ಲದೆ ಭಕ್ತಿಗಳು ಬೆಳಗುವವೆಲ್ಲಿ? ಸದಾಚಾರವಿಲ್ಲದೆ ಸತ್ಯಸಂಧರಾಗುವದೆಲ್ಲಿ? ಲಿಂಗಾಚಾರವಿಲ್ಲದೆ ಮನವು ಘನವಾಗುವದೆಲ್ಲಿ? ಗಣಾಚಾರವಿಲ್ಲದೆ ಪ್ರಮಥಾಚಾರದ ಗಣನೆಯೆಲ್ಲಿ? ಶಿವಾಚಾರವಿಲ್ಲದೆ ಸಚ್ಚಿದಾನಂದದ ಕುರುಹಿನ ಅರುಹು ಎಲ್ಲಿಯದೆಂದ ನಮ್ಮ ಸಿದ್ಧೇಶ್ವರಾ ॥೫॥

ಮನೋಮಯ ಕೋಶವು ಲಿಂಗಮಯವಾಗಲು, ಅನ್ನಮಯ ಕೋಶವು ಪ್ರಸಾದಮಯವಾಗಲು, ಪ್ರಾಣಮಯ ಕೋಶವು ಪಂಚಪ್ರಣವಮಯವಾಗಲು, ಜ್ಞಾನಮಯ ಕೋಶವು ಸುಜ್ಞಾನಮಯವಾಗಲು, ಆನಂದಮಯ ಕೋಶವು ಸಚ್ಚಿದಾನಂದಮಯವಾಗಲು 'ಶಿವಾನುಭವ ಶಬ್ದಕೋಶ'ವು ಕರದೊಳಗನವರತ ಇರಲೆಂದ ನಮ್ಮ ಸಿದ್ಧೇಶ್ವರಾ ॥೬॥

ತಮ್ಮ

—ಶರಣರ ಶಿಶು.

# ನೀತಿಯ ನುಡಿಗಳು

(೧) ನಿಂದೆಯಾಡುವದನ್ನು ಮುಗಿಸಿದ ಮೇಲೆ ದಯಮಾಡಿ ಈ ಸಂಗತಿಯನ್ನು ಯಾರ ಮುಂದೆಯೂ ಉಸುರಿಡಬೇಡಿರಿ ! ಕೇಳಿದಿರಲ್ಲೋ ಮತ್ತೆ, ಎಂದು ಅನ್ಯರಿಗೆ ಕಕ್ಕುಲಿತೆ ಪಡುವದಕ್ಕಿಂತ ನೀನೇ ಅದನ್ನು ಹೇಳುವದು ಬಿಟ್ಟಿದ್ದರೆ ಎಷ್ಟು ಒಳ್ಳೇದಾಗುತ್ತಿತ್ತು ! ನೀನೇ ಆ ಕ್ಷುಲ್ಲಕ ಮಾತನ್ನು ಹೊರಗೆ ಹಾಕದಿದ್ದರೆ ಕೇಳಿಕೊಂಡವನ ಉಪಕಾರ ಹೊರುವ, ಹಾಗೂ ಕೊನೆಗೆ ಹೇಳಬೇಡೆಂದು ಕೈಕಾಲು ಬೀಳುವ, ದೀನತೆಗೆ ಕಾರಣವೇ ಉಳಿಯುತ್ತಿದ್ದಿಲ್ಲ.

(೨) ಯಾರಾದರೂ ತನ್ನಮುಂದೆ ನಿಂದೆ ಮಾತನ್ನು ಹೇಳಬಂದರೆ ಸಾಧಕನು 'ಮಹಾರಾಯಾ' ನನ್ನಲ್ಲೇನು ದೋಷಗಳು ಕಡಿಮೆಯಿವೆಯೆಂದು ಅನ್ಯರ ದೋಷ ಎಣಿಸಲಿ? ನನ್ನ ದೋಷಗಳನ್ನು ತಿದ್ದಿಕೊಳ್ಳಲಿಕ್ಕೇ ನನಗೆ ಆಗದಿರುವಾಗ ಹೆರವರ ಕತ್ರಗೆ ಬೆಸ್ಗೆ ತೆಗೆದುಕೊಂಡು ಏನು ಮಾಡುವುದದೆ? ಎಂದು ಉತ್ತರ ಕೊಡುವನು.

(೩) ಎಷ್ಟೇ ಏಕಾಂತದ ಸ್ಥಳದಲ್ಲಿ ಮಾತನಾಡಿದರೂ ಕೆಲವು ಕಾಲಾಂತರದಿಂದ ಆ ಗೌಪ್ಯವು ತಾನಾಗಿಯೇ ಸ್ಫೋಟವಾದದ್ದು ದೃಗ್ಗೋಚರವಾಗುತ್ತದೆ. ಎಷ್ಟು ಶೋಧ ಮಾಡಿದರೂ ಗುಪಿತವು ಹೇಗೆ ಜಾರಿತೆಂಬುದರ ಪತ್ತೆಯಾಗುವದೇ ಇಲ್ಲ. ಮತ್ತು ಅದರಿಂದ ನಿಂದೆಯ ಶ್ರೋತಾ ಮತ್ತು ವಕ್ತಾ ಇವರಲ್ಲಿ ಅವಿಶ್ವಾಸವುಂಟಾಗುವ ಪ್ರಸಂಗ ಬರುತ್ತದೆ. ಮತ್ತು ವರ್ಷಾನುವರ್ಷ ಬೆಳೆಸಿದ ಮಿತ್ರತ್ವವು ಸಹ ಧೂಳಿಪಟವಾದ ಉದಾಹರಣೆಗಳು ಸಿಗುತ್ತವೆ.

ಅದಕ್ಕೆಯೇ ಇಂಗ್ಲಿಷ ಭಾಷೆಯಲ್ಲಿ "ಗೋಡೆಗೆ ಕಿವಿಗಳಿರುತ್ತವೆ" ಎಂಬ ನಾಣ್ಣುಡಿಯುಂಟಾಗಿರುವದು.

ಪರಿಣಾಮ ಮಾಡುತ್ತಾರೆ. ಇದು ಮೇಲ್ಕಂಡ ಸಂಗತಿಯಿಂದ ವ್ಯಕ್ತ ವಾಗುತ್ತದೆ.

ಈ ಪ್ರಕಾರ ತಮ್ಮ ಯೋಜನೆಯು ಸಿದ್ಧಿಗೆ ಹೋಗದೆ ಇದ್ದದ್ದು ಕೇತಯ್ಯನ ವಿರೋಧಿಗಳಿಗೆ ಸಹನವಾಗಲಿಲ್ಲ. ಅವರು ಅವನಿಗೆ ಕೇಡನ್ನು ಬಗೆದು ಹೊಸ ಹಂಚಿಕೆಗಳನ್ನು ಹಾಕಹತ್ತಿದರು. ಅವರು ಅವನ ಒಕ್ಕಲುತನವನ್ನು ನಿಲ್ಲಿಸಿ ಅವನಿಗೆ ಹೆಚ್ಚಾಗಿ ನಷ್ಟಮಾಡಬೇಕೆಂದು ಯೋಚಿಸಿ ಪರ ಊರಿನ ಕೆಲವು ಚೋರರನ್ನು ತಮ್ಮಲ್ಲಿಗೆ ಬರಮಾಡಿ ಕೊಂಡು ಕೇತಯ್ಯನ ದನಕರು ಆಕಳುಗಳನ್ನೆಲ್ಲವನ್ನು ಹೊಡೆದುಕೊಂಡು ತಮ್ಮ ಗ್ರಾಮಕ್ಕೆ ಒಯ್ಯಲು ಪ್ರೋತ್ಸಾಹಿಸಿದರು. ಆ ಚೋರರು ಹಾಗೆ ಒಂದು ಅನುಕೂಲ ಸಮಯವನ್ನು ನೋಡಿಕೊಂಡು ಅವುಗಳನ್ನೆಲ್ಲ ತಮ್ಮ ಗ್ರಾಮಕ್ಕೆ ಹೊಡೆದುಕೊಂಡು ಹೋದರು.

ಹೀಗಾಗಲು ಇದಕ್ಕೆ ಕೇತಯ್ಯನು ಎಷ್ಟು ಮಾತ್ರವೂ ಸಿಟ್ಟಾಗ ಲಿಲ್ಲ. ಬಸವೇಶ್ವರನು ತನ್ನ ಒಂದು ವಚನದಲ್ಲಿ 'ಆಕಳ ಕಳ್ಳರು ಕೊಂಡೊಯ್ದರೆನ್ನದಿರಿಂಭೋ! ನಿಮ್ಮ ಧರ್ಮ. ಅಲ್ಲಿ ಉಂಬರೆಯೂ ಸಂಗ, ಇಲ್ಲಿ ಉಂಬರೆಯೂ ಸಂಗ. ಕೂಡಲಸಂಗಮದೇವ ಏಕೋ ಭಾವ' ಎಂದು ಹೇಳಿದ್ದಾನೆ. ಈ ವಚನದಲ್ಲಿ ಹೇಳಿದ ತತ್ವದಂತೆಯೇ ಕೇತಯ್ಯನು ಈ ಕಾಲದಲ್ಲಿ ಅವುಗಳನ್ನು ಹುಡುಕಲಿಕ್ಕೆ ಹೋಗಲಿಲ್ಲ, ಎಷ್ಟು ಮಾತ್ರವೂ ನೋಯಲಿಲ್ಲ, ಖೇದಪಡಲಿಲ್ಲ. ಪರಮಾತ್ಮನಲ್ಲಿ ನಂಬಿ ಗೆಯುಳ್ಳವನಾಗಿ ಅವನೂ ಅವನ ಸತಿಯೂ ಮಕ್ಕಳೂ ಸಮಾಧಾನಿ ಯಾಗಿದ್ದರು.

ಚೋರರು ಆ ದನಗಳೆಲ್ಲವನ್ನು ಹೊಡೆದುಕೊಂಡು ತಮ್ಮ ಗ್ರಾಮಕ್ಕೆ ಹೋಗಿ ಅವುಗಳನ್ನು ತಮ್ಮ ಮನೆಗಳಲ್ಲಿ ಕಟ್ಟಿಕೊಂಡರು. ಆದರೆ ಆ ಪಶುಗಳು ಅವರಲ್ಲಿಯ ನೀರು ಮೇವನ್ನು ತಿನ್ನದೆ ಚಿತ್ರದ ಬೊಂಬೆ ಗಳಂತೆ ಹಾಗೆಯೇ ನಿಂತುಕೊಂಡು ಬಿಟ್ಟವು. ಅವು ಅತ್ತಿತ್ತ ಮಿಸುಕಾ ದಲಿಲ್ಲ. ಹೀಗೆ ಒಂದು ದಿನವಾಯಿತು, ಎರಡು ದಿನಗಳಾದವು, ಮೂರು ದಿನಗಳಾದವು. ಅವು ಹಾಗೆಯೇ ಉಪವಾಸ ನಿಂತುಬಿಟ್ಟವು. ಮೇವು ಮುಂದೆ ಬಿದ್ದಿದ್ದರೂ ಅದನ್ನು ಅವು ಮುಟ್ಟಲಿಲ್ಲ. ಕೇತಯ್ಯನ ಮನೆ ಯಲ್ಲಿ ಪರಮಾತ್ಮನಿಗರ್ಪಿತವಾದ ಮೇವನ್ನು ಅವು ಯಾವಾಗಲೂ ತಿನ್ನುತ್ತಾ ಇದ್ದುದರಿಂದ ಅವು ಆ ಚೋರರ ಮನೆಯಲ್ಲಿ ಅನರ್ಪಿತವಾದ

ಇಂಥ ಆಹಾರವನ್ನು ಮುಟ್ಟಲಿಲ್ಲ! ಹೀಗೆ ಏಳು ದಿನಗಳ ವರೆಗೆ ಅವು ಮೇಯಲಿಲ್ಲ, ನೀರು ಕುಡಿಯಲಿಲ್ಲ, ಉಪವಾಸವಿದ್ದವು. ಆಗ ಆ ಚೋರ ರಿಗೆ ಪಶ್ಚಾತ್ತಾಪವಾಯಿತು. ದನಗಳು ಉಪವಾಸ ಸತ್ತುಹೋದರೆ ತಮಗೆ ಪಾಪವು ಬರುವದು, ಅದಕ್ಕೆ ತಾವು ಗುರಿಯಾಗಬಾರದೆಂದು ಅವರು ಅವುಗಳನ್ನು ತಿರುಗಿ ಕೇತಯ್ಯನ ಗ್ರಾಮದ ಕಡೆಗೆ ಹೊಡೆದು ಕೊಂಡು ಬಿಟ್ಟುಬಿಟ್ಟರು !

ಆಗ ದನಗಳೆಲ್ಲ ಕೇತಯ್ಯನ ಮನೆಯ ಮುಂದೆ ಬಂದು ನಿಲ್ಲಲು ಅವನು ಇವು ಆಚಾರಗೆಟ್ಟಿವೆ, ಚೋರರ ಮನೆಯಲ್ಲಿ ಅನರ್ಪಿತವಾದ ಆಹಾರವನ್ನು ತಿಂದಿವೆ, ಅಲ್ಲಿ ನೀರುಗುಡಿದಿವೆ ಎಂದೆನ್ನುತ್ತಿರಲು ಮನೆಯ ಲ್ಲಿದ್ದ ಕರುಗಳು ಉಪವಾಸವಿದ್ದರೂ ಸಹ ಅವು ತಮ್ಮ ತಾಯ ಮೊಲೆ ಯನ್ನು ಉಣ್ಣಲಿಕ್ಕೆ ಸಹ ಮುಂದುವರಿಯಲಿಲ್ಲ. ಅವೂ ಸಹ ತಮ್ಮ ತಾಯಿಗಳು ಅನರ್ಪಿತ ಆಹಾರವನ್ನುಂಡವೆಂದು ಮೊಲೆಗುಡಿಯಲಿಲ್ಲ. ಆದರೆ ಚೋರರ ಮನೆಯಲ್ಲಿ ನಡೆದ ಸಂಗತಿಗಳನ್ನು ತಿಳಿದುಕೊಂಡು ಬಂದ ಕೆಲವರು ಅಕಟಕಟ ದನಗಳು ಲಿಂಗಾರ್ಪಿತವಾದ ಮೇವು ದೊರೆ ಯದ್ದರಿಂದ ಕಳ್ಳರ ಮನೆಯಲ್ಲಿ ಉಪವಾಸದಿಂದಿವೆ ಎಂದಂದು, ಇದು ಕೇತಯ್ಯನಿಗೆ ತಿಳಿಯಬೇಕೆಂದು ಸಮೀಪದ ಬಣವೆಯ ಹುಲ್ಲನ್ನು ತಂದು ಅವುಗಳ ಮುಂದೆ ಇಡಲು ಅವು ಅದನ್ನು ಲಕ್ಷಿಸದೆ ಸುಮ್ಮ ನಿರುವದನ್ನು ನೋಡಿ, ಕೇತಯ್ಯನು ಇವು ನಿಷ್ಠೆಯುಳ್ಳವೆಂಬುದನ್ನು ತಿಳಿದವನಾಗಿ ಆನಂದಬಟ್ಟು, ದನಗಳಲ್ಲಿ ತಪ್ಪಿಲ್ಲ, ಗ್ರಾಮದಲ್ಲಿಯ ದುಷ್ಟರ ಕುಹಕತನದಿಂದ ಅವು ಚೋರರ ನುನೆಗೆ ಮಾತ್ರ ಹೋಗಿ ದ್ದವು, ಹಾಲುಗುಡಿಯಿರೆಂದು ಕರಗಳನ್ನು ಅವನು ಬಿಡಲು ಅವು ಸುಖದಿಂದ ತಾಯ ಮೊಲೆಹಾಲನುಂಡವು ಮತ್ತು ತಾನು ಲಿಂಗಾ ರ್ಪಿತ ಮಾಡಿದ ನೀರು ಕಣಿಕೆಗಳನ್ನು ಕೊಡಲು ದನಗಳೆಲ್ಲವೂ ಅದನ್ನು ತಿಂದು ಉಪವಾಸ ಮುಗಿಸಿದವು.

ಆದರೆ ಗ್ರಾಮದಲ್ಲಿಯ ಶೈವ ಸಾಂಪ್ರದಾಯಿಗಳು ಕೇತಯ್ಯನ ವಿರುದ್ಧ ತಾವು ಮಾಡಿದ ಯೋಜನೆಗಳೆಲ್ಲ ಹೀಗೆ ಕೈಗೂಡದ್ದಕ್ಕಾಗಿ ಮತ್ತಿಷ್ಟು ಕೆರಳಿದರು. ಕೇತಯ್ಯನು ಅವರಿಗೆ ಪ್ರತಿಕಾರ ಮಾಡದಿದ್ದರೂ ಅವನ ಸಮಾಧಾನವೃತ್ತಿ ಮತ್ತು ಶಾಂತಸ್ವಭಾವ ಇವುಗಳ ಮೂಲಕ ಅವರು ಅವನನ್ನು ಮತ್ತಿಷ್ಟು ದ್ವೇಷಮಾಡುವವರಾದರು. ಇದು

ಸಾಮಾನ್ಯ ಜನತೆಯ ಸ್ವಭಾವವಿದೆ. ಮುಂದೆ ಅವರು ಅವನನ್ನು ಹೊಡೆದು ಕೊಂದು ಹಾಕಬೇಕೆಂದು ಸಂಚು ಮಾಡಿ ಅವನ ಮನೆಯನ್ನು ಮುತ್ತಿದರು. ಅವರು ಹಾಗೆ ಮುತ್ತಲು ಕೇತಯ್ಯನು ಅದಕ್ಕೆ ಅಂಜಲಿಲ್ಲ, ಅಳುಕಲಿಲ್ಲ. ಆಗ ಅವನು ಬೇರೊಂದು ಉಪಾಯವನ್ನು ಯೋಜಿಸಿದನು. ಅವನು ಅವರನ್ನು ತನ್ನ ಮನೆಯಲ್ಲಿ ಬರಮಾಡಿಕೊಂಡು ಅವರಿಗೆ ಶೈವ ವೀರಶೈವದ ಭೇದ, ಅಂಗ ಲಿಂಗ ಸಂಬಂಧ, ಷಟ್‌ಸ್ಥಲಾಚರಣೆ, ಮಹೇಶ್ವರಾಚರಣೆಗಳ, ವಿಚಾರ ಇವುಗಳನ್ನು ತನ್ನ ವಚನಗಳ ಮೂಲಕ ಬೋಧಿಸಿದನು. ಆಗ ಅವರ ರೋಷವು ಅಡಗಿತು, ಅವರು ಶಾಂತವಾದರು. ಇಷ್ಟೇ ಅಲ್ಲ ಅವರು ಅವನಿಂದ ವೀರಶೈವ ದೀಕ್ಷೆಯನ್ನು ಹೊಂದಿ, ಅವನ ಕೇವಲ ಭಕ್ತರಾದರು.

ಏಲೇಶ ಕೇತಯ್ಯನು ವಚನಕಾರನಿದ್ದಾನೆ. ಅವನ ೬೪ ವಚನಗಳು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿದೆ. ಅವನ ಮುದ್ರಿಕೆಯು 'ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗ' ಎಂದಿದ್ದು ರಾಮೇಶ್ವರ ದೇವಾಲಯವು ಏಲೇರಿ ಗ್ರಾಮದಲ್ಲಿ ಈಗಲೂ ಇದೆ. ಅವನ ವಚನಗಳೆಲ್ಲವೂ ಮಾಹೇಶ್ವರ ಸ್ಥಲಕ್ಕೆ ಹೊಂದಿದವುಗಳಾಗಿವೆ. ಅವುಗಳಲ್ಲಿ ಕೇತಯ್ಯನ ಆಚರಣೆಯು ಯಾವರೀತಿಯದಾಗಿತ್ತೆಂಬುದನ್ನು ನಾವು ಕಂಡು ಹಿಡಿಯಬಹುದಾಗಿದೆ.

'ಗುರುವಾದಡೂ ಆಚಾರಭ್ರಷ್ಟವಾದಡೆ ಅನುಸರಿಸಲಾಗುವದು. ಲಿಂಗವಾದಡೂ ಆಚಾರ ಹಳುವಾದಲ್ಲಿ ಪೂಜಿಸಲಾಗುವದು......ಆಚಾರವೇ ವಸ್ತು, ವ್ರತವೇ ಪ್ರಾಣ, ಕ್ರಿಯೆಯೇ ಜ್ಞಾನ, ಜ್ಞಾನವೇ ಆಚಾರ' (ವಚನ ನಂ. ೪೩) ಎಂದು ತನ್ನ ಒಂದು ವಚನದಲ್ಲಿ ಹೇಳಿದ್ದಾನೆ.

ಅವನು ೫ ನೇ ವಚನದಲ್ಲಿ ತನ್ನ ಕಾಯಕವಾದ ಒಕ್ಕಲುತನವನ್ನು ಕುರಿತು 'ತಾ ಮಾಡುವ ಕೃಷಿಯ ಮಾಡುವನ್ನಬರ ಮಾಡಿ ಕೃಷಿ ತೀರಿದ ಮೇಲೆ ಗುರುದರ್ಶನ ಲಿಂಗಪೂಜೆ ಜಂಗಮಸೇವೆ ಶಿವಭಕ್ತರ ಸುಖಸಂಭಾಷಣೆ, ಶರಣರ ಸಂಗ ಈ ನೇಮವನರಿವುತಿಪ್ಪುದು ಸದ್ಭಕ್ತ ಸದಾತ್ಮನ ಮುಕ್ತಿ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗಕ್ಕೆ ಆತನೇ ಚೇತನಭಾವ' ಎಂದು ಒಕ್ಕಲಿಗರು ಒಕ್ಕಲುತನ ಕೆಲಸ ಮಾಡಿದ ಬಳಿಕ ಹೇಗೆ ವೇಳೆಗಳೆಯಬೇಕೆಂಬುದನ್ನು ತಿಳಿಸಿದ್ದಾನೆ.

ಅವನು ತನ್ನ ವಚನಗಳಲ್ಲಿ ವ್ಯಭಿಚಾರ, ಪರಪಾಕ, ಸುರೆ ಇವುಗಳನ್ನು ಬಿಟ್ಟು ನೀತಿಯಿಂದ ಇರಬೇಕೆಂದು ಆಗಿಂದಾಗ್ಗೆ ಬೋಧಿಸುತ್ತಾನೆ. 'ಅನುವಿಂಗೆ ತಕ್ಕ ವ್ರತ, ವ್ರತಕ್ಕೆ ತಕ್ಕ ಆಚಾರ, ಆಚಾರಕ್ಕೆ ತಕ್ಕ ಖಂಡಿತ, ಅವಾವ ನೇಮದಲಿ ಭಾವಶುದ್ಧವಾದವಂಗೆ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವು ಪ್ರಸನ್ನವಾಗಿಪ್ಪನು' ಎಂದು ಹೇಳುತ್ತಾನೆ. (ವಚನ - ೧೪)

ತಾನು ಆಚಾರನಿಷ್ಠನಾದರೂ ಅತಿ ಶೀಲವನ್ನು ಮಾಡಕೂಡದೆಂತಲೂ ಅವನು ಹೇಳಿದ್ದಾನೆ. 'ಬಹುಜಲವಂ ಬಿಟ್ಟಲ್ಲಿ ಶೀಲವಲ್ಲ. ಪರಪಾಕ ದ್ರವ್ಯವ ಬಿಟ್ಟಲ್ಲಿ ಶೀಲವಲ್ಲ......ಆಗುಣ ಜಗದ ಮಚ್ಚು. ಈ ಗುಣ ವ್ರತಕ್ಕೆ ಸಲ್ಲದು. ವ್ರತವಾವುದೆಂದಡೆ ಪರಾಪೇಕ್ಷೆಯ ಮರೆದು ಪರಸತಿಯ ತೊರೆದು......ಅಹುದಾದುದ ಹಿಡಿದು ಅಲ್ಲದಾದುದ ಬಿಟ್ಟು ಬಹು ದುಃಖವಂ ಮರೆದು ಇಂತೀ ಸರ್ವಗುಣ ಸಂಪನ್ನನಾಗಿ ಆತ್ಮಂಗರುಹಿನ ಶೀಲವ ಮಾಡಿ......ಹೊರಗಣ ಮಾಟ ಒಳಗಣ ಕೂಟ ಉಭಯ ಶುದ್ಧವಾದಲ್ಲಿ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದ ಜಿಡ್ಡು ಹರಿಯಿತ್ತು' ಎಂದು ೧೫ ನೇ ವಚನದಲ್ಲಿ ಹೇಳಿದ್ದಾನೆ.

ಕೇತಯ್ಯನು ತನ್ನ ಮನೆಯಲ್ಲಿ ದನಗಳಿಗೆ ಲಿಂಗಾರ್ಪಿತವಾದ ಮೇವನ್ನು ಕೊಡುತ್ತಿದ್ದನೆಂಬುದು ಅವನ ೩೭ ನೇ ವಚನದಲ್ಲಿ ಉಲ್ಲೇಖವಾಗಿದೆ. ಅದು ಅವುದೆಂದರೆ—

'ಎನ್ನಂಗ ಸೀಮೆಯಲ್ಲಿದ್ದ ಗೋವತ್ಸ ಮೊದಲಾದ ಘಟಕ್ಕೆಲ್ಲಕ್ಕೂ ಶಿವಲಿಂಗಪೂಜೆ ಪಂಚಾಚಾರ ಶುದ್ಧ ನೇಮ ಭಾವ ಪಾದೋದಕ ಪ್ರಸಾದವಿಲ್ಲದೆ ತೃಣ ಉದಕವ ಮುಟ್ಟಿಸಿವರೆ ಎನ್ನ ಸೀಮೆಗೆ ಎನ್ನ ವ್ರತಾಚಾರಕ್ಕೆ ನಾ ಕೊಂಡ ಗಮನಕ್ಕೆ ಮಾಡಿದಡೆ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗಕ್ಕೆ ದೂರ'

೫೫ ನೇ ವಚನದಲ್ಲಿ ಅವನು 'ವ್ರತವನಾಶ್ರಯಿಸಿದ ಮತ್ತೆ ಹುಸಿ, ಕೊಲೆ, ಕಳವು, ಪರದಾರವ ಮಾತುವನ್ನಕ್ಕರ ವ್ರತಕ್ಕೆ ಸಲ್ಲ, ನೇಮಕ್ಕೆ ಸಲ್ಲ, ಅವಂಗಾಚಾರವಿಲ್ಲ. ಅವ ರಾಜವೆಂದು ದ್ರವ್ಯದಾಸಗಾಗಿ ಅವನ ಮನೆಯ ಹೊಕ್ಕು ವಿಭೂತಿ ವೀಳೆಯ ಮೊದಲಾದ ಉಪಚಾರಕ್ಕೊಳಗಾದವ ಸತ್ತ ಕುಕ್ಕುರನ ಕೀಟಕವ ತಾ ತಿಂದಂತೆ' ಎಂದು ಹೇಳುತ್ತಾನೆ.

ಈ ಪ್ರಕಾರ ಏಲೇಶ ಕೇತಯ್ಯನು ಉಚ್ಚತರದ ಧಾರ್ಮಿಕವೃತ್ತಿಯಿಂದ ನಡೆದಿದ್ದಾನೆ. ಶಿವಶರಣರಲ್ಲಿ ಅವನು ಬೋಧಕನೆಂದು ಹೆಸರು ಪಡೆದಿದ್ದಾನೆ. ಅವನ ಬೋಧೆಗೆ ಅವನ ಇದಿರಾಳಿಗಳು ಸಹ ಮೆಚ್ಚಿ ವೀರಶೈವ ಧರ್ಮವನ್ನು ಸ್ವೀಕರಿಸಿದ್ದಾರೆ.

---

## ರೆಮ್ಮವ್ವೆ.

ರೆಮ್ಮವ್ವೆಯು ಒಬ್ಬ ಸ್ತ್ರೀ ವಚನಕಾರಳಿದ್ದಾಳೆ. ಆಕೆಯ ಮುದ್ರಿಕೆಯು 'ಏಲೇಶ್ವರ ಲಿಂಗ' ಎಂದಿರುತ್ತದೆ. ಆಕೆಯು ಏಲೇಶಕೇತಯ್ಯನ ಗ್ರಾಮವಾದ ಏಲೇರಿಯಲ್ಲಿ ವಾಸಮಾಡುತ್ತಿದ್ದಳು. ಏಲೇರಿಯಲ್ಲಿ ಏಲೇಶ್ವರ ದೇವಾಲಯವಿದ್ದು, ಈ ದೇವತೆಯ ಹೆಸರಿನಿಂದಲೇ ಅವಳು ತನ್ನ ವಚನಗಳನ್ನು ರಚಿಸಿದ್ದಾಳೆ. ಏಲೇಶಕೇತಯ್ಯನಂತೆಯೇ ಮಹೇಶ್ವರಸ್ಥಲದ ಕಟ್ಟಾಚರಣೆಯನ್ನು ಪ್ರತಿಪಾದಿಸುವವಳಾಗಿ ಆವಳ ವಚನಗಳು ಅವನ ವಚನಗಳನ್ನೇ ಹೋಲುತ್ತವೆ. ಆವಳ ೨೩ ವಚನಗಳು ಶಿವಾನುಭವ ಗ್ರಂಥಮಾಲೆಯಲ್ಲಿ ಪ್ರಕಟವಾಗಿದ್ದು ಅವುಗಳಲ್ಲಿಯ ೬ನೇ ಮತ್ತು ೧೯ನೇ ವಚನಗಳ ಮೇಲಿಂದ ಅವಳು ಒಕ್ಕಲುತನದ ಕಾಯಕವನ್ನು ಮಾಡುತ್ತಿದ್ದಳೆಂದು ತಿಳಿಯುತ್ತಿದೆ. ಜಂಗಮರೂ ಸ್ತ್ರೀಯರೂ ಪುರುಷರೂ ಕೆಲವೊಂದು ವ್ರತವನ್ನು ಸ್ವೀಕರಿಸಿದ ಬಳಿಕ ಸದಾಚಾರಿಗಳಾಗಿಯೇ ನಡಿಯಬೇಕೆಂದು ಅವಳು ಅವುಗಳಲ್ಲಿ ಬೋಧಿಸುತ್ತಾಳೆ. ಪ್ರಸಾದ ತೆಗೆದುಕೊಳ್ಳುವಲ್ಲಿ ಅದನ್ನು ಸಿಕ್ಕವರಲ್ಲಿ ತೆಗೆದುಕೊಳ್ಳದೆ ಸಮಶೀಲವಂತರಲ್ಲಿಯೇ ತೆಗೆದುಕೊಳ್ಳಬೇಕೆಂದು ಹೇಳುತ್ತಾಳೆ. (ವಚನ ೧೩) ಅವಳ ವಚನಗಳಲ್ಲಿ ಶಿವಾನುಭವದ ಉಚ್ಚ ತತ್ವಗಳು ಅಡಕವಾಗಿರುತ್ತವೆ.

ಬಸವಾದಿ ಪ್ರಮಥರ ತತ್ವಗಳು ಶುದ್ಧವೂ ಸಾತ್ವಿಕವೂ ಆಗಿದ್ದು ಅವುಗಳ ಮೂಲಕ ಅವರ ಕಾಲದಲ್ಲಿ ಸ್ತ್ರೀಯರು ಪಾರಮಾರ್ಥದಲ್ಲಿದ್ದುಕೊಂಡು ತಮ್ಮ ಕಾಯಕಗಳನ್ನು ನಡಿಸುವಲ್ಲಿ ಹೇಗೆ ತತ್ಪರರಾಗಿದ್ದರೆಂಬುದು ರೆಮ್ಮವ್ವೆಯ ವಚನಗಳಿಂದ ತಿಳಿದುಬರುತ್ತಿದೆ.

## ವಚನಗಳು.

೧. ತಾ ನೇಮವ ಮಾಡಿಕೊಂಡು ಕೃಷಿಜೆವಸಾಯವಿಲ್ಲದೆ ಒಡೆಯರ ಕಟ್ಟಪ್ಪಣೆಯ ಮಾಡುವದೆಂತು? ಹೀಂಗಲ್ಲದೆ ಎನ್ನ ಒಡಲ ಹೊರೆದೆನೆಂದು ಹೋದ ಠಾವಿನಲ್ಲಿ ಓಗರವನಿಕ್ಕುವ ಲಾಗಿನ ಶೀಲವಂತರ ಮನದ ಭೇದವ ನೀವೇ ಬಲ್ಲಿರಿ ಏಲೇಶ್ವರಲಿಂಗವೇ.

೨. ಜಲ ನೆಲ ಶಿಲೆ ತಾ ಮಾಡುವ ಹೊಲ ಮುಂತಾಗಿ ಸರ್ವವೆಲ್ಲವು ಲಿಂಗಾಯತ ಸಂಬಂಧವಾಗಿ, ಭವಿಸಂಗ, ಭವಿನಿರೀಕ್ಷಣೆ, ಭವಿ ಆಪೇಕ್ಷೆ, ಭವಿದ್ರವ್ಯಂಗಳನೊಲ್ಲದೆ, ಶಿವನರಿತಲ್ಲಿ, ಶಿವನ ಪೂಜೆಯ ಮಾಡುವಲ್ಲಿ, ಶಿವಮೂರ್ತಿಧ್ಯಾನದಿಂದ ಶಿವಲಿಂಗಾರ್ಚನೆಯ ಮಾಡುವಲ್ಲಿ ಶಿವಪ್ರಸಾದವ ತಂದು ಒಡೆಯನಿಗಿತ್ತು, ಆ ಪ್ರಸಾದವ ಏಲೇಶ್ವರ ಲಿಂಗಕ್ಕೆ ಕೊಟ್ಟ ವ್ರತಭಾವಿಗೆ ನಮೋ ನಮೋ ಎನುತಿರ್ದೆ.

---

## ಇಂಡಿಯ ಶಾಂತಯ್ಯ.

ಇಂಡಿಯ ಶಾಂತಯ್ಯನು ವಿಜಾಪುರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾದ ಇಂಡೀ ಗ್ರಾಮದವನು. ಈ ಗ್ರಾಮವು ವಿಜಾಪುರ—ಸೊಲ್ಲಾಪುರ ರೇಲ್ವೆ ಮಾರ್ಗದಲ್ಲಿದೆ. ಶಿವಭಕ್ತರಿಗೆ ಪಾಠ ಹೇಳುವದೇ ಶಾಂತಯ್ಯನ ಕಾಯಕವಾಗಿತ್ತು. ಆದರಿಂದ ತನಗೆ ಬಂದ ಹಣದಲ್ಲಿ ತಾನು ಉಪಜೀವಿಸುತ್ತ ಉಳಿದ ಹಣವನ್ನು ದಾಸೋಹ ಕಾರ್ಯಕ್ಕೆ ಉಪಯೋಗಿಸುವನು. ಅವನು ಉತ್ತಮ ತರದ ಕೀರ್ತನಕಾರನಾಗಿಯೂ ಇದ್ದನು. ಅವನು ಹೊಸತರದ ಸ್ತೋತ್ರಗಳನ್ನು ರಚಿಸುತ್ತ ಪರಮಾತ್ಮನನ್ನು ಭಜಿಸುವನು. ಅವನು ರಚಿಸಿದ ಪದ್ಯಗಳು ಭಕ್ತಿಭಾವಪೂರಿತವಾಗಿ ಜನರಿಗೆ ಅತ್ಯಂತ ಆಕರ್ಷಕವಾಗಿರುತ್ತಿದ್ದವು. ಹಾಗೆಯೇ ಅವನು ನಿತ್ಯಲಿಂಗಾರ್ಚನೆಯಲ್ಲಿ ಮಗ್ನನಾಗಿದ್ದುಕೊಂಡು ಇಂಡೀ ಗ್ರಾಮದಲ್ಲಿ ತನ್ನ ಕಾಯಕವನ್ನು ನಡಿಸುತ್ತ ಬಂದನು.

ಹೀಗಿರುತ್ತಿರಲು ಪರಮಾತ್ಮನ ಬಗ್ಗೆ ಅವನಲ್ಲಿ ನಿಷ್ಠಾಭಾವವು ದಿನೇ ದಿನೇ ಬಲಿಯುತ್ತ ಬಂದಿತು. ಆದ್ದರಿಂದ ಅವನು ಶಿವಪೂಜೆ ಮತ್ತು

ಶಿವಸ್ತುತಿ ಇವುಗಳಲ್ಲಿಯೇ ತೊಡಗಿದವನಾಗಿ ಅವನಿಗೆ ವೇಳೆಯು ಸಾಲದೆ ಹೋಯಿತು. ಅವನು ಒಂದು ದಿವಸ ಹಸಿವು ತೃಷೆಗಳನ್ನು ಸಹ ಮರೆದು ಶಿವಭಜನೆಯಲ್ಲಿಯೇ ತೊಡಗಿದನು. ಆಗ ಅವನು ಅತ್ಯಂತ ಬಳಲಿ ಮೂರ್ಛೆಹೋಗುವವನಾಗಲು ಲಿಂಗದೊಳಗಿಂದ 'ಶಾಂತಯ್ಯನೇ ನಿನ್ನ ಕೀರ್ತನೆಯು ಸಾಕು. ವಿಶ್ರಾಂತಿಯನ್ನು ಹೊಂದು' ಎಂಬ ಶಬ್ದಗಳು ಹೊರಹೊರಟವು. ಇದರಿಂದ ಅವನು ಮೂರ್ಛೆ ತಿಳಿದವನಾಗಿ ಲಿಂಗದ ಮುಂದೆ ಹೋಗಿ ಸಾಷ್ಟಾಂಗವೆರಗಿದನು. ಆಗ ಅದರೊಳಗಿಂದ ಒಂದು ಇಂಡೆಯು ಅಂದರೆ ಪುಷ್ಪದ ಹಾರವು ಹೊರ ಬಿದ್ದು ಅವನ ಕೊರಳಲ್ಲಿ ಬಿದ್ದಿತು! ಈ ಪ್ರಕಾರ ಪರಮಾತ್ಮನು ಅವನಿಗೆ ಪ್ರಸನ್ನನಾದರೂ ಶಾಂತಯ್ಯನು ತನ್ನ ಭಕ್ತಿಪೂರಿತವಾದ ಕೀರ್ತನೆಗಳನ್ನು ದಿನಾಲು ಮಾಡುವದನ್ನು ಮತ್ತು ಜನರಿಗೆ ಪಾಠ ಹೇಳುವದನ್ನು ಬಿಡಲಿಲ್ಲ. ಪರಮಾತ್ಮನಾದರೂ ಅವನ ಭಕ್ತಿಭಾವಕ್ಕೆ ಮೆಚ್ಚಿ ಅವನ ಕೀರ್ತನೆಗಳು ಮುಗಿದ ಬಳಿಕ ಅವನಿಗೆ ಪ್ರತಿದಿನ ಪುಷ್ಪಹಾರವನ್ನು ಅರ್ಪಿಸುವನು. ಈ ಕ್ರಮವು ಅನೇಕ ದಿವಸ ನಡೆದುಬಂದಿತ್ತು. ಹೀಗಿರಲು ಒಂದು ದಿನ ಪರಮಾತ್ಮನು ಅವನ ಮನ ನೋಡಬೇಕೆಂದು ಕೀರ್ತನೆ ಮುಗಿದ ಬಳಿಕ ಹಾರವನ್ನು ಕೊಡದಿರಲು ಶಾಂತಯ್ಯನು ತನ್ನಿಂದ ಏನೋ ಒಂದು ಪ್ರಮಾದವು ಘಟಿಸಿರಬಹುದೆಂದು ಎಣಿಸಿ ಅವನು ತತ್‌ಕ್ಷಣವೇ ತನ್ನ ಶಿರವನ್ನರಿದು ಲಿಂಗದ ಮುಂದಿಟ್ಟನು ಮತ್ತು ಆ ಲಿಂಗದಲ್ಲಿಯೇ ಅಡಗಿದನು.

ಶಾಂತಯ್ಯನು ಪರಮಾತ್ಮನಿಂದ ಇಂಡೆ ಅಂದರೆ ಪುಷ್ಪದ ಹಾರವನ್ನು ಪಡೆಯುತ್ತಿದ್ದದರಿಂದ ಅವನಿಗೆ ಇಂಡೆಯ ಶಾಂತಯ್ಯನೆಂಬ ಹೆಸರು ಬಂದಿತು. ಮತ್ತು ಅವನಿದ್ದ ಊರನ್ನು ಜನರು 'ಇಂಡೆ' ಅಥವಾ 'ಇಂಡೀ' ಎಂದು ಕರೆಯಹತ್ತಿದರು.

ಈ ಗ್ರಾಮದಲ್ಲಿ ಶಾಂತಯ್ಯನ ದೇವಾಲಯವು ಈಗಲೂ ಪ್ರಸಿದ್ಧವಾಗಿರುತ್ತದೆ. ಅವನನ್ನು ಆ ಗ್ರಾಮದವರು ತಮ್ಮ ಗ್ರಾಮದ ಮುಖ್ಯ ದೇವತೆ ಎಂದು ಭಾವಿಸಿ ಈಗಲೂ ಅತ್ಯಂತ ಭಕ್ತಿಯಿಂದ ನಡೆದುಕೊಳ್ಳುತ್ತಾರೆ.

---

# ಮೊರನ ವೇಮಯ್ಯ.

**ಮೊ**ರನ ವೇಮಯ್ಯನು ಕಲ್ಯಾಣಪಟ್ಟಣದಲ್ಲಿದ್ದುಕೊಂಡು ಬೆಟ್ಟಕ್ಕೆ **ಹೋಗಿ** ಬಿದಿರು ಕಡಿದು ಅವುಗಳಿಂದ ಮೊರಗಳನ್ನು ಮಾಡಿ ಪಟ್ಟಣ ದಲ್ಲಿ ಅವುಗಳನ್ನು ಮಾರುವ ಮೇದರನ ಕಾಯಕವನ್ನು ಮಾಡುತ್ತಾ ಇದ್ದನು. ಗಂಗಾದೇವಿಯು ಅವನ ಹೆಂಡತಿಯು. ಆ ಉಭಯತರು ಪರಮಾತ್ಮನ ನಿಜಶರಣರು, ಏಕಲಿಂಗನಿಷ್ಠಾಪರರು, ಪರಧನವನ್ನು ಅಪೇಕ್ಷಿಸರು ಮತ್ತು ಶಿವಾನುಭವಿಗಳಾಗಿ ಶಿವಾನುಭವದ ಆಚರಣೆ ಯುಳ್ಳವರು. ಬಿದುರುಗಳಿಂದ ಮೊರಗಳನ್ನು ಮಾರಿ ತಮಗೆ ಬಂದ ದ್ದರ ಮೇಲೆ ಲಿಂಗಾರ್ಪಿತಭಾವದಿಂದ ಉಪಜೀವಿಸುತ್ತಾ ಉಳಿದದ್ದನ್ನು ಅವರು ದಾಸೋಹ ಕಾರ್ಯಗಳಿಗೆ ನೀಡಿ ಆನಂದದಿಂದಿರುತ್ತಿದ್ದರು. ಹೀಗೆ ಅವರು ಬಾಲ್ಯದಿಂದ ಈ ಕಾಯಕವನ್ನು ಏಕನಿಷ್ಠೆಯಿಂದ ಮಾಡುತ್ತಿ ರಲು ಅವರಿಗೆ ವೃದ್ಧಾಪ್ಯ ಕಾಲವು ಒದಗಿತು. ಆಗಲೂ ಕೂಡ ಅವರು ತಮ್ಮ ಮೊರದ ಕಾಯಕವನ್ನು ಬಿಡಲಿಲ್ಲ. ವೇಮಯ್ಯನು ದಿನಾಲು ಬೆಟ್ಟಕ್ಕೆ ಹೋಗಿ ಕಂಪಿಸುವ ಕರಗಳಿಂದ ಬಿದಿರುಗಳನ್ನು ಕೊಯ್ದು ಅಸ್ತಮಯ ಕಾಲದಲ್ಲಿ ಮನೆಗೆ ಅವುಗಳನ್ನು ತಂದು, ನಾಲ್ಕೆರಡು ಮೊರ ಗಳನ್ನು ಹೆಣೆದು ಅವುಗಳನ್ನು ಮಾರಿ ಶಿವಭಕ್ತಿಯುಳ್ಳವನಾಗಿ ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತಿದ್ದನು. ಅವನ ಶುದ್ಧ ವರ್ತನೆಯನ್ನು ಬಸವಾದಿ ಶಿವಶರಣರು ತಿಳಿದುಕೊಂಡವರಾಗಿ ಅವನಿಗೋಸ್ಕರ ಅತ್ಯಂತ ಭಕ್ತಿಭಾವ ವನ್ನು ತಾಳಿ ಅವನನ್ನು ಬಹಳವಾಗಿ ಮನ್ನಿಸುತ್ತಿದ್ದರು.

ಪರಮಾತ್ಮನು ವೇಮಯ್ಯನು ವಾರ್ಧಿಕ್ಯದಲ್ಲಿಯೂ ಕೂಡ ಹೀಗೆ ದಾಸೋಹ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ನಡಿಸುತ್ತಿದ್ದುದನ್ನು ತಿಳಿದು ಇನ್ನುಮೇಲೆ ಇವನನ್ನು ಭೂಲೋಕದಲ್ಲಿರಿಸದೆ ಅವನಿಗೆ ಸಾಯುಜ್ಯ ಪದವನ್ನು ಕೊಡಬೇಕೆಂದು ಬಯಸಿ, ಒಂದು ಜಂಗಮ ವೇಷವನ್ನು ಧಾರಣಮಾಡಿ ತಾನು ಅಂಜನಾಸಿದ್ಧಿ, ಘಟಿಕಾಸಿದ್ಧಿ, ರಸಸಿದ್ಧಿ, ಪರ ಕಾಯಪ್ರವೇಶ, ಅದೃಶ್ಯಕರಣ, ಆಕಾಶಗಮನ, ಆಕರ್ಷಣ, ವಶೀಕರಣ, ಮಂತ್ರತಂತ್ರ, ಯೋಗಾಭ್ಯಾಸ ಮೊದಲಾದ ಸಿದ್ಧರ ಸಾಧನೆಗಳನ್ನು ಸಾಧಿಸಿದ ಒಬ್ಬ ಆರಾಧ್ಯಮೂರ್ತಿ ಎಂದು ಬೀದಿಯಲ್ಲಿ ಸಾರಿಕೊಳ್ಳುತ್ತ ವೇಮಯ್ಯನ ಮನೆಯ ಮುಂದೆ ಬಂದು ನಿಂತನು. ಆಗ ವೇಮಯ್ಯನು ಗುಡ್ಡಕ್ಕೆ ಹೋಗಿದ್ದು ಮನೆಯಲ್ಲಿ ಅವನ ಹೆಂಡತಿ ಗಂಗಾದೇವಿಯೊ

ಬ್ಬಳು ಮಾತ್ರ ಇದ್ದಳು. ಅವಳು ಕೂಡಲೆ ಆ ಜಂಗಮುನನ್ನು ಒಳಗೆ ಕರೆ
ದುಕೊಂಡು ಬಂದು ಸತ್ಕರಿಸಿದಳು. ಊಟವಾದ ಮೇಲೆ ಆ ಜಂಗಮನು
ಅವಳಿಗೆ "ಶಂಕರನು ಎಷ್ಟು ನಿಷ್ಕರುಣಿಯು! ತನ್ನ ನಂಬಿದ ಭಕ್ತ
ರನ್ನು ಎಷ್ಟು ಪರಿ ಕಾಡುತ್ತಾನೆ!! ಇದನ್ನು ನಾನಿಂದು ಕಂಡೆನು. ನೀವು
ಅತ್ಯಂತ ಬಡತನದಿಂದ ಕಾಲಕಳೆಯುತ್ತಲಿದ್ದೀರಿ. ನಿಮ್ಮ ಬಡತನವನ್ನು
ನಾನು ಈಗ ಹಿಂಗಿಸುತ್ತೇನೆ" ಎಂದು ಗಂಗಾದೇವಿಗೆ ನುಡಿದು "ನಿನ್ನ
ಗಂಡನ ಕಾಯಕದ ಕೊಡಲಿ ಅಥವಾ ಗುದ್ದಲಿ ಯಾವುದಾದರೂ ಒಂದು
ಮನೆಯಲ್ಲಿದ್ದರೆ ಅದನ್ನು ನನ್ನ ಕಡೆಗೆ ತಂದುಕೊಡು" ಎಂದು ಹೇಳಲು ಆ
ಸಾಧ್ವಿಯು ಪ್ರತ್ಯುತ್ತರಗುಡದೆ ಅಟ್ಟದ ಮೇಲಿದ್ದ ಒಂದು ಕೊಡಲಿಯನ್ನು
ತಂದು ಅವನ ಮುಂದೆ ತಂದಿಟ್ಟಳು. ಆಗ ಆ ಜಂಗಮನು ಆ ಕೊಡ
ಲಿಗೆ ತನ್ನಲ್ಲಿಯ ಸಿದ್ಧರಸವನ್ನು ಮುಟ್ಟಿಸಿದ ಕೂಡಲೆ ಅದು ಹೊನ್ನಿನ
ಕೊಡಲಿಯಾಯಿತು. ಆಮೇಲೆ ಅವನು ಆ ಕೊಡಲಿಯನ್ನು ಪೇಟೆಯಲ್ಲಿ
ತೆಗೆದುಕೊಂಡು ಹೋಗಿ ಅದನ್ನು ಮಾರಿ ಬಂದ ಹಣವನ್ನು ಗಂಗಾ
ದೇವಿಯ ಮುಂದೆ ಸುರಿದು, ಇನ್ನುಮೇಲೆ ನೀವು ನಿಮ್ಮ ದಾರಿದ್ರ್ಯ
ವನ್ನು ದೂರಮಾಡಿಕೊಳ್ಳಿರಿ ಎಂದು ಹೇಳಿದನು. ಹೀಗೆನ್ನಲು ಸಾಧ್ವಿ
ಯಾದ ಗಂಗಾದೇವಿಯು ಆ ಜಂಗಮನಿಗೆ "ದೇವಾ ಇಂದು ನಾನು
ಕೆಟ್ಟೆನು, ಕೆಟ್ಟೆನು. ನಿಮ್ಮ ಕುಮಾರನಾದ ಪೇಮಯ್ಯನು ದೇಹಗುಣ
ವುಳ್ಳವನಲ್ಲ. ಬಂಗಾರವೆಂಬ ಹೊಲೆಯನ್ನು ಅವನು ಮುಟ್ಟುವವನಲ್ಲ.
ಅವನು ಇಂಥ ಹಣವನ್ನು ಸ್ವೀಕರಿಸಲಾರನು. ನಿಮಗೆ ಕೊಟ್ಟ ಕೊಡ
ಲಿಯನ್ನು ತಿರುಗಿ ಅದನ್ನು ಹಳೆಯದನ್ನಾಗಿ ಮಾಡಿ ನನಗೆ ಕೊಟ್ಟು
ಪಾಲಿಸಬೇಕು" ಎಂದು ಹೇಳಿ ಆ ಜಂಗಮನ ಪಾದದಡಿಯಲ್ಲಿ ಬಿದ್ದಳು.
ಆಗ ಆ ಜಂಗಮನು ಉಭಯತರ ನಿರಪೇಕ್ಷೆ ಭಾವವನ್ನು ತಿಳಿದು
ನಸುನಕ್ಕು, "ಮೊದಲಿನ ಕಬ್ಬಿಣ ಕೊಡಲಿಯನ್ನು ಬಂಗಾರದ ಕೊಡ
ಲಿಯನ್ನಾಗಿ ಮಾಡಿ ಅದನ್ನು ಚಿನಿವಾಲನಿಗೆ ಕೊಟ್ಟುಬಿಟ್ಟೆನು. ಕಬ್ಬಿ
ಣಕ್ಕಿಂತಲೂ ಶ್ರೇಷ್ಠವಾದ ಈ ಹೊನ್ನನ್ನು ನಿಮ್ಮ ಮನೆಯಲ್ಲಿಟ್ಟಿದ್ದೇನೆ.
ಮತ್ತು ನನ್ನ ಸಿದ್ಧರಸದ ಚೀಲವು ಈ ದಿನ ರಾತ್ರಿ ನಿಮ್ಮ ಮನೆ
ಯಲ್ಲಿರಲಿ. ನಾನು ನಾಳೆ ಬೆಳಗ್ಗೆ ಪುನಃ ನಿಮ್ಮಲ್ಲಿಗೆ ಬರುವೆನು.
ಆಗ ಈ ರಸಚೀಲವನ್ನು ನನಗೆ ತಿರಿಗಿಕೊಡುವುದು" ಎಂದು ಅವನು
ಹೇಳಿ ಹೊರಟುಹೋದನು.

ಆ ದಿವಸ ಸಂಜೆಯು ಮುಂದೆ ವೇಮಯ್ಯನು ನಿತ್ಯದಂತೆ ಹೆಗಲ ಮೇಲೆ ಬಿದಿರಿನ ಹೊರೆಯನ್ನು ಹೊತ್ತುಕೊಂಡು ಪಂಚಾಕ್ಷರಿಯ ಮೂಲಕ ಷಡ್ಲಿಂಗಗಳ ಧ್ಯಾನಮಾಡುತ್ತ ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ ಭಾವವುಳ್ಳವನಾಗಿ ನಡೆದುಬರುತ್ತಾ, ತನ್ನ ಮನೆಯ ಹೊಸತಿಲಿಗೆ ಬಂದನು. ಆಗ ಅವನ ನಾಸಿಕಕ್ಕೆ ಏನೋ ಒಂದು ದುರ್ವಾಸನೆಯು ಬಂದು ಹೇಸಿಕೆಯಾಯಿತು. ಆಗ ಅವನು ಇಲ್ಲಿ ಯಾರಾದರೂ ಮಲವಿಸರ್ಜನೆ ಮಾಡಿರುವರೋ ಹೇಗೆಂದು ತನ್ನ ಹೆಂಡತಿಗೆ ಕೇಳಲು, ಆವಳು ಕೂಡಲೆ ತಿಳಿದವಳಾಗಿ ತನ್ನ ಗಂಡನೆದುರಿಗೆ ಬಂದು, ಇಂದಿನ ದಿನ ಒಬ್ಬ ಜಂಗಮ ದೇವನು ಬಂದು ಮನೆಯಲ್ಲಿಯ ನಮ್ಮ ಕೊಡಲಿಯನ್ನು ಬಂಗಾರದ ಕೊಡಲಿಯನ್ನಾಗಿ ಮಾಡಿ ಅದನ್ನು ಅಂಗಡಿಯಲ್ಲಿ ವಿಕ್ರಯಿಸಿ ಹಣವನ್ನು ಕೊಟ್ಟು ಹೋದನು. ಅದು ಮನೆಯಲ್ಲಿದೆ ಎಂದು ಹೇಳಿದಳು. ಆಗ ವೇಮಯ್ಯನು, ಅಹುದು ಅಹುದು, ನನಗೆ ತಾಕಿದ್ದು ಕಾರ್ಮಿಕ ಮಲದ ಅದರ ದುರ್ಗಂಧವು. ಇದು ನನ್ನ ಲಿಂಗದ ವಾಸನೆಯನ್ನು ಆವರಿಸಿ ನನಗೆ ಹೇಸಿಕೆಯನ್ನುಂಟು ಮಾಡುತ್ತಿದೆ. ಶೀಘ್ರವಾಗಿ ಆ ಹಣವನ್ನು ತಿಪ್ಪೆಯ ಮೇಲೆ ಚಲ್ಲಿ ಬಿಡು. ನೀನು ಚಲ್ಲದಿದ್ದರೆ ನಾನು ಮನೆಯೊಳಗೆ ಕಾಲಿಡುವದಿಲ್ಲ ಎಂದು ಹೇಳಿದನು. ಆಗ ಗಂಗಾದೇವಿಯು ತನ್ನ ಪತಿಯ ಇಚ್ಛೆಯನ್ನು ಮೀರದೆ ಆ ಹಣವನ್ನೆಲ್ಲ ತಿಪ್ಪೆಯ ಮೇಲೆ ಚಲ್ಲಿಬಿಟ್ಟಳು. ಆ ಮೇಲೆ ಆವಳು ತನ್ನ ಪತಿಯನ್ನು ಒಳಗೆ ಬರಮಾಡಿಕೊಂಡು ಭಕ್ತಿಯಿಂದ ಸತ್ಕರಿಸಿದಳು. ವೇಮಯ್ಯನು ಒಳಗೆ ಬಂದು ತನ್ನ ಲಿಂಗಾರ್ಚನೆಯನ್ನು ತೀರಿಸಿ ಪ್ರಸಾದವನ್ನು ತೆಗೆದುಕೊಂಡನು. ಆ ಮೇಲೆ ಪರಮಾತ್ಮನನ್ನು ಧ್ಯಾನಿಸುತ್ತ ತನ್ನ ಕಾಯಕವನ್ನು ಆರಂಭಿಸಿ ನಾಲ್ಕೆರಡು ಮೊರಗಳನ್ನು ರಾತ್ರಿಯಲ್ಲಿ ಹೆಣೆದು ಅವು ಮುಗಿದ ಬಳಿಕ ವಿಶ್ರಾಂತಿಯನ್ನು ಹೊಂದಿದನು.

ಬೆಳಿಗ್ಗೆ ಹಿಂದಿನ ದಿನ ಬಂದ ಜಂಗಮಯ್ಯನು ಮನೆಯ ಮುಂದಿನ ಅಂಗಣದಲ್ಲಿ ನಿಂತುಕೊಂಡು, ವೇಮಯ್ಯನಿಗೆ "ನಾನು ಬೇರೊಂದು ಗ್ರಾಮಕ್ಕೆ ಪ್ರಯಾಣಮಾಡುತ್ತೇನೆ. ನಾನು ನಿಮ್ಮಲ್ಲಿ ನಿನ್ನೆ ಇಟ್ಟ ನನ್ನ ಸಿದ್ಧರಸದ ಚೀಲವನ್ನು ನನಗೆ ತಿರುಗಿ ಕೊಡಿರಿ" ಎಂದೆನ್ನಲು ವೇಮಯ್ಯನು ಎದ್ದು ಅವನನ್ನು ನಮಸ್ಕರಿಸಿ ಅವನಿಗೆ ಹೇಳಿದ್ದು—"ನೀವು ನಮ್ಮ

ಸಮಯಾಚಾರಕ್ಕೋಸ್ಕರ ನಮ್ಮಲ್ಲಿಯೇ ಊಟ ಮಾಡಬೇಕು. ಆದರೆ ನಮ್ಮ ಕಾಯಕದ ಲಿಂಗಮುದ್ರೆಯ ಕೊಡಲಿಯನ್ನು ಮಾತ್ರ ತಿರುಗಿ ಕೊಡಬೇಕು" ಎಂದು ಹೇಳಿದನು. ಆಗ ಆ ಜಂಗಮನು — "ನಿಮ್ಮಲ್ಲಿಯ ತೆಳ್ಳನ್ನ ಅಂಬಲಿಯ ಊಟವು ನನಗೆ ಬೇಡ. ಯಾಕಂದರೆ ಬಸವೇಶ್ವರನ ಅರಮನೆಯಲ್ಲಿ ನನಗೆ ಬೇಕಾದ ಪಕ್ವಾನ್ನವು ದೊರೆಯುತ್ತಿದೆ. ಆದರೆ ನನ್ನ ಸಿದ್ಧರಸದ ಚೀಲವನ್ನು ನನಗೆ ತಿರುಗಿಕೊಡಬೇಕು" ಎಂದು ಹೇಳಲು, ಅದಕ್ಕೆ ವೇಮಯ್ಯನು ನನ್ನ ಕೊಡಲಿಯನ್ನು ಕೊಡದೆ ನೀವು ಹೋಗಲಾರಿರಿ" ಎಂದು ನುಡಿದನು. ಆದರೆ "ಕಬ್ಬಿಣದ ಕೊಡಲಿಯನ್ನು ಬಂಗಾರವನ್ನಾಗಿ ಮಾಡಿ ಅದನ್ನು ಮಾರಿಬಿಟ್ಟಿದ್ದೇನೆ. ನಿನ್ನ ಕಬ್ಬಿಣ ಕೊಡಲಿಯನ್ನು ನನಗೆ ಕೊಡಲಿಕ್ಕೆ ಆಗದು" ಎಂದು ಜಂಗಮನು ಹೇಳಲು "ಅದು ನನ್ನ ಕಾಯಕದ ಕೊಡಲಿಯು. ಈ ಋಣವನ್ನು ನೀವು ಹೇಗೆ ತೀರಿಸುವಿರಿ ? " ಎಂದು ವೇಮಯ್ಯನು ಅವನಿಗೆ ಕೇಳಲಾಗಿ ಪರಮಾತ್ಮನು "ನಾನು ನಿಮ್ಮ ಮನೆಯಲ್ಲಿದ್ದುಕೊಂಡು ದುಡಿದು ನಿಮ್ಮ ಋಣವನ್ನು ತೀರಿಸುವೆನು" ಎಂದಂದು ವೇಮಯ್ಯನ ಸೇವೆಮಾಡಲು ಸಿದ್ಧನಾದನು !

ಮುಂದೆ ಪರಮಾತ್ಮನು ದಿನಾಲು ವೇಮಯ್ಯನ ಕೂಡ ಬೆಟ್ಟಕ್ಕೆ ಹೋಗಿ ಬಿದಿರು ಕಡಿದು ಅವುಗಳನ್ನು ಹೊತ್ತು ತಂದು ಮೊರಗಳನ್ನು ಮಾಡಿ ಅವನೊಡನೆ ಮಾರಹತ್ತಿದನು. ಹೀಗೆ ಅನೇಕ ದಿನಗಳು ಸಂದಿಹೋದವು. ಆಗ ಪರಮಾತ್ಮನು ಬಿದಿರು ಕಡಿದು ಮೊರಗಳನ್ನು ಮಾಡುವ ಕಾಯಕಕ್ಕೆ ಬೇಸತ್ತನು. ಆದರೆ ಲಿಂಗಾರ್ಪಣ ಭಾವದಿಂದ ಕಾಯಕ ಮಾಡುತ್ತಿದ್ದ ವೇಮಯ್ಯನಿಗೆ ಇಂಥ ಬೇಸರಿಕೆಯು ಹೇಗೆ ಬಂದೀತು ? ಅವನಿಗೆ ಬಿದಿರು ಕಡಿದು ಮೊರಗಳನ್ನು ಮಾಡುವದೇ ಪರಮಾತ್ಮನಿಗೋಸ್ಕರ ಮಾಡಿದ ತಪಸ್ಸಾಗಿ ಪರಿಣಮಿಸಿತ್ತು. ಪರಮಾತ್ಮನಲ್ಲಿ ಕಾಯಕದ ಈ ಮನೋಭಾವನೆ ಇರಲಿಲ್ಲ. ಆದ್ದರಿಂದ ಅವನಿಗೆ ಈ ಕಾಯಕವು ಬೇಸರವಾಯಿತು. ಇಂಥ ಸ್ಥಿತಿಯಲ್ಲಿ ಪರಮಾತ್ಮನು ಬಸವೇಶ್ವರನ ಕನಸಿನಲ್ಲಿ ಬಂದು— "ಎಲೋ ಬಸವೇಶ್ವರನೇ, ವೇಮಯ್ಯನು ನನಗೆ ಬಿದಿರು ಹೊರಿಸಿ ತೆಳ್ಳನ್ನ ಅಂಬಲಿಯನ್ನು ಕುಡಿಸಿ ಕೊಡಲಿಗೋಸ್ಕರ ನನ್ನನ್ನು ಕೈಲಾಸಕ್ಕೆ ಹೋಗಗೊಡನು. ಈ ತೊಂದರೆಯಿಂದ ನನ್ನನ್ನು ಮುಕ್ತ ಮಾಡು" ಎಂದು ಹೇಳಿಕೊಳ್ಳಲು, ಬಸವೇಶ್ವರನು ಎಚ್ಚತ್ತು ಶರಣರನ್ನು

ಕೂಡಿಕೊಂಡು ವೇಮುಯ್ಯನ ಮನೆಗೆ ಬಂದನು. ಅಲ್ಲಿ ಪರಮಾತ್ಮನು ಮೊರಗಳನ್ನು ಹೆಣೆಯುತ್ತಿರುವದನ್ನು ನೋಡಿದನು. ಆಗ ಬಸವೇಶ್ವರನು ವೇಮುಯ್ಯನಿಗೆ, " ಈ ಜಂಗಮನು ನಿನಗೆ ಅಪರಾಧ ಮಾಡಿದ್ದಾನೆಂಬುದು ನಿಜವು. ಅವನನ್ನು ನನ್ನಗೋಸ್ಕರ ಕ್ಷಮಿಸು " ಎಂದು ಅವನನ್ನು ಬೇಡಿಕೊಳ್ಳಲು, ವೇಮುಯ್ಯನು " ಹಾಗೆಯೇ ಆಗಲಿ " ಎಂದಂದನು.

ಆಮೇಲೆ ಬಸವೇಶ್ವರನು ಪರಮಾತ್ಮನಿಗೆ ಇನ್ನುಮೇಲೆ ನೀನು ಶಿವಶರಣರ ಗೊಡವೆಗೆ ಹೋಗಬೇಡ. ಅವರ ತೊಡಕು ನಿನಗೆ ಬೇಡ. ಅವರನ್ನು ಕಾಡಿ ಅಂಜಿಸುವೆನೆಂಬ ಹೆಮ್ಮೆ ನಿನಗೆ ಬೇಡ. ಶರಣರು ಸ್ವತಂತ್ರರು, ಧೀರರು. ಅವರು ಆರಿಗೂ ಅಂಜುವವರಲ್ಲ ಎಂದು ನುಡಿಯುತ್ತಿರಲು ಆ ಜಂಗಮನಲ್ಲಿ ಪರಮಾತ್ಮನ ರೂಪುದೋರಿತು ಮತ್ತು ಆವನಲ್ಲಿ ವೇಮುಯ್ಯನೂ ಗಂಗಾದೇವಿಯೂ ಅಡಗಿಹೋದರು.

ವೇಮುಯ್ಯನ ಹೆಸರು ಗಣಸಹಸ್ರದಲ್ಲಿದೆ. ಶಿವಾನುಭವದ ಮಾರ್ಗವು ಹಠಯೋಗ, ಮಂತ್ರತಂತ್ರ ಮಾಡುವ ಸಿದ್ಧರ ಮಾರ್ಗವಲ್ಲ. ಇವುಗಳು ಭವಕ್ಕೆ ಎಳೆಯುಂಥವುಗಳು. ಶಿವಾನುಭವವು ಶಿವಸಾಯುಜ್ಯವನ್ನು ಕೊಡುವಂತಹದು ಎಂಬುದು ವೇಮುಯ್ಯನ ಚರಿತ್ರೆಯಿಂದ ತಿಳಿದು ಬರುತ್ತಿದೆ.

---

## ಸಿದ್ಧರು.

ಭರತಖಂಡದಲ್ಲಿ ಹಠಯೋಗದ ಸಾಧನೆಗಳಿಂದ ದೇಹವನ್ನು ಕ್ಲೇಶಪಡಿಸುತ್ತ ಅನೇಕ ತರದ ಸಿದ್ಧಿಗಳನ್ನು ಸಾಧಿಸಿದ ಸಾಧಕರು ಮೊದಲು ಬಹು ಜನರಿದ್ದರು. ಆದರೆ ಅವರ ಮಾರ್ಗವನ್ನು ಶಿವಶರಣರು ಖಂಡಿಸಿರುವರು. ಶಿವಶರಣರು ಲಿಂಗಾಂಗ ಸಾಮರಸ್ಯವನ್ನು ಪಡೆಯಲು ಷಟ್‌ಸ್ಥಲ ಮಾರ್ಗವನ್ನು ಬೋಧಿಸುವವರಾಗಿದ್ದಾರೆ. ಅವರು ಆಚರಿಸಿದ ಷಟ್‌ಸ್ಥಲಕ್ಕೂ ಸಿದ್ಧರ ಮಾರ್ಗಕ್ಕೂ ಮಹದಂತರವಿದೆ. ಸಿದ್ಧರು ಅರಣ್ಯಗಳಲ್ಲಿ ವಾಸಮಾಡುತ್ತ ಅನೇಕ ತರದ ಯೋಗಸಾಧನೆಗಳನ್ನು

ಕೈಕೊಂಡು ಮಂತ್ರತಂತ್ರಗಳಿಂದಲೂ ಗಿಡಮೂಲಿಕೆಗಳ ವಿಶೇಷ ಜ್ಞಾನ ದಿಂದಲೂ ಅಗ್ನಿಸ್ತಂಭ, ಜಲಸ್ತಂಭ, ಅಂತರಿಕ್ಷಗಮನ, ಅಂಜನಸಿದ್ಧಿ, ಹೀಗೆ ಅನೇಕ ಅದ್ಭುತಗಳನ್ನು ಮಾಡುವವರಾಗಿದ್ದರು. ಅವರು ಗಿಡ ಮೂಲಿಕೆಗಳಿಂದ ಸುವರ್ಣವನ್ನು ಸಹ ಮಾಡುತ್ತಿದ್ದರೆಂಬ ಪ್ರತೀತಿ ಇದೆ. ಭೂತಪಿಶಾಚಿಗಳನ್ನು ವಶಮಾಡಿಕೊಂಡು ಅವುಗಳ ಮೂಲಕ ನಾನಾತರದ ಅದ್ಭುತ ಕೃತ್ಯಗಳನ್ನು ಮಾಡುತ್ತಿದ್ದರು. ಶ್ಮಶಾನಗಳಲ್ಲಿ ವಾಸಮಾಡಿ ಮಂತ್ರತಂತ್ರಗಳನ್ನು ಸಾಧಿಸುವರು. ಕ್ರೂರ ದೇವತೆಗ ಳಿಗೆ ಬಲಿಕೊಟ್ಟು ಅವುಗಳನ್ನು ಆರಾಧಿಸುವರು. ಅವುಗಳಿಗೆ ನರಬಲಿ ಯನ್ನು ಸಹ ಕೊಡುವರು. ಶಕ್ತಿಯ ಪೂಜಕರಾಗಿ ಅಪೇಯ ಪಾನ ಮಾಡುತ್ತ ಅನಾಚಾರಿಗಳಾಗಿ ವರ್ತಿಸುವರು. ಈ ತೆರದ ನಡೆಯಿಂದ ಸಿದ್ಧರು ತಮ್ಮ ಭೌತಿಕ ಸಾಮರ್ಥ್ಯವನ್ನು ಬೆಳಿಸಿಕೊಂಡು ಆಚರಿಸು ವವರಾಗಿದ್ದರು. ಆದರೆ ಶಿವಶರಣರು ಇಂಥ ಮಾರ್ಗವನ್ನು ಸಂಪೂ ರ್ಣವಾಗಿ ನಿರಾಕರಿಸಿದ್ದಾರೆ. ಅವರು ಆದರ ಬದಲು ತಮ್ಮ ಷಟ್ ಸ್ಥಲ ಸಿದ್ಧಾಂತವನ್ನು ಸ್ಥಿರಪಡಿಸಿ ಸದಾಚಾರ, ನೈತಿಕವರ್ತನೆ, ಲಿಂಗಾ ನುಸಂಧಾನ ಇವುಗಳುಳ್ಳವರಾಗಿ ವರ್ತಿಸಿದ್ದಾರೆ. ಅವರು ತಮ್ಮ ಭೌತಿಕ ಶಕ್ತಿಯನ್ನು ಹೆಚ್ಚಿಸುವ ಬದಲು ತಮ್ಮಲ್ಲಿ ಲಿಂಗಶಕ್ತಿಯನ್ನು ಹೆಚ್ಚಿಸಿ ಆತ್ಮವಿಕಾಸವನ್ನುಂಟುಮಾಡಿಕೊಂಡಿದ್ದಾರೆ. ಈ ಸಂಗತಿಯು ಅವರು ರಚಿಸಿರುವ ಅಸಂಖ್ಯ ವಚನಗಳಲ್ಲಿ ಅತ್ಯಂತ ಸ್ಫುಟವಾಗಿ ಕಾಣಬಹುದು.

ಸಿದ್ಧರಲ್ಲಿ ನವನಾಥಸಿದ್ಧರೆಂಬುವರು ಮುಖ್ಯರು. ಅವರಲ್ಲದೆ ಇನ್ನೂ ಅನೇಕ ಸಿದ್ಧರಿದ್ದು ಅವರಲ್ಲಿ ೮೪ ಜನರು ಮುಖ್ಯರೆಂದು ಹೇಳಲ್ಪಟ್ಟಿದೆ. ನವನಾಥಸಿದ್ಧರು ಯಾರೆಂಬುದರಲ್ಲಿ ಏಕವಾಕ್ಯತೆಯು ಇರುವದಿಲ್ಲ. ಕರ್ನಾಟಕಸ್ಥರು ಇವರು ಆದಿನಾಥ, ಅಕುಳಿತನಾಥ, ಚೌರಂಗಿನಾಥ, ಸಿದ್ಧನಾಥ, ಬುದ್ಧನಾಥ, ವಿದ್ಯಾನಾಥ, ಮೇಘನಾಥ, ನಾಗಾರ್ಜುನ, ವಿರೂಪಾಕ್ಷ ಇವರೇ ಇರುತ್ತಾರೆಂದು ತಿಳಿದಿರುತ್ತಾರೆ. ಮಹಾರಾಷ್ಟ್ರ ದೇಶದವರು ಇವರು ಆದಿನಾಥ, ಮತ್ಸ್ಯೇಂದ್ರನಾಥ, ಗೋರಕ್ಷ, ಚೌರಂ ಗೀನಾಥ, ಜಾಲಂಧರ, ಖರ್ಪಟಿ, ಗೌರಾಯಿ, ಗಂಗಾದೇವಿ, ಮುಕ್ತಾಯಿ ಇವರು ಇದ್ದಾರೆಂದು ತಿಳಿದಿದ್ದಾರೆ. ಹಠಯೋಗ ಪ್ರದೀಪಿಕೆ ಎಂಬ ಗ್ರಂಥ ದಲ್ಲಿ ಮುಖ್ಯ ಸಿದ್ಧರು ಕಾನೇರೀ, ಪೂಜ್ಯಪಾದ, ನಿತ್ಯನಾಥ, ನಿರಂಜನ, ಕಪಾಲೀ, ಬಿಂದುನಾಥ, ಕಾಕ, ಚಂಡೀಶ್ವರ, ಅಲ್ಲಮಪ್ರಭು, ಘೋಡಾ

ಚೋಲೀ, ಟಂಟಣಿ, ಭಾಸುಕೀ, ನಾರದೇವ, ಖಂಡನಾಥ, ಕಾಪಾ ಲಿಕ ಇವರು ಇದ್ದಾರೆಂದು ಹೇಳಿದೆ.

ಶಿವಶರಣರ ಚರಿತ್ರೆಗಳಲ್ಲಿ ಈ ಸಿದ್ಧರ ವೃತ್ತಾಂತಗಳು ಅಲ್ಲಲ್ಲಿ ಬರುವದುಂಟು. ಆದರೆ ಅವುಗಳಲ್ಲಿ ಅವರ ಮಹತ್ವವನ್ನು ಹೇಳುವ ದರ ಬದಲು ಅವರಿಗೊದಗಿದ ದುರ್ದಶೆಯನ್ನು ಹೇಳುವದೇ ಈ ಚರಿತ್ರೆ ಕಾರರ ಉದ್ದೇಶವಾಗಿರುತ್ತದೆ. ಅಂದರೆ ಇವರು ದುರ್ಮರಣಹೊಂದಿದ್ದು, ಅವರು ಪರಸ್ಪರ ವಂಚನೆಮಾಡಿದ್ದು, ಬಡಿದಾಡಿದ್ದು, ತಮ್ಮ ಸಿದ್ಧಿಗ ಳನ್ನು ಕಳೆದುಕೊಂಡಿದ್ದು ಹೀಗೆ ಅನೇಕ ಅವಹೇಳನೆಗಳಿಗೆ ಪಾತ್ರ ರಾದದ್ದನ್ನು ಅವರು ಹೇಳುತ್ತಾರೆ.

ಬಹು ಜನ ಸಮಾಜವು ಯಾವಾಗಲೂ ಧರ್ಮಮೂಢತೆಯುಳ್ಳದ್ದಿ ರುತ್ತದೆ. ಆದ್ದರಿಂದ ಹೀಗೆ ಕೆಲವೊಂದು ಸಿದ್ಧಿಯನ್ನು ಪಡೆದವರನ್ನು ಅದು ಹಿಂಬಾಲಿಸುವದು ಕಂಡುಬರುತ್ತದೆ. ಆದರೆ ಇಂಥ ಸಿದ್ಧಿಗಳನ್ನು ಸಾಧಿಸುವದು ವೀರಶೈವ ಮಾರ್ಗವಲ್ಲ. ಅವುಗಳಿಂದ ಅನೇಕ ಹಾನಿ ಗಳಾಗುತ್ತವೆಂಬದು ಸಿದ್ಧರ ಚರಿತ್ರೆಗಳಿಂದ ಗೋಚರವಾಗುತ್ತದೆ.

ಶಿವಶರಣರು ನೀತಿ, ಸದಾಚಾರ, ಭಕ್ತಿ, ಜ್ಞಾನ ಇವುಗಳನ್ನು ತಳ ಹದಿಯಾಗಿಟ್ಟುಕೊಂಡು ತಮ್ಮ ಷಟ್‌ಸ್ಥಲಾಚರಣೆಯನ್ನು ಆಚರಿಸುವ ವರಾಗಿದ್ದಾರೆ. ಅವರು ಅಷ್ಟಾವರಣ, ಪಂಚಾಚಾರಗಳು, ಸಪ್ತಾಚಾರ ಗಳು, ಏಕೋತ್ತರ ಶತಸ್ಥಲಗಳು, ಕಾಯಕಗಳು ಇವುಗಳಿಗೆ ಮಹತ್ವ ಕೊಟ್ಟಿದ್ದಾರೆ. ಕ್ಲಿಷ್ಟವಾದ ಯೋಗಮಾರ್ಗದ ಬದಲು ತ್ರಿಲಿಂಗಗಳ ಸಾಧನೆಯನ್ನು ತಮ್ಮ ಧ್ಯೇಯವಾಗಿ ಇಟ್ಟುಕೊಂಡಿದ್ದಾರೆ. ಇದರ ಪರಿ ಣಾಮವಾಗಿ ಅವರಿಂದ ಅನೇಕ ಪವಾಡಗಳಾಗಿದ್ದರೂ ಇವುಗಳನ್ನು ಮಾಡುವದೇ ಅವರ ಉದ್ದೇಶವಿರಲಿಲ್ಲ. ಆತ್ಮವಿಕಾಸವೇ ಅವರ ಉದ್ದೇ ಶವು. ಇದನ್ನು ಅವರ ವಚನವಾಙ್ಮಯದಲ್ಲಿ ನಾವು ಕಾಣಬಹುದು.

ಸಿದ್ಧರ ಮತ್ತು ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುವ ಈ ಮಹದಂತರವನ್ನು ವಾಚಕರು ಅರಿಯುವದು ಅವಶ್ಯವಿರುವದರಿಂದ ಕೆಲವು ಮಹತ್ವದ ಸಿದ್ಧರ ಚರಿತ್ರೆಗಳನ್ನು ನಾವು ಇಲ್ಲಿ ಬಹು ಸಂಕ್ಷಿಪ್ತ ವಾಗಿ ವಿವರಿಸುತ್ತೇವೆ.

## ಜ್ವಾಲಿಕಾಸಿದ್ಧ ಮತ್ತು ನಿತ್ಯನಾಥ ಸಿದ್ಧರು

ಜ್ವಾಲಿಕಾಸಿದ್ಧನು ಮೂಲಿಕಾಸಿದ್ಧಿಯನ್ನು ಮಾಡಿಕೊಂಡವನಾಗಿ ಕೆಲವೊಂದು ಮೂಲಿಕೆಯಿಂದ ನೀರ ಮೇಲೆ ಬೆಂಕಿಯಂತೆ ಉರಿಯ ಬಲ್ಲನು. ಉರಿಯುತ್ತ ಪುರುಷಾಕಾರನಾಗಬಲ್ಲನು. ಮತ್ತೊಂದು ಮೂಲಿಕೆಯಿಂದ ಹೊಗೆಯಂತೆ ತೋರಿ ಬಯಲಾಗಬಲ್ಲನು. ಪುನಃ ಪುರುಷಾಕಾರನಾಗಬಲ್ಲನು. ನಿತ್ಯನಾಥನೆಂಬ ಇನ್ನೊಬ್ಬ ಸಿದ್ಧನು ಒಂದು ಮೂಲಿಕೆಯನ್ನು ತನ್ನ ದೇಹಕ್ಕೆ ಲೇಪಿಸಿಕೊಳ್ಳಲು ಸಮುದ್ರನಾಗಬ ಲ್ಲನು. ಮತ್ತೊಂದು ಮೂಲಿಕೆಯನ್ನು ಅದರಲ್ಲಿ ಹಾಕಲಾಗಿ ಪುನಃ ಪುರುಷಾಕಾರನಾಗಬಲ್ಲನು. ಒಂದು ದಿನ ಈ ಉಭಯತರು ಒಬ್ಬರನ್ನೊ ಬ್ಬರು ಕಂಡಾಗ ನಿತ್ಯನಾಥನು ಜ್ವಾಲಿಕಾಸಿದ್ಧನಿಗೆ, ನೀನು ನೀರ ಮೇಲೆ ಬೆಂಕಿಯಂತೆ ಉರಿಯುವದನ್ನು ನನಗೆ ಕಲಿಸೆನಲು ಅವನು ನೀನು ಸಮುದ್ರನಾಗುವದನ್ನು ಕಲಿಸಿದರೆ ಕಲಿಸುವೆನೆನಲು ನಿತ್ಯನಾಥನು ನಾನು ಸಮುದ್ರವಾದರೆ ಅದಕ್ಕೆ ಮೂಲಿಕೆಯನ್ನು ಹಾಕಿ ಎಬ್ಬಿಸುವ ವರಾರೆನಲು, ಜ್ವಾಲಿಕಾಸಿದ್ಧನು ಆ ಮೂಲಿಕೆಯನ್ನು ನನಗೆ ಕೊಡು ಹಾಕುವೆನೆಂದನು. ಆಗ ನಿತ್ಯನಾಥನು ಆ ಮೂಲಿಕೆಯನ್ನು ಜ್ವಾಲಿಕಾಸಿ ದ್ಧನ ಕೈಯ್ಯಲ್ಲಿ ಕೊಟ್ಟು ಸಮುದ್ರನಾದನು. ಜ್ವಾಲಿಕಾಸಿದ್ಧನು ಈ ಮೂಲಿಕೆಯನ್ನು ಹಾಕಿದರೆ ಇವನು ಮನುಷ್ಯನಾಗಿ ನನ್ನ ಸಿದ್ಧಿಯನ್ನು ಕಲಿಸೆಂದು ಕೇಳುವನೆಂದು ಆ ಮೂಲಿಕೆಯನ್ನು ಅದರಲ್ಲಿ ಹಾಕದೆ ಹೋದನು. ಇದರಿಂದ ನಿತ್ಯನಾಥನು ಸಮುದ್ರವಾಗಿ ಕೆಟ್ಟು ಹೋದನು ಮತ್ತು ತಾನು ಆ ಮೂಲಿಕೆಯನ್ನು ವಶಮಾಡಿಕೊಂಡನು.

## ವ್ಯಾಳಿ

ವ್ಯಾಳಿಯು ವಜ್ರಕಾಯಸಿದ್ಧಿಯನ್ನು ಬಲ್ಲವನಾಗಿದ್ದು ದೇಶಾಂತ ರಕ್ಕೆ ಹೋಗಿರಲು ಒಬ್ಬ ಅರಸನು ಅವನಿಗೆ ನನ್ನ ಕಾಯವನ್ನು ವಜ್ರ ಕಾಯವನ್ನಾಗಿ ಮಾಡು ಎನಲು ಅದಕ್ಕೆ ವ್ಯಾಳಿಯು ಎಳ್ಳೆಣ್ಣೆಯನ್ನು ಕೊಪ್ಪರಿಗೆಯಲ್ಲಿ ಕಾಸಿ ಅದರೊಳಗೆ ನೀನು ಕುಳಿತರೆ ಮಾಡುವೆ ನೆಂದನು. ಅದಕ್ಕೆ ಅರಸನು ನೀನು ಮೊದಲು ಕುಳಿತರೆ ನಾನು ಹಿಂದು ಗಡೆ ಕುಳಿತುಕೊಳ್ಳುವೆನೆನಲು ಅದಕ್ಕೆ ವ್ಯಾಳಿಯು ನಾನು ಕುಳಿತರೆ ಗುಳಿಗೆಗಳನ್ನು ಹಾಕಿ ಎಬ್ಬಿಸುವವರಾರು ಎಂದೆನಲು ಅರಸನು ನಿನ್ನ ಗುಳಿಗೆಗಳನ್ನು ನನ್ನ ಕೈಯಲ್ಲಿ ಕೊಟ್ಟರೆ ನಾನು ಹಾಕುವೆನೆಂದನು. ಆಗ

ವ್ಯಾಳಿಯು ಅರಸನ ಕೈಯಲ್ಲಿ ಮೂರು ಗುಳಿಗೆಗಳನ್ನು ಕೊಟ್ಟು ಕೆಲ ವೊಂದು ಕ್ರಮದಿಂದ ಅವುಗಳನ್ನು ಹಾಕಬೇಕೆಂದು ಹೇಳಿ ತಾನು ಕಾದೆಣ್ಣೆ ಯಲ್ಲಿ ಬೀಳಲು ಅವನು ಏಳುತ್ತ ಮುಳುಗುತ್ತ ಬೇಯುವದನ್ನು ಅರಸನು ಕಂಡು ಗಾಬರಿಯಾಗಿ ಗುಳಿಗೆಗಳನ್ನು ಕ್ರಮತಪ್ಪಿ ಹಾಕಲು ವ್ಯಾಳಿಯು ಸತ್ತು ಹೋದನು. ಮತ್ತು ಆವನ ಶರೀರವು ಬೆಳ್ಳಿಯ ಗುಂಡಾಗಿ ಉಳಿಯಿತು.

## ಗೋರಾಂಟಸಿದ್ಧ.

ಇವನು ಸಕಲ ವಿದ್ಯೆಗಳಲ್ಲಿ ಬಲ್ಲವನೆನಿಸಿ ಪ್ರಸಿದ್ಧನಾಗಿದ್ದನು. ಅವನು ಕಾಶೀಯಾತ್ರೆಗೆ ಹೋಗುವಾಗ್ಗೆ ದಾರಿಯಲ್ಲಿ ಒಬ್ಬ ರಾಜನು ಕೆರೆ ಯನ್ನು ಕಟ್ಟಿಸುತ್ತಿರುವದನ್ನು ನೋಡಿದನು. ಅದರ ಕಟ್ಟೆ ಏನು ಮಾಡಿ ದರೂ ಒಡೆದುಹೋಗುತ್ತಿರಲು ಅವನು ಗೋರಾಂಟನನ್ನು ಕಂಡು ಅವ ನಿಗೆ ಏನು ಮಾಡಿದರೆ ಈ ಕೆರೆಯೊಡೆಯುವದು ನಿಲ್ಲುವದೆಂದು ಕೇಳಲು ಗೋರಾಂಟನು ಇದಿರುರೊಮುದವನನ್ನು ಅಡ್ಡಮಲಗಿಸಿ ಮಣ್ಣುಹಾಕಿ ದರೆ ಒಡ್ಡು ನಿಲ್ಲುವದೆಂದು ಹೇಳಿದನು. ಆಗ ರಾಜನು ಗೋರಾಂಟ ನಿಗೆ ಇದಿರುರೋಮವಿರುವದನ್ನು ಕಂಡು ಆವನು ಏರಿಯ ಮೇಲೆ ನೀನು ಮಲಗಿ ತೋರಿಸಬೇಕೆಂದು ಹೇಳಲು ಅವನು ಹಾಗೆ ಮಲಗಲು ರಾಜನು ಸನ್ನೆ ಮಾಡಲಾಗಿ ಅಲ್ಲಿ ನೆರೆದವರೆಲ್ಲ ಅವನ ಮೇಲೆ ಮಣ್ಣು ಹಾಕಿ ಒಳಗೆ ಮುಚ್ಚಿ ಬಿಟ್ಟರು. ಆಗ ಅವನು ಸತ್ತು ಹೋದನು. ಇದರಿಂದ ಕೆರೆಯ ಏರಿ ನಿಂತಿದ್ದರಿಂದ ಕೆರೆಯು ತುಂಬಿ ಜನರು ಸುಖವಾಗಿದ್ದರು.

## ಬಂಗಾಳಿ

ಬಂಗಾಳಿಯು ಸರ್ವವಿದ್ಯಾಪ್ರವೀಣನಾಗಿ ಎಲ್ಲ ಸಿದ್ಧರ ಕೂಡ ನಿಷ್ಕಾರಣವಾಗಿ ವಾದಿಸುವವನಾಗಿದ್ದನು. ಆದ್ದರಿಂದ ಅವನ ಸಿದ್ಧಿಗಳೆಲ್ಲವು ಕೆಟ್ಟು ಹೋಗಿ ಕಡೆಗೆ ಅವನು ವನವಾಸಿಯಾದನು.

## ನಾಗಾರ್ಜುನ

ಇವನು ಮತ್ಸ್ಯೇಂದ್ರನಾಥನ ಶಿಷ್ಯನು. ಇವನು ನಾಲ್ವತ್ತೆಂಟು ಗಾವುದ ಶ್ರೀಗಿರಿಯ ಪರ್ವತವನ್ನು ಸುವರ್ಣ ಮಾಡಬೇಕೆಂದು ಬಯಸಿ ಗಿಡಮೂಲಿಕೆಗಳನ್ನು ಕುಟ್ಟಿ ಅವುಗಳನ್ನು ಅವನು ಆ ಪರ್ವತದಲ್ಲೆಲ್ಲ

ಒಟ್ಟಿ ತಾನು ಬಾಯಲ್ಲಿ ರಸಗುಳಿಗೆಗಳನ್ನಿಟ್ಟುಕೊಂಡು ಅಗ್ನಿಯನ್ನು ಊದುವಾಗ, ಅದನ್ನು ನಾರದನು ನೋಡಿ ಈ ಪರ್ವತವು ಸುವರ್ಣ ವಾದರೆ ಜನರು ಕಡಿದಾಡುವರು, ಆದ್ದರಿಂದ ನಾಗಾರ್ಜುನನ ಈ ಕಾರ್ಯವನ್ನು ನಿಲ್ಲಿಸಬೇಕೆಂದು ಬಯಸಿ ಅವನು ಅದನ್ನು ವಿಷ್ಣುವಿಗೆ ಹೇಳಿದನು. ಆಗ ವಿಷ್ಣುವು ವಿಪ್ರವೇಷ ತಾಳಿ ನಾಗಾರ್ಜುನನನ್ನು ಕಂಡು ನೀನೇನು ಮಾಡುವಿ ಎಂದು ಕೇಳಲು ಅವನು ಇದರ ಮಾತು ನಿನಗೇ ಕೆಂದು ಅಂದನು. ಆಗ ವಿಷ್ಣುವು ಇವನ ತಲೆಯನ್ನು ಹೊಡೆದರೆ ಬಾಯ ಲ್ಲಿಯ ಅವನ ಗುಳಿಗೆಗಳ ಮೂಲಕ ಅದು ಹರಿಯದೆಂದು ತಿಳಿದು ಆ ಗುಳಿಗೆಯನ್ನು ನನಗೆ ತೋರಿಸಿದರೆ ನಾನು ಹೋಗುವೆನೆನಲು ಅವನು ಅವುಗಳನ್ನು ಕೈಯೊಳಗಿಟ್ಟು ತೋರಿಸುವಾಗ ವಿಷ್ಣುವು ತನ್ನ ಚಕ್ರದಿಂದ ನಾಗಾರ್ಜುನನ ತಲೆಯನ್ನು ಕತ್ತರಿಸಿದನು.

## ರತ್ನಘೋಷಸಿದ್ಧ.

ರತ್ನಘೋಷಸಿದ್ಧನು ಕಲ್ಲಿನ ತುಣುಕುಗಳನ್ನು ಮೂಲಿಕೆಯಲ್ಲಿ ಬೆರಿಸಿ ಬಾಯೊಳಗಿಟ್ಟುಕೊಂಡು ಧ್ವನಿಮಾಡಿದರೆ ಅವನ ಬಾಯಿಂದ ರತ್ನ ಗಳು ಬೀಳುವವು. ಅಲ್ಲದೆ ಅವನು ಗಾಯನ ಕಲೆಯನ್ನು ಬಲ್ಲವನಾಗಿ ಅದರ ಮೂಲಕ ಅನೇಕ ಸಿದ್ಧಿಗಳನ್ನು ಮಾಡುವನು. ಅವನು ದೇಶಾಂತ ರಕ್ಕೆ ಹೋದಾಗ ಒಂದು ಕೆರೆಯಲ್ಲಿ ನೀರು ತುಂಬದಿರಲು ಅದರ ಬಗ್ಗೆ ಅಲ್ಲಿಯ ಜನರನ್ನು ಕೇಳಲಾಗಿ ಅವರು ಮಳೆಬಂದರೆ ಇದು ತುಂಬುತ್ತದೆ. ಆದರೆ ಮರುದಿವಸವೇ ಅದು ಬತ್ತುತ್ತದೆ ಎಂದು ಹೇಳಲು ಅವನು ಅದಕ್ಕೆ ಮೇಘರಂಜಿಯ ರಾಗ ಮಾಡಲು ಮಳೆಬಂದು ಕೆರೆಯು ತುಂಬಿ ನೀರು ಬತ್ತುವದಿಲ್ಲೆಂದು ಹೇಳಲು ಆ ರಾಗವನ್ನು ನೀನೇ ಮಾಡು ಎಂದು ಜನರು ಅನ್ನಲು ಅವನು ಅದನ್ನು ಮಾಡಲು ಮಳೆ ಬಂದು ಕೆರೆ ತುಂಬಲು ಅದರೊಳಗಿಂದ ಅವನು ಪಾರಾಗಿ ಹೋಗಲು ಸಾಧ್ಯವಾಗದೆ ಅದರ ಕೆಸರಲ್ಲಿ ಸಿಕ್ಕು ಸತ್ತುಹೋದನು.

## ಚರಪಟ್ಟಿ

ಇವನು ಮೂಲಿಕಾಸಿದ್ಧನು. ಮೂಲಿಕೆಗಳನ್ನು* ಪುಡಿಮಾಡಿ ಲೋಹದ ಮೇಲೆ ತಳಿಯಲು ಅವು ಚಿನ್ನವಾಗುವವು. ಅವನು ದೇಶಾಂತ ರಕ್ಕೆ ಹೋದಲ್ಲಿ ಒಬ್ಬ ಅರಸನ ತಾಮ್ರದ ಚಾವಡಿಯ ಒಳಗೆಲ್ಲ ಈ ಮೂಲಿ

ಕೆಯು ಪುಡಿಯನ್ನು ತಳಿಯಲು ಅದು ಚಿನ್ನವಾಯಿತು. ಆಗ ಅರಸನು ಈ ಸಿದ್ಧಿಯನ್ನು ಸಾಧಿಸಬೇಕೆಂದು ತಾನು ಚಿನ್ನದ ಪುಡಿಯನ್ನು ಮಳಲೊಳಗೆ ಬೆರಸಿ ಅದರ ರಾಶಿಯನ್ನು ಮಾಡಿಸಿ ಭಸ್ಮವನ್ನು ಧರಿಸಿಕೊಂಡು ಸಿದ್ಧನಂತೆ ವೇಷ ಹಾಕಿಕೊಂಡು ಕುಳಿತಿರಲು ಜನರು ನೆರೆದು ಬರಲು ಅವನು ಅವರಿಗೆ ಆ ಮಳಲ ಕೊಡಲು ಅವರು ಅದರಲ್ಲಿ ಚಿನ್ನವಿರುವದನ್ನು ಕಂಡು ಈತನು ದೊಡ್ಡ ಸಿದ್ಧನೆಂದು ಕೊಂಡಾಡುತ್ತಿರಲು ಚರಪಟ್ಟಿಯು ಅದನ್ನು ಕೇಳಿ ಈ ಕಲೆಯನ್ನು ಸಹ ನನಗೆ ಕಲಿಸೆಂದು ಆ ಕಪಟಸಿದ್ಧನಿಗೆ ಕೇಳಿದನು. ಆಗ ಅವನು ನಿನ್ನ ಸಿದ್ಧಿಯನ್ನು ಮೊದಲು ಕಲಿಸೆನಲು, ಅವನು ಕಲಿಸಿದನು. ಆ ಮೇಲೆ ರಾಜನು ಅರಮನೆಯೊಳಗೆ ಹೋಗಿ ತನ್ನ ಸಿದ್ಧನ ವೇಷವನ್ನು ಬಿಟ್ಟು ರಾಜನಂತೆ ಹೊರಗೆ ಬರಲು ಈತನು ಸಿದ್ಧನಲ್ಲ, ತಾನು ಮೋಸ ಹೋದೆನೆಂದು ಆ ಚರಪಟ್ಟಿಯು ಅಲ್ಲಿಂದ ಹೊರಟು ಹೋದನು.

### ಖರ್ಪರ

ಇವನು ಪಾತಾಳಾಂಜನ, ಜಲಾಂಜನ ಮೊದಲಾದ ಅಂಜನ ಸಿದ್ಧಿಗಳನ್ನು ಬಲ್ಲವನಾಗಿ ಜನರಿಗೆ ದ್ರವ್ಯವನ್ನು ಸಾಧಿಸಿಕೊಡುತ್ತ ಬರುವನು. ರೇವಣಸಿದ್ಧೇಶ್ವರನು ಮಾಸನೂರಿನಲ್ಲಿ ಮುಡಿಗಿದ ಸುರಿಗೆಯನ್ನು ಬಿಜ್ಜಳನು ಹೊರಗೆ ತೆಗೆಯಲು ಪ್ರಯತ್ನಿಸುತ್ತಿರುವದನ್ನು ತಿಳಿದು ಅವನು ಅಲ್ಲಿಗೆ ಬಂದು ಅಂಜನವನಿಕ್ಕಿಕೊಂಡು ಜಲದಲ್ಲಿಯ ಸುರಿಗೆಯನ್ನು ನೋಡಿ, ಇದನ್ನು ಹೊರಗೆ ತೆಗೆಯಲು ೧೨ ಸಾವಿರ ಕನ್ನಿಕೆಯರ ಬಲಿ ಕೊಡಬೇಕೆಂದು ಅವನಿಗೆ ಹೇಳಿದನು. ಹೀಗೆ ಬಿಜ್ಜಳನು ಕನ್ನಿಕೆಯರನ್ನು ಕೂಡಿಸುತ್ತಿರಲು ಒಬ್ಬಳು ಕಡಿಮೆಯಾಗಲು ಅವನು ಮಂಗಳವಾಡದಲ್ಲಿದ್ದ ರೇವಣಸಿದ್ಧೇಶ್ವರನ ಮಗಳನ್ನು ಹಿಡಿಯಲು ಆಕೆಯ ರೋದನ ಸ್ವರವು ಆಗ ಕಾಶಿಯಲ್ಲಿದ್ದ ರೇವಣಸಿದ್ಧೇಶ್ವರನಿಗೆ ಕೇಳಿಸಲು ಅವನು ಆಕಾಶ ಮಾರ್ಗವಾಗಿ ಅಲ್ಲಿಗೆ ಬಂದು ಎಲ್ಲ ಕನ್ನಿಕೆಯರನ್ನು ಬಿಡಿಸಿದನು. ಆಗ ಖರ್ಪರನು ರೇವಣಸಿದ್ಧೇಶ್ವರನ ಈ ಲಿಂಗಸಾಮರ್ಥ್ಯವನ್ನು ಕಂಡು ಅವನಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಸಿದ್ಧರಾಮನಿದ್ದ ಸೊನ್ನಲಿಗೆಗೆ ಬಂದನು. ಅಲ್ಲಿ ಯಜ್ಞ ಕುಂಡವು ಉರಿಯುತ್ತಿರುವದನ್ನು ಕಂಡು ಅದರಲ್ಲಿ ಮೂಲಿಕೆಯನ್ನು ಅವನು ಹಾಕಲು ಆ ಅಗ್ನಿಯು ತಣ್ಣಗಾಗಿ ನೀರಾಯಿತು. ಆಗ ಸಿದ್ಧರಾಮನು ತನ್ನಲ್ಲಿಯ ಒಂದು ಮೂಲಿಕೆ

ಯನ್ನು ತಂದು ಅದರಲ್ಲಿ ಹಾಕಲು ಅದು ಉರಿಯುಹತ್ತಿತು ಮತ್ತು ಸಿದ್ಧರಾಮೇಶ್ವರನು ತನ್ನ ನೊಸಲ ಕಣ್ಣು ತೆರೆಯಲು ಖರ್ಪರನೊಡನೆ ಇದ್ದ ಜೋಗಿಗಳು ಸುಟ್ಟು ಹೋದರು. ಆಗ ಖರ್ಪರನು ಸಿದ್ಧರಾಮನ ಸಿದ್ಧಿಯು ಹೆಚ್ಚಿನದೆಂದು ಅವನ ಮೊರೆಹೊಕ್ಕನು.

## ಇತರ ಸಿದ್ಧರು

ಕೊಲ್ಲಾಪುರಕ್ಕೆ ಸಮೀಪವಿರುವ ಸಿದ್ಧಗಿರಿ ಪರ್ವತದಲ್ಲಿ ಕೆಲವೊಂದು ಕಾಲದಲ್ಲಿ ೬೭೩ ಜನ ಸಿದ್ಧರು ನೆರೆದು ಈ ಬೆಟ್ಟವನ್ನು ಬೆಳ್ಳಿಯನ್ನಾಗಿ ಮಾಡಬೇಕೆಂದು ಗೊತ್ತುಪಡಿಸಿಕೊಂಡು ಇದಕ್ಕೆ ಬೇಕಾಗುವ ಮೂಲಿಕೆಗಳನ್ನು ಹುಡಿಕಿಕೊಂಡು ಬರಬೇಕೆಂದು ಅವರು ಅನೇಕ ವೇಷಗಳನ್ನು ಧಾರಣ ಮಾಡಿ ದೇಶಾಂತರಕ್ಕೆ ಹೊರಟರು. ಆಗ ವೀರಭದ್ರನು ಅವರು ಹೋದಲ್ಲೆಲ್ಲ ಭೂತಗಳಿಗೆ ಅಪ್ಪಣೆ ಮಾಡಲು ಅವು ಮೂಲಿಕೆಗಳನ್ನು ತರುತ್ತಿರುವ ಸಿದ್ಧರುಗಳನ್ನು ತಮ್ಮಲ್ಲಿಗೆ ಬರಗೊಡದೆ ಅವರನ್ನೆಲ್ಲ ಅಟ್ಟಿಬಿಟ್ಟವು. ಇದರಿಂದ ಆ ಸಿದ್ಧರು ಆ ಬೆಟ್ಟವನ್ನು ಬೆಳ್ಳಿಯನ್ನಾಗಿ ಮಾಡಲಾರದೆ ಹೋಗಲು ಅವರು ವೈದ್ಯರಾಗಿ ಮೂಲಿಕೆಗಳನ್ನು ಹೊತ್ತುಕೊಂಡು ದೇಶದೇಶಗಳಲ್ಲಿ ತಿರುಗುವವರಾದರು. ಇವರ ವಂಶಜರು ಈಗಲೂ ಇದೇ ಉದ್ಯೋಗವನ್ನು ಮಾಡುತ್ತಲಿದ್ದಾರೆ.

ಆದರೆ ಸಿದ್ಧರಲ್ಲಿ ಅನಿಮಿಷ, ಅಲ್ಲಮಪ್ರಭು, ಗೋರಕ್ಷ ಇವರು ಮಾತ್ರ ಸಿದ್ಧರ ಮಾರ್ಗವನ್ನು ತೊರೆದು ಶಿವಶರಣರ ಶಿವಾನುಭವದ ಮಾರ್ಗವನ್ನು ಅವಲಂಬಿಸಿ ಧಾರ್ಮಿಕ ಉಚ್ಚಸ್ಥಾನವನ್ನು ಪಡೆದಿದ್ದಾರೆ. ಶಿವಾನುಭವದ ಮಾರ್ಗವು ಸಿದ್ಧರ ಮಾರ್ಗವಲ್ಲ. ಶಿವಾನುಭವದ ಮೂಲಕ ಮನುಷ್ಯನು ತನ್ನ ಮನ ಬುದ್ಧಿ ಚಿತ್ತಗಳನ್ನೂ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳನ್ನೂ ಅಂತಃಶಕ್ತಿ ಮತ್ತು ಬಹಿಃಶಕ್ತಿಗಳನ್ನೂ ಸರಿಯಾದ ಮಾರ್ಗಕ್ಕೆ ತೊಡಗಿಸಿ ಅವುಗಳನ್ನು ಲಿಂಗಮುಖ ಮಾಡುವದಿರುತ್ತದೆ. ಆದರೆ ಸಿದ್ಧಿಗಳ ಉದ್ದೇಶವು ಕೃತ್ರಿಮ ರೀತಿಯಿಂದ ಕೆಲವೊಂದು ಶಕ್ತಿಯನ್ನು ಬೆಳೆಯಿಸಿಕೊಂಡು ಅದರ ಮೂಲಕ ಜನತೆಯ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸುವದಿರುತ್ತದೆ. ಇದರಿಂದ ಸಿದ್ಧರಲ್ಲಿ ಪರಸ್ಪರ ದ್ವೇಷಾಸೂಯ ಕಲಹಗಳು ಉಂಟಾಗಿ ಅವರು ಹಾನಿಯೊಳಗಾಗಿದ್ದು ಮೇಲಿನ ಚರಿತ್ರೆಗಳಿಂದ ತಿಳಿದುಬರುತ್ತದೆ.

---

೬೮

# ಗೋರಕ್ಷ.

ಉತ್ತರ ಕರ್ನಾಟಕದಲ್ಲಿ ಸಿದ್ಧರ ಅನೇಕ ಸ್ಥಾನಗಳಿವೆ. ಅವುಗಳಲ್ಲಿ ಈಗ ಬೆಳಗಾವ ಜಿಲ್ಲಾ ಸವದತ್ತಿಯ ಸಮೀಪವಿರುವ ಜಮದಗ್ನ್ಯಾಶ್ರಮವು, ಕೊಲ್ಲಾಪುರ-ಸಿದ್ಧಗಿರಿಯ ಪರ್ವತ ಪ್ರದೇಶ, ಧಾರವಾಡ ಜಿಲ್ಲೆಯಲ್ಲಿಯ ಕಪೋತಪರ್ವತ (ಕಪ್ಪತಗುಡ್ಡ), ವಿಜಾಪುರ ಜಿಲ್ಲೆಯಲ್ಲಿ ಬಾದಾಮಿ ಐಹೊಳೆಯ ಪ್ರದೇಶ ಇವುಗಳು ಮುಖ್ಯವಾಗಿದ್ದವು. ಇವುಗಳು ಪೂರ್ವ ಕಾಲದಲ್ಲಿ ನಿಬಿಡವಾದ ವೃಕ್ಷಗಳಿಂದ ಕೂಡಿದ ಸುಂದರವಾದ ಅರಣ್ಯ ಪ್ರದೇಶಗಳು. ಬಾದಾಮಿ ಮತ್ತು ಐಹೊಳೆಗಳ ಮಧ್ಯಪ್ರದೇಶದಲ್ಲಿ ಮಲಾಪಹಾರೀ ನದಿಯು ಹರಿಯುತ್ತಿದ್ದು ಅದರ ಉಭಯಪಾರ್ಶ್ವಗಳಲ್ಲಿ ೧೫ ಮೈಲುಗಳ ವರೆಗೆ ಅರಣ್ಯವು ಹಬ್ಬಿದೆ. ಅಲ್ಲಿಯ ಸೃಷ್ಟಿ ಸೌಂದರ್ಯ ವನ್ನು ನಾವು ಈಗಲೂ ಕಾಣಬಹುದು. ಇಲ್ಲಿಯೂ ಒಂದು ಅಗಸ್ತ್ಯಾಶ್ರಮವಿತ್ತು. ಒಂದು ಕಾಲದಲ್ಲಿ ಈ ಭಾಗದಲ್ಲಿ ಅನೇಕ ಸಿದ್ಧಾಶ್ರಮಗಳಿದ್ದವು. ಈ ಪ್ರದೇಶದ ದಕ್ಷಿಣ ಮೂಲೆಯಲ್ಲಿ ಬನಶಂಕರಿಯ ಪ್ರಸಿದ್ಧ ದೇವಾಲಯವೂ ಪೂರ್ವದ ಚಾಲುಕ್ಯರ ರಾಜಧಾನಿಯಾದ ಬಾದಾಮಿಯೂ ಇದ್ದು ಇವುಗಳಿಂದ ೧೫ ಮೈಲುಗಳ ಮೇಲೆ ಈಶಾನ್ಯ ಮೂಲೆಯಲ್ಲಿ ಸುಂದರವಾದ ಪುರಾತನ ಕಟ್ಟಡಗಳುಳ್ಳ ಐಹೊಳೆ ಗ್ರಾಮವೂ ಇರುತ್ತದೆ. ಈ ಪ್ರದೇಶದ ಮಧ್ಯದಲ್ಲಿ ಕಾಡುಗಳಿಂದ ಸುತ್ತುಗಟ್ಟಲ್ಪಟ್ಟ ಪಟ್ಟದಕಲ್ಲು ಎಂಬ ಹೆಸರಿನ ಗ್ರಾಮವಿದೆ. ಇದೇ ಗೋರಕ್ಷನ ಜನ್ಮಸ್ಥಳವು. ಪೂರ್ವಕಾಲದಲ್ಲಿ ಇಲ್ಲಿ ಒಬ್ಬ ರಾಜನು ಆಳುತ್ತಿದ್ದನು. ಗೋರಕ್ಷನು ಅವನ ಗೋವುಗಳನ್ನು ಕಾಯುವ ಕೆಲಸ ಮಾಡುತ್ತಲಿದ್ದನು. ಆದ್ದರಿಂದ ಅವನಿಗೆ 'ಗೋರಕ್ಷ' ಎಂಬ ಹೆಸರು ಪ್ರಾಪ್ತವಾಯಿತು.

ಹೀಗೆ ಅವನು ಪಟ್ಟದಕಲ್ಲಿನಲ್ಲಿರುತ್ತಿರಲು ಅಲ್ಲಿ ಅವನು ಮುಂದೆ ಮತ್ಸ್ಯೇಂದ್ರನಾಥನ ಶಿಷ್ಯತ್ವವನ್ನು ವಹಿಸಿ ಅವನಂತೆಯೇ ಪ್ರಸಿದ್ಧನಾದನು. ಮತ್ಸ್ಯೇಂದ್ರನಾಥನು ಅನುಮಿಷನೆಂದು ಕೆಲವರ ತರ್ಕವಿದೆ. ಗೋರಕ್ಷನು ಗತಿಸ್ತಂಭ, ಜಿಹ್ವಾಸ್ತಂಭ ಮೊದಲಾದ ವಿದ್ಯೆಗಳನ್ನು ಕಲಿತವನಾದನು. ತರುವಾಯ ಅವನು ಪಟ್ಟದಕಲ್ಲನ್ನು ಬಿಟ್ಟು ಸಿದ್ಧವಿದ್ಯೆಗಳಿಗೋಸ್ಕರ ಪ್ರಸಿದ್ಧಿ ಹೊಂದಿದ್ದ ಕೊಲ್ಲಾಪುರಕ್ಕೆ ಬಂದು ಅಲ್ಲಿ ವಾಸಮಾಡಹತ್ತಿದನು. ಅಲ್ಲಿ ಅವನು ತನಗೆ ಉಂಟಾದ ಸಿದ್ಧಿಗಳ ಮೂಲಕ ಅನೇಕ ಪವಾಡಗಳನ್ನು ಮಾಡುತ್ತ ಜೀವಿಸತೊಡಗಿದನು.

ಮಂಗಳೂರ ಪ್ರದೇಶದಲ್ಲಿ ಆ ಕೋಟೆಗಳು ಕೊಡೆಯಾಲ, ಮೂಲಿಕೆ, ಮೂಡಬಿದರೆ, ಉಳ್ಳಾಲ, ಕುಂಬಳೆ, ಕಾಸರಗೋಡ, ಪುದುವೆಟ್ಟು, ಬೆಳ್ಳಾರೆ, ಕಾಂತಮಂಡಲ, ಕೊಲ್ಲೂರು, ಶಿಶಿಲ, ಚಂದ್ರಗಿರಿ, ಕಿರೂರ ಫಣಿಯಾಲ ಈ ಸ್ಥಳಗಳಲ್ಲಿಯೂ ಬಾರಕೂರು ಪ್ರದೇಶದಲ್ಲಿ ಬಾರಕೂರು ಕಲ್ಯಾಣಪುರ, ಮಲ್ಲಿಕಾರ್ಜುನಗಿರಿ, ಕಂಡಲೂರು ಇಲ್ಲಿಯೂ ಇರುತ್ತವೆ.

ವೆಂಕಟಪ್ಪನಾಯಕನು ತನ್ನ ಪೌರುಷದಿಂದಷ್ಟೇ ಅಲ್ಲ, ತನ್ನ ರಾಜ್ಯದಲ್ಲಿ ಅನೇಕ ಸುಧಾರಣಾ ಕಾರ್ಯಗಳನ್ನ ಮಾಡಿ ಪ್ರಸಿದ್ಧಿಗೆ ಬಂದಿದ್ದಾನೆ. ಅವನು ಅನೇಕ ಪೇಟೆಪಟ್ಟಣಗಳನ್ನೂ, ದೇವಾಲಯಗಳನ್ನೂ ಕಟ್ಟಿಸಿದ್ದಲ್ಲದೆ, ವಿದ್ವಾಂಸರನ್ನು ಆದರಿಸಿ, ವಾಙ್ಮಯಕ್ಕೆ ಉತ್ತೇಜನ ಕೊಟ್ಟಿದ್ದಾನೆ.

**ಪೇಟೆಪಟ್ಟಣಗಳನ್ನು ಕಟ್ಟಿಸಿದ್ದು:** – ವೆಂಕಟಪ್ಪನಾಯಕನು ತನ್ನ ಇಕ್ಕೇರಿಯ ರಾಜಧಾನಿಯನ್ನು ಬಹು ಸುಶೋಭಿತ ಮಾಡಿದನು. ಅವನು ಅಲ್ಲಿ ಒಂದು ಅರಮನೆಯನ್ನೂ ಒಂದು ವಿಚಿತ್ರತರವಾದ ನಾಟಕಶಾಲೆಯನ್ನೂ ರಚಿಸಿದನು. ತನ್ನ ಪಿತಾಮಹನಾದ ಸದಾಶಿವರಾಯನ ಹೆಸರಿನಿಂದ ಸದಾಶಿವಸಾಗರವೆಂಬ ಹೆಸರಿನ ಪಟ್ಟಣವನ್ನು ಕಟ್ಟಿಸಿ, ಅಲ್ಲಿ ಒಂದು ಅರಮನೆಯನ್ನೂ ಜಲಕ್ರೀಡಾ ಮಂದಿರವನ್ನೂ ನಿರ್ಮಿಸಿದನು. ಮತ್ತು ಅಲ್ಲಿ ಗಣಪತಿಯ ದೇವಸ್ಥಾನವನ್ನು ಕಟ್ಟಿಸಿ ಚಂದ್ರಬನವೆಂಬ ಹೆಸರಿನ ತೋಟವನ್ನು ಮಾಡಿದನು ಅದರ ಹತ್ತಿರ ವರದಾ ನದೀತೀರದಲ್ಲಿ ವಿಶ್ವೇಶ್ವರ ದೇವರನ್ನು ಪ್ರತಿಷ್ಠಿಸಿದನು. ಭದ್ರಪ್ಪನಾಯಕನ ಹೆಸರಿನಿಂದ ಭದ್ರರಾಜಪುರವೆಂಬ ಇನ್ನೊಂದು ಪೇಟೆಯನ್ನು ಕಟ್ಟಿಸಿದನು. ಅವನು ಕೌಲಿದುರ್ಗವನ್ನು ವಶಪಡಿಕೊಂಡು ಅದನ್ನು ಭದ್ರಪಡಿಸಿ ಭುವನಗಿರಿದುರ್ಗ ಎಂಬ ಹೆಸರನ್ನು ಇಟ್ಟನು. ಅಲ್ಲಿ ತನ್ನ ತಂದೆಯಾದ ದೊಡ್ಡ ಸಂಕಣ್ಣನಾಯಕನು ಕಾಶೀಕ್ಷೇತ್ರದಿಂದ ತಂದ ವಿಶ್ವೇಶ್ವರಲಿಂಗವನ್ನು ಪ್ರತಿಷ್ಠಿಸಿ ಅದಕ್ಕೆ ದೇವಸ್ಥಾನವನ್ನು ಕಟ್ಟಿಸಿದನು. ಆ ದುರ್ಗದಲ್ಲಿ ಕೆಲವು ಕಡೆಗೆ ಅರಮನೆಗಳನ್ನು ಕಟ್ಟಿಸಿ ಅದರ ಒಳಗೂ ಹೊರಗೂ ಅನೇಕ ಗುಡಿಗಳನ್ನು ರಚಿಸಿ ಅದನ್ನು ಶೋಭಾಯಮಾನವನ್ನಾಗಿ ಮಾಡಿದನು.

**ದೇವಾಲಯಗಳ ಸ್ಥಾಪನೆ:** – ರಾಜ್ಯದಲ್ಲೆಲ್ಲ ಅನೇ[illegible]ವಾಲಯಗಳಿದ್ದು ಅವುಗಳಲ್ಲಿ ಉತ್ತಮ ತರದ ವ್ಯವಸ್ಥೆಯನ್ನಿಟ್ಟನು.

ಕೆಳದೀ ರಾಮೇಶ್ವರ ದೇವರಿಗೂ, ವೀರಭದ್ರ ದೇವರಿಗೂ ವಿಶೇಷ ಭೂಸ್ವಾಸ್ಥೆಯನ್ನು ಕೊಟ್ಟನು. ಮಂಗಳೂರ ಜಿಲ್ಲೆಯನ್ನು ಆಕ್ರಮಿಸಿಕೊಂಡ ಬಳಿಕ ಕೊಲ್ಲೂರು ಮೂಕಾಂಬಿಕೆಯಮ್ಮನ ದೇವಸ್ಥಾನವನ್ನು ವಿಸ್ತಾರವಾಗಿ ಶಿಲಾಮಯವನ್ನಾಗಿ ಮಾಡಿದನು. ಚಿನ್ನ ಬಿದರೂರಿನ ಬದಿಯಲ್ಲಿ ಹರಿಯುವ ಕಲಾವತೀ ನದೀ ತೀರದಲ್ಲಿರುವ ನೀಲಕಂಠೇಶ್ವರ ಲಿಂಗದ ಪೂಜೆಯು ಯಾವಾಗಲೂ ನಡಿಯುವಂತೆ ವ್ಯವಸ್ಥೆ ಮಾಡಿದನು. ಹಾಗೆಯೇ ಬಸರೂರಲ್ಲಿದ್ದ ಮಹಾಲಿಂಗೇಶ್ವರ ದೇವರ ಪೂಜೆಯು ನಿರಾತಂಕವಾಗಿ ಸಾಗುವಂತೆ ಮಾಡಿದನು. ಈ ಎಲ್ಲ ಸಂಗತಿಗಳಿಂದ ಅವನು ಎಷ್ಟು ಧರ್ಮಬುದ್ಧಿಯುಳ್ಳವನಾಗಿದ್ದನೆಂಬುದು ಗೊತ್ತಾಗುತ್ತದೆ.

**ಮಠಾಧಿಪತಿಗಳನ್ನು ಪೋಷಿಸಿದ್ದು:—** ವೆಂಕಟಪ್ಪನಾಯಕನು ವೀರಶೈವ ಧರ್ಮನಿರತನಾಗಿ ಬಾಳೇಹಳ್ಳಿ ಸಿಂಹಾಸನ ಮಠವನ್ನೂ ಅನೇಕ ಕಡೆಗಿದ್ದ ಮಹಂತಿನ ಮಠಗಳನ್ನೂ ಊರ್ಜಿತಸ್ಥಿತಿಗೆ ತಂದನು. ಆನಂದಪುರದಲ್ಲಿ ಜಂಗಮರಿಗಾಗಿ ಒಂದು ಸುಂದರವಾದ ಮಠವನ್ನು ಕಟ್ಟಿಸಿದನು. ಮಂಗಳೂರು ಜಿಲ್ಲೆಯಲ್ಲಿ ವೀರಶೈವ ಮಠಗಳಿರದ್ದರಿಂದ ಬಾರಕೂರು, ಬೆಣ್ಣೆವಳ್ಳಿ ಅರಗ, ಶಂಕರನಾರಾಯಣಸಾಗರ, ಬೋಳೂರು, ಕೊಡೆಯಾಲ ಈ ಗ್ರಾಮಗಳಲ್ಲಿ ಮಹಂತಿನ ಮಠಗಳನ್ನು ಕಟ್ಟಿಸಿ ಅವುಗಳಿಗೆ ಭೂಸ್ವಾಸ್ಥೆಗಳನ್ನು ನೇಮಿಸಿಕೊಟ್ಟನು.

**ವಾಙ್ಮಯ ಸೇವೆ:—** ಹೀಗೆ ರಾಜ್ಯವನ್ನಾಳುತ್ತಿರಲು ಅವನ ಹಿರಿಯಯ್ಯನಾದ ಚಿಕ್ಕ ಸಂಕಣ್ಣನಾಯಕನ ಮಗನು ತೀರಿಕೊಳ್ಳಲು ಅವನಿಗೆ ವೈರಾಗ್ಯವು ಹುಟ್ಟಿ ಆತ್ಮಜ್ಞಾನಾನುಸಂಧಾನದಲ್ಲಿ ವೇಳೆಗಳೆಯುಹತ್ತಿದನು. ವಿದ್ವಾಂಸರನ್ನು ತನ್ನಲ್ಲಿ ಇರಮಾಡಿಕೊಂಡು ಗ್ರಂಥಗಳ ರಚನೆಗೆ ಬಹಳ ಉತ್ತೇಜನ ಕೊಡಹತ್ತಿದನು. ೧೮ ಅಧ್ಯಾಯಗಳುಳ್ಳ ಶಿವಗೀತೆಯನ್ನು ಕವಿ ತಿರುಮಲಭಟ್ಟನಿಂದ ವಾರ್ಧಿಕಷಟ್ಪದಿಯಲ್ಲಿ ಭಾಷಾಂತರ ಮಾಡಿಸಿದನು ರಂಗನಾಥ ದೀಕ್ಷಿತನೆಂಬುವನಿಂದ ತಂತ್ರಸಾರವೆಂಬ ಆಗಮ ಗ್ರಂಥಕ್ಕೆ ವ್ಯಾಖ್ಯಾನವನ್ನು ಬರೆಯಿಸಿದನು. ಅಶ್ವಗಳ ಮೇಲೆ ಪ್ರೀತಿಯುಳ್ಳವನಾದ್ದರಿಂದ ಅಶ್ವಶಾಸವನ್ನು ರಚಿಸಿದನು. ಈ ಪ್ರಕಾರ ವೆಂಕಟಪ್ಪನಾಯಕನು ೪೭ ವರ್ಷಗಳ ವರಿಗೆ ರಾಜ್ಯಭಾರ ಮಾಡಿ ಮುಪ್ಪಿನಿಂದ ಅಶಕ್ತನಾಗಹತ್ತಲು ಯಾವತ್ತು

ರಾಜ್ಯಭಾರವನ್ನು ತನ್ನ ಸೋದರಳಿಯನಾದ ವೀರಭದ್ರನಾಯಕನಿಗೆ ಒಪ್ಪಿಸಿ ತಾನು ಸದ್ಧರ್ಮ ವರ್ತನೆಯಿಂದ ಕಾಲಕಳೆಯುತ್ತ ೧೬೩೦ ರಲ್ಲಿ ಮರಣ ಹೊಂದಿದನು.

ಮೇಲ್ಕಂಡ ವಿವರಣೆಗಳಿಂದ ವೆಂಕಟಪ್ಪನಾಯಕನು ಎಷ್ಟು ಶೂರನೂ ಧಾರ್ಮಿಕ ಬುದ್ಧಿಯುಳ್ಳವನೂ ಉದಾರಿಯೂ ಆಗಿದ್ದನೆಂಬುದು ಸ್ಪಷ್ಟವಾಗುತ್ತದೆ. ಅವನ ಪ್ರಾಬಲ್ಯವು ದೇಶದಲ್ಲಿ ಎಷ್ಟಿತ್ತೆಂಬುದು ಡಿಲಾವೆಲ್ ಎಂಬ ಪೋರ್ತುಗೀಜ ಪ್ರವಾಸಿಯು ೧೬೨೩ ರಲ್ಲಿ ಅವನ ರಾಜ್ಯದಲ್ಲಿ ಪ್ರವಾಸ ಮಾಡಿದಾಗ ತಾನು ಕಂಡ ವಿಷಯಗಳನ್ನು ಬರೆದದ್ದರ ಮೇಲಿಂದ ಗೊತ್ತಾಗುತ್ತದೆ. ಈತನು ಪೋರ್ತುಗೀಜರ ರಾಯಸದ ಕೂಡ ವೆಂಕಟಪ್ಪನಾಯಕನನ್ನು ಕಾಣಲಿಕ್ಕೆ ಬಂದಿದ್ದನು. ಅವನು ವರ್ಣಿಸಿರುವದೇನಂದರೆ: - ''ನಾವು ಮೊದಲು ಹೊನ್ನಾವರಕ್ಕೆ ಹೋದೆವು. ಈ ಪಟ್ಟಣದಲ್ಲಿ ಅತ್ಯುತ್ತಮ ರಸ್ತೆಗಳಿದ್ದು ಮಧ್ಯದಲ್ಲಿ ಒಂದು ಭವ್ಯವಾದ ದೊಡ್ಡ ಚೌಕವಿತ್ತು. ಈ ಪಟ್ಟಣಕ್ಕೆ ಸಮೀಪವಾಗಿ ಗುಂಡಿನ ಆಳತೆಯಲ್ಲಿ ಮತ್ತೊಂದು ಬ್ರಾಹ್ಮಣರ ದೊಡ್ಡ ಪಟ್ಟಣವಿತ್ತು. ವೆಂಕಟಪ್ಪನಾಯಕನು ತನ್ನ ಸುತ್ತಲಿನ ಅನೇಕ ಪಾಳೆಯಗಾರರನ್ನು ಸೋಲಿಸಿ ಅವರ ರಾಜ್ಯಗಳನ್ನು ಕೈವಶಮಾಡಿಕೊಂಡಿದ್ದನು. ಮತ್ತು ಸ್ವತಂತ್ರನಾಗಿದ್ದನು ಅವನು ಪೋರ್ತುಗೀಜರನ್ನು ಸಹ ಸೋಲಿಸಿದ್ದಾನೆ. ಅವನ ಪ್ರಾಬಲ್ಯದ ಮೂಲಕ ಪೋರ್ತುಗೀಜ ಸರಕಾರದವರು ಒಂದು ರಾಯಸವನ್ನು ಕಳಿಸಬೇಕೆಂದು ನಿಶ್ಚಯಿಸಿದರು. ಈ ರಾಯಸದವರು ಮೊದಲು ಹೊನ್ನಾವರದಲ್ಲಿ ಇಳಿದು ಗೆರೆಸೊಪ್ಪೆಗೆ ಹೋದರು. ಈ ಪಟ್ಟಣವು ಆಗ ವೆಂಕಟಪ್ಪನಾಯಕನ ವಶದಲ್ಲಿ ಇತ್ತು. ಆದರೆ ಇಲ್ಲಿಯ ಪೂರ್ವದ ರಾಜಧಾನಿಯೂ ಅರಮನೆಯೂ ಹಾಳಾಗಿ ಹೋಗಿದ್ದವು. ಅಲ್ಲಿಂದ ನಾವು ಇಕ್ಕೇರಿಗೆ ಹೋದೆವು. ಆದರೆ ಅರಸನು ನಮ್ಮನ್ನು ಕಾಣಲಿಕ್ಕೆ ಸಮ್ಮತಿ ಕೊಡಲಿಲ್ಲ. ಯಾಕಂದರೆ ಪೋರ್ತುಗೀಜ ಸರಕಾರದವರು ಮೆಣಸನ್ನು ಕೊಂಡುಕೊಳ್ಳಲಿಕ್ಕೆ ತಮ್ಮ ಹಡಗಗಳನ್ನು ತಂದಿದ್ದಿಲ್ಲವಾದ್ದರಿಂದ ನಮ್ಮ ಮೇಲೆ ಅವನು ಸಿಟ್ಟಾಗಿ ನಮ್ಮನ್ನು ಹಿಂದಿರುಗಿ ಕಳಿಸಿಕೊಟ್ಟನು.'' ಈ ಪ್ರಕಾರ ಅವನು ವರ್ಣಿಸಿದ್ದರ ಮೇಲಿಂದ ವೆಂಕಟಪ್ಪನಾಯಕನು ಎಷ್ಟು ಬಲಾಢ್ಯನೂ ಪ್ರಾಬಲ್ಯವುಳ್ಳವನೂ ಆಗಿದ್ದನೆಂಬುದು ಸ್ಪಷ್ಟವಾಗುತ್ತದೆ.

**ಶಿವಪ್ಪನಾಯಕನುಃ** – ವೆಂಕಟಪ್ಪನಾಯಕನ ತರುವಾಯ ವೀರಭದ್ರನಾಯಕನು ಪಟ್ಟವೇರಿ ೧೬ ವರ್ಷ ರಾಜ್ಯವಾಳಿದನು. ಆದರೆ ಇವನ ಕಾಲದಲ್ಲಿ ಅಂತಸ್ಥಕಲಹಗಳು ಆಗಿಂದಾಗ್ಗೆ ಏಳುತ್ತಿದ್ದದರಿಂದ ಅವುಗಳನ್ನು ತಡೆಯುವದೇ ಇವನ ಮುಖ್ಯ ಕಾರ್ಯವಾಯಿತು. ಇದಲ್ಲದೆ ವಿಜಾಪುರ ಬಾದಶಹರ ಸೇನಾನಾಯಕನಾದ ರಣದುಲ್ಲಾಖಾನನ ದಾಳಿಗಳು ಇವನ ಕಾಲದಲ್ಲಿಯೇ ಸಂಭವಿಸಿದವು. ಅವುಗಳನ್ನು ಇದಿರಿಸುವಲ್ಲಿ ಅವನಿಗೆ ಅನೇಕ ಬಿಕ್ಕಟ್ಟುಗಳು ಉಂಟಾದವು. ಅವನಿಗೆ ಹಣ ಕೊಟ್ಟು ಅವನ ದಾಳಿಗಳನ್ನು ಹಿಂದಿರುಗಿಸಬೇಕಾಯಿತು. ಇದರಿಂದ ಸ್ವಾಭಾವಿಕವಾಗಿ ರಾಜ್ಯದಲ್ಲಿ ಸುವ್ಯವಸ್ಥೆಯು ಉಳಿಯದೆ ಹೋಯಿತು. ಇವನು ೧೬೩೦ ರಲ್ಲಿ ತೀರಿಕೊಂಡನು.

ವೀರಭದ್ರನಾಯಕನ ತರುವಾಯ ಶಿವಪ್ಪನಾಯಕನು ಪಟ್ಟವೇರಿದನು. ಇವನ ಕಾಲದಲ್ಲಿ ಬೆದನೂರು ರಾಜ್ಯವು ಅತ್ಯಂತ ಘನತೆಗೇರಿತು. ಇವನು ಪಟ್ಟವೇರಿದ ಕೂಡಲೆ ಹಿಂದಿನ ಅರಸರ ಕಾಲದಲ್ಲಿ ಸ್ವತಂತ್ರರಾಗಿದ್ದ ಪಾಳೆಯಗಾರರನ್ನು ತನ್ನ ಅಂಕಿತ ಮಾಡಿಕೊಳ್ಳುವ ಕಾರ್ಯವನ್ನು ಕೈಕೊಳ್ಳಬೇಕಾಯಿತು. ಇವನು ಅದಕ್ಕೋಸ್ಕರ ಗಟ್ಟದ ಕೆಳಗಿರುವ ದಕ್ಷಿಣ ಕನ್ನಡ ಜಿಲ್ಲೆಯಲ್ಲಿಳಿದು ಅಲ್ಲಿಯ ಪಾಳ್ಯಗಾರರನ್ನು ಗೆದ್ದು ಅವರು ಸರಿಯಾಗಿ ಕಪ್ಪವನ್ನು ಸಲ್ಲಿಸುವಂತೆ ವ್ಯವಸ್ಥೆ ಮಾಡಿದನು. ಮಲಾಬಾರದಲ್ಲಿ ನಾಯರರನ್ನು ಸೋಲಿಸಿ ತನ್ನ ಅಂಕಿತಮಾಡಿಕೊಂಡನು. ಈ ಭಾಗದಲ್ಲಿದ್ದ ತನ್ನ ಕೋಟೆಗಳನ್ನು ಭದ್ರಪಡಿಸಿ ಅವುಗಳಲ್ಲಿ ಕಾವಲಿಟ್ಟನು. ಹೀಗೆ ಜಯವನ್ನು ಸಂಪಾದಿಸಿದ ಕುರುಹಿಗಾಗಿ ನೀಲೇಶ್ವರದ ಗಡಿಯಲ್ಲಿ ಒಂದು ಜಯಸ್ತಂಭವನ್ನು ನಡಿಯಿಸಿದನು.

ಈ ಪ್ರಕಾರ ತನ್ನ ರಾಜ್ಯವನ್ನು ಸ್ಥಿರಪಡಿಸಿಕೊಂಡು ತನ್ನ ಮೇಲೇರಿ ಬಂದಿದ್ದ ಸ್ವಾದಿಯ ಅರಸನ ರಾಜ್ಯದಲ್ಲಿ ದಾಳಿಯನ್ನು ಮಾಡಿ ಶಿರ್ಶಿ ಬನವಸೆ ಈ ಗ್ರಾಮಗಳ ವರೆಗೂ ಸಾಗಿಹೋಗಲು ಸ್ವಾದಿಯ ಅರಸನು ಶರಣುಬಂದನು ಆಗ ಶಿವಪ್ಪನಾಯಕನು ತಾನು ಆಕ್ರಮಿಸಿದ ಅವನ ರಾಜ್ಯವನ್ನೆಲ್ಲ ಅವನಿಗೆ ತಿರುಗಿಕೊಟ್ಟನು. ಹೀಗೆ ಶಿವಪ್ಪನಾಯಕನು ತನ್ನ ರಾಜ್ಯವನ್ನು ವಿಸ್ತರಿಸಿ, ಮುಂದೆ ಪೋರ್ತುಗೀಜರ ಹಾವಳಿಗಳನ್ನು ತಡೆಯಲುದ್ಯುಕ್ತನಾದನು. ಇವರು ಕುಂದಾಪುರ, ಹೊನ್ನಾವರ,

ಮಂಗಳೂರು ಇವುಗಳನ್ನು ತಮ್ಮ ಕೈವಶಮಾಡಿಕೊಂಡಿದ್ದು ಅಲ್ಲಿಂದ ಅವರನ್ನು ತಳ್ಳಿಬಿಟ್ಟನು. ಆಗ ಅವರು ಶಿವಪ್ಪನಾಯಕನೊಡನೆ ವ್ಯಾಪಾರದ ಶರ್ತುಗಳನ್ನು ಮಾಡಿಕೊಳ್ಳಬೇಕಾಯಿತು.

ಈ ಪ್ರಕಾರ ಶಿವಪ್ಪನಾಯಕನು ತನ್ನ ರಾಜ್ಯವನ್ನು ಸ್ಥಿರಪಡಿಸಿಕೊಂಡದ್ದರಿಂದ ಅವನು ದಕ್ಷಿಣ ಕರ್ನಾಟಕದಲ್ಲಿ ಅತ್ಯಂತ ವರ್ಚಸ್ಸುಳ್ಳವನಾದನು. ಅವನ ಕಾಲದಲ್ಲಿ ಫಾದರ ಲಿಯೋನಾರ್ಡ ಪೀಜ ಎಂಬ ಒಬ್ಬ ಪೋರ್ತುಗೀಜ ಪ್ರವಾಸಿಯು ರಾಜ್ಯದಲ್ಲಿ ಸಂಚರಿಸಿದ್ದು, ಅವನು ಬರೆದ ವೃತ್ತಾಂತದಲ್ಲಿ ಈ ರಾಜ್ಯದಲ್ಲಿಯ ಜನರು ಮಿತಿಮೀರಿ ಧನಿಕರಿದ್ದಾರೆಂತಲೂ ಅರಸನ ಹತ್ತಿರ ೪೦ ಸಾವಿರದಿಂದ ೫೦ ಸಾವಿರದ ವರೆಗೆ ಕಾಲ್ಬಲ ಉಂಟೆಂತಲೂ ಹೇಳಿದ್ದರ ಮೇಲಿಂದ ಇದರ ಊರ್ಜಿತ ಸ್ಥಿತಿಯು ವ್ಯಕ್ತವಾಗುತ್ತದೆ.

ಶಿವಪ್ಪನಾಯಕನ ಕಾಲದಲ್ಲಿ ವಿಜಯನಗರದ ಅರಸರ 'ರಾಜ್ಯವು ಹಾಳಾಗಿದ್ದರೂ ಅವರ ವಂಶಜರು ಪೆನುಕೊಂಡೆಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಆಳುತ್ತಿದ್ದರು. ತಾಳೀಕೋಟೆಯ ಯುದ್ಧವಾದ ನಂತರ ಗೋವಳಕೊಂಡೆಯ ಮುಸಲ್ಮಾನ ರಾಜನು ಈ ರಾಜ್ಯದ ಪೂರ್ವಭಾಗವನ್ನು ಆಕ್ರಮಿಸಬೇಕೆಂದು ಎಲ್ಲ ಮುಸಲ್ಮಾನ ಬಾದಶಹರು ಪರಸ್ಪರ ಗೊತ್ತುಮಾಡಿಕೊಂಡಿದ್ದರಿಂದ ಗೋವಳಕೊಂಡೆಯ ಬಾದಶಹನ ಸೇನಾಪತಿಯಾದ ಮೀರಜುಮ್ಲಾನು ಪೆನುಕೊಂಡೆಯ ರಾಜ್ಯವನ್ನು ಅಭಿಯೋಗಿಸಿ ಅತ್ಯಂತ ಬಿಕ್ಕಟ್ಟಿನದೂ ಬಹಳ ಮಹತ್ವದ್ದೂ ಆದ ವೆಲ್ಲೂರ ಕೋಟೆಯನ್ನು ಮುತ್ತಿದನು. ಆಗ ಪೆನುಕೊಂಡೆಯ ರಾಜನಾದ ಶ್ರೀ ರಂಗರಾಯನು ಅತ್ಯಂತ ಪ್ರಬಲನಾಗಿದ್ದ ಶಿವಪ್ಪನಾಯಕನ ಮೊರೆಹೊಕ್ಕನು. ಅವನಿಗೆ ಸಹಾಯವಾಗಿ ಶಿವಪ್ಪನಾಯಕನು ಒಂದು ದೊಡ್ಡ ದಂಡನ್ನು ತೆಗೆದುಕೊಂಡು ವೆಲ್ಲೂರ ಕೋಟೆಯನ್ನು ಮುತ್ತಿದನು ಮತ್ತು ಅಲ್ಲಿದ್ದ ಮುಸಲ್ಮಾನ ದಂಡಾಳುಗಳನ್ನು ಓಡಿಸಿದನು. ಆ ಮೇಲೆ ಶಿವಪ್ಪನಾಯಕನು ಶ್ರೀ ರಂಗರಾಯನಿಗೆ ವಿರೋಧಿಗಳಾಗಿದ್ದ ಅನೇಕ ಪಾಳ್ಯಗಾರರನ್ನೂ ಸೋಲಿಸಿ ಅವರು ಅವನಿಗೆ ಅಂಕಿತವಾಗುವಂತೆ ಮಾಡಿದನು. ಆದರೆ ಮೀರಜುಮ್ಲಾನು ವೆಲ್ಲೂರಿನ ನೆರೆ ಸೀಮೆಯಲ್ಲಿಯೇ ಉಳಿದು ಅಧಿಕಾರ ನಡೆಸುತ್ತ ಬಂದ

ದ್ದರಿಂದ ಸ್ವಲ್ಪ ದಿನಗಳಲ್ಲಿ ಅವನಿಗೂ ಶ್ರೀ ರಂಗರಾಯನಿಗೂ ಪುನಃ ಕದನ ಹುಟ್ಟಲು, ಶ್ರೀ ರಂಗರಾಯನು ಶಿವಪ್ಪನಾಯಕನ ರಕ್ಷಣೆಗೋಸ್ಕರ ಅವನಲ್ಲಿಗೆ ಓಡಿಬಂದನು. ಆಗ ಶಿವಪ್ಪನಾಯಕನು ಹಾಸನ ಜಿಲ್ಲೆಯಲ್ಲಿರುವ ಬೇಲೂರನ್ನು ಅವನ ರಾಜಧಾನಿಯನ್ನಾಗಿ ಮಾಡಿಕೊಟ್ಟು ಅವನು ಅಲ್ಲಿಂದ ತನ್ನ ರಾಜ್ಯವನ್ನಾಳಲು ವ್ಯವಸ್ಥೆ ಮಾಡಿದನು.

ಈ ಪೆನುಕೊಂಡೆಯ ಅರಸನಿಗೆ ಅಂಕಿತವಾಗಿ ಶ್ರೀರಂಗಪಟ್ಟಣದಲ್ಲಿ ಒಬ್ಬ ಸುಬೇದಾರನು ಮೊದಲು ಮೈಸೂರು ಭಾಗವನ್ನು ಆಳುತ್ತಿದ್ದನು. ಆದರೆ ಮೈಸೂರಿನ ಒಡೆಯರು ಸ್ವತಂತ್ರರಾಗಿ ಆಳಹತ್ತಿದರಷ್ಟೇ ಅಲ್ಲ, ಅವರಲ್ಲಿ ರಾಜ ಒಡೆಯರು ಎಂಬವನು ೧೬೧೦ ರಲ್ಲಿ ಶ್ರೀರಂಗಪಟ್ಟಣವನ್ನೇ ಆಕ್ರಮಿಸಿ ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು. ಆದರೆ ಶಿವಪ್ಪನಾಯಕನು ವಿಜಯನಗರದ ರಾಜ್ಯವನ್ನು ಪುನಃ ಸ್ಥಾಪಿಸಬೇಕೆಂದೆಣಿಸಿ ಶ್ರೀ ರಂಗರಾಯನ ಪರವಾಗಿ ಮೈಸೂರು ರಾಜನ ಕೂಡ ಯುದ್ಧವನ್ನು ಹೂಡಿದನು. ಅವನು ಮೈಸೂರಿನ ಸೇನಾಪತಿಯಾದ ಹಂಪಾರ್ಯನನ್ನು ಸೋಲಿಸಿ ಶ್ರೀರಂಗಪಟ್ಟಣವನ್ನು ಮುತ್ತಿದನು. ಆದರೆ ಪಟ್ಟಣವನ್ನು ತೆಗೆದುಕೊಳ್ಳಲು ಅವನಿಗೆ ಸಾಧ್ಯವಾಗದ್ದರಿಂದ ಈ ಕಾರ್ಯವನ್ನು ಅವನು ಬಿಟ್ಟುಕೊಟ್ಟು ಹಿಂದಿರುಗಿದನು.

ಶಿವಪ್ಪನಾಯಕನು ಶ್ರೇಷ್ಠತರಗತಿಯ ಆಡಳಿತೆಗಾರನೆಂದು ಕರ್ನಾಟಕ ರಾಜರಲ್ಲಿ ಪ್ರಸಿದ್ಧಿಯನ್ನು ಹೊಂದಿದ್ದಾನೆ. ಅವನ ರಾಜ್ಯದಲ್ಲಿ ಸುವ್ಯವಸ್ಥೆಯು ಇತ್ತು. ವ್ಯಾಪಾರೋದ್ಯೋಗಗಳು ಅವನ ಬಂದರಗಳೊಳಗಿಂದ ಪರದೇಶಗಳೊಡನೆ ಬಹು ಭರದಿಂದ ಸಾಗಿದ್ದವು. ಒಕ್ಕಲಿಗರೂ ಕೈಗಾರಿಕೆಯವರೂ ತನ್ನ ರಾಜ್ಯದಲ್ಲಿ ವಾಸ ಮಾಡಬೇಕೆಂದು ಅವನು ಅವರಿಗೆ ಅನೇಕ ಅನುಕೂಲತೆಗಳನ್ನು ಒದಗಿಸಿಕೊಡುತ್ತಿದ್ದನು. ಇದರಿಂದ ಅನೇಕ ದೊಡ್ಡ ಪಟ್ಟಣಗಳು ಅವನ ರಾಜ್ಯದಲ್ಲಿ ಉದಯವಾದವು. ಅವನ ರಾಜ್ಯವು ದುರ್ಗಮವಾದ ಕಾಡುಗಳಲ್ಲಿ ವಿಶೇಷವಾಗಿ ಇದ್ದು ಈ ಕಾಡುಗಳನ್ನು ಕಡಿದು ಅಲ್ಲಿ ಗ್ರಾಮಗಳನ್ನು ನೆಲೆಗೊಳಿಸಿದನು. ಒಕ್ಕಲಿಗರಿಗೆ ದನ ಕರುಗಳನ್ನೂ ಬೀಜವನ್ನೂ ಭೂಮಿಯನ್ನೂ ಉಚಿತವಾಗಿ ಕೊಟ್ಟು ಒಕ್ಕಲತನಕ್ಕೆ ಉತ್ತೇಜನ ಕೊಟ್ಟನು. ಒಕ್ಕಲಿ

ಗರ ಮೇಲೆ ತೆರಿಗೆಯ ಭಾರವು ಯೋಗ್ಯ ರೀತಿಯಿಂದ ಬೀಳಬೇಕೆಂದು ರಾಜ್ಯದಲ್ಲಿಯ ಭೂಮಿಯನ್ನೆಲ್ಲ ಅಳೆಯಿಸಿ, ಭೂಮಿಯ ಫಲದ್ರುಪ ತೆಗೆ ಅನುಸಾರವಾಗಿ ತೆರಿಗೆಯನ್ನು ಕೂಡ್ರಿಸಿದನು. ಇದಕ್ಕೆ 'ಶಿವಪ್ಪ ನಾಯಕನ ಶಿಸ್ತು' ಎಂಬ ಹೆಸರು ಇದೆ. ಜನರಿಗೆ ಕಳ್ಳಕಾಕರ ತೊಂದರೆ ಯಾಗಬಾರದೆಂದು ರಕ್ಷಣೆಯ ವ್ಯವಸ್ಥೆಯನ್ನು ಚನ್ನಾಗಿ ಇಟ್ಟನು. ವ್ಯಾಪಾರದ ಸರಕುಗಳನ್ನು ದೋಚಿಕೊಂಡು ಹೋಗುವ ಕಳ್ಳರ ಭಯವು ಅವನ ರಾಜ್ಯದಲ್ಲಿ ಅತ್ಯಲ್ಪವಾಗಿದ್ದಿತು. ಕೈಗಾರಿಕೆಗಳಿಗೆ ಉತ್ತೇಜನ ಕೊಟ್ಟನು. ಅವರ ಮೇಲೆ ಕರಭಾರವು ಅತ್ಯಲ್ಪ ಪ್ರಮಾಣದಿಂದಿತ್ತು. ವ್ಯಾಪಾರಸ್ತರು ಸಲ್ಲದ ರೀತಿಯಿಂದ ಲಾಭಪಡೆದದ್ದು ಕಂಡುಬಂದಲ್ಲಿ ಅದಕ್ಕೆ ತಕ್ಕ ವ್ಯವಸ್ಥೆ ಮಾಡುತ್ತಿದ್ದನು. ರಾಜ್ಯಕಾರಭಾರದಲ್ಲಿಯ ಅನವಶ್ಯಕ ವೆಚ್ಚಗಳನ್ನು ಕಡಿಮೆ ಮಾಡಿದನು. ಹೀಗೆ ಶಿವಪ್ಪನಾಯ ಕನು ರಾಜ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು.

ಶಿವಪ್ಪನಾಯಕನು ಅತ್ಯಂತ ಧರ್ಮಿಷ್ಠನಾಗಿದ್ದನು. ಅವನು ಕಾಶೀ ವಿಶ್ವೇಶ್ವರನಿಗೆ ಪೂಜಾಕಾರ್ಯಗಳು ಯಾವಾಗಲೂ ನಡೆಯು ವಂತೆ ವ್ಯವಸ್ಥೆ ಮಾಡಿದನು. ಎಲ್ಲ ಧರ್ಮದವರಿಗೂ ಅವರವರ ಧರ್ಮ ಗಳಂತೆ ನಡೆಯಲು ಅವರಿಗೆ ಅನುಕೂಲ ಮಾಡಿಕೊಟ್ಟನು. ಈ ಪ್ರಕಾರ ಈ ರಾಜನು ಅತ್ಯಂತ ವೈಭವದಿಂದಲೂ ಜಾಣತನದಿಂದಲೂ ರಾಜ್ಯವಾಳಿ ಕರ್ನಾಟಕ ರಾಜರಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದನು.

**ರಾಣಿ ಚನ್ನಮ್ಮಾಜಿಃ—** ಶಿವಪ್ಪನಾಯಕನ ತರುವಾಯ ಕೆಳದೀ ಅರಸರಲ್ಲಿ ಅತ್ಯಂತ ಪ್ರಸಿದ್ಧಿಗೆ ಬಂದವರು ರಾಣಿ ಚನ್ನಮ್ಮಾಜಿಯು ಇದ್ದಾಳೆ. ಅವಳು ೧೬೭೧ ರಿಂದ ೧೬೯೭ ರ ವರೆಗೆ ೧೬ ವರುಷ ಅತ್ಯಂತ ಚಾತುರ್ಯದಿಂದಲೂ ಧೈರ್ಯದಿಂದಲೂ ರಾಜ್ಯಭಾರ ನಡಿಸಿದಳು. ಶಿವಪ್ಪನಾಯಕನ ತರುವಾಯ ೧೧ ವರ್ಷಗಳ ವರೆಗೆ ರಾಜ್ಯದಲ್ಲಿ ವ್ಯವಸ್ಥೆ ಇರಲಿಲ್ಲ. ೨ನೇ ವೆಂಕಟಪ್ಪನಾಯಕನು ೧೬೬೦ ರಿಂದ ೧೬೬೧ ವರೆಗೆ, ಅವನ ತರುವಾಯ ಭದ್ರಪ್ಪನಾಯಕನು ೧೬೬೧ ರಿಂದ ೧೬೬೪ ವರೆಗೆ ಮತ್ತು ಸೋಮಶೇಖರನಾಯಕನು ೧೬೬೪ ರಿಂದ ೧೬೭೧ ರ ವರೆಗೆ ರಾಜ್ಯಭಾರ ಮಾಡಿದರು. ಆದರೆ ಇವರ ಕಾಲಗಳಲ್ಲಿ ಅನೇಕ ತೊಂದರೆ ಗಳು ಉದ್ಭವಿಸಿದವು. ಈ ಸ್ಥಿತಿಯನ್ನು ಸರಿಪಡಿಸಿಕೊಂಡು ಚನ್ನಮ್ಮಾ

ಜಿಯು ರಾಜ್ಯದ ಮೊದಲಿನ ಘನತೆಯ ಸ್ಥಿತಿಯನ್ನು ಉಳಿಸಿಕೊಂಡು ಬಂದಳು.

೨ನೇ ವೆಂಕಟಪ್ಪನಾಯಕನು ಶಿವಪ್ಪನಾಯಕನ ತಮ್ಮನು. ಆದರೆ ಅವನು ಬಹಳ ದಿವಸ ರಾಜ್ಯವಾಳಲಿಲ್ಲ. ಅವನು ಶಿವಲಿಂಗನಾಯ ಕನೆಂಬುವವನ ಪ್ರೇರಣೆಯ ಮೂಲಕ ಎರಡು ವರ್ಷಗಳಲ್ಲಿ ಘಾತಿಸಲ್ಪಟ್ಟನು. ಅವನ ತರುವಾಯ ವೆಂಕಟಪ್ಪನಾಯಕನ ಮಗನಾದ ಭದ್ರಪ್ಪನಾಯಕನು ಪಟ್ಟವೇರಿದನು. ಅವನು ಮೈಸೂರು ರಾಜನಾದ ದೊಡ್ಡದೇವರಾಜನೊಡನೆ ಯುದ್ಧಗಳನ್ನು ನಡಿಸಬೇಕಾಯಿತು. ಅಷ್ಟರಲ್ಲಿ ಅವನ ರಾಜ್ಯದ ಮೇಲೆ ವಿಜಾಪುರ ಬಾದಶಹನ ಪಾಳೆಯಗಾರನಾದ ಶಿವಾಜಿಯು ಪ್ರಬಲವಾಗಿ ದಾಳಿ ಮಾಡಲು ಅರಸನು ತನ್ನ ರಾಜಧಾನಿಯನ್ನು ಬಿಟ್ಟು ಭುವನಗಿರಿ ದುರ್ಗವನ್ನು ಆಶ್ರಯಿಸಬೇಕಾಯಿತು. ಆದರೆ ಅವನು ಅಲ್ಲಿ ಬಲವಾದ ಸೈನ್ಯವನ್ನು ಸಂಗ್ರಹಿಸಿ ಅವನನ್ನು ಎದುರಿಸಲು ಉಭಯತರಲ್ಲಿ ಒಪ್ಪಂದವಾಯಿತು. ಆಮೇಲೆ ಅರಸನು ತನ್ನ ಬಿದನೂರು ರಾಜಧಾನಿಯಲ್ಲಿ ಬಂದಿರಹತ್ತಿದನು. ಅವನು ೨ ವರ್ಷ ಮಾತ್ರ ರಾಜ್ಯವಾಳಿದನು. ಅವನ ತರುವಾಯ ಅವನ ತಮ್ಮನಾದ ಸೋಮಶೇಖರನಾಯಕನು ಪಟ್ಟವೇರಿದನು. ರಾಣಿ ಚನ್ನಮ್ಮಾಜಿಯೇ ಅವನ ಹೆಂಡತಿಯು. ಅವನ ಕಾಲದಲ್ಲಿಯೂ ಮೈಸೂರು ರಾಜರೊಡನೆ ಕದನಗಳು ನಡೆದವು. ಅವುಗಳನ್ನು ಅವನ ಸೇನಾಪತಿಗಳು ಎದುರಿಸುತ್ತ ಬಂದರು. ಆದರೆ ಅವನಿಗೆ ಮುಂದೆ ಬುದ್ಧಿಭ್ರಂಶವಾಗಲು ಅವನ ಹೆಂಡತಿಯಾದ ಚನ್ನಮ್ಮನು ರಾಜ್ಯಸೂತ್ರಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಕಾರಭಾರ ನಡಿಸಹತ್ತಿದಳು.

ಇಷ್ಟರಲ್ಲಿ ವಿಜಾಪುರ ಬಾದಶಹನ ದಂಡಾಳುಗಳು ದೇಶದಲ್ಲಿ ನುಗ್ಗಿ ಸೆರೆಸೂರೆ ಮಾಡಹತ್ತಿದವು. ಈ ಪ್ರಸಂಗದಲ್ಲಿ ಚನ್ನಮ್ಮಾಜಿಯು ಶೂರತನದಿಂದ ಅವರೊಡನೆ ಹೋರಾಡಿದಳು. ಅವಳು ವಿಜಾಪುರ ಬಾದಶಹನ ಸೇನಾನಾಯಕನಾದ ಜನಾರ್ದನಪಂತನನ್ನು ಹಿಂದಕ್ಕಟ್ಟಿದಳು. ಇದರಲ್ಲಿ ವೈರಿಗಳಲ್ಲಿ ಸೇರಿಕೊಂಡು ತನಗೆ ಮೋಸ ಮಾಡಿದ ತನ್ನ ಗಂಡನ ತಮ್ಮ ಮತ್ತು ಇನ್ನಿತರರನ್ನು ಶಿಕ್ಷಿಸಿದಳು. ಅಲ್ಲದೆ ಈ ಕಾಲದಲ್ಲಿ ವಿರೋಧಿಗಳು ಹೊಸಂಗಡಿಯಲ್ಲಿ ಶಿವಪ್ಪನಾಯಕನೆಂಬ ಹೆಸರಿ




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆ ವೆಚ್ಚಸಹಿತ ರೂ ೩—೧೦—೦

ಸಂಪುಟ ೧೮]　　ಮೇ ೧೯೪೪.　　[ಸಂಚಿಕೆ ೮

## ವಿಷಯಾನುಕ್ರಮಣಿಕೆ.

# ಮಹತ್ವದ ಗ್ರಂಥಗಳು.

## ವಚನಶಾಸ್ತ್ರಸಾರ-ಭಾಗ ೧

ಪೂರ್ವಾರ್ಧ -೪-೦-೦ ಉತ್ತರಾರ್ಧ-೩-೦-೦

ವಚನ ವಾಙ್ಮಯದ ಸ್ವರೂಪ, ವಚನಕಾರರ ವಿಚಾರಗಳು, ಮತ್ತು ಲಿಂಗಾಯತ ಧರ್ಮದ ತತ್ವಗಳನ್ನು ಅರಿಯಬೇಕೆನ್ನುವವರು ಈ ಗ್ರಂಥಗಳನ್ನು ಓದತಕ್ಕದ್ದು.

## ವಚನಶಾಸ್ತ್ರಸಾರ ಭಾಗ ೨

ವೀರಶೈವ ಧರ್ಮದಲ್ಲಿ ಷಟ್‌ಸ್ಥಲಸಿದ್ಧಾಂತವು ಅತ್ಯಂತ ಮಹತ್ವವಾದದ್ದು, ಅದರ ನಿರೂಪಣೆಯು ಈ ಗ್ರಂಥದಲ್ಲಿ ಮಾಡಲ್ಪಟ್ಟಿರುತ್ತದೆ. ವೀರಶೈವ ಗ್ರಂಥಕಾರರು ಯಾವ ಧ್ಯೇಯವುಳ್ಳವರು? ಅವರ ಉತ್ಕ್ರಾಂತಿಯ ತತ್ವಗಳಾವವು, ಷಟ್‌ಸ್ಥಲಶಾಸ್ತ್ರದ ಸ್ವರೂಪ ಯಾವುದು ಇವೇ ಮೊದಲಾದ ವಿಷಯಗಳು ಇದರಲ್ಲಿ ವಚನಕಾರರ ವಚನಗಳಿಂದಲೇ ವಿವರಿಸಲ್ಪಟ್ಟಿವೆ. ವೀರಶೈವ ವಾಙ್ಮಯದಲ್ಲಿ ಅತ್ಯಂತ ಹೊಸ ಗ್ರಂಥವು.

ಬೆಲೆ-೫-೦-೦

## ವಚನಶಾಸ್ತ್ರಸಾರ ಭಾಗ ೩

ಈ ಗ್ರಂಥವಲ್ಲಿ ವೀರಶೈವಾಚಾರಗಳು ನಿರೂಪಿಸಲ್ಪಟ್ಟಿರುತ್ತವೆ.

ಬೆಲೆ -೨-೮-೦

## ಶಿವಾನುಭವ ಶಬ್ದಕೋಶ

ಶಿವಾನುಭವ ಶಾಸ್ತ್ರದಲ್ಲಿಯ ವಿಶಿಷ್ಟ ಶಬ್ದಗಳನ್ನು ತಿಳಿಯಲು ಅತ್ಯುಪಯುಕ್ತವಾದದ್ದು. ವೀರಶೈವ ಮತ ಸಾಹಿತ್ಯದಲ್ಲಿ ಒಂದು ನವೀನ ಗ್ರಂಥವು.

ಬೆಲೆ -೨-೮-೦

## ಭಕ್ತಿಯ ವಚನಗಳು

ಶ್ರೀ ಬಸವಣ್ಣನವರ ಭಕ್ತಿಸಂಬಂಧದ ವಚನಗಳಿಗೆ ಸುಲಭ ಭಾಷೆಯಲ್ಲಿ ವಿವರಣೆ ಇದೆ.

ಬೆಲೆ-೦-೧೦-೦

ಉಳಿದ ಗ್ರಂಥಗಳ ಬಗ್ಗೆ ಕ್ಯಾಟಲಾಗಿಗೆ ಬರೆಯಿರಿ.

ಮ್ಯಾನೇಜರ
ಹಿತಚಿಂತಕ ಪ್ರಿ. ಪ್ರೆಸ್
ವಿಜಾಪುರ.

# ಶಿವಾನುಭವ

| ವರ್ಷ ೧೮ | ಮೇ ೧೯೪೪. | ಸಂಚಿಕೆ ೮ |
|---|---|---|


## ಲಿಂಗಧಾರಿಯು ಸದಾ ಶುಚಿಯು

ಲೇ :— ಬ. ಚಿ. ಪಟ್ಟೇದ.

ಲಿಂಗ ಧರಿಸಿದವನು ಅರ್ಥಾತ್ ವೀರಶೈವನು ಸರ್ವದಾ ಶುಚಿಭೂತನಾಗಿಯೇ ಇರುವನು; ಅವನಿಗೆ ಮೈಲಿಗೆಯು ಎಂದೆಂದೂ ಉಂಟಾಗದೆಂಬುದೇ ಈ ವಾಕ್ಯದ ಅರ್ಥವು. ಅದು ಹೇಗೆಂಬುದನ್ನು ವಿವರಿಸುವದೇ ಈ ಲೇಖದ ಉದ್ದೇಶವು.

ಈಗ ಲಿಂಗವಂತರಲ್ಲಿಯೂ ಮಡಿ ಮೈಲಿಗೆಗಳು ಎಲ್ಲಿ ನೋಡಿದಲ್ಲೆಲ್ಲ ದೃಷ್ಟಿಗೆ ಬೀಳುತ್ತವೆ. ವಿರಕ್ತರಲ್ಲಿಯೂ ಮಡಿ ಮೈಲಿಗೆ, ಗುರುವರ್ಗದವರಲ್ಲಿಯೂ ಮಡಿಮೈಲಿಗೆ, ಉಳಿದ ಸಮಾಜದಲ್ಲೆಲ್ಲಿಯೂ ಮಡಿ ಮೈಲಿಗೆ; ಹೀಗೆ ನೋಡಿದತ್ತೆಲ್ಲ ಅದು ಮನಸೋಕ್ತವಾಗಿ ಕುಣಿದಾಡುತ್ತದೆ. ಈ ನಡೆದಿರುವ ಆಚರಣೆಗೂ ತಲೆಬರಹದಲ್ಲಿ ಉಕ್ತವಾಗಿರುವ ಅಭಿಪ್ರಾಯಕ್ಕೂ ತುಸುವಾದರೂ ಸಾಮ್ಯಸಂಬಂಧವುಂಟೇ ? ೩೬ ರ ಅಂಕೆಯಲ್ಲಿರುವ ಮೂರಕ್ಕೂ ಆರಕ್ಕೂ ಇರುವಷ್ಟು ಸ್ನೇಹಸಂಬಂಧವೇ ಇಲ್ಲಿಯೂ ಕಂಡು ಬರುತ್ತದೆ. ಅಂದಮೇಲೆ ಇವೆರಡೂ ಪರಸ್ಪರ ವಿರುದ್ಧವಾದ ಸಂಗತಿಗಳಲ್ಲಿ ನಿಜವಾದುದಾವುದು ? ಏಕೆ ? ಎಂಬುದನ್ನು ಸೂಕ್ತವಾಗಿ ಆಲೋಚಿಸುವುದು ಅತ್ಯವಶ್ಯವಲ್ಲವೇ ?

ಮೇಲೆ ಹೇಳಿದ ಲಿಂಗಾಯತ ಬಳಗದಲ್ಲಿ ಕಂಡು ಬರುವ ಮಡಿಮೈಲಿಗೆಗಳು ಕೇವಲ ಭವಿಜನರ ಅನುಕರಣವೆಂಬುದು ಸ್ಪಷ್ಟವೇ ಇದೆ. ಮೈಲಿಗೆ ಕಳೆದುಕೊಂಡು ಮಡಿವಂತರಾಗಲಿಕ್ಕೆ ಭವಿಗಳಲ್ಲಿ ನೀರೊಳಗೆ ಮುಳುಗು

ವುದೇ ಮುಖ್ಯ ಸಾಧನವಾಗಿದೆ. ಅವರಿಗೆ ತಟ್ಟುವ ಮೈಲಿಗೆಯಾದರೂ, ಹೊರಗೆ ತೋರುವ ಸ್ಥೂಲವಸ್ತುಗಳಾದ ದೇಹ, ಬಟ್ಟೆ ಮೊದಲಾದ ವಕ್ಕೆ ಸಂಬಂಧಿಸಿದುದು. ಹಾಗಿರದಿದ್ದರೆ, ನೀರು ಮುಳುಗಿದೊಡನೆ ಅದು ಬಿಟ್ಟುಹೋಗಿ ಮಡಿತನವೊದಗುವ ಸಂಭವವಿಲ್ಲ. ಈ ನಡತೆಯನ್ನು ಶರಣರು ಪರಿಪರಿಯಿಂದ ಧಿಕ್ಕರಿಸಿದ್ದಾರೆ. ಸೋಮೇಶ್ವರ ಶತಕಕಾರರು,

" ಪಿಡಿಯೊಳ್ ತುಂಬಿರೆ ಪಂಕ ಮೇಲೆ ತೊಳೆಯಲ್ ತಾಂ ಶುದ್ಧಮೇ
ಗೈದೊಡಂ, ।
ಕಡುಪಾಶಂ ಜಲಮೀಯಲಾತ ಶುಚಿಯೇಂ? ಕಾಕಾಳಿಗಳ್ ಮೀಯವೇ!॥
ಗುಡಪಾನಂಗಳೊಳದ್ದೆ ಬೇವಿನ ಫಲಂ ಸ್ವಾದಪ್ಪುದೇ ಲೋಕದೊಳ್ ? ।
ಮಡಿ ತಾಂ ನಿರ್ಮಲ ಚಿತ್ತಮೈ ಹರಹರಾ ಶ್ರೀ ಚೆನ್ನಸೋಮೇಶ್ವರ ॥"

ಎಂದೂ,

ಶ್ರೀ ಬಸವಣ್ಣನವರು :— " ತೊರೆಯ ಮೀವ ಅಣ್ಣಗಳಿರಾ, । ತೊರೆಯ ಮೀವ ಸ್ವಾಮಿಗಳಿರಾ,। ತೊರೆಯಿಂಭೋ ಪರನಾರಿಯ ಸಂಗವ, ತೊರೆಯಿಂ ಭೋ ಪರಧನದಾ ಮಿಷವ; ತೊರೆಯಿಂಭೋ. ಇವ ತೊರೆಯದೆ ಹೋಗಿ ತೊರೆಯ ಮಿಂದಡೆ, ಬರುದೊರೆ ಹೋಹುದು ಕಾಣಾ ! ಕೂಡಲಸಂಗಮದೇವಾ "

ಎಂದೂ ಹೇಳಿರುವರು. ಅಂತಃಶುಚಿಯಿಲ್ಲದೆ ಕೇವಲ ಬಹಿಃಶುಚಿಯಿಂದಲೇ ಯಾರೂ ನಿಜವಾದ ಉನ್ನತಿಯನ್ನು ಹೊಂದಲಾರರು.! ಮೇಲೆ ತೊಳೆದರೆ ಹೊರಗಣ ಶರೀರ ವಸ್ತ್ರಾದಿಗಳು ತಮ್ಮ ಕೊಳೆಯನ್ನು ಕಳೆದುಕೊಂಡು ಹಸನಾಗುವವು. ಇದು ಬರೇ ಆರೋಗ್ಯಕ್ಕೆ ಮಾತ್ರ ಸಂಬಂಧಿಸಿದ ಮಾತಾಯಿತು. ಅದನ್ನೇನು ಬಿಡಬೇಕೆಂಬರ್ಥವಲ್ಲ.! ಆದರೆ ಆತ್ಮೋನ್ನತಿಗೆ ಅದಷ್ಟೇ ನಿಜವಾದ ಸಾಧನವಲ್ಲೆಂಬುದನ್ನು ದೃಢವಾಗಿ ನಂಬಬೇಕು. ಆದುದರಿಂದ ಹೊರ ಒಳಗಿನ ಎರಡೂ ವಿಧದ ಶುಚಿತ್ವಗಳನ್ನು ನಾವು ರಕ್ಷಿಸುವುದು ಅವಶ್ಯ. ಇಲ್ಲಿ ಬರೇ ಅಂತಃಶುದ್ಧಿಯ ವಿಷಯವಾಗಿ ಮಾತ್ರ ಈಗ ಬರೆಯುವದದೆ ಎಂಬುದನ್ನು ನೆನಿಸಬೇಕು.

ಭವಿಗಳು ಬಹು ಸ್ವಾರ್ಥಪರರು, ಸಂಶಯಗ್ರಸ್ತರು. ಮೂಲತಃ ಶರೀರವೇ ಅಶುದ್ಧವಾದುದೆಂದೂ, ಅಲ್ಲದೆ ಜಾತ್ಯಾದಿ ಪಂಚಸೂತಕಗಳಿರುವುವೆಂದೂ ಅವರು ಕಲ್ಪಿಸಿಕೊಂಡಿರುವರು. ವೇದಾಂತ ದೃಷ್ಟಿಯಲ್ಲಿ ಜಗವೆಲ್ಲವೂ ಬ್ರಹ್ಮಮಯ ಅರ್ಥಾತ್ ಅತ್ಯಂತ ಪವಿತ್ರವಾದುದು;

ಎನ್ನುವರು. ಆದರೆ ಈ ಎರಡರಲ್ಲಿ ಯಾವದು ಸತ್ಯ, ಎಂಬ ಮತ್ತೊಂದು ಪ್ರಶ್ನೆಯನ್ನು ಇಲ್ಲಿ ಎದುರಿಸಬೇಕಾಗುವುದು. ವೇದಾಂತವು ಜ್ಞಾನದ ಪರಮಾವಧಿಯಾಗಿರುವದರಿಂದ ಅದರ ನಿರ್ಣಯವೇ ಸತ್ಯವೆಂಬುದನ್ನು ಒಪ್ಪಲೇಬೇಕು. ಬ್ರಹ್ಮವು ಆತ್ಯಂತಿಕ ಸತ್ಯವೂ ಆತ ಏವ ಪರಮಪವಿತ್ರವೂ ಆದುದರಿಂದ, ಭವಿಗಳು ಕಲ್ಪಿಸಿದ ವೈಲಿಗೆಯ ಭಾವನೆಯೆಲ್ಲವೂ ಅಜ್ಞಾನ ಮೂಲಕವೆಂಬುದನ್ನು ಬೇರೆ ಹೇಳುವ ಅವಶ್ಯಕತೆಯೇ ಇಲ್ಲ. ನಾವು ಪಾಲಿಸುವ ವ್ಯವಹಾರಿಕ ವರ್ತನೆಗೂ ಧರ್ಮತತ್ವಗಳಿಗೂ ಯಾವಾಗಲೂ ಹೊಂದಿಕೆಯಿರಬೇಕೇ ಹೊರತು ವಿರೋಧವಿರುವುದು ವಿಹಿತವಲ್ಲ. ಹಾಗಿದ್ದರೆ ಆ ಆಚರಣೆಗಳು ಬಹುಕಾಲ ಬಾಳಿ ಉಳಿಯವು. ಇದನ್ನೆಲ್ಲ ತಿಳಿದು ನೋಡಿ ನಮ್ಮ - ವೀರಶೈವ - ಶರಣರು ಬಹು ಚಾತುರ್ಯದಿಂದ ಈ ಗದ್ದಲವನ್ನೆಲ್ಲ ಕಿತ್ತುಹಾಕಿ, ಹೊಲಸನ್ನೆಲ್ಲ ತೆಗೆದು ಬಿಸಾಡಿ, ತಮ್ಮ ಮಾರ್ಗವನ್ನು ಸರಿಪಡಿಸಿಕೊಂಡಿರುವರು.

ಬ್ರಹ್ಮಕ್ಕೆ ಶಿವಶರಣರು ಲಿಂಗವೆಂದೆನ್ನುವರು. " ಲಿಂಗರೂಪಂ ಜಗತ್ಸರ್ವಂ " ಎಂಬ ತತ್ವವನ್ನು ಯಾವಾಗಲೂ ಕಣ್ಣಮುಂದಿಟ್ಟುಕೊಂಡಿರುವರು. ಆದುದರಿಂದಲೇ ಅವರು ಯಾವದಕ್ಕೂ ವೈಲಿಗೆ (ಅಸ್ಪೃಶ್ಯತೆ)ಯನಂಟಿಸುವುದಿಲ್ಲ. ಎಲ್ಲಕ್ಕೂ ಮೊದಲು ನಮ್ಮ ದೇಹವನ್ನೇ ತಕ್ಕೊಳ್ಳುವಾ ! " ದೇಹವೇ ದೇವಾಲಯ ಪ್ರಾಣವೇ ಲಿಂಗ " ವೆಂದು ಸಾರಿ ದೇಹವನ್ನು ಪವಿತ್ರಸ್ಥಾನವನ್ನು ಮಾಡಿರುವರು. ಪ್ರಾಣಿಯ ಉದ್ಧಾರವು ಮನುಷ್ಯ ಜನ್ಮದಲ್ಲಿ ಮಾತ್ರ ಸಂಭಾವ್ಯವದೆ. ಅಂತೇ " ಮಹತಾ ಪುಣ್ಯಾಪುಣ್ಯೇನ ಕ್ರೀತೇಯಂ ಕಾಯನೌಃ " ಎಂದು ವರ್ಣಿಸಲ್ಪಟ್ಟದೆ. ಹೀಗೆ ಆತ್ಮೋದ್ಧಾರಕ್ಕೆ ಅನಿವಾರ್ಯವಾಗಿ ಅವಶ್ಯವಾಗಿರುವ ನರದೇಹವನ್ನು ಅಪವಿತ್ರವೆಂದು ಭಾವಿಸುವುದು ಸರಿಯಾಗಲಾರದು. ಹಾಗಿದ್ದರೆ ಆ ಅಪವಿತ್ರ ವಸ್ತುವಿಗೆ ಇಷ್ಟೊಂದು ಪುಣ್ಯಾ ಪುಣ್ಯವನ್ನು ಕೊಡುವ ಕಾರಣವಿದ್ದಿಲ್ಲ; ಇನ್ನು ಅದು ಪವಿತ್ರವಾದುದೆಂದು ಹೇಳುವುದಾದರೆ, ಅದರಲ್ಲಿ ರಕ್ತ, ಮಾಂಸ, ಎಲುವು, ತೊಗಲು ಮುಂತಾದ ಅಪವಿತ್ರ ವಸ್ತುಗಳಿರುವುದೇಕೆ? ಎಂಬ ಆಕಾಂಕ್ಷೆಯು ಸಹಜವಾಗಿಯೇ ಉದ್ಭವಿಸುವುದು. ಇದರ ನಿರಸನವಾಗದೆ ದೇಹವು ಪವಿತ್ರವಾದುದೆಂಬ ಭಾವನೆಯು ಸ್ಥಿರಪಡಲಾರದು. ನಿಜವಾಗಿ ಜೀವಾತ್ಮನನ್ನು ಪ್ರಾಣಲಿಂಗವನ್ನು ಆಶ್ರಯಿಸಿದ ರಕ್ತ ಮಾಂಸಾದಿಗಳೇನೂ ಅಪವಿತ್ರವಲ್ಲ, ಅವು

ಪವಿತ್ರವೇ ಉಂಟು. ಆದರೆ ಪ್ರಾಣಹಿಂಸೆಯು ಮಾಡಿ ಅನೇಕ ಜನರು ರಕ್ತ ಮಾಂಸಾದಿಗಳನ್ನು ಸೇವಿಸುವದರಿಂದ, ಅದು ಧಾರ್ಮಿಕ ಜನ್ಮರಿಗೆ ಬಹು ವ್ಯಥೆಯನ್ನುಂಟು ಮಾಡುವುದು. "ಆತ್ಮವತ್ ಸರ್ವಭೂತಾನಿ" ಎಂಬ ತತ್ವವನ್ನು ಅವರು ಒಳಿತಾಗಿ ನಂಬಿದವರು ಪ್ರತ್ಯಕ್ಷ ದಯಾ ಮೂರ್ತಿಗಳು ಆದುದರಿಂದ ಅಂತಹ ರಕ್ತ ಮಾಂಸಾದಿಗಳು ಅಪವಿತ್ರವೆಂದೂ, ಅವನ್ನು ಸ್ಪರ್ಶಿಸಕೂಡದೆಂದೂ, ಸ್ಪರ್ಶಿಸಿದರೆ ಸಚ್ಛೈಲ ಸ್ನಾನ ಮಾಡಬೇಕೆಂದೂ ವಿಧಿಸಿದರು. ಹೀಗಾಗಿ ಕಾರಣಾಂತರದಿಂದ ಅವು ನಿಂದ್ಯವೆನಿಸಿದುವೇ ಹೊರತು ನಿಜವಾಗಿ ಅಲ್ಲೆಂದು ಹೇಳಲು ಆತಂಕವಿಲ್ಲ, ಅವಿಲ್ಲದೆ ದೇಹವು ಎಂದೂ ಉತ್ಪನ್ನವಾಗದು. ದೇಹಕ್ಕೆ ಶಕ್ತಿಗಮನಾದಿಗಳೂ ಒದಗಲಾರವು. ಇದಲ್ಲದೆ ಜೀವಾತ್ಮನಿಗೆ ದೇಹವೇ ಆಶ್ರಯಸ್ಥಾನವು ಅದು ಅಪವಿತ್ರವಾದುದೇ ಸತ್ಯವಾಗಿದ್ದರೆ, ನೀರಲ್ಲಿ ತೊಳೆದ ಮಾತ್ರದಿಂದ ಎಂದೂ ಪಾವಿತ್ರ್ಯ ವುಂಟಾಗುತ್ತಿದ್ದಿಲ್ಲ. ಇಂತಹ ಮಹತ್ವದ ಕಾಯವು ಅಪವಿತ್ರವೆಂಬುದು ಅಜ್ಞಾನದ ಪರಮಾವಧಿಯು. ಆದಾಗ್ಯೂ ಅದು ಅಪವಿತ್ರವಾದುದೆಂಬ ಸುಳ್ಳು ಕಲ್ಪನೆಯನ್ನು ಒಮ್ಮೆ ತಲೆಯಲ್ಲಿ ಸೇರಿಸಿಕೊಂಡುದನ್ನು ಕಿತ್ತು ಹಾಕುವದಕ್ಕಾಗಿ ಉಪಾಯಾಂತರವನ್ನು ನಿಯೋಜಿಸಲೇಬೇಕು, ಅದಕ್ಕಾಗಿಯೇ ಶಿವದೀಕ್ಷೆಯ ಕಾಲದಲ್ಲಿ ಆ ಧಾತುಗಳಲ್ಲೆಲ್ಲಾ ಪ್ರಣವರೂಪ ಲಿಂಗಗಳನ್ನು ಸ್ಥಾಪನ ಮಾಡಿ ಅವನ್ನು ಲಿಂಗರೂಪ ಪಡಿಸುವರು. ಅದರಂತೆಯೇ ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಪಂಚಪ್ರಾಣಗಳು, ಅಂತಃಕರಣಗಳು ಸಹಲಿಂಗ ರೂಪವಾಗಿಯೇ ಅಳವಡಿಸಲ್ಪಡುವವು. ಹೀಗಾಗಿ ದೇಹವು ಒಳ ಹೊರಗೆಲ್ಲ ಪವಿತ್ರವಾಗಿ ಲಿಂಗದ- ಶಿವನ- ಆವಾಸಕ್ಕೆ ತಕ್ಕುದಾಗುವುದು. "ಭಕ್ತ ಕಾಯೋಮಮಕಾಯಃ" ಎಂದು ಶಿವನು ಅಭಿಮಾನಪೂರ್ವಕವಾಗಿ ಹೇಳಿಕೊಂಡುದರ ಮರ್ಮವಾದರೂ ಇದೇ.

ವೀರಶೈವರ ಲಿಂಗವು ಬರೀ ಹೊರಗೆ ಕರದಲ್ಲಿ ಕೊಟ್ಟ ಆಕಾರ (ಇಷ್ಟ)ಲಿಂಗವಷ್ಟೇ ಅಲ್ಲ, ಅದು ಸ್ಥೂಲದೇಹಕ್ಕೆ ಮಾತ್ರ ಸಂಬಂಧಿಸಿದುದು. ಸೂಕ್ಷ್ಮದೇಹಕ್ಕೂ ಕಾರಣಶರೀರಕ್ಕೂ ಕ್ರಮವಾಗಿ ಪ್ರಾಣಲಿಂಗ, ಮಹಾ ಲಿಂಗಗಳಿರುತ್ತವೆ. ಪ್ರಾಣಲಿಂಗವನ್ನು ಮನೋಹಸ್ತದಲ್ಲಿಯೂ ಮಹಾ (ಭಾವ)ಲಿಂಗವನ್ನು ಭಾವ ಹಸ್ತದಲ್ಲಿಯೂ ಇರಿಸಿಕೊಂಡು ಪೂಜಿಸಲಿಕ್ಕೆ ಗುರುರಾಯ ಆಜ್ಞಾಪಿಸಿರುವನು. ಯಥೋಚಿತವಾಗಿ ಈ ಮೂರರ

ಪೂಜೆಯು ಸಾಂಗವಾದರೆ, ಭಕ್ತನ ಜನ್ಮೋದ್ಧಾರ (ಆತ್ಮೋದ್ಧಾರ) ವಾಗುವದು. ಇಷ್ಟದ ಪೂಜೆಯಿಂದ ಆಚಾರವಂತ (ನೀತಿವಂತ)ನಾಗಿ ಆಣವ ಮಲ ವಿಮುಕ್ತನೂ, ಪ್ರಾಣಲಿಂಗಾರ್ಚನೆಯಿಂದ ಮನದ ಸಂಕಲ್ಪ ವಿಕಲ್ಪಗಳನ್ನು ನೀಗಿ ಮಾಯಾಮಲ ನಾಶಕನೂ, ಮಹಾಲಿಂಗಾರಾಧನೆಯಿಂದ ಎಲ್ಲೆಲ್ಲಿಯೂ ಶಿವನೇತಾನಾಗಿ ಕಾರ್ಮಿಕ ಮಲವಿವರ್ಜಿತನೂ ಆಗಿ ಕೊನೆಗೆ ಭವಪಾಶಮುಕ್ತನು ಇಲ್ಲವೆ ಲಿಂಗಾಂಗ ಸಾಮರಸ್ಯವಂತನು ಆಗುವನು. ಹೀಗೆ ಒಳಹೊರಗೆ ಸರ್ವತ್ರ ಲಿಂಗಭಾವನೆಯುಳ್ಳವನಾಗಿ ತದನುಸಾರ ವರ್ತಿಸುವ ಲಿಂಗಾಂಗಿಗೆ ಎಲ್ಲಿಯಾದರೂ ಮೈಲಿಗೆಗೆ ಹಣಿಕಿಕ್ಕಲಿಕ್ಕೆ ತುಸುವಾದರೂ ಆಸ್ಪದವುಂಟೆ?

ವಸ್ತುಸ್ಥಿತಿಯು ಇಂತಿರಲು, ಅದನ್ನು ಲಕ್ಷಿಸದೆ ಲಿಂಗವಂತರಲ್ಲನೇಕರು ಅದರಲ್ಲಿಯೂ ಗುರು ವಿರಕ್ತರಾದವರು, ತಾವು ಕಟ್ಟಾ ಮಡಿಯುವರೆಂದೂ ಸಾಮಾನ್ಯಮಡಿಯುವರೆಂದೂ ಇಲ್ಲದ ಬಂಡೆಬ್ಬಿಸಿ ಡಂಭಾಚಾರಕ್ಕೆ ಮೈಗೊಟ್ಟು ವಿನಾಕಾರಣ ಸಾಮಾನ್ಯರನ್ನು ಸಂಶಯ ಸಂಕಟದಲ್ಲಿ ನೂಕುತ್ತಿರುವರು. ಬಾದಾಮಿಯ ಶಿವಯೋಗಮಂದಿರದಲ್ಲಿ ಹೆಚ್ಚಿನದೇನೂ ಕಲಿಯಲಿ, ಕಲಿಯದಿರಲಿ; ಈ ಮಡಿಸ್ತೋಮವನ್ನು ಮಾತ್ರ ತಪ್ಪದೆ ಹೊತ್ತುಕೊಂಡು ಬರುತ್ತಿರುವರು. ಅವರನ್ನು ಕಂಡು ಸಾಮಾನ್ಯರಲ್ಲಿಯೂ ಅನೇಕರು ಪ್ರತಿಷ್ಠಿತರೆನ್ನಿಸಿಕೊಳ್ಳುವ ಹವ್ಯಾಸಕ್ಕೆ ಬಿದ್ದು, ಈ ಹೊರಗಣ ಮಡಿ ಮೈಲಿಗೆಯ ಬೆನ್ನು ಹತ್ತುವರು. ಇದು ಬಹು ಹಗುರು ಜನರನ್ನು ಮರುಳುಗೊಳಿಸಲಿಕ್ಕೆ ಉತ್ತಮ ಸಾಧನ, ಎಂದು ಸ್ವಾರ್ಥಿಗಳು ಬಗೆದಂತೆ ಕಾಣುತ್ತದೆ. ನಾವು ಕ್ರಿಯಾವಂತರೆಂದು ಹೇಳುತ್ತ ಇಲ್ಲದ ಶಿಷ್ಟತನವನ್ನು ಮೆರಿಸುವರು, ನಿಜವಾದ ಶಿಷ್ಟತನವು ಅವರ ಗುಣ, ಆಚಾರವಂತಿಕೆ, ಭಕ್ತಿ, ವೈರಾಗ್ಯಾದಿಗಳಲ್ಲುಂಟು ಈ ಸೋಂಗು ತಮ್ಮ ಉದ್ಧಾರಕ್ಕಲ್ಲ, ಅರಿಯದ ಬೋಳೆಯ ಸ್ವಭಾವದ ಇತರರನ್ನು ವಂಚಿಸಿ ತಮ್ಮ ಐಹಿಕವಾದ ವಿಷಯುಗಳನ್ನು ಸಾಧಿಸುವ ದೆಸೆಯಿಂದ? ನಿಜವಾಗಿ ಉದ್ಧಾರದ ಹಾದಿಯನ್ನು ತುಳಿಯುವವರಿಗೆ "ಮಡಿಯೇನು ಮೈಲಿಗೆಯೇನು" ಎಲ್ಲವೂ ಅಷ್ಟೇ. ಅವು ಅವರಿಗೆ ಕಂಡರಲ್ಲವೇ ಪಾಲಿಸುವದು, ಎಲ್ಲೆಡೆಗೆ ಸಮಭಾವನೆಯೋ ಶಿವದೃಷ್ಟಿಯೋ ಅವರಲ್ಲಿ ನೆಟ್ಟಿರುವದು, ಅವರು ತಾವು ಶುದ್ಧಾಚರಣೆಯನ್ನವಲಂಬಿಸಿ, ತಮ್ಮ ಡೊಂಕನ್ನು ತಿದ್ದಿಕೊಂಡು ದೇವನನ್ನು ಒಲಿ

ಸುವುದರಲ್ಲಿಯೇ ಇಷ್ಟವುಳ್ಳವರಾಗಿರುವರು, ಇಂಥಹರು ಯಾವಾಗಲೂ ಭವಿಸಂಗದಿಂದ ದುರ್ಗುಣ ದುರಾಚಾರ ಷಡ್ರಿಪುಗಳಿಂದ ಮಾತ್ರ ದೂರಿರುವರು.

ಈ ವಿವರಣದಿಂದ ವೀರಶೈವನು ಲಿಂಗ (ಸಮ್ಯಕ್‌ಜ್ಞಾನ) ಯುಕ್ತನಾಗಿ ಸದಾ ಶುಚಿರ್ಭೂತನಾಗಿರುವನೆಂಬುದು ತಾನೇ ಒಡೆದು ಕಾಣುವುದು. ಅವನು ಯಾವಾಗಲೂ ಪ್ರಜ್ವಲಿತ ಅಗ್ನಿಯಂತಿಹನು, ಬೇರೆ ಯಾವದೊಂದು ವಸ್ತುವು ಅಗ್ನಿಯನ್ನು ಸೋಂಕಿದರೆ ತತ್‌ಕ್ಷಣವೇ ದಗ್ಧವಾಗಿ ಪರಿಶುದ್ಧವಾಗುವುದಲ್ಲದೆ ಆ ಅನ್ಯಪದಾರ್ಥದ ಸಂಪರ್ಕದಿಂದ ಸಂಸ್ಕಾರದಿಂದ ಅಗ್ನಿಗೇನೂ ಬಾಧೆ ಬರಲಾರದು. ಹಾಗೆಯೇ ಲಿಂಗಾಂಗಿಯ ಸ್ಪರ್ಶದಿಂದ ಮಿಕ್ಕುದೆಲ್ಲ ಪುನೀತವಾಗುವುದೇ ವಿನಾ, ಅವುಗಳ ಸಂಯೋಗದಿಂದ ಲಿಂಗವಂತನು ತಾನು ಎಂದೆಂದೂ ಅಪವಿತ್ರನಾಗಲಾರನು ಈ ಮಾತು ನಿರ್ಬಾಧವಾದ ಸತ್ಯವು. ದೋಷ (ಅಪವಿತ್ರತೆ) ಬರುವುದೆಂಬುವವರನ್ನು ಶ್ರೀಮುಗ್ಧಯ ಮಾಯ ದೇವರು ತಮ್ಮ ಶಿವಾಧವ ಶತಕದಲ್ಲಿ ಹೇಗೆ ಪರಿಹಾಸಿಸಿರುವರೆಂಬುದನ್ನು ನೋಡಿರಿ

ಶ್ವಪಚನ ದೈವದಂತರ ಮನೋರ್ಮೆ ವಿಚಾರಿಸಿ ನೋಡೆ ಲೋಕದೊಳ್ ।
ಶ್ವಪಚನೆ ಬಲ್ಪಲಾ ಜನದ ಬುದ್ಧಿಗೆ ! ದೈವಮನೊಲ್ದು ಮುಟ್ಟಿದ- ॥
ಲ್ಲಿ ಪರಮ ಶುದ್ಧತಾ ಸ್ಮರಣೆಯಿಲ್ಲದ ಶುದ್ಧಸಲೇಪಭಾವಮಾ ।
ಶ್ವಪಚನ ತಟ್ಟಿ ಮುಟ್ಟಿ ನಡೆಯಲ್ಲಿಯೆ ಬರ್ಪುದರಿಂ ಶಿವಾಧವಾ ॥"

ಲಿಂಗಧಾರಿಯಾಗಿ ಲಿಂಗರೂಪನಾದ ವೀರಶೈವನು ಸ್ವತಃ ದೇವಸದೃಶನು. ಅವನನ್ನು ಶ್ವಪಚನು ಸೋಂಕಿದರೆ, ಆ ಶ್ವಪಚನೇ ಪರಿಶುದ್ಧನಾದನೆಂದು ತಿಳಿಯುವುದರ ಬದಲು, ತಿರುಗಿ ಆ ವೀರಶೈವನಿಗೇ ಮೈಲಿಗೆ ಬಂತೆಂದು ಊಹಿಸಿದರೆ, ದೇವರಿಗಿಂತಲೂ ಶ್ವಪಚನೇ ಹೆಚ್ಚು ಬಲಿಷ್ಠನಾದನಲ್ಲ ! ಎಂದು ಅವರು ಕಟಿಕಿಯನಾಡಿರುವರು.

ಈ ವಿಧವಾಗಿ ವೀರಶೈವನು ಯಾವಾಗಲೂ ಪುನೀತನಾಗಿರುವದರಿಂದ ಆವನಿಗೆ ಆದೇತರಿಂದಲೂ ಮೈಲಿಗೆ ಬರುವಂತಿಲ್ಲ. ಈ ವಿಷಯದ ಅರುವಿಲ್ಲದೆ ಬಹು ಜನರು (ಅದೇಕೆ ಬಹುಶಃ ಎಲ್ಲರೂ) ತಮಗೆ ಹೊಲೆತಟ್ಟುವುದೆಂದೂ ಬಂದಿತೆಂದೂ ತಿಳಿದು, ಭವಿಗಳಂತೆ ತಾವೂ ನೀರಿನಲ್ಲಿ ಮುಳುಗಿ ಮಡಿವಂತರಾಗಲುದ್ಯುಕ್ತರಾಗುತ್ತಾರೆಂಬುದು ಬಹು ಆಶ್ಚರ್ಯ

ಮಾತಲ್ಲವೇ ! ಇವರ ಅಜ್ಞಾನಕ್ಕೆ ಅಳುವುದೋ ನಗುವುದೋ ತಿಳಿಯದು !! ಇರಲಿ, ಇದಾಯಿತು ಆ ಶುಚಿಯ ಸಾಮಾನ್ಯ ನಿರೂಪಣೆ. ಇನ್ನು ಭವಿಗಳಲ್ಲಿರುವ ಪಂಚಸೂತಕಗಳು ವೀರಶೈವರಲ್ಲಿಯೂ ಇರತ್ತವೆಂದು ತಿಳಿದು ಅವನ್ನು ಪಾಲಿಸಲಿಕ್ಕೂ ಓಡಾಡುವವರ ಸಂಖ್ಯೆಗೇನೂ ಕೊರತೆಯಿಲ್ಲ. ಸಮಾಜವು ವಿದ್ಯಾವಿಹೀನವಾಗಿ ಮೂಢತನದಲ್ಲಿರುವುದು. ಅದರೊಳಗೆ ಕೆಲ ಸ್ವಾರ್ಥಿ ಜನರು ತಾವು ಕಲಿತವರೆಂಬ ವರ್ಚಸ್ಸು ಅವರ ಮೇಲೆ ಹಾಕಿ, ಬುದ್ಧ್ಯಾ ಅವರಿಗೆ ಆ ರೀತಿ ಕಿವಿಯೂದುತ್ತಾರೆ. ತಮ್ಮ ಧರ್ಮದ ತತ್ವಗಳನ್ನರಿಯದವರು ಕೂಡಲೇ ಅವರ ಬಲಿಯಲ್ಲಿ ಬೀಳುವುದೇನೂ ಅರಿದಲ್ಲ. ವರ್ಣಾಶ್ರಮಗಳೂ ಯಜ್ಞಯಾಗಾದಿಗಳೂ ಪಂಚಸೂತಕಗಳೂ ಮುಂತಾದ ವೈದಿಕ ಮತದೊಳಗಿನವೆಲ್ಲವೂ ನಮ್ಮಲ್ಲಿ ಉಂಟೆಂದು ಭ್ರಾಂತಿ ಪಟ್ಟಿರುವ ಜನರ ತಂಡವೊಂದು ನಮ್ಮಲ್ಲಿ ಒಳಗಡೆ ತಲೆದೋರಿದೆ. ಗುರುವರ್ಗದವರೆನ್ನುವವರಲ್ಲಿ ಅನೇಕರು ಅತ್ತ ಕಿವಿಜೋತಿರುವರು. ಇದು ಸಮಾಜದ ದುರ್ದೈವ. ಅದಂತಿರಲಿ, ಈಗ ಪಂಚಭೂತಂಗಳು ನಮಗೆ ಹೇಗೆ ಬಂಧಿಸಲಾರರೆಂಬುದನ್ನು ಸಂಕ್ಷೇಪತಃ ನೋಡುವ. ಜನ್ಮಸೂತಕ, ಮರಣಸೂತಕ, ರಜಃಸೂತಕ, ಜಾತಿಸೂತಕ, ಉಚ್ಛಿಷ್ಟಸೂತಕ, ಇವೇ ಆ ಪಂಚಸೂತಕಗಳು. ಲಿಂಗವಂತರು ಪಿಂಡಕ್ಕೆ ಅಷ್ಟಮಮಾಸದಲ್ಲಿಯೇ ಲಿಂಗವನ್ನು ಸಂಬಂಧಿಸುತ್ತಾರೆ. ಅದಾಗದಿದ್ದರೂ ಹುಟ್ಟಿದ ಕೂಡಲೆ ಆದಷ್ಟು ಬೇಗ ಅದೇ ದಿನವೇ ಲಿಂಗವನ್ನು ಸಂಬಂಧಿಸುವರು. ಆದುದರಿಂದ ಅದು ಯಾವಾಗಲೂ ಪರಿಶುದ್ಧವೇ. ತಾಯಿಯು ಮೊದಲಿನಿಂದಲೇ ಲಿಂಗಯುಕ್ತಳು. ಅಂದಮೇಲೆ ಇಲ್ಲಿ ಜನ್ಮಸೂತಕವು ಇಣಿಕಿಕ್ಕಲಿಕ್ಕೆ ಅವಕಾಶವೆಲ್ಲಿರುವುದು ?

(೨) ಮರಣಸೂತಕ — ಇದನ್ನು ಪ್ರೇತಸೂತಕವೆಂದು ಹೇಳುವರು. ಇದು ಯಾರಿಗಾದರೂ ಘಟಿಸುವ ವಿಷಯ. "ಯದ್ದೃಷ್ಟಂ ತನ್ನಷ್ಟಂ' ಎಂಬುದು ಸೃಷ್ಟಿಯ ನಿಯಮ. ಆ ಪ್ರಕಾರ ದೇಹ ಬಿಡುವುದು ಅನಿವಾರ್ಯವೇ ಸರಿ. ವೀರಶೈವರು ಮೊದಲಿನಿಂದ ಲಿಂಗಸಂಬಂಧಿಗಳಾದುದರಿಂದ, ದೇಹ ಬಿಡುವಾಗಲೂ ದೇಹವು ಶವವಾದಾಗಲೂ ಸಹ ಆ ಇಷ್ಟಲಿಂಗ ಸಂಬಂಧವಿದ್ದೇ ಇರುವುದು. ಮೇಲಾಗಿ ತೊಳೆದು ಶುಚಿರ್ಭೂತವಾಗಿ ವಿಭೂತ್ಯಾದಿಗಳಿಂದ ಶೋಭಿತವಾಗಿರುವುದಲ್ಲದೆ, ವಿಭೂತಿ

ವೀಳೆಯ ಮುಂತಾದ ಸಂಸ್ಕಾರಗಳಿಂದಲೂ ಜಂಗಮರ ಸಂದರ್ಶನದಿಂದಲೂ ಮತ್ತಿಷ್ಟು ಪುನೀತವಾಗಿರುವುದು. ಇದಲ್ಲದೆ ಅದನ್ನು ಮುಟ್ಟುವ ಹಿಡಿಯುವ ಸಂಚರಿಸುವ ಜನರೆಲ್ಲರೂ ಲಿಂಗಯುಕ್ತರು. ಇಂತಹ ಸ್ಥಿತಿಯಲ್ಲಿ ಮೈಲಿಗೆ ಅದೆಲ್ಲಿಂದ ಪ್ರವೇಶಿಸುವುದು? ಈ ಮಾತನ್ನು ಎಲ್ಲರೂ ಒಳಿತಾಗಿ ಪರಿಶೀಲಿಸಬೇಕು.

(೩) ರಜಃಸೂತಕ — ಭವಿಸ್ತ್ರೀಯರಿಗೆ ಉಪನಯನ [ದ್ವಿಜತ್ವ)ದ ಸಂಸ್ಕಾರವಿಲ್ಲ. ಅವರು ಒಂದು ವೇಳೆ ರಜೋದೋಷವನ್ನು ಪಾಲಿಸಬಹುದು. ಆದರೆ ಲಿಂಗವಂತ ಸಮಾಜದಲ್ಲಿ ಸ್ತ್ರೀ ಪುರುಷರೆಂಬ ಅದಾವ ಭೇದಭಾವನೆಯಿಲ್ಲದೆ ಜನ್ಮಲಿಂಗಧಾರಣವಾಗಿರುವಾಗ, ವೀರಶೈವ ಸ್ತ್ರೀಗೆ ಆದು ಹೇಗೆ ಆ ದೋಷ ಬರುವುದು? ರಜಃಪ್ರಾಪ್ತಿಯೇ ದೋಷವೆಂದರೆ, ಆ ರಜದಲ್ಲಿಯೇ ಪಿಂಡವೊಳಿತು ಬೆಳೆದು ಶಿಶುವಾಗಿ ಜನ್ಮಿಸುವದರಿಂದ ಆ ಕೂಸು ಸಹ ಬಹಿಷ್ಕೃತವಾಗಬೇಕಾದೀತು- ಆದಕಾರಣ ಇಲ್ಲದ ಹುಚ್ಚುತನ ಮಾಡಬಾರದು. ರಜಸ್ವಿತಿಯು ನಿತ್ಯದಲ್ಲಿ ಸ್ನಾನ ಮಾಡಿ ತನ್ನ ಲಿಂಗಪೂಜಾದಿ ನಿಯಮಗಳನ್ನು ಪರಿಪಾಲಿಸಿದರಾಯಿತು. ಆಕೆ ಸರ್ವದಾ ಪರಿಶುದ್ಧಳೇ ಇರುವಳು. ಆಕೆಯ ಸಂಪರ್ಕದಿಂದ ಆದಾರಿಗೂ ಅಪವಿತ್ರತೆಯುಂಟಾಗದು ಆಕೆ ಲಿಂಗಧಾರಣದಿಂದ ನಿರುತ ಪರಿಶುದ್ಧಳಾಗಿರುವಾಗ, ಆಕೆಯ ಸ್ಪರ್ಶವು ಇತರ ವಸ್ತುಗಳನ್ನು ಪಾವನಗೊಳಿಸುವುದೇ ವಿನಾ ಅಪವಿತ್ರತೆಯನೆಂದಿಗೂ ಉಂಟುಮಾಡದು.

(೪) ಜಾತಿಸೂತಕ — ವರ್ಣಾಶ್ರಮ ಧರ್ಮಿಗಳು ಜಾತಿಯನ್ನು ಜನ್ಮತಃ ಮೇಲುಕೀಳುಗಳನ್ನೂ ಎಣಿಸುವರು. ಅದು ದೊಡ್ಡ ತಪ್ಪು " ಕುಲಜ ಅಂದರೆ ಉತ್ತಮ ಜಾತಿಯವನೆಂಬುದಕ್ಕೆ ಆವುದು ದೃಷ್ಟ?" ಎಂದು ಬಸವೇಶ್ವರ ದೇವರು ಪ್ರಶ್ನೆಮಾಡಿ ಸಪ್ತಧಾತುಸಮಂಪಿಂಡಂ। ಸಮಯೊನಿಸಮುದ್ಭವಂ॥ ಆತ್ಮಜೀವ ಸಮಾಯುಕ್ತಂ । ವರ್ಣಾನಾಂ ಕಿಂಪ್ರಯೋಜನಂ ॥ " ಎಂಬ ಸವಾಲ ಹಾಕಿದ್ದಾರೆ. ಉದ್ಯೋಗ ಪರತೆಯಿಂದ ವರ್ಣಗಳೂ ಜಾತಿಗಳೂ ಉಂಟಾದವು. ಆ ರೀತಿ ನಮ್ಮಲ್ಲಿಲ್ಲ. ಕಾಯಕವು ಕೈಲಾಸವೆಂದು ಹೇಳಿ ಎಲ್ಲಾ ಕಾಯಕಗಳ ಯೋಗ್ಯತೆಯನ್ನು ಸರಿಸಮವಾಗಿ ಭಾವಿಸಿರುವರು. ಯಾವದೇ ಕಾಯಕವಿದ್ದರೂ ಲಿಂಗಧಾರಿಯಾಗಿ " ಶಿವಕುಲ " ದವನಾಗಿ ಶಿವಮಾರ್ಗದಲ್ಲಿ ನಡೆಯುವವರಿಗೆ ಜಾತಿಯೆಂಬುದಿಲ್ಲೇ ಇಲ್ಲ. ಸರ್ವರಿಗೂ " ಉಮಾಮಾತಾ। ಪಿತಾ ರುದ್ರಃ॥ ಶಂಕರಃ ಕುಲಮೇವಚ " ಎಂದರಿಯಬೇಕು. ಇಂತಹ ಲಿಂಗವಂ

ತರಲ್ಲಿ ಜಾತಿಸೂತಕಕ್ಕೆ ಅವಸರವೇ ಇಲ್ಲ. ಆದರೂ ಅಜ್ಞಾನ ಮೂಲಕ ಅದೂ ನಮ್ಮಲ್ಲಿ ಇನ್ನೂ ತಳವೂರಿದೆ. ಆದರೂ ಇಲ್ಲಿ ಹಿಂದಿನಂತೆ ಅದೇನೂ ಬಹುದಿನ ಬಾಳಲಾರದು. ಕೆಳಗಿನ ವಚನವನ್ನೆಲ್ಲರೂ ಗಮನಿಸಬೇಕು.

" ಎಂತವನಾದಡೇನು ? ಲಿಂಗ ಮುಟ್ಟಿದವನೇ ಕೀಳು ಜಾತಿ. ಕುಲವಹುದು ತಪ್ಪದು ಲಿಂಗ ಮುಟ್ಟಿಲೊಡನೆ. ಶಿವಕುಲವಹುದು ತಪ್ಪದು ಪರುಷಮುಟ್ಟಲೊಡನೆ. ಕಬ್ಬಿನ ಹೊನ್ನಹುದು ತಪ್ಪದು. ಕೂಡಲಸಂಗಮದೇವನೊಲ್ಲ ಸರ್ವ ಸಂದೇಹಿಗಳ "

ಉಚ್ಛಿಷ್ಟಸೂತಕ — ಉಚ್ಛಿಷ್ಟ ಅಂದರೆ ಉಂಡು ಉಳಿಸಿದ ಅನ್ನ ಇಲ್ಲವೆ ಎಂಜಲು. ಅನ್ನವನ್ನುಣ್ಣುವ ಪರಿಪಾಠವು ಭವಿಗಳಲ್ಲುಂಟು. ಆದುದರಿಂದ ಎಂಜಲೆಂಬುದು ಅವರಲ್ಲಿಯೇ ಸಂಭವಿಸುವುದು. ವೀರಶೈವರು ಸರ್ವವನ್ನೂ ಲಿಂಗಾರ್ಪಿತ ಮಾಡಿ, ಲಿಂಗಪ್ರಸಾದ ಭೋಗಿಗಳಾಗಿಯೇ ಬಾಳುವವರಾದುದರಿಂದ, ಇವರಲ್ಲಿ ಆ ಶಬ್ದವೇ ಇಲ್ಲ. ಅದು ಅಜ್ಞಾನ ಮೂಲಕವಾಗಿದೆ. ಪ್ರಸಾದವು ಮಹಾ ಪವಿತ್ರವಾದುದರಿಂದ ಅದು ಯಾವಾಗಲೂ ಪರಮ ಪವಿತ್ರವೇ ! ಅಲ್ಲಿ ಎಂಜಲೆಂಬ ಭಾವನೆಗೆ ಆಸ್ಪದವೇ ಇಲ್ಲ. ಭವಿಗಳಲ್ಲಿ ಕೂಡ ದೊಡ್ಡ ದೊಡ್ಡ ಕ್ಷೇತ್ರಗಳಲ್ಲಿ ಅನ್ನವನ್ನು ಪ್ರಸಾದವೆಂದು ಭಾವಿಸುವದರಿಂದ, ಅಲ್ಲಿ ಅವರೂ ಎಂಜಲೆನ್ನುವದಿಲ್ಲ. ಅದೇ ರೀತಿ ನಮ್ಮಲ್ಲಿ ಯಾವಾಗಲೂ ಜಾಗ್ರತವಾಗಿ ನಡೆಯುತ್ತಿರುವುದು. ಗುರುಲಿಂಗಜಂಗಮಾರ್ಪಿತವಾದುದು. " ಒಕ್ಕುಮಿಕ್ಕ ಪ್ರಸಾದ" ವಾಗಿ ಉದ್ಧಾರಕ್ಕೆ ಸಾಧನೀಭೂತವಾಗುವುದಲ್ಲದೆ ಎಂಜಲೆಂದು ಎಂದೂ ತಿರಸ್ಕಾರವಾಗದು. ಹಾಗೆ ಭಾವಿಸುವವರು ಲಿಂಗಾಯತರೇ ಅಲ್ಲ, ಭವಿಶಿರೋಮಣಿಗಳು.

ಒಟ್ಟಿಗೆ ಹೇಳುವುದೇನಂದರೆ – ಲಿಂಗಾಯತರು ಸರ್ವಮಾರ್ಗಗಳಲ್ಲಿ ಜ್ಞಾನಪ್ರಧಾನರು. " ಅಪ್ರಾಕೃತರು." ಅವರ ಲಿಂಗವೇ ಜ್ಞಾನದ ಕುರುಹು. ಜ್ಞಾನಿಗಳಿಗೆ ಆದಾವ ದೋಷ ಮೈಲಿಗೆಗಳೂ ತಟ್ಟವು. ಅವೆಲ್ಲ ಅಲಿಂಗಿಗಳಾದ ಪ್ರಾಕೃತ ಭವಿಗಳಿಗೆ. ಮೇಲಿನ ವಿವೇಚನೆಯಿಂದ ವೀರಶೈವ ತತ್ವವು ಅದೆಂತಹ ಅಪೂರ್ವವಾದುದೆಂಬದು ಕಂಡುಬರದೆ ಇರಲಾರದು. ಆದುದರಿಂದ ಪರಮೇಶ್ವರನು ಮೇಲೆ ಹೇಳಿದ " ಲಿಂಗಧಾರೀ ಸದಾಶುಚಿಃ " ಎಂಬುದು ಸಿದ್ಧಾಂತವು.

# ಲಿಂಗಾಂಗ ಸಾಮರಸ್ಯ.

( ಲೇಖಕ — ಮೂರುಸಾವಿರಪ್ಪ ಗುರುಶಾಂತಪ್ಪ ಸಾದರಹಳ್ಳಿ; ಹುಬ್ಬಳ್ಳಿ. )

ಬಸವಾದಿ ಪ್ರಮಥರು ಕಣ್ಮರೆಯಾದಂದಿನಿಂದ ಇಲ್ಲಿಯವರೆಗೂ ನಮ್ಮ ಲಿಂಗವಂತ ಧರ್ಮವು ಕುಂಭಕರ್ಣ ನಿದ್ರೆಯಿಂದ ಮಲಗಿರುವದು. ಯಾರು ಎಷ್ಟು ಅಪಹರಿಸಿಕೊಂಡು ಹೋದರೂ ಅದರ ಅರುವೇ ಇಲ್ಲ. ಯಾರು ಎಷ್ಟು ಅವಮಾನಗೊಳಿಸಿದರೂ ಅದರ ಜ್ಞಾನವೇ ಇಲ್ಲ. ಅನ್ಯರು ಇದರ ಧನ ಮಾನ ಮನ್ನಣೆಗಳನ್ನು ಅಪಹರಣ ಮಾಡಿ ಮಾಡಿ ಅವರೇ ಸಾಕಾಗಿ ಬಿಡುವ ಪ್ರಸಂಗ ಬಂದಿವೆ. ಆದರೆ ಇದೇನು ಎಚ್ಚತ್ತು ತನ್ನ ದುರವಸ್ಥೆಯನ್ನು ಹೋಗಲಾಡಿಸಬೇಕೆಂದು ಪ್ರಯತ್ನ ವನ್ನು ಮಾಡಲೇ ಇಲ್ಲ. ಯಾರಾದರೂ ಅರಿತಂಥ ಅನುಭಾವಿಗಳು ಮನ ಮರುಗಿ ಮುಂದೆ ಬಂದರೆ ಸಮಾಜ ಬಾಂಧವರೇ ಅಸೂಯೆ ಅನಾ ದರದಿಂದ ಹಿಂದೆ ಜಗ್ಗಿ ಬಿಡುವರು. ಅಂದಬಳಿಕ ಈ ಸಮಾಜವು ಸುಖ ಶಾಂತಿಯನ್ನು ಹೊಂದಿ ಬಾಳಬೇಕಾದರೆ ಅರ್ಥಾತ' ಬಾಳಿನಲ್ಲಿ ಬೆಳಕು ತೋರಬೇಕಾದರೆ ಸಮಾಜದವರು ನಿಜವಾದ ಧರ್ಮ ತತ್ವಗಳನ್ನು ಅರಿ ಯತಕ್ಕದ್ದು.

ನಮ್ಮ ಧರ್ಮ ತತ್ವಗಳನ್ನು ಅರಿಯಬೇಕಾದರೆ ಪ್ರಮಥರ ವಚನ ಶಾಸ್ತ್ರಗಳೇ ಆಧಾರವಾದ ಗ್ರಂಥಗಳು. ಇವುಗಳನ್ನು ಹೊರ್ತುಪಡಿಸಿ ಅರಿ ಯುವದೆಂದರೆ ಕತ್ತಲೆಯಲ್ಲಿಯ ವಸ್ತುವನ್ನು ಹಡುಕಿದಂತೆ ಎಂದು ಶ್ರೀ ಸಿದ್ಧರಾಮ ತಂದೆಗಳು ತಮ್ಮದೊಂದು ವಚನದಲ್ಲಿ,

" ನಮ್ಮ ನಡಾವಳಿಗೆ ನಮ್ಮ ಪುರಾತನರ ನುಡಿಯೇ ಇಷ್ಟವಯ್ಯ. ಸ್ಮೃತಿಗಳು ಸಮುದ್ರ ಪಾಲಾಗಲಿ, ಶೃತಿಗಳು ವೈಕುಂಠ ಸೇರಲಿ, ಪುರಾ ಣಗಳು ಅಗ್ನಿಯ ಸೇರಲಿ, ಆಗಮಗಳು ವಾಯುವ ಹೊಂದಲಿ, ಎಮ್ಮ ನುಡಿ ಕಪಿಲಸಿದ್ಧಮಲ್ಲಿಕಾರ್ಜುನನ ಮಹಾಲಿಂಗದ ಹೃದಯದಲ್ಲಿ ಗ್ರಂಥಿಯಾಗಿರಲಿ " ಎಂದು ವಚನಗಳ ವೈಶಿಷ್ಟ್ಯವನ್ನು ವರ್ಣಿಸಿ ರುವರು.

ಶ್ರೀ ಶಿವಶರಣರಾದವರು ತಮ್ಮ ವಚನ ಶಾಸ್ತ್ರದಲ್ಲಿ ವಿಶ್ವವ್ಯಾಪ್ತಿಯುಳ್ಳ ನಮ್ಮ ಧರ್ಮದ ತಿರುಳನ್ನು ಅಚ್ಚಕನ್ನಡದಲ್ಲಿ ಉಚ್ಚತರದ ಅನುಭವದೊಂದಿಗೆ ಬಿಚ್ಚಿಟ್ಟಿಲಿಗೆಳೆದಿರುವರಲ್ಲದೆ ಲಿಂಗವಂತ ಮತದ ವೈಶಿಷ್ಟ್ಯಗಳಾದ ಅಷ್ಟಾವರಣ ಷಟ್‌ಸ್ಥಲಸಿದ್ಧಾಂತ ಮತ್ತು ಪಂಚ ಆಚಾರಗಳ ಪ್ರತಿಪಾದನೆಯನ್ನು ಮಾಡಿ, ಇವುಗಳ ಮೂಲಕ ಸತ್ಯ ಸ್ವಾತಂತ್ರ್ಯ ಸಹಾನುಭೂತಿ ಸರ್ವ ಸಮತೆಯನ್ನು ಸ್ಥಾಪಿಸಿ ಸಮಾಜವನ್ನು ಸರ್ವಾಂಗ ಸುಂದರವನ್ನಾಗಿ ಮಾಡಿರುವರು. ಇಂಥ ವಚನಶಾಸ್ತ್ರವನ್ನು ನಾವಿಂದು ಮರೆತವರಾದುದರಿಂದ ಮುಂದುಗಾಣದೆ ಸಂದೇಹಗೊಂಡು ಬೆಂದು ನೊಂದು ಕೋರಿರುವೆವು. ಇವರ ಒಂದೊಂದು ವಚನದಲ್ಲಿ ಲಿಂಗಾಂಗೀ ಧರ್ಮದ ನಿಜಸಾರವನ್ನೇ ಉಸುರಿರುವರು.

“ದೇಹವೇ ನಾನೆಂದು ನಂಬಿದೆ ಎಲೆ ಮನವೆ, ದೇಹದಲ್ಲಿಯ ಗುಣಂಗಳು ನಿನ್ನಲ್ಲಿ ಕಂಡಯ್ಯ! ಪೃಥ್ವಿಯ ಗುಣ ಶಾಂತಿ, ಉದುಕದ ಗುಣ ಸ್ವಾದ, ಅಗ್ನಿಯ ಗುಣ ಸರ್ವಭಕ್ಷಣ, ವಾಯುವಿನ ಗುಣ ನಿರ್ಮಲತ್ವ, ಆಕಾಶದ ಗುಣ ನಿರ್ವಯಲು, ಈ ಪಂಚತತ್ವದ ಗುಣ ನಿನ್ನಲ್ಲಿರಲು ನೀನೆ ಪಂಚಮುಖ ನೋಡಾ ಮನವೆ ಕಪಿಲಸಿದ್ಧಮಲ್ಲಿಕಾರ್ಜುನ.

ಎಂದು ಶ್ರೀ ಸಿದ್ಧರಾಮ ಶಿವಯೋಗಿಗಳು ಹೇಳಿದ ಪಂಚತತ್ವದ ಗುಣಗಳು ಯಾವ ಜೀವನಲ್ಲಿ ಇರುವವೋ ಆ ಜೀವನೇ ದೇವನೆಂದು ಅಂದಿರುವರು. ಇದೊಂದೇ ವಚನವನ್ನು ಆಳವಾಗಿ ವಿಚಾರಿಸಿದರೆ ಲಿಂಗಾಂಗೀ ಧರ್ಮದ ಉದಾತ್ತ ವಿಚಾರವು ಕಂಡುಬರುವದು.

ಪೃಥ್ವಿಯಗುಣ ಶಾಂತಿ. — ಭೂಮಿಯ ಮೇಲೆ ತಿಪ್ಪಿಯ ಗುಂಡಿಯನ್ನೂ ಉಪ್ಪರಿಗೆಯ ಮನೆಯನ್ನೂ ಕಟ್ಟಿದರೆ ಅದು ಹೇಗೆ ಶಾಂತ ಸ್ವಭಾವ ಉಳ್ಳದ್ದಾಗಿರುವದೋ ಅದರಂತೆ ಅಂಗನು ವಿನಯವಂತನಾಗಿರತಕ್ಕದ್ದು. ಈ ವಿನಯವೇ ಭೃತ್ಯಾಚಾರವೆಂಬ ಆಚಾರವಂತನನ್ನಾಗಿ ಮಾಡುವದು. ಆಚಾರವೇ ಮುಕ್ತಿಯ ಅಡಿಗಲ್ಲಾದ ಕಾರಣ ಮೊದಲು ಅಚಾರವಂತನಾಗಬೇಕೆಂದು ಪಂಚ ಆಚಾರ ಸಂಯುಕ್ತವಾದ ಆಚಾರ ಲಿಂಗದಲ್ಲಿ ಶ್ರದ್ಧಾಭಕ್ತಿಯನ್ನು ವಹಿಸಿ ನಡೆಯುವನಾದುದರಿಂದ ಭಕ್ತಸ್ಥಲವನಾವರಿಸಿ ಸದ್ಭಕ್ತನಾಗುವನು.

ಆಚಾರಲಿಂಗವೆಂದರೆ — ಆ ಅಂದರೆ ವರೆಗೆ (ತನಗೆ ಇಷ್ಟವಾದ ಧ್ಯೇಯವನ್ನು ಮುಟ್ಟುವ ವರೆಗೆ ಅರ್ಥಾತ್ ಅಂಗನು ಮಹಾಲಿಂಗದಲ್ಲಿ

ಬೆರೆಯುವ ವರೆಗೆ ಜೀವನು ಶಿವನಲ್ಲಿ ಐಕ್ಯನಾಗುವ ವರೆಗೆ ) ಚರ ಅಂದರೆ ನಡೆಯುವವ ಆದುಕಾರಣ ಲಿಂಗಾಂಗಿಗಳೆಲ್ಲರೂ ಭಕ್ತಿಯೋಗದಲ್ಲಿ ನಿಂತು ತಮ್ಮ ಗುರಿಯಾದ ಮಹಾಲಿಂಗದಲ್ಲಿ ಬೆರೆಯುವರಾದ ಕಾರಣ ಎಲ್ಲರೂ ಭಕ್ತರೆಂದೇ ಹೇಳಬೇಕಾಯಿತು. ಲಿಂಗಮಾರ್ಗದಲ್ಲಿ ಭವಿ ಭಕ್ತವೆಂದು ಎರಡೇ ವರ್ಗಗಳುಂಟು. ಭಕ್ತವರ್ಗ ಒಂದು ಬೇರೆ ಜಂಗಮ ವರ್ಗ ಒಂದು ಬೇರೆ ಎಂದು ನುಡಿಯುವದು ಬಾಲಪಾಠವೇ ಆಗಿದೆ. ಆದುದ ರಿಂದಲೇ ಭಕ್ತ ಜಂಗಮರ ಕ್ರಿಯೆ ಆಚಾರಗಳು ಒಂದೇ ವಿಧವಾಗಿವೆ. ಆದು ಕಾರಣ ಈ ಆಚಾರ ಲಿಂಗವು ಷಡ್ವಿಧಲಿಂಗಗಳಲ್ಲಿ ಪ್ರಥಮಸ್ಥಾನ ವನ್ನು ಹೊಂದಿದಂತೆ ಪಂಚಾಚಾರಗಳಲ್ಲಿ ಮೊದಲನೇ ಆಚಾರವು ಭೃತ್ಯಾ ಚಾರವಾಗಿ ಪರಿಣಮಿಸಿತು. ಶಕ್ತಿಗಿಂತ ಭಕ್ತಿಯೇ ಅಧಿಕವೆಂದು ತಿಳಿದು ಆಚಾರಲಿಂಗದಲ್ಲಿ ವಿಶ್ವಾಸವಿಟ್ಟು ನಡೆಯಹತ್ತುದರಿಂದ ಭಕ್ತನಾದನು. ಈ ಭೃತ್ಯಾಚಾರದ ಬಗ್ಗೆ

“ ಕರ್ತನೊಬ್ಬನೇ ದೈವ, ಸತ್ಯವೇ ಸುಭಾಷೆ, ಭೃತ್ಯಾಚಾರವೇ ಆಚಾರವಯ್ಯ. ಮತ್ತೆ ದೇವರಿಲ್ಲ ಮತ್ತೆ ಆಚಾರವಿಲ್ಲ ಮತ್ತೆ ಸುಭಾಷೆ ಎಂಬದಿಲ್ಲ. ಮಹಂತ ಸಕಳೇಶ್ವರ ದೇವರನೊಲಿಸಿದ ಪುರಾತನರ ಪಥ ವಿದು. ಅವಿತಥವಿಲ್ಲದೆ ನಂಬುವದು ”

ಇಂಥ ಭೃತ್ಯಾಚಾರದ ರೀತಿಯನ್ನೂ ಆಚಾರ ಲಿಂಗದ ಹೊಲಬನ್ನೂ ಭಕ್ತಸ್ಥಲದ ಮಾರ್ಗವನ್ನೂ ತಿಳಿಯದೆ ನಾನು ಮಹೇಶ ನಾನು ಪ್ರಸಾದಿ ಎಂದು ತಮ್ಮ ಅಗವ್ಯವ ನುಡಿಯುವದು ಮೂಢತನವು. ಯಾಕಂದರೆ

ಭಕ್ತಿ ಎಂಬ ಹಾಲನ್ನು ಮನದಲ್ಲಿ ಹೆಪ್ಪುಗೊಟ್ಟು, ಅದರಿಂದ ಗಟ್ಟಿಗೊಂಡ ದಧಿಯನ್ನು ಶರೀರವೆಂಬ ಭಾಂಡದಲ್ಲಿ ತುಂಬಿ ತತ್ವವೆಂಬ ಮಂಥುಗೋಲಿನಿಂ ಮಥಿಸಲು. ಲಿಂಗವೆಂಬ ನವನೀತವು ಕಾಣಿಸಲಾಗಿ, ಅದಂ ಪರಿಗ್ರಹಿಸಿ ಜ್ಞಾನಾಗ್ನಿಯಲ್ಲಿ ಪಕ್ವಂ ಮಾಡಲು, ನಿಜವಾಸನೆ ಯಿಂದ ಪ್ರಕಾಶಿಸುತ್ತಿಹ ತದ್ಘೃತ ಸೇವನಾ ಬಲದಿಂದ ಆತ್ಮನೇ ಲಿಂಗ ನಾಯಿತ್ತು ಕಾಣಾ ಮಹಾಘನ ದೊಡ್ಡ ದೇಶಿಕಾರ್ಯ ಪ್ರಭುವೆ ”

ಇವರಾದರೂ ತಮ್ಮ ವಚನದಲ್ಲಿ ಭಕ್ತಿಯ ಯೋಗವನ್ನು ಚನ್ನಾಗಿ ವರ್ಣಿಸಿರುವರು. ಈ ಭಕ್ತಿಯು ಲೋಕದ ಬಳಿಕೆಯಲ್ಲಿರಬೇಕೆಂಬುದನ್ನು ಯಾರೂ ಮರೆಯಕೂಡದು. ಭಕ್ತಿ ಎಂಬ ಹಾಲನ್ನು ಮನದಲ್ಲಿ ಹೆಪ್ಪು ಹಾಕಿ ಅದರಿಂದ ಹೊರಟ ಮೊಸರನ್ನು ದೇಹವೆಂಬ ಪಾತ್ರೆಯಲ್ಲಿ ತುಂಬಿ

ತತ್ವವೆಂಬ ಕಡಗೋಲಿನಿಂದ ಕಡಿದರಲ್ಲವೆ ಬೆಣ್ಣೆಯು ನಮಗೆ ಸಿಗು ವದು. ಆದರೆ ಈಗ ತತ್ವವು ಮಸಿ ನುಂಗಿ "ತತ್ವಮಸಿ" ಎಂಬ ವಾಕ್ಯವೇ ಕಾಣದಾಗಿದೆ. ಈ ತತ್ವವು ಹೇಗಿದೆಂಬದನ್ನು ನೋಡಿರಿ.

"ತಂದೆಯು ಸದಾಚಾರ ಮಕ್ಕಳದೆಂಬರು, ಗುರುಮಾರ್ಗಾಚಾರ ಶಿಷ್ಯನದೆಂಬರು, ಮೇಲು ಪಂಕ್ತಿಯು ಕಾಣಲರಿಯರು. ತತ್ವದ ಮೇಲು ಪಂಗ್ತಿಯುತ್ತಲೆ ಉಳಿಯಿತ್ತು, ಕತ್ತಲೆಯು ಮರೆಯಲ್ಲಿ ಕಾಣಲರಿಯರು ನೋಡಾ. ತತ್ವದ ಹಾದಿಯನು ಭಕ್ತಿಯ ಭೇದವನು ಇವರೆತ್ತ ಬಲ್ಲರೈ ಗುಹೇಶ್ವರಾ"

ಎಂದು ಕರುಣೆಗಳರಸಾದ ಪ್ರಭುವರ್ಯನು ಹೃದಯಂಗಮವಾಗಿ ಚಿತ್ರಿಸಿರುವನು. ಪ್ರಭುವಿನ ಸಾಂಪ್ರದಾಯವನ್ನು ಕಾಪಾಡುವವರೆಂದು ಅಲ್ಲಲ್ಲಿಗೆ ಪ್ರಭುವಿನ ಹೆಸರಿನಿಂದ ಪರಿಶೋಭಿಸುತ್ತಿಹ ಮಹಾತ್ಮರು ಇಂಥ ವಚನಗಳನ್ನು ಮನನ ಮಾಡಿಕೊಂಡು ತಾವೂ ಕೃತಾರ್ಥರಾಗಿ ಭಕ್ತರ ನ್ನುದ್ಧರಿಸಿ ಕೃತಾರ್ಥರನ್ನಾಗಿಸದೆ ವಚನಗಳಿಗೆ ವಿರೋಧವಾಗಿ ಅಷ್ಟಾವ ರಣಯುತರಲ್ಲಿ ಕಲ ಮರ್ಯಾದೆಯನ್ನು ಮನ್ನಿಸುವರು. ಈ ಬಗೆ ಯಾಗಿ ಶಿವಶರಣರ ವಚನಗಳು ಲಿಂಗಾಂಗೀ ಧರ್ಮದ ಸಿದ್ಧಾಂತವನ್ನು ಗರ್ಭೀಕರಿಸಿದ ಸೂತ್ರಗಳೇ ಆಗಿವೆ. ಅವುಗಳಿಂದ ಪಂಡಿತರು ಶಾಸ್ತ್ರಸಾರ ವನ್ನೇ ಅರಿಯಬಹುದು. ಉತ್ತಮಾಧಿಕಾರಿಗಳಾದ ಸದ್ಭಕ್ತರು ಸದ್ಯೋ ನ್ಮುಕ್ತಿಯನ್ನು ಹೊಂದಬಹುದು. ಇಂತಹ ವಚನಗಳೆಷ್ಟೆಂದರೆ.

"ಅಲ್ಲಯ್ಯಗಳ ವಚನ ಎರಡೆಂಭತ್ತು ಕೋಟಿ, ಅಪ್ಪಯ್ಯಗಳ ವಚನ ನಾಲ್ಕುಲಕ್ಷ ಮೂವತ್ತಾರು ಸಾವಿರ, ಎಮ್ಮಯ್ಯಗಳ ವಚನ ವಚನ ಕ್ಕೊಂದು, ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾವಿರ, ಗಂಗಾಂ ಬಿಕೆಯ ವಚನ ಲಕ್ಷದ ಎಂಟುಸಾವಿರ, ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷ ತೊಂಭತ್ತಾರುಸಾವಿರ, ಮಡಿವಾಳಯ್ಯನ ವಚನ ಮೂರು ಕೋಟಿ ಮುನ್ನೂರು, ಹಡಪದಯ್ಯಗಳ ವಚನ ಹನ್ನೊಂದು ಸಾವಿರ, ಮರುಳಸಿದ್ಧನ ವಚನ ಅರವತ್ತೆಂಟುಸಾವಿರ, ಇಂತಪ್ಪ ವಚನದ ರಚ ನೆಯ ಬಿಟ್ಟು, ಕುತ್ಸಿತ ಕಾವ್ಯಾಲಂಕಾರ ನೋಡುವವರ ನೋಡಿ ಹುಡಿ ಮಣ್ಣು ಹೊಯ್ಯದೆ ಮಾಣ್ಬನೆ ಮಹಾದೇವ ಕಪಿಲಸಿದ್ಧಮಲ್ಲಿಕಾರ್ಜುನ"

ಮೇಲಿನವರ ವಚನಗಳಷ್ಟೇ ಒಟ್ಟುಗೂಡಿಸಿದರೆ ಒಂದು ಅಬ್ಜ, ಅರವತ್ತುಮೂರುಕೋಟಿ, ಹನ್ನೊಂದುಲಕ್ಷ, ಹತ್ತೊಂಭತ್ತುಸಾವಿರ,

ಮುನ್ನೂರು ವಚನಗಳಾಗುತ್ತವೆ ಇನ್ನು ಜಗತ್ತಿನ ಒಟ್ಟು ಜನಸಂಖ್ಯೆಯು ಅಜಮಾಸ ಒಂದನೂರಾಎಂಭತ್ತು ಕೋಟಿ ಇರುವದೆಂದು ಜನಗಣನೆ ಯಿಂದ ತಿಳಿದು ಬರುತ್ತದೆ. ಇವರೆಲ್ಲರಿಗೂ ಒಂದೊಂದರಂತೆ ಹಂಚಿ ಉಳಿದ ವಚನಗಳನ್ನು ಮೂವತ್ತುಮೂರು ಕೋಟಿ ದೇವರ್ಕಳಿಗೆ ಹಂಚಿ ದರೆ ಇನ್ನೂ ಹೆಚ್ಚಾಗಿ ಉಳಿಯುತ್ತವೆ. ಉಳಿದ ವಚನಗಳನ್ನು ಪಾತಾ ಳದವರಿಗೂ ಹಂಚಿದರೆ, ಸ್ವರ್ಗ ಮರ್ತ್ಯ ಪಾತಾಳದ ವರೆಗೂ ಶ್ರೀಶಿವಶ ರಣರ ವಚನಗಳ ಜಯದುಂದುಭಿಯು ಮೊಳಗುತ್ತಿತ್ತಲ್ಲದೆ, ಕನ್ನಡ ನುಡಿ ಕನ್ನಡ ನಾಡೆಂದು ಕನಕರಿಸುವ ಅಣ್ಣಗಳು ವಚನಗಳಷ್ಟೇ ಪ್ರಚಾರ ಮಾಡಿದ್ದರೆ ಮೇಲಿನ ಮೂರು ಲೋಕವೆಲ್ಲ ಕನ್ನಡ ನುಡಿ ಕನ್ನಡ ನಾಡಾಗಿ ಪರಿಣಮಿಸುತ್ತಿತ್ತು. ಆದರೆ ನಮ್ಮ ಭಾಗ್ಯವು ಅಷ್ಟೊಂದು ಉಜ್ವಲವಿಲ್ಲದ್ದರಿಂದ ಅವು ದೊರಕುವದು ದುರ್ಲಭವಾಗಿದೆ. ದೊರಕಿ ದಷ್ಟು ಸಂಸ್ಕೃತ ಸೆಳವಿನಲ್ಲಿ ಬಿದ್ದ ಪಂಡಿತರು ಪ್ರಚಾರ ಮಾಡದೆ ಬಿಟ್ಟದ್ದರಿಂದ ನಮ್ಮ ಸಮಾಜವು ಇಂಥ ಹೀನ ದೆಸೆಯಲ್ಲಿ ಬಾಳಬೇ ಕಾಗಿದೆ.

ಸೂರ್ಯೋದಯಕ್ಕಿಂತ ಮುಂಚೆ ಅರುಣೋದಯವಾಗುವಂತೆ ಬರ ತಕ್ಕಂಥ ಮಹಾ ವ್ಯಕ್ತಿಯೆಂಬ ಸೂರ್ಯನು ಉದಯವಾಗುವದರ ದೆಸೆ ಯಿಂದಲೇ ಅರುಣೋದಯವೆಂಬ ವಚನಗಳು ಅಲ್ಲಲ್ಲಿಯೂ ಅರಳತೊ ಡಗಿರುವವು. ಇನ್ನು ಸೂರ್ಯೋದಯಕ್ಕೆ ತಡವಿಲ್ಲ. ಸೂರ್ಯನು ಉದ ಯವಾದ ಕೂಡಲೇ ಗೂಗೆಗಳು ತಮ್ಮ ತಮ್ಮ ಗೂಡನ್ನು ಸೇರುವಂತೆ ವಚನಗಳನ್ನು ಬಚ್ಚಿಟ್ಟ ಕೆಲಸ್ವಾರ್ಥಿಗಳು ತಮ್ಮ ತಮ್ಮ ಗವಿಯನ್ನು ಸೇರುವರು.

೨. ಅಪ್ಪುವಿನ ಗುಣಸ್ವಾದ — ನೀರು ಪಡ್ರುಚಿಗಳಲ್ಲಿ ಬೆರಸಿ ಆ ರುಚಿಗಳಂತೆಯೆ ಆಗುವ ಗುಣವದೆ. ಇದರಂತೆ ಮೇಲಿನ ಭಕ್ತನು ಯಾವ ಸ್ಥಲದಲ್ಲಿ ನಿಂತರೂ ತಾನು ಮಾತ್ರ ಹೆಚ್ಚಿನ ಸ್ಥಾನಮಾನಗ ಳನ್ನು ಬಯಸಕೂಡದು. ಮತ್ತು ನೀರಿನಲ್ಲಿ ಯಾವಾಗಲೂ ಸಮ ಪಾತಳಿಯನ್ನು ಅನುಸರಿಸುವ ಗುಣವದೆ. ಇದರಂತೆ ಇವನಾದರೂ ಸಮಾನತ್ವವೇ ತನ್ನ ಧರ್ಮವೆಂದು ತಿಳಿದು ಇದರಲ್ಲಿಯೇ ವಿವೇಕವು ಳ್ಳವನಾಗಿ ನಡೆಯುಹತ್ತುವನು. ಇದರಿಂದ ಮೇಲು ಕೀಳುಗಳೆಂಬ ಅಸಿಷ್ಟ ಮತ್ತು ಅನಾಚಾರಗಳಿಂದ ದೂರಾಗಿ ನಿಷ್ಠೆಯು ಆವರಿಸಿ ಆ ನಿಷ್ಠೆ

ಯಿಂದಲೇ ಅವನು ಗಣಾಚಾರವೆಂಬ ಆಚಾರವಂತನಾಗುವನು.
ಗಣಾಚಾರವೆಂದರೆ ಅನಿಷ್ಟ ಮತ್ತು ಅನಾಚಾರವನ್ನು ಹೊಡದೋಡಿ
ಸುವದು. ಈ ಆಚಾರದಲ್ಲಿ ಧೃಡತರವಾದ ನಂಬುಗೆಯನ್ನಿಟ್ಟು ನಡೆ
ಯುವನಾದುದರಿಂದ ಜಿಹ್ವಗುಹ್ಯಲಂಪಟವನ್ನು ತ್ಯಜಿಸಿ ಸಮಾಜ ಸೇವೆ
ಯೇ ಸ್ವಾಮಿಯ ಸೇವೆಯೆಂದು ತಿಳಿದು ಸಮಾಜದ ಎಲ್ಲ ಜನರಲ್ಲಿ
ಸಮಭಾವವಂ ತಾಳಿ ನಡೆಯುವನಾವನೋ ಅವನೇ ಸ್ವಾಮಿ ಎಂದೆನ್ನಿ
ಸಿಕೊಳ್ಳುವನು. ಇವನೇ ಗುರುಲಿಂಗಯುಕ್ತನಾಗಿ ನಿಷ್ಠಾಭಕ್ತಿಯಂ ವಹಿಸಿ
ನಡೆಯುವವನಾದುದರಿಂದ ಮಹೇಶ್ವರಸ್ಥಲವನ್ನೈದುವನು.

ಇಲ್ಲಿ ನೆನಪಿನಲ್ಲಿಡತಕ್ಕ ವಿಷಯವೇನಂದರೆ ಶ್ರದ್ಧೆ ಅಂದರೆ ನಿಷ್ಠೆ
ನಿಷ್ಠೆ ಅಂದರೆ ಶ್ರದ್ಧೆ ಇವೆರಡೂ ಶಬ್ದಗಳು ಏಕಾರ್ಥವನ್ನು ಸೂಚಿಸು
ತ್ತವೆ. ಅದು ಕಾರಣ ಭಕ್ತ ಮಹೇಶ್ವರ ಎಂಬ ಎರಡು ಜಾತಿಗಳಲ್ಲ
ತ್ಯಾಗಾಂಗದಲ್ಲಿ ಭಕ್ತಮಹೇಶ್ವರರಿಬ್ಬರೂ ಉದಯಿಸುವರೆಂದೂ ಅತಿವ
ರ್ಣಗಳೂ ಅತ್ಯಾಶ್ರಮಿಗಳೆಂದು ನಮ್ಮ ತತ್ವಗಳು ಗಂಟಾಘೋಷವಾಗಿ
ಸಾರಿದರೂ ಸಮಾಜಕ್ಕೆ ಇದರ ಅರುವಿಲ್ಲದಾಗಿ ಚೈತನ್ಯರಹಿತ ಯಾಂ
ತ್ರಿಕ ಸ್ವರೂಪನ್ನು ಹೊಂದಿ ಸಮಾಜವು ಕರ್ಮಠನಾಗಲಿಕ್ಕೆ ಹತ್ತಿದೆ.
ಇದನ್ನೇ ಅಣ್ಣನು "ಶಿವಭಕ್ತರೇ ಅಧಿಕರು ನೋಡಯ್ಯ. ಇದಕ್ಕೆ ಅಧಿ
ಕವಾಗಿ ಜಂಗಮವ ಕಂಡೆ" ಈ ದ್ವಿವಿಧವನು ಒಂದೇ ಎಂದು ನಂಬದೆ
ಎಂದು ಬೋಧಿಸಿರುವನು. ಕೇವಲ ಜನ್ಮದಿಂದ ಜಾತಿಯಿಂದ ಯಾರೂ
ದೊಡ್ಡವರಾಗಲಾರರು. ಲಿಂಗಭಕ್ತರ ಮನೆಗಳಿಗೆ ಮಠಗಳೆಂದು ನುಡಿ
ದದ್ದು ಜಾತಿವಾದಿಗಳು ವಚನಶಾಸ್ತ್ರಗಳಲ್ಲಿ ಕಾಣಬಹುದಲ್ಲದೆ "ಎಲ್ಲರೂ
ಜ್ಞಾನವಿಂದಲ್ಲದೆ ಮತಗೋತ್ರಾಭಿಮಾನದಿಂದ ಮೋಕ್ಷವಂತರಲ್ಲ ಕೇಳಾ
ಎಂದು ಶರಣರು ಆಗಾಗ್ಗೆ ಎಚ್ಚರಿಸಿರುವರು.

"ಜಂಗಮವ ಕೂಡಿಕೊಂಡು ಲಿಂಗಾರ್ಚನೆಯ ಮಾಡುವದುಲೇಸ
ಯ್ಯ ಭಕ್ತಂಗೆ ಆ ಭಕ್ತನ ಕೂಡಿಕೊಂಡು ಲಿಂಗಾರ್ಚನೆಯ ಮಾಡುವದು
ಲೇಸಯ್ಯ ಜಂಗಮಕ್ಕೆ ಆ ಜಂಗಮದ ಕರ್ತವ್ಯವೇ ಭಕ್ತಂಗೆ ದಾಸೋಹ.
ಆ ಭಕ್ತನ ಕಿಂಕಲವೇ ಜಂಗಮಕ್ಕೆ ದಾಸೋಹ. ಆ ಭಕ್ತನೊಳಗೆ ಜಂಗಮವಡಗಿ
ಆ ಜಂಗಮದೊಳಗೆ ಭಕ್ತನಡಗಿ ಈ ಎರಡೊಂದಾದ ಘನವ ಇದನೆಂತುಪ
ಮಿಸುವೆನಯ್ಯ. ತೆರಹಿಲ್ಲದ ಘನವ ಈ ಎರಡಕ್ಕೆ ಭವವಿಲ್ಲೆಂದು ಕೂಡಲ
ಸಂಗಯ್ಯ ನಿಮ್ಮ ಶ್ರುತಿಯು ಹೇಳಿದವಾಗಿ ನಿಮ್ಮ ಕರುಣವೆನಗಾಯಿತ್ತು"

ಎಂದು ಅಚ್ಚ ಅನುಭವದ ತಿರುಳನ್ನೆ ಬಿಚ್ಚಿಬೈಲಿಗೆಳೆದಿರುವರು. " ಭಕ್ತನೊಳು ಜಂಗಮವಡಗಿ ಜಂಗಮದೊಳು ಭಕ್ತನಡಗುವ ಪರಿ ಎಂತೆಂದೊಡೆ, ನಮ್ಮ ಲಿಂಗ ಮಾರ್ಗದಲ್ಲಿ ತಾನು ಭಕ್ತ ಉಳಿದವರೆಲ್ಲರೂ ಜಂಗಮರೆಂದು ತಿಳಿದು ನಡೆಯುವದು ( ತನ್ನ ಮನೆಗೆ ಬಂದಂಥವರು ಜಂಗಮರೆಂದೂ ತಾನು ಭಕ್ತನೆಂದೂ ತಿಳಿದು ದಾಸೋಹಂ ಭಾವದಿಂದ ವರ್ತಿಸುವದು ಇದರಂತೆ ಇವನು ಅನ್ಯರ ಮನೆಗೆ ಹೋದರೆ ಆ ಮನೆಯವನು ಮೇಲಿನಂತೆಯೆ ತಿಳಿದು ನಡೆಯತಕ್ಕದ್ದು ) ಇದೇ ಲಿಂಗಾಂಗಿಗಳ ಧರ್ಮವು. ಶಿವಶರಣರ ಸಮರ್ಮವು ಈ ರೀತಿ ತಿಳಿದು ಸಮಾಜವು ನಡೆದದ್ದಾಗಿದ್ದರೆ ನಮ್ಮ ಧರ್ಮವು ಕನ್ಯಾಕುಮಾರಿಯಿಂದ ಹಿಮಾಲಯದ ವರೆಗೆ ಹಬ್ಬುತ್ತಿತ್ತು. ಶರಣರ ಅನುಭಾವವು ಎಷ್ಟು ವಿಸ್ತೃತವಾಗಿದ್ದರೂ ಇಂದು ನಾವು ಕಣ್ಕಾಣದವರಾಗಿರುವೆವು. ಇದನ್ನೇ ಶ್ರೀಮುಪ್ಪಸವಣ್ಣನವರು ಕರುಣ ಪ್ರಸಾದವನ್ನು ಪಡೆದುಕೊಳ್ಳುವ ಕ್ರಿಯೆಯಲ್ಲಿಯೂ ಹರಡಿರುವನು. ಕರುಣಪ್ರಸಾದವನ್ನು ಮಾಡುವಾಗ್ಗೆ ಅಷ್ಟಾವರಣಯುಕ್ತವಾಗುತ್ತದೆಂದು ತತ್ವವು ಬೋಧಿಸುತ್ತದೆ. ಹೇಗೆಂದರೆ ಇದರಲ್ಲಿ ಗದ್ದುಗೆಯ ಮೇಲಿರುವವನು ಗುರುವೆಂದೂ ಪಡೆದುಕೊಳ್ಳುವವನು ಭಕ್ತನೆಂದೂ ಎಲ್ಲರೂ ತಿಳಿದುದು ಸ್ವಾಭಾವಿಕ ಹೀಗೆ ತಿಳಿದುಕೊಂಡರೆ ಜಂಗಮವು ಮಾಯವಾಗಿ ಸಪ್ತಾವರಣವಾಗುತ್ತದೆ. ಅಂದಮೇಲೆ ಅಷ್ಟಾವರಣಯುಕ್ತವಾಗುವದೆಂತು? ಇಂಥ ಮೂಢಭಾವನೆಯನ್ನು ಹೊಡಮೂಡಿ ವೃಢಶರಣರ ಅನುಭವದಿಂದೊಡಗೂಡಿದರೆ ಮಾತ್ರ ಶಿವಭಕ್ತರೆಂಬ ನುಡಿಯು ಸಾರ್ಥಕವಾಗುವದು. ಲಿಂಗಾಂಗಿಗಳೇ ಗದ್ದುಗೆಯ ಮೇಲಿರುವವನೇ ಗುರು, ಪಡೆದುಕೊಳ್ಳುವವನೇ ಜಂಗಮನೆಂದು ತಿಳಿದಾಗ್ಗೆ ಮಾತ್ರ ಅಷ್ಟಾವರಣಯುಕ್ತವಾಗುತ್ತದೆ. ಖಂಡಿತವಾದ ಮೇಲೆ ಈರ್ವರೂ ಭಕ್ತರಾಗಿ ಉಳಿಯತಕ್ಕದೆಂದು ಖಂಡಿತ ಮಾಡುವ ರೂಢಿಯುಂಟು. ಅಂತೆಯೆ ಅಣ್ಣನು ಭಕ್ತನೊಳು ಜಂಗಮವಡಗಿ ಜಂಗಮದೊಳು ಭಕ್ತನಡಗಿ " ಎಂದು ಹೃದಯಂಗಮವಾಗಿ ಚಿತ್ರಿಸಿರುವನು.

ಹೇಗೆ ಇಷ್ಟಲಿಂಗದಲ್ಲಿ ಪ್ರಾಣಭಾವಲಿಂಗಗಳು ಹುದುಗಿಕೊಂಡಿವೆಯೋ ಹಾಗೆ ಭಕ್ತನಲ್ಲಿ ಗುರುಜಂಗಮತ್ವಗಳು ಹುದುಗಿಕೊಂಡಿವೆ. ಇವುಗಳನ್ನು ಬೇರ್ಪಡಿಸಿ ನುಡಿಯುವದು ಅಜ್ಞಾನದ ಲಕ್ಷಣವೆಂದು

ಹೇಳಬಹುದು ಇದನ್ನೇ ಶಿವಶರಣರ ಮರ್ಮವನ್ನರಿತ ವೈಲಾರ ಬಸಪ್ಪ ತಂದೆಗಳು.—

" ಪಂಚಮುಖ ಶಿವಗಧಿಕವೆಂಬ ಶಾಸ್ತ್ರವನೋದಿ। ಪಂಚವಿಧ ದಾಚಾರ ಪ್ರಾಣವಾಗಿಹನಿಪ್ಪ್ರ ಪಂಚ ಸದ್ಭಕ್ತರನು ನರನೆಂದು ನುಡಿವ ದುರುಳಂಗೆ ಕೊಡುವೆ ಪ್ರಾಉತ್ತರವನು. "

ಎಂದು ನುಡಿದಿರುವರಲ್ಲದೆ ಅರಿವೇ ಗುರು, ಆಚಾರವೆ ಲಿಂಗ, ಅನುಭಾವವೇ ಜಂಗಮವೆಂದು ಶಾಸ್ತ್ರವು ಸಾರುತ್ತದೆ. ಅಂದಮೇಲೆ ಅರಿವುಳ್ಳ ಆತ್ಮನೆ ಗುರುವೆಂದಂತಾಯಿತಲ್ಲವೆ! ಆದರೆ ಸ್ವಾರ್ಥಿಗಳ ಅಭಿಪ್ರಾಯವು ಹಾಗಲ್ಲ. ಅನುಭವಕ್ಕೂ ಶಾಸ್ತ್ರಕ್ಕೂ ವಿರೋಧವಾಗಿದೆ. ಯಾಕಂದರೆ ಆತನು ಅರಿವುಳ್ಳವನಿರಲಿ ಮರೆವೆಯೊಳಗಿರಲಿ ರಕ್ತ ಸಂಬಂಧದಿಂದಲೇ ಗುರುತ್ವ ಬರುತ್ತದೆಂದು ಸಾರಿ ಸಾರಿ ಹೇಳುವರು. ಇಂಥ ಅಜ್ಞಾನಿಗಳ ಒಡನಾಟದಿಂದ ಸಮಾಜವು ಅಧೋಗತಿಗಿಳಿದಿದೆ. ಈಗಲಾದರೂ ಸಮಾಜವು ಎಚ್ಚರಾಗದಿದ್ದರೆ ಇನ್ನು ಕೆಲವು ದಿನಗಳಲ್ಲಿ ಈ ಧರ್ಮವು ಹೇಳಹೆಸರಿಲ್ಲದಾಗಬಹುದು.

" ಗುರುವಿಗೆ ತನುವ ಕೊಡಬೇಕೆಂಬರು. ಲಿಂಗಕ್ಕೆ ಮನವ ಕೊಡಬೇಕೆಂಬರು. ಜಂಗಮಕ್ಕೆ ಧನವ ಕೊಡಬೇಕೆಂಬರು. ಈ ತ್ರಿವಿಧವ ಹೊರಗು ಮಾಡಿ ಹರಿಯಹೊಯ್ಸಿ ಕುರುಹ ಪೂಜಿಸುವರ ಮೆಚ್ಚ ನಮ್ಮ ಕೂಡಲಸಂಗಮದೇವ "

ಎಂದು ಮಹಾ ಕರುಣಿಗಳರಸಾದ ಬಸವಣ್ಣನವರು ಎಚ್ಚರಿಸಿರುವರು. ಈ ಗುರು ಲಿಂಗ ಜಂಗಮರೆಂಬ ತ್ರಿವಿಧಯುಕ್ತವಾದ ಭಸ್ಮವನ್ನು ಪಥ್ಯಾನುಸಾರವಾಗಿ ಕೊಂಡರೆ ರೋಗಿಯ ರೋಗವು ವಾಸಿಯಾಗುವದು ಇದನ್ನು ಹೊರಗಿಟ್ಟು ಪೂಜಿಸಿದರೆ ನಮ್ಮ ಭವರೋಗವೆಂತು ವಾಸಿಯಾಗಬಹುದು ? ಆದು ಕಾರಣ ಜಾತಿವಾದಿಗಳ ಮಾತಿನ ಬಲೆಗೆ ಶಿಲುಕದೆ ನೀತಿ ಎಂಬ ಮಾರ್ಗವನ್ನನುಸರಿಸಿ ಜಾತಿಯಧಿಕವಲ್ಲ ನೀತಿಯೆ ಅಧಿಕವೆಂದು ಸಾರಿ ನೀತಿವಂತರೆಲ್ಲರೂ ಒಂದೇ ಎಂದು ಆ ನೀತಿವಂತರ ಗುಂಪಿಗೆ ಲಿಂಗಾಂಗಿಗಳೆಂದು ಕರೆದು ಲಿಂಗವಂತ ಮತವನ್ನು ಸ್ಥಾಪಿಸಿ ಪೂರ್ವಾಚಾರಿ ಎಂದೆನ್ನಿಸಿಕೊಂಡನು.

೩. ಅಗ್ನಿಯ ಗುಣ ಸರ್ವಭಕ್ಷಣ— ಅನೇಕ ಜಾತಿಯ ಕಟ್ಟಿಗೆಯನ್ನು ಅಗ್ನಿಯು ಸೊಂಕಿ ತನ್ನಂತೆ ಮಾಡಿಕೊಳ್ಳುವ ಗುಣವದೆ.

ಆದರಂತೆ ಯಾವ ಅಂಗನು ಲಿಂಗವನ್ನು ಸೋಂಕಿ " ಕೀಟೋಪಿ ಭ್ರಮರಾಯತೆ " ಎಂಬಂತೆ ಲಿಂಗವೇ ಆಗುವನೆಂದು ತಿಳಿದು ಲಿಂಗಾಂಗಿಗಳಲ್ಲಿ ಭೇದಭಾವವನ್ನು ತಾಳದೆ,

ಕಲ್ಲು ಕಂಚುಗಳಿಂದ ಮಾಡಿದ ಲಿಂಗವು ಪ್ರಾಣಪ್ರತಿಷ್ಠೆಯಾದೊಡನೆಯೇ ಪೂಜೆಗೆ ಯೋಗ್ಯವಾಗುವಂತೆ ನಲ್ನುಡಿಯನ್ನಾಡುವ ಮಾನವನು ಸಂಸ್ಕಾರವಾದ ಮೇಲೆ ಪೂಜೆಗೆ ಯೋಗ್ಯನಾಗಲಾರನೆಂಬ ಅನಾಚಾರಿಗಳ ವಿಡಂಬಿಸುವದೆ ಗಣಾಚಾರ ಕಾಣಾ ಕುಮಾರ ಗುರುವರ."

ಎಂಬಂತೆ ಹಿಂದೆ ಹೇಳಿದ ವಿನಯ ಮತ್ತು ವಿವೇಕದಿಂದೊಡಗೂಡಿದ ಮಹೇಶ್ವರನಿಗೆ ಪೂರ್ಣ ಎಚ್ಚರವು ಪ್ರಾಪ್ತವಾಗುತ್ತದೆ. ಈ ಎಚ್ಚರವೇ ಅವಧಾನಭಕ್ತಿಯೆಂದೆನಿಸಿ ಶಿವಾಚಾರವೆಂಬ ಆಚಾರವಂತನ್ನಾಗಿ ಮಾಡುವದು. ಶಿವಾಚಾರವೆಂದರೆ ಶಿವಲಿಂಗವಿದ್ದ ಶಿವಭಕ್ತನನ್ನು ಶಿವನೆಂದು ನಮಿಸುವದು. ಈ ಆಚಾರದಿಂದಲೆ ಆತ್ಮನ ಗರ್ವವು ನಾಶವಾಗಿ ಆತ್ಮನಲ್ಲಿ ಹುದುಗಿದ ಜ್ಯೋತಿಯು ಕಾಣುವದು. ಇದೇ ಶಿವಲಿಂಗವು. ಇದಕ್ಕೆ ಜ್ಯೋತಿರ್ಮಯ ಲಿಂಗವೆಂದೂ ಅಂದಿರುವರು. ಯಾವನ ದೃಷ್ಟಿಯು ಅರಳಿತೆಂದರೆ ಬಾಹ್ಯ ಸೃಷ್ಟಿಯು ಮಧುಮಯವಾಗಿ ತೋರುವದು, ಯಾವಾತನ ದೃಷ್ಟಿಯು ಆಕುಂಚಿತವಾದರೆ ಬಾಹ್ಯ ಸೃಷ್ಟಿಯು ವಿಷಮಯವಾಗಿ ತೋರುವದು. ಅದು ಕಾರಣ ಈ ಶಿವಲಿಂಗವು ನೇತ್ರದಲ್ಲಿರುವದೆಂದು ತತ್ವವು ಬೋಧಿಸುತ್ತದೆ. " ಅಹಂಕಾರವು ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೋ " ಎಂದು ಶ್ರೀಮದ್ಬಸವಣ್ಣನವರಾದರೂ ಎಚ್ಚರಿಸಿರುವರು. ಅಹಂಕಾರವು ಯಾವನಲ್ಲಿ ಉಳಿಯುವದೋ ಅವನು ಲಿಂಗದಿಂದ ದೂರಾಗುವನು. ಪ್ರಸಾದಿ ಸ್ಥಲವಂತೂ ಮುನ್ನವೇ ದೂರಾಯಿತು. ಯಾಕಂದರೆ ಅಹಂಕಾರವು ಅಂತಃಕರಣಗಳನ್ನು ನಿರ್ಮಲ ಮಾಡಲಾರದು. ಅದರಿಂದ ಪ್ರಸಾದಿ ಸ್ಥಲವು ದೊರೆಯಲಾರದು. ಯಾವನ ಅಂತಃಕರಣಗಳು ಅತ್ಯಂತ ನಿರ್ಮಲವಾಗಿ ಪ್ರಸನ್ನವಾಗಿರುವವೋ ಅವನೇ ಪ್ರಸಾದಿ ಸ್ಥಲವನ್ನೈದುವನು.

ಇದು ನಿರಹಂಕಾರಯೋಗದಿಂದಲೇ ಪ್ರಾಪ್ತವಾಗುತ್ತದೆಂಬುದನ್ನು ಯಾರೂ ಮರೆಯಕೂಡದು. ಹೇಗೆಂದರೆ ಧಾನ್ಯವು ಮಾಗಿದ ಮೇಲೆ ಸಕಲ ಜೀವರಾಶಿಗಳಿಗೆ ಪ್ರಸಾದರೂಪವಾಗಿ ಸಲ್ಲುವಂತೆ ಅಂಗನು ಬಾ

ಗಿದ ಮೇಲೆ ಶಿವನಿಗೆ ಪ್ರಸಾದರೂಪವಾಗಿ ಸಲ್ಲುವನು. ಇದನ್ನು ಒಬ್ಬರು ಕೊಡುವದು, ಒಬ್ಬರು ಪಡೆಯುವದಲ್ಲವು.

೪. ವಾಯುವಿನ ಗುಣ ನಿರ್ಮಲತ್ವ — ಗಾಳಿಯು ಸುಗಂಧ ಮತ್ತು ದುರ್ಗಂಧದ ಮೇಲಿಂದ ಹಾಯ್ದರೂ ತಾನು ಮಾತ್ರ ಅಂಟಿಸಿ ಕೊಳ್ಳದೆ ನಿರ್ಮಲವಾಗಿಯೇ ಇರುವ ಗುಣವದೆ. ಅದರಂತೆ ಆತ್ಮನ ಇಂದ್ರಿಯಂಗಳು ಅನಾತ್ಮ ವಸ್ತುಗಳನ್ನು ಕಂಡು ಕೇಳಿ, ಮೂಸಿ ಮುಟ್ಟಿ ಬೇಟವನ್ನು ಮಾಡತೊಡಗುವವು. ಬೇಟ ಮಾಡಿದ ವಸ್ತುವನ್ನು ಮನವು ಯಾವಾಗಲೂ ಬಯಸತೊಡಗುವದು. ಆದರೆ ಇಂದ್ರಿಯಗಳು ಎಂಥ ಬೇಟವನ್ನು ಮಾಡಿದರೂ ಹಿಂದೆ ಹೇಳಿದ ಪ್ರಸಾದಿಯು ತನ್ನ ಪ್ರಾಣೇಂದ್ರಿಯಂಗಳಲ್ಲಿ ಮುಸುಕಿದ ಅಜ್ಞಾನ ಅಹಂಕಾರವನ್ನು ಕಳೆದುಳಿದವನಾಗಿ ಮನವು ಘನವನ್ನಾಶ್ರಯಿಸಿದ ಕಾರಣ ಅವುಗಳನ್ನು ಲಕ್ಷಿಸದೆ ಸ್ವಾತ್ಮಜ್ಞಾನಯುಕ್ತನಾಗಿ ಅವನು ಉಳಿಯುವನೋ ಅವನಿಗೆ ಚರಲಿಂಗವೆಂದೂ ಜಂಗಮವೆಂದೂ ಕರೆದಿರುವರು. ಪ್ರಾಣವ್ಯಾಪಾರವು ದಶವಾಯುಗಳಿಚ್ಛೆಗೆ ಹರಿಯುವ ಸ್ವಭಾವವಿರುವದು. ಆದರೆ ಮೇಲಿನ ಪ್ರಸಾದಿಯೇ ಜಂಗಮಲಿಂಗದಲ್ಲಿ ಅನುಭಾವ ಭಕ್ತಿಯಿಂದೊಡಗೂಡಿ ನಡೆಯುವನಾದುದರಿಂದ ಅವನ ಪ್ರಾಣವ್ಯಾಪಾರವು ಅಳಿದು ಲಿಂಗವ್ಯಾಪಾರದಲ್ಲಿ ಉಳಿಯುವನು. ಇವನೇ ಪ್ರಾಣಲಿಂಗಿಸ್ಥಲವನ್ನೈದುವನು.

ಇವನು ಯಾವಾಗಲೂ ಸತ್ಯೋಪದೇಶವನ್ನು ಮಾಡುತ್ತ ಸಂಚರಿಸತಕ್ಕದ್ದು- ವಾಯುವು ಹೇಗೆ ಸಕಲ ಜೀವರಾಶಿಗಳನ್ನು ಸಂರಕ್ಷಣೆ ಮಾಡುವದೋ ಹಾಗೆ ಇವನು ಸಕಲ ಸತ್ಯಶಾಸ್ತ್ರಗಳನ್ನು ಮನನ ಮಾಡಿಕೊಂಡು, ಅವುಗಳಿಂದ ಅಜ್ಞಜನರ ಸಂಶಯ ನಿವಾರಣೆ ಮಾಡಿ ತನ್ನ ಧರ್ಮ ರಕ್ಷಣೆಯನ್ನು ಮಾಡತಕ್ಕದ್ದು. ಇದರಿಂದ ಸದಾಚಾರವೆಂಬ ಆಚಾರವು ಪ್ರಾಪ್ತವಾಗುವದು. ಸದಾಚಾರವೆಂದರೆ ಸತ್ಕ್ರಿಯೆಯಿಂದ ಧನವ ಗಳಿಸಿ ಗುರು, ಲಿಂಗ, ಜಂಗಮಕ್ಕೆ ನೀಡುವದು. ಇದರಂತೆ ಇವನಾದರೂ ಜ್ಞಾನಧನವನ್ನು ನೀಡತಕ್ಕದ್ದು. "ಭಕ್ತಂಗೆ ಬಹಿರಂಗ ದಾಸೋಹ ಜಂಗಮಂಗೆ ಅಂತರಂಗ ದಾಸೋಹ" ಇದನ್ನು ಯಾವನು ಮಾಡಲಾರನೋ ಅವನು ಪತಿತನಾಗುವನು. ಯಾಕಂದರೆ ಲೌಕಿಕ ಪ್ರಪಂಚದಲ್ಲಿಯ ಧನವನು ತನ್ನ ಬಾಂಧವರಿಗೆ ಹಂಚುವಂತೆ ಪಾರಮಾರ್ಥದಲ್ಲಿಯೂ ಕೂಡ ಈ ಶಿವಜ್ಞಾನವೆಂಬ ಧನವನ್ನು ಹಂಚದಲೆ ವಂಚಿಸಿದರೆ ನರಕ ಸಂಚಯ ತಪ್ಪದು.

ವಾಯುವಿನಲ್ಲಿ ಮುಂದೆ ಬರತಕ್ಕವರಿಗೆ ಸ್ಥಲ ಕೊಡುವ ಗುಣ ವದೆ. ಅದರಂತೆ ಇವನಾದರೂ ಗುರುಮೂರ್ತಿ ತಾನಾದ ಬಳಿಕ ಶಿಷ್ಯನ ಪೂಜೆಗೆ ಉಬ್ಬುಬ್ಬಿ ಹಾರೈಸಬೇಕು. ಗುರುಮೂರ್ತಿ ತಾನಾದ ಬಳಿಕ ಪರವಶನಾದ ಶಿಷ್ಯನ ಅರುವಿಗೆ ತಂದು ಓಲೈಸಬೇಕು. ಇಂತಪ್ಪ ಆದಿ ವಿಚಾರವನರಿಯದೆ ಮನಬಂದಂತೆ ಮಾತಾಡುವವರಿಗೆ ಗುಹೇಶ್ವರ ಲಿಂಗವೇನು ಹೇಳುವ ಮಡಿವಳಯ್ಯ ಮುಂದೆ ಬರುವಂಥ ವ್ಯಕ್ತಿಗೆ ಸ್ಥಲವನ್ನು ಕೊಟ್ಟು ತನ್ನ ವಾಯು ಅಂಗವನ್ನು ಸಾರ್ಥಕ ಮಾಡಿಕೊಳ್ಳತಕ್ಕದ್ದು.

ಇನ್ನು ಯಾರು ಸ್ವತಃ ಧರ್ಮದಿಂದ ನಡೆಯುತ್ತಿದ್ದು ಸಂಸಾರ ದೊಳಗಿನವರಿಗೂ ಸಹ ಧರ್ಮದಿಂದ ನಡೆಯಲಿಕ್ಕೆ ಪ್ರಯತ್ನ ಮಾಡು ತ್ತಾರೋ ಅವರೇ ನಿಜವಾದ ಧರ್ಮಾತ್ಮಾ ಸನ್ಯಾಸಿಗಳು. ಅವರೇ ಮಹಾ ತ್ಮರು. ಗಂಧ, ರಸ, ರೂಪ, ಸ್ಪರ್ಶ ಶಬ್ದಗಳೆಂಬ ಪಂಚವಿಷಯಗ ಳಿಂದಾದ ಈ ಪ್ರಪಂಚವು ಎಲ್ಲಿ ಹೋದರೂ ಬಿಡದೆಂಬುದು ಸಿದ್ಧಾಂ ತವು. ಅದುಕಾರಣ ಅಡವಿ ಅರಣ್ಯವನ್ನು ಸೇರದಲೆ ಪ್ರಪಂಚದಲ್ಲಿಯೇ ಇದ್ದು ಕುಂಬಾರ ಹುಳದಂತೆ ಇರುವದೇ ವಿರತಿಯು. ಆದುದರಿಂದಲೇ "ಮನವಿರಕ್ತಿಗೆ ಮುಕ್ತಿಯಲ್ಲದೆ ತನುವಿರಕ್ತಿಗೆ ಮುಕ್ತಿಯಹುದೇ" ಎಂದು ಶರಣರಾದವರು ಎಚ್ಚರಿಸಿರುವರಲ್ಲದೆ,

"ಕೇಶ ಕಾಷಾಯಾಂಬರವನಿಕ್ಕಿದೊಡೇನೋ ? ವಿಭೂತಿ ರುದ್ರಾಕ್ಷಿ ಧರಿಸಿದಡೇನೋ ? ಸಾಕಾರದಲ್ಲಿ ಸನ್ನಿತನಲ್ಲ. ನಿರಾಕಾರದಲ್ಲಿ ನಿರತನಲ್ಲ. ಪಾರಮಾರ್ಥದಲ್ಲಿ ಪರಿಣಾಮಿಯಲ್ಲ. ಇದು ಕಾರಣವಾಗಿ ಕೂಡಲಸಂಗ ಮದೇವಾ ತುರುಬಾಗಲಿ ಜಡೆಯಾಗಲಿ ಬೋಳಾಗಲಿ ಅರಿವು ಆಚಾರ ವುಳ್ಳೊಡೆ ಜಂಗಮ"

ಸದ್ಭಕ್ತನ ಪ್ರಾಣವೇ ಅರಿವು ( ಗುರು ) ಆಚಾರ (ಲಿಂಗ) ಅನು ಭಾವ (ಜಂಗಮ) ಗಳು ಅರಿವು ಆಚಾರ ಅನುಭಾವಕ್ಕೆ ಸದ್ಭಕ್ತನೇ ಜೀವಾಳವು. ಈ ಮರ್ಮವನ್ನು ತಿಳಿದು ಮಹಾತ್ಮಾ ಬಸವೇಶ್ವರನು ಸ್ವಾಭಾವಿಕ ಕಾರ್ಯದಲ್ಲಿಯೇ ಲೋಕವನ್ನುದ್ಧರಿಸಲು ಯತ್ನಿಸಿರುವವ ನಾದ ಕಾರಣ ಇವನೇ ನಿಜವಾದ ವಿರತನೂ ಲೋಕೋದ್ಧಾರಕನೂ ಎಂದು ಹೇಳಬಹುದು.

" ಮೊಲೆಯ ಮೇಲಿರ್ದ ಯೋಗಿಗಳುಂಟು ಲೋಕದಲಿ, ಶಿಲೆಯ ಮೇಲಿರುತಿರುವ ಮೋಹಿಯುಂಟು, ಬಳಸಿದಾ ಬ್ರಹ್ಮಚಾರಿತ್ವ ಉಂಡು ಉಪವಾಸ ನಮಗಿದೇ ಇಂದು ಬೇಕಾದ ಗಂಟು "

ಅದು ಕಾರಣ ಇಂಥವರಿಂದಲೇ ಲೋಕೋದ್ಧಾರ ಕಾರ್ಯವು ಸುಲಭವಾಗುವದೆಂದು ಜ್ಞಾನಿಗಳ ಅಭಿಪ್ರಾಯವು. ಯಾವನು ವಿಷಯ ವ್ಯಾಮೋಹದ ಭ್ರಮೆಯನ್ನು ಅಳಿಯಬಲ್ಲನೋ ಅವನೇ ಬ್ರಹ್ಮಯು. ಇವುಗಳನ್ನು ಯಾವನು ಅಳಿಯಲಾರನೋ ಅವನನ್ನು ಸನ್ಯಾಸಾಶ್ರಮ ದಲ್ಲಿ ಎಣಿಸದೆ ಸ್ವಾರ್ಥಾಶ್ರಮದಲ್ಲಿ ಎಣಿಸಬಹುದು. ಶರಣರು ಉಂಡು ಪವಾಸಿಗಳು· ಬಳಸಿಬ್ರಹ್ಮಚಾರಿಗಳು. ಆದುಕಾರಣ ವಚನ ಶಾಸ್ತ್ರದಲ್ಲಿ ಶರಣ ಜಂಗಮ ಭಕ್ತ ಎಂಬ ಶಬ್ದಗಳೆಲ್ಲ ಒಬ್ಬ ವ್ಯಕ್ತಿಗೆ ನುಡಿದವು ಗಳಾಗಿರುವವು.

" ಸುರಗಿರದ ವರೆಯಂತೆ ಅರಸಿರದ ಸೀಮೆಯಂತೆ। ಗುರುವಿರದ ಮಠದಂತೆ ಕೇಳಾತ್ಮ। ವಿರದ ಶರೀರದಂತಿರುತಿಹರು। ಹರನ ಚಿತ್ಕಳೆಯಿರದ ಬರಿ ಸಮಯ ತಿಳಿಯನೋರ್ವನಂ। ಬರಿದೆ ಬಡಿದಾಡುವರು ಪಟ್ಟಾಧಿಕಾರಿಗಳು। ಶರಣ ಬಸವಾದಿಪ್ರಭು ಮುಖರ ಭಯವಿಲ್ಲದಲೆ। ಮರುಳು ಮಾಡಿದನೇನೋ ಯಮರಾಜನಿವರಿಗೆ ಎದಕೆ ಬಡಿದಾಡುತಿಹರೋ " ( ಮಹಂತಶಿವಯೋಗಿ )

೫ ಆಕಾಶದ ಗುಣ ನಿರ್ಲಯಲು — ಆಕಾಶವು ಕ್ಷಣಾರ್ಧದಲ್ಲಿ ಮೋಡ ಮಿಂಚುಗಳಿಂದ ಕೂಡಿ ಕ್ಷಣಾರ್ಧದಲ್ಲಿ ನಿರ್ಲಯಲಾಗುವ ಗುಣವದೆ. ಅದರಂತೆ ಮೇಲಿನ ಪ್ರಾಣಲಿಂಗಿಯೇ ಪ್ರಪಂಚದಲ್ಲಿ ಇದ್ದೂ ಇಲ್ಲದಂತೆ ಆಚರಿಸುವನಾದುದರಿಂದ ಪ್ರಪಂಚದಲ್ಲಿಯ ಎಡರು ತೊಡರುಗಳಿಗೆ ಕರಗದೆ ಕೊರಗದೆ ಸ್ತುತಿ ನಿಂದೆಗೆ ಹಿಗ್ಗದೆ ಕುಗ್ಗದೆ, ಸಹಜಸ್ಥಿತಿಯನ್ನಳವಡಿಸಿಕೊಂಡು " ಬಂದ ಬರವೇ ಲಿಂಗಾನಂದ ಇದ್ದ ಇರವೇ ಲಿಂಗದ ಲೀಲೆ " ಎಂದು ತಿಳಿದು ಲೌಕಿಕ ಪ್ರಪಂಚವನ್ನೇ ಶಿವಪ್ರಪಂಚವನ್ನಾಗಿ ಮಾಡಲುಪಕ್ರಮಿಸುವನು. ಇದರಿಂದ ಶರಣನು ತಾನು ಸತಿಯಾಗಿ ಲಿಂಗದೇವನನ್ನು ಪತಿಯೆಂದು ಭಾವಿಸಿ ಆನಂದಯುಕ್ತನಾಗಿ ನಡೆಯಹತ್ತುದರಿಂದ ಲಿಂಗಾಚಾರವು ಪ್ರಾಪ್ತವಾಗುವದು. ಲಿಂಗಾಚಾರವೆಂದರೆ ಲಿಂಗದ ಹೊರ್ತು ಅನ್ಯದೇವರ ಉಪಾಸನೆ ಇಲ್ಲದೆ ಇರುವದು. ಈ ಲಿಂಗಾಚಾರದ ಮರ್ಮವನ್ನರಿತು ಲಿಂಗಪ್ರಸಾದವನ್ನೇ ಭೋ

ಗಿಸುವವನಾಗಿ ಪ್ರಸಾದಲಿಂಗದಲ್ಲಿ ಆನಂದಭಕ್ತಿಯನ್ನು ವಹಿಸಿ ನಡೆಯುವವನಾದುದರಿಂದ ಶರಣಸ್ಥಲವನ್ನೈದುವನು.

ಆಚಾರವು ಅಳವಟ್ಟು ಅಂಗದೋಷವು ಹಿಂಗದಿದ್ದರೆ ಲಿಂಗದ ನೆಲೆಯು ಆರಿಗೂ ನಿಲುಕಲಾರದು. ಲಿಂಗಾಂಗ ಸಾಮರಸ್ಯಯೋಗದಲ್ಲಿ ಲಿಂಗವಾಗಿ ಲಿಂಗದಲ್ಲಿ ಬೆರೆಯುವ ವರೆಗೆ ಅಂಗನು ತಮ್ಮ ತಮ್ಮ ಅಧಿಕಾರ ತಾರತಮ್ಯದಲ್ಲಿ ಷಟ್‌ಸ್ಥಲವನ್ನಾಚರಿಸುವದಿರುವದು ಆದರೆ ಸ್ಥಾನವಿಶೇಷದಲ್ಲಿ ಜನ್ಮವೆತ್ತಿದ ಮಾತ್ರದಿಂದ ಜನ್ಮತಃ ಆ ಸ್ಥಾನದ ಶುದ್ಧಾಂಗವು ತನಗಿರುವದೆಂದು ಭಾವಿಸುವದು ತಪ್ಪು.

ಪಂಚತತ್ವಗಳಿಂದ ಒಂದು ದೇಹವು ಹೇಗೆ ಆಗಿದೆಯೋ ಹಾಗೆ ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗಗಳೆಂಬ ಐದು ಕೂಡಿ ಮಹಾಲಿಂಗವಾಗಿದೆ. ಪಂಚತತ್ವಗಳು ಒಟ್ಟು ಆತ್ಮನು ಹೀಗೆ ಆರು ತತ್ವಗಳು ಕೂಡಿ ಇಷ್ಟಲಿಂಗವಾಗಿದೆ. ನಮ್ಮ ಲಿಂಗವಾದರೂ ಬ್ರಹ್ಮಾಂಡದ ಕುರುಹೆಂದು ಹೇಳಿರುವರು. ಇನ್ನು ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗಿ ಶರಣಸ್ಥಲಗಳು ಒಂದುಗೂಡಿ ಐಕ್ಯವಾಗಿ ನಿಸ್ಥಲವಾಗಿರುವದೇ ಲಿಂಗಾಂಗಿಗಳ ಧರ್ಮವು. ಮೇಲಿನ ಶರಣನೇ ಇಂಥ ಸ್ವಾತ್ಮಾನುಭಾವಯುಕ್ತನಾಗಿ ಮಹಾಲಿಂಗದಲ್ಲಿ ಸಮರಸಭಕ್ತಿಯಿಂದೊಡಗೂಡಿ ಐಕ್ಯಸ್ಥಲವನ್ನೈದುವನು. ಶಿವಜೀವರ ಒಂದುಗೂಡುವಿಕೆಗೆ ಐಕ್ಯವೆಂದಿರುವರು. ಇದೇ ಲಿಂಗಾಂಗ ಸಾಮರಸ್ಯ.

---

## ಹರಿಹರ ದೇವ.

( ಶ್ರೀ. ಆರ್. ಎಮ್. ಅಡಿಕೆ ಮು. ಅಥಣಿ. )

---

ಕನ್ನಡ ಸಾಹಿತ್ಯದಲ್ಲಿ ಕ್ರಾಂತಿಯನ್ನು ಮಾಡಿದ ಅಗ್ರಪೂಜೆಯು ಹರಿಹರ ಕವಿಗೆ ಸಲ್ಲುತ್ತಿದೆ. ಯಾಕಂದರೆ ಈ ಕವಿಯು ಕನ್ನಡ ಸಾಹಿತ್ಯದಲ್ಲಿ ರಗಳೆಗಳನ್ನು ಕಾವ್ಯದೊಳಗೆ ಪ್ರಚಾರದಲ್ಲಿ ತಂದನು. ಈ ರಗಳೆಗಳು ಷಟ್ಪದಿಗಳಿಗೆ ಮಾತೃಕೆಗಳಾಗಿವೆ. ಜನರು ಇವನನ್ನು ಒಂದು ಕಾಲದಲ್ಲಿ ರಗಳೆಯ ಕವಿಯೆಂದು ಹಾಸ್ಯ ಮಾಡತೊಡಗಿದರು. ಆದುದರಿಂದ ಇವನು ' ಗಿರಿಜಾ ಕಲ್ಯಾಣ 'ವೆಂಬ ಚಂಪೂ ಕೃತಿಯನ್ನು ರಚಿಸಿ

ಕನ್ನಡ ಸರಸ್ವತಿಗೆ ಜರದ ಪೀತಾಂಬರವನ್ನು ಉಡಿಸಿದನು. ರಗಳೆಗ ಳನ್ನು ರಚಿಪಿ 'ಗಿರಿಜಾ ಕಲ್ಯಾಣ' ವನ್ನು ರಚಿಸಿದ್ದರೂ ಈ ಕವಿಯ ಕೀರ್ತಿಗೆ ಕುಂದು ಬರುತ್ತಿದ್ದಿಲ್ಲವೆಂದು ದಿವಂಗತ ಪ್ರೊ. ಟಿ. ಎಸ್. ವೆಂಕಣ್ಣಯ್ಯನವರು ಅಭಿಪ್ರಾಯ ಪಟ್ಟಿದ್ದಾರೆ. ರಳ, ಕುಳ, ಕ್ಷಳಗಳ ಭೇದವನ್ನು ಕಿತ್ತೊಗೆದನು. ಪಂಪನ ಯುಗದಲ್ಲಿ ರಾಜರ ಅರಮನೆ ಯಲ್ಲಿ ವಾಸಿಸುತ್ತಿದ್ದ ಸಾಹಿತ್ಯದೇವಿಯು ೧೨ ನೇ ಶತಮಾನದಲ್ಲಿ ಸಾ ಮಾನ್ಯ ಜನರ ಸೊತ್ತಾಗಿ ಬೀದಿಗಳಲ್ಲಿ ಅಲೆದಾಡಿ ಬಡವರ ಗುಡಿಸಲ ಗಳಲ್ಲಿ ಇರಹತ್ತಿದಳು.

ಈ ಕವಿಗೆ ಹರೀಶ್ವರ ದೇವ, ಹರಿಹರದೇವ, ಎಂಬ ಬಿರುದುಗ ಳುಂಟು. ಇವನನ್ನು ಭೀಮಕವಿ, ಪದ್ಮಣಾಂಕ ಮುಂತಾದ ಕವಿಗಳು ತಮ್ಮ ಗ್ರಂಥಗಳಲ್ಲಿ ಸ್ತುತಿಸಿದ್ದಾರೆ.

ಈ ಕವಿಯ ತಂದೆ ಹಂಪೆಯಲ್ಲಿ ವಾಸಿಸುತ್ತಿದ್ದ ಮಹಾದೇವನು. ತಾಯಿಯು ಶರ್ವಾಣಿ. ಹರಿಹರನ ಗುರು ಹಂಪೆಯ ಮಾಯಿದೇವ. ಹರಿಹರನು ನರಸಿಂಹ ಬಲ್ಲಾಳನ ಆಳಿಕೆಯಲ್ಲಿ ಹಳೆಯ ಬೀಡಿನಲ್ಲಿ 'ಕರಣಿಕರ ಕುಲತಿಲಕ' ನಾಗಿದ್ದನು. ಇವನು ಮೊದಲು ಶೈವ ಮತ ದವನಿದ್ದು ಮುಂವೆ ವೀರಶೈವನಾದನೆಂದು ತೋರುತ್ತಿದೆ.

ಹರಿಹರ ಕವಿಯ ಕಾಲವು ಕ್ರಿ. ಶ. ೧೨೧೬ ಎಂದು ಪಂಡಿತರು ಅಭಿಪ್ರಾಯಪಟ್ಟಿದ್ದಾರೆ.

ಹರಿಹರನು ಒಬ್ಬ ಶ್ರೇಷ್ಠ ಶಿವಯೋಗಿಯು ಮತ್ತು ಪವಾಡ ಪುರು ಷನು. ಈತನು ಹಿಂದಿನ ಜೈನ ಕವಿಗಳಂತೆ ರಾಜಾಶ್ರಯದಲ್ಲಿದ್ದು ಕೊಂಡು ರಾಜರ ಚರಿತ್ರೆಗಳನ್ನು ಬರೆಯದೆ ಪುರಾತನರ ಮತ್ತು ಶಿವ ಶರಣರ ಚರಿತ್ರೆಗಳನ್ನು ಬರೆದಿದ್ದಾನೆ. ಅದನ್ನೆ ಷಡಕ್ಷದದೇವನು ರಾಜ ಶೇಖರ ವಿಳಾಸದಲ್ಲಿ ಹೀಗೆ ಹೇಳಿದ್ದಾನೆ.

'ಧರೆಯೊಳ್ ಮೇಣ್ ಪುಟ್ಟಿ ಪುಟ್ಟುತ್ತುರುಳ್ವ ನರರ ಮೇಲುರ್ಬಿ
ಕರ್ಬಂಗಳಂ ಬಿ।

ತರಿಸುತ್ತುಂ ಸಪ್ರಯಾಸಂ ಕೆಲ ಕೆಲರಕಟಾ ಕಬ್ಬಿಗರ್ ಕೆಟ್ಟು
ಪೋದರ್।

ಹರಿದೇವಂ ದೇವ ದೇವೋತ್ತಮನ ಶರಣರಂ ಪಾಡಿ ಕೈವಲ್ಯ ಲಕ್ಷ್ಮೀ ।
ವರನಾದಂ ಮತ್ತಂಗತ್ಯಧಿಕ ಶಿವಕವೀಂದ್ರಂಗದಾರ್ ಸಾಟಿ ಯುಪ್ಪರ್ ॥ ೧ ॥

ಹರಿಹರ ದೇವನು ರಚಿಸಿದ ಗ್ರಂಥಗಳು ಗಿರಿಜಾಕಲ್ಯಾಣ, ಶಿವಗಣದ ರಗಳೆ, ಪಂಪಾಶತಕ, ಶಿವಾಕ್ಷರ ಮಾಲೆ ಮತ್ತು ಮುಡಿಗೆಯ ಅಷ್ಟಕ.

ಗಿರಿಜಾಕಲ್ಯಾಣವು ಇವನ ಪಾಂಡಿತ್ಯಕ್ಕೆ ಸಾಕ್ಷಿ. ಅದು ಪ್ರೌಢ ಮತ್ತು ಸರಸವಾದ ಕಾವ್ಯ. ಕವಿಯು 'ಘನಕವಿತಾ ವಿಲಾಸದೊಳ್, ಸಂದಮಯೂರನ ರೀತಿ, ಕಾಳಿದಾಸನ ಸದ್ವೃತ್ತಿ, ಬಾಣನ ಮೃದೂಕ್ತಿ, ಹಲಾಯುಧನ ಆಶು, ಕೇಶಿರಾಜನ ಬಗೆ, ಉದ್ಭಟಯ್ಯನ ಗಭೀರತೆ, ಮಲ್ಹಣ್ಣನನೇಳ್ಗೆ, ಭೋಜರಾಜನ ಜಸಂ' ತನ್ನ ಕಾವ್ಯದಲ್ಲಿ ನೆಲಸಿರುವವು ಎಂದು ಹೇಳಿದ್ದಾನೆ. ಇದು ಪಂಪಾಪತಿಯ ಭಕ್ತಿಕಾವ್ಯ ರಗಳೆಗಳಲ್ಲಿ ಸೌಂದರ್ಯದ ಬೇರೆ ಬೇರೆ ಮುಖಗಳನ್ನು (*aspects of beauty*) ತೋರಿಸಿದ್ದಾನೆ. ರಗಳೆಗಳಲ್ಲಿ ವಚನಸಾರವನ್ನು ಇಳಿಸಿದ್ದಾನೆ. ಪಂಪಾಶತಕ ಮುಡಿಗೆಯ ಅಷ್ಟಕಗಳು ಇವನ ಆಶುಕವಿತ್ವವನ್ನು ಸೂಚಿಸುತ್ತವೆ.

ಈತನ ಚರಿತ್ರೆಯು ಚನ್ನಬಸವ ಪುರಾಣ, ಪದ್ಮರಾಜ ಪುರಾಣ ಮತ್ತು ಭೈರವೇಶ್ವರ ಕಾವ್ಯಗಳಿಂದ ಸ್ವಲ್ಪಮಟ್ಟಿಗೆ ತಿಳಿದುಬರುತ್ತಿದೆ.

ಒಟ್ಟಾರೆ ಹರಿಹರ ಕವಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ಮಹತ್ವವಾದ ಸ್ಥಾನವಿದೆ ಪಂಪಾಪತಿಯ ಭಕ್ತನೂ ಕವಿಯೂ ಆದ ಹರಿಹರನು ಪಂಪಾಕ್ಷೇತ್ರದಲ್ಲಿಯೇ ಐಕ್ಯವಾದನು.

---

# ಶೈವಾಗಮ ಅಥವಾ ಪ್ರತ್ಯಭಿಜ್ಞಾದರ್ಶನ.

( ಬರಹಗಾರ.— 'ಶಾಸ್ತ್ರಿ' ಮು. ಗೋಕಾಕ )

ಶಿವಾನುಭವದ ಓದುಗರಿಗೆ 'ಪ್ರತ್ಯಭಿಜ್ಞಾದರ್ಶನ'ದ ಹೆಸರು ಅರಿದಲ್ಲ. ಅದರ ಸ್ವರೂಪದ ಸಮ್ಯಜ್ಞಾನವನ್ನು ಕೆಲಮಟ್ಟಿಗಾದರೂ ಮಾಡಿ ಕೊಡಬೇಕೆಂಬ ಹೇತುವೇ ಈ ಬರಹಕ್ಕೆ ಕಾರಣವು.

ಜಗತ್ತಿನೊಳಗಿನ ಎಲ್ಲ ನಾಡುಗಳಿಗಿಂತ ಭಾರತಭೂಮಿಯು ಹೆಚ್ಚು ಪವಿತ್ರವೂ, ಶ್ರೇಷ್ಠವೂ ಎಂದು ಬಹುತರ ಅಖಿಲವಿದ್ವಾಂಸರೂ ಒಪ್ಪಿಕೊಳ್ಳುವರು. ಮನುಷ್ಯನನ್ನು ನಿರಾಯಾಸವಾಗಿ ಪರಬ್ರಹ್ಮತ್ವಕ್ಕೆ ಮುಟ್ಟಿಸುವಂಥ ವಿದ್ಯೆಗಳು ಇಲ್ಲಿ ಪ್ರಕಟವಾದದ್ದೇ ಇದರ ಪವಿತ್ರತೆಗೆ ಕಾರಣವು. ಈ ವಿದ್ಯೆಗಳು ನಮ್ಮ ದರ್ಶನಗಳಲ್ಲಿ ಹೇಳಲ್ಪಟ್ಟಿವೆ. ದಾರ್ಶನಿಕ ವಿದ್ಯೆಯು ಬೇರೆ ದೇಶಗಳಲ್ಲಿಯೂ ಉಂಟು; ಆದರೆ, ಬೇರೆಡೆಯಲ್ಲಿಯ ದಾರ್ಶನಿಕರ ಬುದ್ಧಿಯು ಪ್ರಾಯಶಃ ಭೌತಿಕಚಕ್ರದಲ್ಲಿಯೇ ಸುತ್ತಾಡುತ್ತಿರುವದು. ಅದು ಅದನ್ನು ದಾಟುವದಿಲ್ಲ. ಆದರೆ, ನಮ್ಮಲ್ಲಿಯ ದಾರ್ಶನಿಕರು ತಮ್ಮ ಬುದ್ಧಿಪ್ರಭೆಯಿಂದ ಭೌತಿಕಚಕ್ರವನ್ನು ಭೇದಿಸಿ ಒಂದು ಚರಮಲಕ್ಷ್ಯವನ್ನು ಮುಟ್ಟಿರುವರು. ಆ ಗುರಿಯೇ ಪರಮೇಶ್ವರ. ಅದರಾಚೆ ಬೇರೆ ಗುರಿಯೇ ಇಲ್ಲ. ಈ ವಿದ್ವಾಂಸರ ಉಪದೇಶಗ್ರಹಿಸಿ ಅದರಂತೆ ನಡೆದು ಸಹಸ್ರಾವಧಿ ಲಕ್ಷಾವಧಿ ಜನರು ಈ ಭವಸಾಗರವನ್ನು ದಾಟಿರುವರು.

ಭಾರತದಲ್ಲಿ ಈ ದಾರ್ಶನಿಕ ವಿದ್ಯೆಗಳು ಎಷ್ಟೋ ಇವೆ. ಅವುಗಳಲ್ಲಿ ಶ್ರೇಷ್ಠತರದ್ದು ವೇದಾಂತವು. ಈ ವೇದಾಂತ ಶಾಸ್ತ್ರದಲ್ಲಿಯೂ ಹಲವು ಶಾಖೆಗಳಿವೆ. ಅವುಗಳಲ್ಲಿ ಪ್ರತ್ಯಭಿಜ್ಞಾಶಾಖೆಯು ಶ್ರೇಷ್ಠತಮ, ಸುಂದರತಮ, ಮನೋಹರತಮ ಹಾಗು ಹೃದಯಗ್ರಾಹಿಣಿಯೆನಿಸುವದು. ಈ ದರ್ಶನಕ್ಕೆ ಶೈವಶಾಸ್ತ್ರ ಅಥವಾ ಶೈವಾಗಮವೆಂತಲೂ ಹೆಸರು. " ಸೃಷ್ಟಿಯ ಆರಂಭದಲ್ಲಿ ಸ್ವಯಂ ಭಗವಾನ್ ಪರಶಿವನು ತನ್ನ ದೇವಸ್ವರೂಪದಿಂದ ಸನಕಾದಿ ಋಷಿಗಳಿಗೆ ಈ ಶಾಸ್ತ್ರದ ಉಪದೇಶವನ್ನು ಮಾಡಿದನು. ಬಳಿಕ ಇದು ಸಂಸಾರದಲ್ಲಿ ಬಹುಕಾಲದ ವರೆಗೆ ಶಿಷ್ಯಪರಂಪರೆಯಿಂದ ಬಳಕೆ

ಯಲ್ಲಿತ್ತು. ಆದರೆ ಈ ಶಾಸ್ತ್ರದ ಬಗ್ಗೆ ಯಾವ ಗ್ರಂಥವೂ ಬರೆಯಲ್ಪಟ್ಟದ್ದಿಲ್ಲವಾದ್ದರಿಂದಲೂ, ಉಪದೇಶದ ಮೂಲಕವೇ ಇದರ ಪ್ರಚಾರವಾಗುತ್ತಿದ್ದದರಿಂದಲೂ, ಕಲಿಯುಗದಲ್ಲಿ ಯೋಗ್ಯ ಶಿಷ್ಯರ ಅಭಾವವಾದದ್ದರಿಂದಲೂ ಈ ವಿದ್ಯೆಯು ಕ್ರಮೇಣ ಲುಪ್ತವಾಗುತ್ತ ಬಂತು. ಆದ್ದರಿಂದ ಭಗವಾನ್ ಮಹಾದೇವನು ಮತ್ತೆ ಒಮ್ಮೆ ಈ ಶಾಸ್ತ್ರದ ಪ್ರಚಾರ ಮಾಡಲು, ದೂರ್ವಾಸ ಋಷಿಗಳಿಗೆ ಅಪ್ಪಣೆಯಿತ್ತನು. ಕೂಡಲೆ ದೂರ್ವಾಸ ಮಹರ್ಷಿಗಳು ಕಾಶ್ಮೀರ ಮಂಡಲದಲ್ಲಿಳಿದು, ಸಂಕಲ್ಪಮಾತ್ರದಿಂದ ಒಬ್ಬ ಮಗನನ್ನು ಹುಟ್ಟಿಸಿ, ಆತನಿಗೆ ತ್ರ್ಯಂಬಕಾದಿತ್ಯ ಎಂಬ ಹೆಸರಿಟ್ಟು ಶೈವ ಶಾಸ್ತ್ರದ ರಹಸ್ಯವನ್ನು ಉಪದೇಶಿಸಿದರು. " ಈ ತ್ರ್ಯಂಬಕಾದಿತ್ಯನ ಕುಲದಲ್ಲಿ ಇಲ್ಲವೆ ಶಿಷ್ಯಪರಂಪರೆಯಲ್ಲಿ ಶ್ರೀ ಸೋಮಾನಂದ ಎಂಬ ಘನ ವಿದ್ವಾಂಸರು ಆಗಿಹೋದರು. ಅವರು ಶೈವಶಾಸ್ತ್ರದ ವಿಷಯಕ್ಕೆ 'ಶಿವ ದೃಷ್ಟಿ' ಎಂಬ ಅನುಪಮ ಗ್ರಂಥವನ್ನು ಬರೆದರು. ಬಹುತರ ಅದೇ ಸಮಯದಲ್ಲಿ ಕಾಶ್ಮೀರದಲ್ಲಿ ವಸುಗುಪ್ತರೆಂಬ ಮತ್ತೊಬ್ಬರು ವಿದ್ವಾಂಸರಿದ್ದರು. ಅವರಿಗೆ ಭಗವಂತನು ಕನಸಿನಲ್ಲಿ ಬಂದು ದೂರ್ವಾಸರಿಗಿತ್ತಂತೆ ಅಪ್ಪಣೆಯನ್ನಿತ್ತನು. ಆ ಅನುಜ್ಞೆಯಂತೆ ಅವರು ಮಹಾದೇವ ಪರ್ವತದ ಹತ್ತಿರಹೋಗಲು, (ಶ್ರೀ ನಗರದ ಎದುರು ಮೂಡಣ ನಿಟ್ಟಿನಲ್ಲಿದೆ) ಹಾರ್ವನ ಸರೋವರದ ಮೇಲ್ಮಗ್ಗಲು ಆ ಬೆಟ್ಟದ ಅಡಿಯಲ್ಲಿ ಒಂದು ದೊಡ್ಡ ಬಂಡೆಯು ಕಂಡಿತು. ಕೈಯಿಂದ ತುಸು ದೂಡಿದೊಡನೆ ಆ ಅರೆಯು ಕಿತ್ತುಬಿದ್ದಿತು. ಅದರ ಅಡಿಯಲ್ಲಿ ಏನೋ ಬರೆದಿತ್ತು. ವಸುಗುಪ್ತರು ಅದನ್ನೆಲ್ಲ ಕಾಗದದ ಮೇಲೆ ಇಳಿಸಿಕೊಂಡರು. ಅದೊಂದು ಅಧ್ಯಾತ್ಮಶಾಸ್ತ್ರವಿತ್ತು. ಅದರ ಹೆಸರು 'ಶಿವಸೂತ್ರ'. ವಸುಗುಪ್ತರು ಬರಕೊಳ್ಳುವದು ಮುಗಿದೊಡನೆ ಆ ಶಿಲೆಯು ಮೊದಲಿನಂತೆ ತನ್ನ ಸ್ಥಳದಲ್ಲಿ ನಿಂತುಬಿಟ್ಟಿತು. ಈ ಶಿಲೆಯ ಹೆಸರು 'ಶಂಕರೋಪಲ'. ಈಗಲೂ ಅದು ಅಲ್ಲಿದೆ. ಅದಕ್ಕೆ ಈಗ 'ಶಂಕರಪಲ' ವೆನ್ನುವರು. ಆದರೆ ಅದನ್ನು ತೆಗೆದು ನೋಡುವ ಪ್ರಯತ್ನವನ್ನು ಮಾತ್ರ ಅಂದಿನಿಂದ ಇಂದಿನ ವರೆಗೆ ಯಾರೂ ಮಾಡಿಲ್ಲ. ಹೀಗೆ ಇವೆರಡು ಗ್ರಂಥಗಳಿಂದ ಪ್ರಪಂಚದಲ್ಲಿ ಪುನಃ ಶೈವಾಗಮದ ಪ್ರಚಾರವಾಯಿತು. ಶ್ರೀಸೋಮಾನಂದರ ಶಿಷ್ಯರಾದ ಶ್ರೀಮಾನ್ ಉತ್ಪಲದೇವಾಚಾರ್ಯರು ಈ ಶಾಸ್ತ್ರದ ವಿಷಯಕ್ಕೆ 'ಈಶ್ವರಪ್ರತ್ಯಭಿಜ್ಞಾ' ಎಂಬ ಗ್ರಂಥವನ್ನು ಬರೆದರು. ಇದು ಈ ದರ್ಶನದ ಬಗೆಗಿದ್ದ ಬಹಳ ದೊಡ್ಡ ಹೊತ್ತಿಗೆಯು. ಈ ಆಚಾರ್ಯರೇ 'ಸಿದ್ಧಿತ್ರಯಿ' ಹಾಗು 'ಶಿವ

ಸ್ತೋತ್ರಾವಲೀ ' ಇವುಗಳನ್ನೂ ಬರೆದಿರುವರು. ' ಈಶ್ವರಪ್ರತ್ಯಭಿಜ್ಞಾ ' ದ ಮೇಲೆ ಆಚಾರ್ಯ ಅಭಿನವಗುಪ್ತರು ' ವಿಮರ್ಶಿನಿ ' ಎಂಬ ಟೀಕೆಯನ್ನು ಬರೆದಿರುವರು; ಅಲ್ಲದೆ ಬೇರೆ ಎಷ್ಟೋ ಗ್ರಂಥಗಳನ್ನೂ ಅವರು ಬರೆದಿರುವರು. ' ವಿಮರ್ಶಿನಿ ' ಯ ಮೇಲೆ ಭಾಸ್ಕರಕಂಠನು ಟೀಕಾ ಬರೆದಿರುವನು. ಸ್ವತಃ ಆಚಾರ್ಯ ಉತ್ಪಲದೇವರೂ ತಮ್ಮ ' ಈಶ್ವರಪ್ರತ್ಯಭಿಜ್ಞಾ ' ಗ್ರಂಥದ ಮೇಲೆ ವೃತ್ತಿ ಮತ್ತು ಟೀಕಾ ಎಂಬೆರಡು ಟೀಕೆಗಳನ್ನು ಬರೆದಿರುವರು. ಆದರೆ, ಈಗ ಅವು ಅನುಪಲಬ್ಧವಿವೆ. ಅಲ್ಲದೆ ಆಚಾರ್ಯರು ತಮ್ಮ ಗುರುವಿನ ' ಶಿವದೃಷ್ಟಿ ' ಯ ಮೇಲೆಯೂ ಒಂದು ಟೀಕೆಯನ್ನು ಬರೆದಿರುವರು. ಅದು ಈಗ ಸಂಪೂರ್ಣ ಸಿಗುವದಿಲ್ಲ. ಶಿವಸೂತ್ರದ ಮೇಲೆ ಕ್ಷೇಮರಾಜನು 'ಶಿವಸೂತ್ರವಿಮರ್ಶಿನಿ' ಎಂಬ ಟೀಕೆಯನ್ನು ಶ್ರೀಭಟ್ಟಕಲ್ಲಟಾದಿಗಳು ಸ್ಪಂದ ' ಎಂಬ ಕಾರಿಕೆಯನ್ನೂ ಬರೆದಿರುವರು. ಇವುಗಳ ಹೊರತು ಎಷ್ಟೋ ವಿದ್ವಾಂಸರಿಂದ ಮತ್ತೆಷ್ಟೋ ಚಿಕ್ಕದೊಡ್ಡ ಗ್ರಂಥಗಳೂ ಟೀಕೆಗಳೂ ಬರೆಯಲ್ಪಟ್ಟವೆ. ಅವು ಕಾಶ್ಮೀರದ ರಾಜಕೀಯ ' ರಿಸರ್ಚ ' ವಿಭಾಗದಿಂದ ಪ್ರಕಾಶಿತವಾಗಿವೆ. ಈ ದರ್ಶನವು ಬಹುತರ ಕಾಶ್ಮೀರದಲ್ಲಿಯೇ ಹೆಚ್ಚಾಗಿ ಹಬ್ಬಿತು. ಕಾಶ್ಮೀರದ ಹೊರಗಿನ ಯಾವದೇ ಪ್ರಾಂತದ ಯಾವ ಪಂಡಿತರೂ ಬರೆದ ಶೈವಶಾಸ್ತ್ರದ ಯಾವ ಪುಸ್ತಕವನ್ನು ಇದುವರೆಗೆ ನಾವು ಕಂಡಿಲ್ಲ. ಶೈವಸಿದ್ಧಾಂತಕ್ಕೆ ಹೊಂದುವಂಥ ಸಿದ್ಧಾಂತಗಳುಳ್ಳ ಒಂದು ಪುಸ್ತಕವನ್ನು ಮಾತ್ರ ನಾನು ಓದಿರುವೆ. ಅದರ ಹೆಸರು ' ಶ್ರೀಆತ್ಮವಿಲಾಸ ' ಇದನ್ನು ರಚಿಸಿದವನು ಶ್ರೀಅಮೃತವಾಗ್ಭವಾಚಾರ್ಯನು. ಅಂತರ್ವೇದಿಯು (ಕನ್ಯಕುಬ್ಜವು) ಆತನ ಜನ್ಮಭೂಮಿಯು. ದಕ್ಷಿಣದಲ್ಲಿ ಮಾತ್ರ 'ಶೈವಗ್ರಂಥ' ಗಳು ಬಹಳಿವೆ ಎಂದು ಕೇಳಿಕೆ.

ಇಲ್ಲಿಯವರೆಗೆ ಶೈವದರ್ಶನದ ಸಂಕ್ಷಿಪ್ತ ಐತಿಹಾಸಿಕ ವಿವೇಚನವಾಯಿತು. ಇನ್ನು ಅದರಲ್ಲಿಯ ವಿಷಯವನ್ನು ತುಸು ಅವಲೋಕಿಸೋಣ. ಭಾರತೀಯ ದರ್ಶನಗಳಲ್ಲಿ ಮತಭೇದವುಂಟು. ಆದರೆ ಇದರಿಂದ ಋಷಿಗಳಲ್ಲಿ ಮತೈಕ್ಯವೇ ಆಗುತ್ತಿರಲಿಲ್ಲವೆಂದು ತಿಳಿಯತಕ್ಕದ್ದಲ್ಲ. ಋಷಿಗಳು ಅನೇಕ ದೃಷ್ಟಿಕೋನದಿಂದ ಅನೇಕ ಗ್ರಂಥಗಳನ್ನು ಬರೆದದ್ದರ ಉದ್ದೇಶವು ಜನರಿಗೆ ಅವರವರ ಬುದ್ಧಿಯ ಅಳವಿಗೆ ತಕ್ಕಂತೆ ಕಠಿನ ಅಥವಾ ಸರಲ ಮಾರ್ಗದಿಂದ ಸಿದ್ಧಾಂತಗಳು (ತತ್ವಗಳು) ತಿಳಿ

ಯಬೇಕೆಂದು. ನೈಯಾಯಿಕರ ಪರಮಾಣುವಾದವು ತಿಳಿದ ಬಳಿಕವೇ ಸಾಂಖ್ಯರ ಸತ್ಕಾರ್ಯವಾದವು ತಿಳಿಯುವದು. ಸತ್ಕಾರ್ಯವಾದದ ಆಕಲನವಾದ ಬಳಿಕ ವೇದಾಂತದ ವಿವರ್ತವಾದವು ಬುದ್ಧಿಗಮ್ಯವಾಗುವದು. ಅದ್ದರಿಂದ ಅಭಿನವಗುಪ್ತರ ಕಥನವು ನಿಜವೋ ಶ್ರೀ ಶಂಕರಾಚಾರ್ಯರ ಹೇಳಿಕೆಯು ನಿಜವೋ ಎಂಬ ಸಂಶಯವನ್ನು ತಳೆಯಲಾಗದು. ಇಬ್ಬರ ಹೇಳಿಕೆಯೂ ಸರಿಯಾದದ್ದು. ಒಬ್ಬರು ಒಂದು ಸಂಗತಿಯನ್ನು ಒಂದು ಬಗೆಯಿಂದ ಹೇಳಿದ್ದರೆ, ಅವನ್ನು ಮತ್ತೊಬ್ಬರು ಇನ್ನೊಂದು ಬಗೆಯಿಂದ ಹೇಳಿರುವರು. ಶ್ರೀಶಂಕರಾಚಾರ್ಯರು 'ಪರಬ್ರಹ್ಮವು ಒಂದೇ ನಿಜವಸ್ತುವಿದ್ದು ಅದೇ ಎಲ್ಲವೂ ಆಗಿದೆ' ಎಂದು ಹೇಳಿದರೆ, ಶೈವರು 'ಪರಮಶಿವನೊಬ್ಬನೇ ನಿಜವಸ್ತುವಿದ್ದು ಅವನೇ ಎಲ್ಲವೂ ಆಗಿರುವನು' ಎಂದಿರುವರು. ಅದ್ವೈತಸಿದ್ಧಾಂತದಲ್ಲಿ ಭೇದವೇನೂ ಇಲ್ಲ. ಇದ್ದರೆ, ಬರೀ ಹೆಸರಿನಲ್ಲಿ 'ಬ್ರಹ್ಮ' ಎಂಬದರ ಅಕ್ಷರಾರ್ಥವು 'ಎಲ್ಲಕ್ಕೂ ಶ್ರೇಷ್ಠ' ಎಂದು. 'ಶಿವ' ಇದರರ್ಥ 'ಕಲ್ಯಾಣ'ವೆಂದು. ಅದ್ವೈತದರ್ಶನವನ್ನು ಮತ್ತಿಷ್ಟು ಹೃದಯಂಗಮ ಮಾಡಬೇಕೆಂದು ಶೈವರು ಪ್ರಸಿದ್ಧವಾದ 'ಬ್ರಹ್ಮ' ಪದವನ್ನು ಬಿಟ್ಟು 'ಶಿವ' ಪದವನ್ನು ಗ್ರಹಿಸಿದರು. ಹೀಗೆ ಶೈವಶಾಸ್ತ್ರವೂ ಅದ್ವೈತವೇದಾಂತವೇ ಇದೆ.

ಮೂಲಸಿದ್ಧಾಂತದ ದೃಷ್ಟಿಯಿಂದ ಆಚಾರ್ಯ ಶ್ರೀಶಂಕರರಲ್ಲಿ ಮತ್ತು ಶೈವರಲ್ಲಿ ಏನೂ ಭೇದವಿಲ್ಲೆಂಬದನ್ನು ಮೇಲೆ ಉಲ್ಲೇಖಿಸಿದೆ. ಆದರೂ ಶ್ರೀಶಂಕರರ ಸಿದ್ಧಾಂತಕ್ಕಿಂತ ಶೈವಸಿದ್ಧಾಂತವು ಹೃದ್ಯವಿದ್ದದನ್ನೂ ಶೈವದರ್ಶನದ ಪ್ರತಿಪಾದನ ಶೈಲಿಯಲ್ಲಿರುವ ವೈಶಿಷ್ಟ್ಯದ ಮೂಲಕ ಅದು ಅಧಿಕಮನೋಜ್ಞವಾಗಿರುವದನ್ನೂ ಮುಂದೆ ತೋರಿಸಿಕೊಟ್ಟಿದೆ. ವಿವರ್ತವಾದವು ಜಿಜ್ಞಾಸುಗಳ ಜಿಜ್ಞಾಸೆಯನ್ನು ತೃಪ್ತಿಬಡಿಸುವದೇನೋ ನಿಜ. ಆದರೆ, ಪೂರ್ವಪಕ್ಷ ಮಾತುವವನು ಎದುರಿಗೆ ಬಂದು—"ಜಗತ್ತು ಮಿಥ್ಯವಿದ್ದರೆ, ಅದರ ಪ್ರತೀತಿಯು ಹೇಗೆ ಬರುವದು? ಪರಮಾತ್ಮನು, ನಿರ್ಗುಣ, ನಿರ್ವಿಕಾರ ಹಾಗು ಇಚ್ಛಾದಿರಹಿತನಿರಲು, ಜಗತ್ತಿನ ಉತ್ಪಾದನ, ಪಾಲನ ಹಾಗು ವಿನಾಶ ಹೇಗೆ ಮಾಡುವನು! ಅನಾದಿ ಕರ್ಮವು ಜಗದುತ್ಪತ್ತಿ ಮೊದಲಾದವುಗಳ ಕಾರಣವೆಂದು ಹೇಳಬಹುದು. ಆದರೆ ಭಗವಾನ್ ಶ್ರೀಶಂಕರಾಚಾರ್ಯರು ಕೆಲವೆಡೆ ಅನಾದಿ ಕಲ್ಪನೆಗಳಿಗೆ 'ಅಂಧಪರಂಪರೆ' ಎಂದು ಹೇಗೆ ಉಲ್ಲೇಖಿಸಿರುವರು ?" ಎಂಬ ಸಂದೇಹಗಳನ್ನು ಮುಂದಿರಿಸಬಹುದು. ಆದರೆ ಇಂಥ ಶಂಕೆಗಳನ್ನು ಶೈವ

ಆಚಾರ್ಯರ ಎದುರು ಯಾರೂ ಎತ್ತಲಾರರು. ಯಾಕಂದರೆ, ಸಂಸಾರೀಪುರುಷನಿಗೂ ಶೈವಶಾಸ್ತ್ರದ ಪಠನದಿಂದ ಇವೆಲ್ಲ ಸಂಶಯಗಳ ನಿರಸನವು ಆಗುವದು. ವಿವರ್ತವಾದವು ವಿಶೇಷಜ್ಞರನ್ನು ಸಮಾಧಾನಗೊಳಿಸುವದು; ಸಾಮಾನ್ಯರನ್ನಲ್ಲ.

ಶೈವಸಿದ್ಧಾಂತವು ಹೀಗೆ ಪ್ರತಿಪಾದಿಸುವದು — ಪರಮ ಸ್ವಾತಂತ್ರ್ಯವೇ ಪರಮಾತ್ಮ. ಅಭೇದದಲ್ಲಿ ಭೇದವನ್ನು ಪ್ರಕಟಿಸುವದು ಮತ್ತು ವಿಮರ್ಶೆಯಿಂದ ಆ ಭೇದವನ್ನು ಅಭೇದಾವಸ್ಥೆಗೆ ಒಯ್ಯುವದು ಪರಮ ಸ್ವಾತಂತ್ರ್ಯವು. ಅರ್ಥಾತ್ ಸ್ವಾತಂತ್ರ್ಯ ಸ್ವಭಾವದ ಮೂಲಕ ಸ್ವಯಂ ಪರಮೇಶ್ವರನು ಶಿವಭಾವವನ್ನೂ, ಪಶು (ಜೀವ) ಭಾವವನ್ನೂ ಸಮಸ್ತ ಪದಾರ್ಥಭಾವವನ್ನೂ ಧರಿಸುವನು. ಶಿವಭಾವದಲ್ಲಿ ಪಶುಭಾವವನ್ನೂ, ಪಶುಭಾವದಲ್ಲಿ ಶಿವಭಾವವನ್ನೂ ಮರೆಯುವಂತೆ ಮಾಡುವನು. (ಹೀಗೆ ಶಿವನಲ್ಲಿ ಮತ್ತು ಪಶುವಿನಲ್ಲಿ ಭೇದ ಹಾಗು ಪಶುಗಳಲ್ಲಿಯೂ ಪರಸ್ಪರ ಭೇದವು ಪ್ರಕಟವಾಗುವದು.) ಮತ್ತೆ ಶಿವರೂಪದಲ್ಲಿ ಸ್ವತಃ ಅಡಗಿಕೊಳ್ಳುವನು ಹಾಗು ಪಶುರೂಪದಲ್ಲಿ ತನ್ನನ್ನೇ ತಾನು ಹುಡುಕಹತ್ತುವನು. ಒಮ್ಮೊಮ್ಮೆ ಯಾವದೊಂದು ಪಶುವಿನೆದುರು ಕ್ಷಣ ಹೊತ್ತು ಪ್ರಕಟನೂ ಆಗುವನು; ಆದರೆ, ಮತ್ತೆ ಅಡಗಿಕೊಳ್ಳುವನು. ಹೀಗೆ ಬಹುಕಾಲ ಕ್ರೀಡೆಯನ್ನು ಮಾಡಿ ಕೊನೆಯಲ್ಲಿ ಪಶುವಿನ ಮೇಲೆ ಅನುಗ್ರಹ ಮಾಡುವನು. ಈ ಅನುಗ್ರಹದಿಂದ ಪಶುವಿಗೆ ಬೇಗನೆ ಸದ್ಗುರುವಿನ ಪ್ರಾಪ್ತಿಯಾಗಿ ಗುರುಕೃಪೆಯಿಂದ ಜೀವನು ತನ್ನ ಮರೆತಂಥ ರೂಪವನ್ನು ಗುರುತಿಸುವನು. ಒಮ್ಮೆ ಸ್ವಸ್ವರೂಪದ ಗುರುತು ಆದ ಬಳಿಕ ಆತನು ಮತ್ತೆ ಮೋಹವಶವಾಗಲಾರನು. ಹೀಗೆ ತಾನೇ ಅಡಗಿಸಿದ ಸ್ವಸ್ವರೂಪವನ್ನು ಪರಶಿವನು ಮತ್ತೆ ಪ್ರಕಟಿಸುವನು. ಶಿವನ ಕರ್ಮಗಳು ಐದು. ಸೃಷ್ಟಿ, ಸ್ಥಿತಿ, ಸಂಹಾರ, ವಿಧಾನ, ಅನುಗ್ರಹ. ಒಬ್ಬನೇ ಪರಮಾತ್ಮನಲ್ಲಿ ಅನೇಕತ್ವದ (೩೬ ತತ್ವಗಳನ್ನು) ಪ್ರಕಟಿಸುವದು ಹಾಗು ವಿಮರ್ಶೆಯ ಮೂಲಕ ಮತ್ತೆ ಈ ತತ್ವಗಳನ್ನು ತನ್ನಲ್ಲಿ ಲಯಗೊಳಿಸುವದು ಪರಮೇಶ್ವರನ ಸ್ವಾತಂತ್ರ್ಯ ಶಕ್ತಿಯು. ಈ ಸ್ವಾತಂತ್ರ್ಯದ ಮೂಲಕವೇ ಆತನಲ್ಲಿ ಪಂಚಕರ್ಮಗಳ ಭಾಸವಾಗುವದು. ಇಲ್ಲಿ 'ಹೇಗೆ?' ಎಂಬದಕ್ಕೆ ಸ್ಥಾನವೇ ಇಲ್ಲ. ಯಾಕಂದರೆ ಸ್ವಾತಂತ್ರ್ಯದಲ್ಲಿ 'ಹೇಗೆ?' ಎಂಬದಕ್ಕೆ ಪ್ರವೇಶವೆಲ್ಲಿ? 'ಹೇಗೆ?' ಎಂಬದು ಸ್ವಾತಂತ್ರ್ಯದ

ಪಾರತಂತ್ರ್ಯದಲ್ಲಿರುವದು. ಸ್ವಾತಂತ್ರ್ಯವೇ ಪರಮಾನಂದವು ಪರಮಾನಂದವೇ ಪರಮೇಶ್ವರನು. ಆದರೆ, ಪರಮೇಶ್ವರನ ಈ ಸ್ವಾತಂತ್ರ್ಯವು ಪೂರ್ಣ ಸ್ವಾತಂತ್ರ್ಯವಿದೆ. ಯಾವದರಲ್ಲಿ ಎಷ್ಟು ಹೆಚ್ಚು ಸ್ವಾತಂತ್ರ್ಯವೋ ಅದರಲ್ಲಿ ಅಷ್ಟು ಹೆಚ್ಚು ಶಿವತತ್ವವು ಕಂಡುಬರುವದು. (ಭಾಸಮಾನವಾಗುವದು) ಆದರೆ, ಪರಮಶಿವನ ವಾಸ್ತವಿಕ ಸ್ವರೂಪವು ಪರಮಸ್ವಾತಂತ್ರ್ಯವು ಅರ್ಥಾತ್ ಪೂರ್ಣ ಸ್ವಾತಂತ್ರ್ಯವು. ಈ ಪೂರ್ಣ ಸ್ವಾತಂತ್ರ್ಯಕ್ಕೇ ಪೂರ್ಣ ನೈರ್ಮಲ್ಯವೆಂದೂ ಅನ್ನುವರು. ಮಲವಿದ್ದಲ್ಲಿ ಪಾರತಂತ್ರ್ಯವೂ ಇರುವದು. ಆದ್ದರಿಂದ ಪೂರ್ಣ ಸ್ವಾತಂತ್ರ್ಯದಲ್ಲಿ ಮಲದ ಅಂಶವೂ ಇರದು- "ಜಗತ್ತು ಮಿಥ್ಯವಿದೆ. ಜಗತ್ತು ಇಲ್ಲವೇ ಇಲ್ಲ" ಎನ್ನುವದಕ್ಕಿಂತ 'ಜಗತ್ತುಸತ್ಯವಿದೆ, 'ಜಗತ್ತು ಶಿವ' ವಿದೆ. 'ಅದು ಶಿವನದೇ ಸ್ಥೂಲಭೌತಿಕ ರೂಪವಿದೆ' ಎನ್ನುವದು ಎಷ್ಟು ಮನೋಹರವು.! ವಿವರ್ತವಾದಕ್ಕಿಂತ ಸ್ವಾತಂತ್ರ್ಯವಾದವು ಎಷ್ಟು ಹೃದಯಗ್ರಾಹಿಯಾಗಿದೆ! ಈ ಸ್ವಾತಂತ್ರ್ಯವೇ ಪರಮೇಶ್ವರನ ಬಂಧಮೋಕ್ಷ ಕ್ರಿಯೆಗಳ ಮೂಲಕಾರಣವಿದೆ. ಕರ್ಮದ ಅನಾದಿತ್ವವನ್ನು ಹೇಳಿದ್ದು ಚಿಕ್ಕಮಕ್ಕಳ ತಿಳಿವಿಗಾಗಿ. ನಿಜವಾಗಿ ಕರ್ಮವು ಕೂಡ ಈ ಪಾರಮೇಶ್ವರೀ ಕ್ರೀಡೆಯ ಕ್ಷುದ್ರ ಅಂಗಪ್ರತ್ಯಂಗವೇ ಆಗಿದೆ. ಇದಕ್ಕಾಗಿ ಆಚಾರ್ಯ ಅಭಿನವ ಗುಪ್ತಪಾದರು 'ಪರಮಾರ್ಥ ಸಾರ"ದಲ್ಲಿ ಹೇಳುವರು:— 'ಇತಿ ಬಂಧಮೋಕ್ಷ ಚಿತ್ರಾಂ ಕ್ರೀಡಾಂ ಪ್ರತನೋತಿ ಪರಮಶಿವಃ।' ಆಚಾರ್ಯ ಉತ್ಪಲದೇವರೂ ಎನ್ನುವರು:—

" ತ್ವದಾಧ್ಯಾತ್ಮಿ ವಿಶ್ವವಂದ್ಯೋऽಸ್ಮಿನ್ನಿಯತಿಕ್ರೀಡನೇ ಸತಿ ।
ತವ ನಾಥ ಕ್ರಿಯಾನ್ ಭೂಯಾನ್ ಆನಂದ ರಸಸಂಭವಃ ॥

ಮತ್ತೂ

"ಸ್ಫಾರಯಸ್ಯಖಿಲಮಾತ್ಮನಾಸ್ಫುರನ್ । ವಿಶ್ವಮಾಮೃಶಸಿ ರೂಪಮಾಮೃಶನ್ ।
ಯತ್‌ಸ್ವಯಂ ನಿಜರಸೇನ ಘೂರ್ಣಸೇ । ತತ್‌ಸಮುಲ್ಲಸತಿ ಭಾವಮಂಡಲಮ್ ॥ "

ಈ ಪ್ರಕಾರ ಉಂಟಾದ ಈ ಸಂಸಾರದಲ್ಲಿ ಜೀವನಿಗೆ ಈಶ್ವರಾನುಗ್ರಹವಾಗಲು, ಮುಕ್ತಿ ದೊರೆಯುವದು. ಎಲ್ಲ ಉಪಾಯಗಳು (ಮೋಹ, ಭಕ್ತಿ, ತಪಸ್ಸು ಮೊದಲಾದವುಗಳು) ಈಶ್ವರಾನುಗ್ರಹವಾದ ಮೇಲೆಯೇ

ಪ್ರಾಪ್ತವಾಗುವವು. ಈ ಎಲ್ಲ ಉಪಾಯಗಳಲ್ಲಿ ಶಿವಭಕ್ತಿಯು ಅತ್ಯುಚ್ಚವಾದದ್ದು. ಭಕ್ತಿಯಿಂದ ಅಜ್ಞಾನದ ನಿವೃತ್ತಿಯಾಗುವದು. ಅಜ್ಞಾನರೂಪ ಮಲವು ನಾಶವಾದ ಬಳಿಕ ಪೂರ್ಣ ನಿರ್ಮಲ ಚಿತ್‌ಸ್ವರೂಪವು ತನ್ನ ಪೂರ್ಣಾಮಲ ರೂಪದಲ್ಲಿ ಸ್ವಯಮೇವ ಕಂಗೊಳಿಸುವದು. ಈ ಪೂರ್ಣ ನೈರ್ಮಲ್ಯಕ್ಕೆ ಪೂರ್ಣ ಸ್ವಾತಂತ್ರ್ಯಕ್ಕೆ ಮುಕ್ತಿಯೆನ್ನುವರು. ವಸ್ತುತಃ ಇದರ ಪ್ರಾಪ್ತಿಯಾಗುವದಿಲ್ಲ; ಇದು ಆತ್ಮನ ನಿಜಸ್ವಭಾವವು. ಆತ್ಮನು ಸ್ವಾಭಾವಿಕದಿಂದಲೂ ಪೂರ್ಣ ಸ್ವತಂತ್ರ ಅತಏವ ಮುಕ್ತನಿದ್ದಾನೆ. ಭಕ್ತಿಯಿಂದ ಈ ಸ್ವಾತಂತ್ರ್ಯಕ್ಕೆ ಪ್ರತಿಬಂಧರೂಪವಿರುವ ಅಜ್ಞಾನದ ನಿವೃತ್ತಿಯಾಗುವದು. ಇದಕ್ಕೇ ಮುಕ್ತಿಯೆನ್ನುವರು. ಇದನ್ನು ನಾವು ಹುಡುಕುತ್ತಿರುತ್ತೇವೆ. ಹುಡುಕುವವರು ನಾವೆಷ್ಟರವರು ? ಆ ಶಿವನೇ ನಮ್ಮಿಂದ ಹುಡುಕಹಚ್ಚುವನು. ಅಥವಾ ಶಿವನೇ ಸ್ವಯಮೇವ ನಮ್ಮ ರೂಪತಾಳಿ ತನ್ನ ಶಿವರೂಪವನ್ನು ಹುಡುಕುವನು ಎಂದೆನ್ನಬಹುದು. ಇಡೀ ದರ್ಶನದ ಸಾರವಿದು.

ಈ ಪ್ರತ್ಯಭಿಜ್ಞಾದರ್ಶನವು ಬಹಳ ವಿಸ್ತೃತವಿದೆ. ಈ ಚಿಕ್ಕ ಬರಹದಲ್ಲಿ ಅದರ ಸಾಮಾನ್ಯ ಪರಿಚಯವನ್ನು ಮಾತ್ರ ಮಾಡಿಕೊಡಲೆಳಸಿದೆ. ವಿಶೇಷ ಪರಿಚಯಕ್ಕಾಗಿ ಅದರ ಒಂದೊಂದು ಅಂಗದ ಬಗ್ಗೆ ಹಿಂದೊಂದು ಲೇಖವನ್ನು ಬರೆಯಬೇಕಾದೀತು. ಮೇಲೆ ಉಲ್ಲೇಖಿಸಿದ ಸಂಗತಿಗಳ ಬಗ್ಗೆ ಶಂಕಾಸಮಾಧಾನದ್ವಾರದಿಂದ ತುಸು ಹೆಚ್ಚು ಪ್ರಕಾಶ ಕೆಡುಹಲು ಬಯಸುವೆನು.

ಪ್ರಶ್ನೆ— ಜಗತ್ತಿನಲ್ಲಿ ಸ್ವಾತಂತ್ರ್ಯದ ಕಲ್ಪನೆಯು ಪಾರತಂತ್ರ್ಯದ ಮೂಲಕ ಉಂಟಾಗುತ್ತದೆ. ಉದಾಃ— ಇಂಗ್ಲಿಷರು ಸ್ವತಂತ್ರರಿರುವರು, ನಾವು ಪರತಂತ್ರ ಇರುವೆವು. ಹೀಗೆಯೇ ಪರಮೇಶ್ವರನು ಸ್ವತಂತ್ರನಿರುವನು; ಉಳಿದ ಎಲ್ಲ ಪದಾರ್ಥಗಳು ಪರತಂತ್ರ ಇರುವವು. ಆದ್ದರಿಂದ ಸ್ವತಂತ್ರ ಪರತಂತ್ರಗಳೆಂಬ ಎರಡು ತತ್ವಗಳನ್ನು ತಿಳಿಯುವ ಈ ಶಾಸ್ತ್ರಕ್ಕೆ ನಾವು 'ಅದ್ವೈತ' ವೆಂದು ಹೇಗೆ ಹೇಳಬಲ್ಲೆವು !

ಉತ್ತರ— ಈ ತರದ ವಿಚಾರವು ಬಲು ದೊಡ್ಡ ತಪ್ಪು. ಲೌಕಿಕ ಸ್ವಾತಂತ್ರ್ಯವು ಅಪೂರ್ಣವಿರುವದರಿಂದ ಅಪೇಕ್ಷಿತವಿರುತ್ತದೆ; ಆದರೆ ಪರಮೇಶ್ವರನ ಸ್ವಾತಂತ್ರ್ಯವು ಪೂರ್ಣ ಸ್ವಾತಂತ್ರ್ಯವಿರುವದರಿಂದ ಅಲ್ಲಿ

ಅಪೇಕ್ಷಿತತೆಗೆ ಎಡೆಯಿರುವದಿಲ್ಲ. ಉಳಿಯಿತು ದ್ವೈತದ ಸಂಬಂಧವು. ಇದರ ಉತ್ತರವು ಮೊದಲೇ ಬಂದುಹೋಗಿದೆ. ಹೇಗೆಂದರೆ—ಅದ್ವೈತ ಭಾವವಿರುವ ತನ್ನ ಅದ್ವೈತ ಸ್ವರೂಪದಲ್ಲಿಯೇ ದ್ವೈತದ ಭಾಸವನ್ನುಂಟುಮಾಡುವದೂ ಮತ್ತೆ ಈ ದ್ವೈತವನ್ನು ಅದ್ವೈತದಲ್ಲಿ ಲಯಗೊಳಿಸುವದೂ ಹೀಗೆ ಮಾಡುತ್ತಿರುವಾಗ ಯಾವಾಗಲೂ ತನ್ನ ಅದ್ವೈತಸ್ವರೂಪದಲ್ಲಿಯೇ ಸ್ಥಿರವಿರುವದೂ ಪೂರ್ಣ ಸ್ವಾತಂತ್ರ್ಯವಾಗಿದೆ. ಆದ್ದರಿಂದ ಈ ಸ್ವತಂತ್ರ್ಯವಾದಕ್ಕೆ ದ್ವೈತವು ಎಳ್ಳಷ್ಟೂ ಸೋಂಕದು.

ಪ್ರಶ್ನೆ—ಪರಮೇಶ್ವರನಲ್ಲಿರುವ ಚೈತನ್ಯಶಕ್ತಿ(ಸ್ವಾತಂತ್ರ್ಯಶಕ್ತಿ)ಯೇ ಜಗತ್ಕಾರಣವೆಂದು ತಿಳಿಯುವಿರಿ ಹೀಗೆ ನಿಮ್ಮ ಮತದಲ್ಲಿ ಶಿವ ಮತ್ತು ಶಕ್ತಿ ಎಂಬೆರಡು ತತ್ವಗಳು ಮಾನ್ಯಮಾಡಲ್ಪಡುತ್ತಿವೆ. ಹೀಗಿದ್ದು ಇದಕ್ಕೆ ದ್ವೈತವೇಕೆನ್ನಬಾರದು ?

ಉತ್ತರ— ಒಂದು ದೃಷ್ಟಾಂತ ಹೇಳುವೆವು. ಅಗ್ನಿಯಲ್ಲಿ ಜ್ವಲನಶಕ್ತಿಯಿದೆ. ಆದ್ದರಿಂದ ಅಗ್ನಿ ಮತ್ತು ದಾಹಶಕ್ತಿ ಬೇರೆ ಬೇರೆ ಯಾಗುತ್ತವೆಯೇ ? ದಾಹಶಕ್ತಿಗೆ ಅಗ್ನಿ ಎನ್ನುವರು ; ಅಗ್ನಿಯೇ ದಾಹಶಕ್ತಿ, ದಾಹಶಕ್ತಿಯೇ ಅಗ್ನಿ ಹಾಗೆಯೇ ಶಿವನೇ ಶಕ್ತಿ ; ಶಕ್ತಿಯೇ ಶಿವ. ಕೇವಲ ತಿಳುವಳಿಕೆಗಾಗಿ ಆಚಾರ್ಯರು ಎರಡು ಶಬ್ದಗಳನ್ನು ಪ್ರಯೋಗಿಸುವರು.

ಪ್ರಶ್ನೆ— ಹಾಗಾದರೆ ಅವರು ದ್ವೈತದ ಸಂಶಯ ಹುಟ್ಟಿಸುವಂಥ ಇಂಥ ಶಬ್ದಗಳನ್ನು ಉಪಯೋಗಿಸಿದ್ದೇಕೆ ? ಅದ್ವೈತಪ್ರತಿಪಾದಕ ಶಬ್ದಗಳನ್ನೇ ಏಕೆ ಪ್ರಯೋಗಿಸಲಿಲ್ಲ ?

ಉತ್ತರ— ಅಜ್ಞರ ತಿಳಿವಿಗಾಗಿ ಆಚಾರ್ಯರು ವಿವಿಧರೀತಿಯಿಂದ ಶಬ್ದಪ್ರಯೋಗಗಳನ್ನು ಮಾಡಿದ್ದುಂಟು. ದ್ವೈತಪ್ರತಿಪಾದನಕ್ಕಲ್ಲ ಸೂಕ್ಷ್ಮದೃಷ್ಟಿಯಿಂದ ನಿರೀಕ್ಷಿಸಿದರೆ ಅದ್ವೈತ ಪ್ರತಿಪಾದಕ ಶಬ್ದಗಳೂ ಪರಮೇಶ್ವರನನ್ನು ಗೊತ್ತುಮಾಡಿಕೊಡಲಾರವು ಯಾಕಂದರೆ ಆತನು ಸ್ವಾನುಭವ ವೇದ್ಯನಿರುವನು ; ಶಬ್ದಗಳ ವಿಷಯ ಅಲ್ಲ. ಕಾವ್ಯದ ರಸವು ಶಬ್ದವಾಚ್ಯ ಆಗದಂತೆ ಪರಮೇಶ್ವರನೂ ಶಬ್ದವಾಚ್ಯನಲ್ಲ. ಶಬ್ದಪ್ರಯೋಗವು ಕೇವಲ ಉಪಲಕ್ಷಣಮಾತ್ರ. ಉಪನಿಷದಗಳಲ್ಲಿ ಸ್ಪಷ್ಟವಾಗಿ ಹೇಳಿದೆ:— 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ'

ಆಚಾರ್ಯ ಉತ್ಪಲದೇವರೂ ಹೇಳುವರು:— 'ತ್ವಯಿ ನಾಸ್ತಿ ಶಕ್ತಿರಸ್ತಿ ಕಸ್ಯಾಪ್ಯೃಥವಾಸ್ತ್ಯೇವ ಯತೋಽತಿ ಸುಂದರೋಽಸಿ।' ಅರ್ಥಾತ್ 'ನೀನು ಸ್ವಾನುಭವವೇದ್ಯನು ಮಾತ್ರ. ವಾಣಿಯ ವಿಷಯ ಅಲ್ಲ; ಇದಕ್ಕಾಗಿ ಯಾರೂ ನಿನ್ನನ್ನು ಸ್ತುತಿಸಲು ಸಮರ್ಥರಲ್ಲ. ಯಾಕಂದರೆ ಸ್ತುತಿಯು ವಾಣಿಯಿಂದ ಮಾಡಲಾಗುತ್ತದೆ. ಆದ್ದರಿಂದ ನಾನು ನಿನ್ನ ಸ್ತುತಿಯನ್ನು ಹೇಗೆ ಮಾಡುತ್ತಿರುವೆನೆಂದು ಕೇಳಿದರೆ ನೀನು ಅತೀವ ಸುಂದರನಿರುತ್ತೀ. ಕಾರಣ ನಿನ್ನನ್ನು ಸ್ತುತಿಸುವ ಶಕ್ತಿ ನನ್ನಲ್ಲಿ ಅವಶ್ಯ ವಿರುತ್ತದೆ' ಎಂದು ಹೇಳುವೆನು. ಇದರ ಸಾರಾಂಶವಿಷ್ಟೇ. "ಅನುಭೂಯಮಾನ ಪರಮೇಶ್ವರನು ಚಿದಾನಂದ ಘನನಿರುವನು. ಇದೇ ಆತನ ಅತ್ಯಂತ ಸೌಂದರ್ಯವು. ಇಂಥ ಪರಮಸುಂದರ ಪರಮೇಶ್ವರನ ಸ್ತುತಿಯನ್ನು ಮಾಡುವ ಶಕ್ತಿಯು ನಮ್ಮಲ್ಲಿಲ್ಲದಿದ್ದರೂ ನಾವು ಇಂಥ ಸೌಂದರ್ಯಶಾಲಿಯ ಸ್ತುತಿಮಾಡದೆ ಇರುವದೆಂತು? ಆದ್ದರಿಂದ ನಾವು ಅವಶ್ಯ ಸ್ತುತಿಮಾಡುವೆವು. ಈ ಭಾವನೆಯಲ್ಲಿ ದ್ವೈತದ ಸ್ಪರ್ಶವುಂಟೇ?

ಪ್ರಶ್ನೆ— ಸಾಂಖ್ಯ ಶಾಸ್ತ್ರಕಾರರೂ ಈ ಪ್ರಕಾರ ಪ್ರಕೃತಿಯಿಂದ ವಿಶ್ವದ ಉತ್ಪತ್ತಿಯನ್ನೂ, ಪುನಃ ಪ್ರಕೃತಿಯಲ್ಲಿ ವಿಶ್ವದ ಲಯವನ್ನೂ ಒಪ್ಪುವರು. ಆದ್ದರಿಂದ ನಮಗೆ ನಿಮ್ಮ ಸ್ವಾತಂತ್ರ್ಯವಾದದಲ್ಲಿ ಹಾಗು ಅವರ ಪರಿಣಾಮವಾದದಲ್ಲಿ ಭೇದವೇನೂ ತಿಳಿಯುವದಿಲ್ಲ. ಪರಮೇಶ್ವರನು ಪರಿಣಾಮಿ ಇರಲು ಆತನು ಶುದ್ಧ, ಬುದ್ಧ, ನಿರ್ಮಲ, ನಿತ್ಯಮುಕ್ತ ಹೇಗೆ ಆಗುವನು?

ಉತ್ತರ— ಸಾಂಖ್ಯರ ಪರಿಣಾಮವಾದ ಹಾಗು ಶೈವರ ಸ್ವಾತಂತ್ರ್ಯವಾದ ಇವುಗಳಲ್ಲಿ ಮಹದಂತರವಿದೆ. ವಿರೂಪವು ಪರಿಣಾಮದ ದೃಷ್ಟಾಂತವು. ಹಾಲು ಮೊಸರಿನಲ್ಲಿ ಪರಿಣಮಿಸುವದು. ಆಗ ಅದಕ್ಕೆ ನಾವು ಹಾಲೆಂದು ಎಂದೂ ಅನ್ನುವದಿಲ್ಲ. ಆದರೆ ಶೈವರು ಒಂದು ಹುಲ್ಲಕಡ್ಡಿಗೂ ಎನ್ನುವರು. 'ನಮೋ ಮಹ್ಯಂಶಿವಾಯ' (ತೃಣರೂಪಿ ನನಗೆ-ಶಿವನಿಗೆ ನಮಸ್ಕಾರವು) ಇಲ್ಲಿ ತೃಣ, ನಾನು, ಶಿವ ಮೂರೂ ಒಂದೇ. ಇದೇ ಭಗವಂತನ ಸ್ವಾತಂತ್ರ್ಯವು. ಆತನು ಭಿನ್ನರೂಪಗಳಲ್ಲಿ ಇದ್ದರೂ ಅಭಿನ್ನವಿರುವನು. ಸ್ವರೂಪವು ಪರಿಣಾಮದ ಇನ್ನೊಂದು ದೃಷ್ಟಾಂತವು. ಉದಾ: ಸುವರ್ಣಪಿಂಡದಿಂದ ಕುಂಡಲಗಳನ್ನು ನಿರ್ಮಿ

ನೋಣ. ಇಲ್ಲಿ ನಾವು ಕುಂಡಲಗಳಿಗೆ ಬಂಗಾರವೆನ್ನುವದು ನಿಜ. ಆದರೆ ಆ ಬಂಗಾರವು—ಕುಂಡಲಗಳು ಯಾವದರ ಒಂದು ಭಾಗದಿಂದಾಗಿವೆ ಅದು ಇಲ್ಲಿ ಪೂರ್ಣ ಪಿಂಡವಾಗಿ ಉಳಿಯಲಿಲ್ಲ. ಪರಮೇಶ್ವರನು ತನ್ನ ಸ್ವಾತಂತ್ರ್ಯ ಶಕ್ತಿಯ ಮಹಿಮೆಯಿಂದ ತನ್ನಿಂದ ಜಗದುತ್ಪತ್ತಿಯನ್ನು ಮಾಡಿದರೂ ಸ್ವಯಂಪೂರ್ಣನಾಗಿರುವನು. ಆತನು ಪೂರ್ಣ ಭಾವದಲ್ಲಿಯಂತು ಪೂರ್ಣನಿರುವನೇ. ಅಪೂರ್ಣ ಭಾವದಲ್ಲಿಯೂ ವಸ್ತುತಃ ಪೂರ್ಣನೇ ಇರುವನು. ಆತನು ಬದ್ಧಭಾವದಲ್ಲಿಯೂ ಮುಕ್ತನಿರುವನು ಮತ್ತು ಜೀವಭಾವದಲ್ಲಿಯೂ ವಸ್ತುತಃ ಪರಮೇಶ್ವರನೇ ಇರುವನು. ಇದೆಲ್ಲವು ಆತನ ಸ್ವಾತಂತ್ರ್ಯದ ಮಹಿಮೆಯು. ವೇದಮಂತ್ರವೂ ಸ್ಪಷ್ಟವಾಗಿ ಹೇಳುವದು:- 'ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ. ಭಗವಾನ್ ಉತ್ಪಲದೇವರೂ ಎಷ್ಟು ಚಂದ ಬಣ್ಣಿಸಿರುವರು:—

> ನಮಃ ಸತತ ಬದ್ಧಾಯ ನಿತ್ಯ ನಿರ್ಮುಕ್ತಿ ಭಾಗಿನೇ ।
> ಬಂಧಮೋಕ್ಷ ವಿಹೀನಾಯ ಕಸ್ಮೈಚಿದಪಿ ಶಂಭವೇ ॥

ಅರ್ಥಾತ್ "ನಾನು ಯಾವ ಆ ಅನಿರ್ವಚನೀಯನಾದ ಶಂಭುವಿಗೆ ನಮಸ್ಕಾರ ಮಾಡುತ್ತಿರುವೆನೋ ಆತ ಸದೈವ ಬದ್ಧನಿರುವಂತೆ ಸದೈವ ಮುಕ್ತನೂ ಇರುವನು. ಹಾಗು ಬಂಧಮೋಕ್ಷಗಳೆರಡರಿಂದಲೂ ರಹಿತನಿರುವನು. ಇದೇ ಪರಮೇಶ್ವರನ ಪೂರ್ಣ ಸ್ವಾತಂತ್ರ್ಯವಾಗಿದೆ. ಇಂಥ ಸ್ವಾತಂತ್ರ್ಯದ ಅತ್ಯಲ್ಪ ವಿಚಾರದಿಂದಲೂ ಯಾವತ್ತು ದ್ವೈತ ಸಂಶಯಗಳ ನಿರಸನವಾಗುವದು. ಸಮಸ್ತ ತರ್ಕಗಳು ಮೌನದಾಳುವವು. ಹಾಗು ಯಾವತ್ತು ಸಾಂಸಾರಿಕ ಮಾನಸಕ್ಲೇಶಗಳು ಶಾಂತವಾಗುವವು.

---

# ಭಕ್ತಿ.

(ಲೇಖಕ— ಶಿವಭಕ್ತ.)

---

ಪೂರ್ವ ಪುರಾತನರ ನೂತನ ಪುರಾತನರ ಆಚಾರವಿಚಾರಗಳನ್ನು ವಿಮರ್ಶಿಸಿದರೆ ಆಚಂದ್ರಾರ್ಕವಾಗಿ ಅಳುಕದೆ ಇದ್ದ ಅವರ ಮಹಿಮೆಗಳ ಮಂದಿರಗಳು ನಿಜಭಕ್ತಿತಳಗಟ್ಟುಗಳಮೇಲೆ ಸ್ಥಿರವಾಗಿ ನಿಂತಿವೆಯೆಂಬುದು ಅವರವರ ಚರಿತ್ರೆ ಪುರಾಣ ವಚನಗಳಿಂದ ವ್ಯಕ್ತವಾಗದೆ ಇರದು. ಆಗಿನ ಕಾಲದಲ್ಲಿ ಆಗಿಹೋದ ಪುರಾತನರು ಈಗಿನ ಕಾಲದಲ್ಲಿ ಇಲ್ಲವೆಂದು ಹೇಳಲು ಬಾರದು. ಸತ್ಪುರುಷರ, ಶಿವಶರಣರ, ಶಿವಭಕ್ತರ ಅವತಾರಗಳು ಆಗಾಗ್ಗೆ ದೇಶಕಾಲ ವಸ್ತುಸ್ಥಿತಿಗನುಸರಿಸಿ ತಲೆದೋರಿ ಸಮಾಜದ ಕೊರತೆಗಳನ್ನು ಪೂರೈಸುತ್ತ ಕೀರ್ತಿಧ್ವಜವನ್ನು ಮೆರೆಯಿಸಿದ ಮೆರೆಯಿಸುವ ಸಂಗತಿಗಳು ನಮ್ಮೆಲ್ಲರ ಹೃದಯದಲ್ಲಿ ತುಂಬಿ ತುಳುಕುತ್ತಲಿವೆ. ವೀರಶೈವ ಸಮಾಜದಲ್ಲಿ ಉಚ್ಚ ಶಿಕ್ಷಣದ ಅಭಾವವನ್ನರಿತು ಲಿಂಗಾಯತ ಫಂಡನ್ನು ಸ್ಥಿರವಾಗಿ ಸ್ಥಾಪಿಸಿದ ಕೈ. ವಾ. ಗಳಾದ ಗಿಲಗಂಚಿ ಗುರುಸಿದ್ಧಪ್ಪನವರು. ಕೈ ವಾ. ಗಳಾದ ಅರಟಾಳ ರುದ್ರಗೌಡರು ಸಮಾಜಕ್ಕಾಗಿ ತಮ್ಮ ತನುಮನಧನಗಳನ್ನು ಈಡಾಡಿದರು. ಶ್ರೀಮಂತ ಕೈ. ವಾ. ಶಿರಸಂಗಿ ದೇಸಾಯಿಯವರು ವೀರಶೈವ ಸಮಾಜದ ಉಚ್ಚ ಶಿಕ್ಷಣಕ್ಕಾಗಿ ತಮ್ಮ ಸಂಸ್ಥಾನವನ್ನೇ ಧಾರೆಯೆರೆದರು. ಇವರಂತೆ ಶ್ರೀ. ಕೈ ವಾ. ಗಂಗಾಧರ ಫಂಡ, ಯಾದಗಿರಿ ಸಂಸ್ಕೃತ ಕಾಲೇಜದ ಸ್ಥಾಪಕರಾದ ಧರ್ಮವೀರ ಕೈ. ವಾ. ಶಂಕರಪ್ಪನವರ ಫಂಡುಗಳೂ ಕರ್ನಾಟಕದ ಕೇಂದ್ರಸ್ಥಳಗಳಾದ ವಿಜಾಪುರ, ಬಾಗಲಕೋಟ, ಧಾರವಾಡ, ಬೆಳಗಾವ, ಬನಹಟ್ಟಿ, ರಬಕವಿಗಳಲ್ಲಿ ಸ್ಥಾಪಿತವಾದ ಹಾಯಸ್ಕೂಲಗಳೂ ಕಾಲೇಜುಗಳೂ ಪ್ರಾಥಮಿಕ ಶಾಲೆಗಳೂ ಫ್ರೀ ಬೋರ್ಡಿಂಗುಗಳೂ ಸಂಸ್ಕೃತ ಪಾಠಶಾಲೆಗಳೂ ವೀರಶೈವ ಸಮಾಜದ ಸಂಸ್ಕೃತಿಯ ಪ್ರಗತಿಯನ್ನು ಪ್ರಕಟಗೊಳಿಸುತ್ತಲಿವೆ. ಇದಲ್ಲದೆ ಕೈ. ವಾ. ಸಕ್ಕರೆ ಕರಡೆಪ್ಪನವರು ಕೈ. ವಾ. ವಾರದ ಮಲ್ಲಪ್ಪನವರು ಶ್ರೀಮನ್ನಿರಂಜನ ಮೂರ್ತಿಗಳಾದ ಲಿಂಗೈಕ್ಯರಾದ ಹಾನಗಲ್ಲ ಕುಮಾರ ಸ್ವಾಮಿಗಳು ಇನ್ನಿತರ ಸದ್ಭಕ್ತರು ಸ್ಥಾಪಿಸಿದ ಸಂಸ್ಕೃತ ಪಾಠಶಾಲೆಗಳೂ ಶಿವಮಂದಿರವೂ ಶಿವಾನುಭವ ಸಂಘಗಳೂ ಸದ್ಧರ್ಮಸದಾಚಾರಗಳನ್ನೂ ಸದ್ಭಾವಗಳನ್ನೂ ಪ್ರಚುರ

ಗೊಳಿಸುತ್ತಲಿವೆ. ಇಷ್ಟೇ ಅಲ್ಲ. ಅಲ್ಲಲ್ಲಿ ಶಿವಾಲಯಗಳು ದೇವತಾಲಯ ಗಳು ಮಠಮಾನ್ಯಗಳು ಧರ್ಮಶಾಲೆಗಳು ಅನ್ನಛತ್ರಗಳು ಶೀತಕಿ ಶಾಲೆ ಗಳು ಶೀತಕಿ ಸಂಘಗಳು ಶಿವಾನುಭವ ಸಂಘಗಳು ಶಿವಾನುಬವದ ಪತ್ರಿಕೆ ಗಳು ಸಮಾಜೋದ್ಧಾರಕ ಗ್ರಂಥಗಳು ಪ್ರಾದುರ್ಭವಿಸಿ ಸಮಾಜ ಹಿತ ಕ್ಕಾಗಿ ತಮ್ಮ ಆಯುಷ್ಯವನ್ನು ಮೀಸಲಾಗಿಟ್ಟವರ ಕ್ರಿಯಾಜ್ಞಾನರೂಪ ಗಳೂ ಶಕ್ತಿಭಕ್ತಿಗಳೂ ವೀರಶೈವ ಪ್ರತಿಯೊಬ್ಬ ವ್ಯಕ್ತಿಯ ಹೃದಯದಲ್ಲಿ ಒಡಮೂಡಿಸದೆ ಇರವು. ಅಹಹ! ಎಂಥ ಸಮಾಜವಿದು! ಎಂಥ ಧರ್ಮವಿದು! ಎಂಥ ಔದಾರ್ಯವಿದು! ಒಬ್ಬರಲ್ಲಿ ಶಿಕ್ಷಣ ಭಕ್ತಿ ಇದ್ದರೆ ಮತ್ತೊಬ್ಬರಲ್ಲಿ ಧರ್ಮಭಕ್ತಿ. ಒಬ್ಬರಲ್ಲಿ ದೇವಭಕ್ತಿ ಇದ್ದರೆ ಮತ್ತೊಬ್ಬ ರಲ್ಲಿ ಶಿವಭಕ್ತಿ. ಒಬ್ಬರಲ್ಲಿ ಕಾಯಕಭಕ್ತಿ ಇದ್ದರೆ ಇನ್ನೊಬ್ಬರಲ್ಲಿ ಆತ್ಮಭಕ್ತಿ. ಒಬ್ಬರಲ್ಲಿ ಅಂಗಭಕ್ತಿ ಇದ್ದರೆ ಇನ್ನೊಬ್ಬರಲ್ಲಿ ಲಿಂಗಭಕ್ತಿ. ಒಬ್ಬರಲ್ಲಿ ಗುರು ಭಕ್ತಿ ಇದ್ದರೆ ಮತ್ತೊಬ್ಬರಲ್ಲಿ ಚರಭಕ್ತಿ. ಈ ಎಲ್ಲವುಗಳಲ್ಲಿ ಭಕ್ತಿಗಳ ವರ್ಗೀ ಕರಣಗಳ ಅನುಭಾವದ ಅಂಶಗಳೆಂದೇ ಹೇಳಬೇಕಲ್ಲದೆ ಮತ್ತೇನು?

ಚಂದ್ರಕಾಂತ ಶಿಲೆಯಲ್ಲಿ ಜಲವಿಲ್ಲದೆ ಶೈತ್ಯ ತೋರುವದೆಂತು? ಸೂರ್ಯಕಾಂತ ಶಿಲೆಯಲ್ಲಿ ಅಗ್ನಿಯಿಲ್ಲದೆ ಉಷ್ಣತೆಯು ಕಾಣುವದೆಂತು? ಗಗನ ಮಂಡಲದಲ್ಲಿ ಮೋಡವಿಲ್ಲದೆ ಮಹಿಗೆ ಮಳೆ ಬೀಳುವದೆಂತು? ಜೀವಿಗಳಿಗೆ ಶುದ್ಧ ಹವೆಯೂ ನೀರೂ ಸಿಗದಿದ್ದರೆ ಅವುಗಳ ಪ್ರಾಣಧಾರಣ ವೆಂತು? ವನಸ್ಪತಿಗಳಿಗೆ ಜಲಾಂಶವಿಲ್ಲದೆ ಅವು ಬೆಳೆಯುವದೆಂತು? ಹಾಲಿಲ್ಲದೆ ಹಸುಗೂಸುಗಳು ಹರಣವ ಹಿಡಿಯುವದೆಂತು? ವಿಮಾನಗ ಳಿಲ್ಲದೆ ಮನುಷ್ಯನು ಆಕಾಶ ಸಂಚಾರಿಯಾಗುವದೆಂತು? ಹಡಗಗಳಿಲ್ಲದೆ ಜನರು ಸಮುದ್ರ ಸಂಚಾರ ಮಾಡುವದೆಂತು? ಆಗಗಾಡಿ ಮೋಟಾರ ಕಾಲಗಾಡಿಗಳಿಲ್ಲದೆ ಮನುಷ್ಯನು ಸ್ವಲ್ಪ ವೇಳೆಯಲ್ಲಿ ದೂರ ಪ್ರವಾಸ ಮಾಡುವದೆಂತು? ಭೃತ್ಯಾಚಾರವಿಲ್ಲದೆ ಭಕ್ತ್ಯಾಂಕುರದ ತೋರಿಕೆಯೆಂತು? ಭಕ್ತಿಭಾವದೋರದೆ ಸದಾಚಾರದ ಸೀಮಾ ಸಮೀಪವೆಂತು? ಸದಾಚಾರ ವಿಲ್ಲದೆ ಲಿಂಗಾಚಾರದ ನೆಲೆಕಲೆಗಳು ನಿಲುಕುವವೆಂತು? ಲಿಂಗಾ ಚಾರವಿಲ್ಲದೆ ಗಣಾಚಾರದ ಗಡಿಗಾಣುವದೆಂತು? ಗಣಾಚಾರವಿಲ್ಲದೆ ಶಿವಾಚಾರದ ಸುಗ್ಗೀಕಾಲದ ಆಗಮವೆಂತು? ಒಟ್ಟಿನಲ್ಲಿ ದಶವಿಧ ಆಚಾರ ದಲ್ಲಿಯೂ ಅಷ್ಟಾವರಣಗಳ ಕ್ರಿಯೆಗಳಲ್ಲಿಯೂ ಲಿಂಗಾಂಗ ಸಾಮರಸ್ಯದ ಷಟ್‌ಸ್ಥಲಗಳ ಸಕೀಲುಗಳಲ್ಲಿಯೂ ಭಕ್ತಿಯ ಬೆಳಗು ಪದಾರ್ಥಗಳ ಪಡಿ

ನೆಳಲಿನಂತೆ, ಸೂರ್ಯ ಮತ್ತು ಅವನ ಕಿರಣಗಳಂತೆ, ಚಂದ್ರ ಮತ್ತು ಅವನ ಬೆಳದಿಂಗಳಂತೆ, ಕಾಯ ಜೀವಗಳಂತೆ, ರಸ ರುಚಿಗಳಂತೆ ಬಿಡುವಿಲ್ಲದಿದ್ದರೆ ಮಾತ್ರ ಭಕ್ತಿಯಿಂ ಮುಕ್ತಿಘಟಿಸುವದೆಂದೂ ಷಡ್ವಿಧ ಲಿಂಗ ವಳವಡಲು ಷಡ್ವಿಧ ಭಕ್ತಿಗಳ ಅವಶ್ಯವೆಂದೂ ಶಿವಭಕ್ತರಿಗೆ ಹೇಳಲವಶ್ಯವಿಲ್ಲ.

ಮನೆಯ ಜನರು ಕನಲ್ದು ಕಾತರಿಸಿ ಅನೇಕ ರೀತಿಯಿಂದ ತನು ಮನ ತಾಪಂಗೈದರೂ ತಾಪಹರ ಶ್ರೀ ಮಲ್ಲಿಕಾರ್ಜುನನ ನಂಬಿ, ನಡೆದಪ್ಪದೆ ಲಿಂಗದಡಿಯೊಳಿದ್ದು "ರಡ್ಡೀ ಸಮಾಜಕ್ಕೆ ಕಡ್ಡಿ ಬಂಗಾರವಾದರೂ ಇರ" ಲೆಂದು ಸ್ಥಿರವರವ ಪಡಕೊಂಡು ಗತಿಗಂಡ ಹೇಮರಡ್ಡಿ ಮಲ್ಲಮ್ಮನ ಭಕ್ತಿ.

ಸತ್ಕಾಯಕದಿಂದ ಶಿವಶರಣ ಮಾರ್ಗಾನುಯಾಯಿಯಾಗಿ ಗುರು ಲಿಂಗಜಂಗಮಕ್ಕೆ ತನುಮನಧನಂಗಳು ಸವಿಸುತ್ತ ಬಂದ ಗಣಂಗಳಿಗೆ ಸುಂದರ ವಸ್ತ್ರಗಳ ದಾನಂಗೈಯ್ಯುತ್ತ, ಎಂದೂ ಆಗದ ಅಮೌಲ್ಯ ವಸ್ತ್ರವ ತ್ರಿಶೂಲಧಾರಿಯಾದ ಮಹೇಶಂಗಿತ್ತು ವಸ್ತ್ರವ ಸೀಳಿಸಿಕೊಂಡು ತವ ನಿಧಿಯ ಪಡಕೊಂಡದ್ದಲ್ಲದೆ "ದಾಸನ ಕುಲ ದೆಸೆವಡರಿಸಿಕೊಂಡ" ದಾಸ ದುಗ್ಗಳೆಯರ ಭಕ್ತಿ.

ಮುದ್ದು ಮಗುವನ್ನು ಸದ್ದಿಲ್ಲದೆ ಶಿವನಿಗೆ ಸಲ್ಲಿಸಿ ಸದ್ಯೋನ್ಮುಕ್ತಿಯ ಪಡೆಕೊಂಡ ಸಿರಿಯಾಳ ಚಂಗಳೆಯರ ಅನುಪಮ ಭಕ್ತಿ.

ಕಕ್ಕಯ್ಯನ ಮನೆಯ ಒಕ್ಕುಮಿಕ್ಕಪ್ರಸಾದಕ್ಕಾಗಿ ಆತನ ಕರಣ ಪ್ರಸಾದವ ಕಡೆಬಾಗಿಲವನ್ನು ೧೨ ವರ್ಷ ಕಾಯ್ದು ಅಖಂಡ ಪ್ರಸಾದವನ್ನು ಪಡೆದ ಭಕ್ತಿಭಂಡಾರಿಯೆನಿಸಿದ ಬಸವಣ್ಣನ ಭಕ್ತಿ ಕರಗಸವು ಹೋಗುವಾಗಲೂ ಬರುವಾಗಲೂ ಕೊರೆಯುವಂತೆ ಯಾವಾಗಲೂ ತನು ಮನಧನಗಳನ್ನು ಕೊರೆದು ಸತ್ವಹರಣ ಮಾಡುವ ಭಕ್ತಿ. ಇಂಥ ಭಕ್ತಿ ಭಾವವೂ ಕ್ರಿಯೆಯೂ ಜನಸಾಮಾನ್ಯರಲ್ಲಿ ಕೋಟಿಜನ್ಮ ಪುಣ್ಯಾವಶದಿಂದಲ್ಲದೆ ತಲೆದೋರದು.

ಒಂದಾನೊಂದು ಗ್ರಾಮದಲ್ಲಿ ಗುರುದೇವ–ಗಂಗಾದೇವಿಯರೆಂಬ ದಂಪತಿಗಳಿದ್ದರು ಅವರ ಹೊಟ್ಟೇಲಿ ಸುಶೀಲೆಯೆಂಬ ಒಬ್ಬಳೇ ಮಗಳು. ಆಕೆಗೆ ಆಗಿರುವದು ೮ ವರ್ಷ. ಆಕೆಯ ವಯಸ್ಸಿಗೆ ಅನುಸರಿಸಿ ಶಾರೀ

ರಿಕ ಮಾನಸಿಕ ನೈತಿಕ ಶಿಕ್ಷಣಗಳು ಸರಿಯಾಗಿ ಸಾಗಿದ್ದವು. ಗುರು
ದೇವನ ಕಾಯಕವು ಸಾವುಕಾರರ ಅಂಗಡಿಯಲ್ಲಿ ಬರೆದುಕೊಳ್ಳುವದು.
ಗಂಗಾದೇವಿಯ ಕಾಯಕವು ಮನೆಗೆಲಸ ಮಾಡಿಕೊಂಡು ಖೋರಾ
ರೇಶ್ಮಿಯು ತೋಡುವದು. ದಂಪತಿಗಳಿಬ್ಬರೂ, ಆಚಾರಸ್ಥರೂ ಸದ್ಭಕ್ತರೂ
ಆಗಿದ್ದರು. ವೀರಶೈವ ಸದಾಚಾರ ಸಂಪತ್ತು ಇವರ ಗ್ರಹದಲ್ಲಿ ಮನೆ
ಮಾಡಿತ್ತು ಇದರಿಂದ ಸುಶೀಲೆಯಲ್ಲಿ ಸದಾಚಾರವು ಚಿಕ್ಕಂದಿನಿಂದಲೇ
ಬೆಳೆಯುತ್ತಲಿತ್ತು. ಮಡಿ ಮೈಲಿಗೆಗಳ ಜ್ಞಾನವಾಗಿತ್ತು. ತಿಂಬುಂಬುವ
ಪದಾರ್ಥಗಳು ದೊರೆತಾಗ ತನ್ನ ಲಿಂಗಕ್ಕೆ ತೋರಿಸದೆ ತಾನು ಸಲ್ಲಿ
ಸುತ್ತಿದ್ದಿಲ್ಲ. ಅವರಲ್ಲಿ ಒಂದು ಆಕಳು ಇದ್ದದರಿಂದ ಆ ಆಕಳನ್ನು
ಜಂಗುಳದನದೊಳಗೆ ಸರಿಯಾದ ವೇಳೆಗೆ ದಿನಾಲು ಅವಳೇ ಹಚ್ಚಿ
ಬರುತ್ತಿದ್ದಳು. ಊಟದ ವೇಳೆಯಲ್ಲಿ ಮಠದ ಕ್ರಿಯಾಜಂಗಮ ಮೂರ್ತಿ
ಯನ್ನು ತಾನೇ ಕರೆಯುತ್ತಿದ್ದಳು. ಅಷ್ಟಾವರಣ ಕ್ರಿಯೆಯು ನಡೆದಾಗ
ಪಾಠಸ್ತೋತ್ರ ಮಂಗಳಾರತಿಗಳನ್ನು ಮಾಡುತ್ತಿದ್ದಳು. ಕರಣಪ್ರಸಾದ
ಪಡೆಯುತ್ತಿದ್ದಳು. ಹಬ್ಬಹುಣ್ಣಿವೆಗಳಲ್ಲಿ ತರತರದ ಅಡಿಗೆಯು ಆಗು
ತ್ತಿತ್ತು. ಊಟದ ಪದಾರ್ಥಗಳಲ್ಲಿ ಹೂರಣಗಡಬಿನ ಮೇಲೆ ಸುಶೀ
ಲೆಯ ಪ್ರೀತಿ ವಿಶೇಷವಾಗಿತ್ತು. ಹಬ್ಬದ ಮುನ್ನಾದಿವಸ ತನ್ನ ತಾಯಿಗೆ
ಹೇಳಿ ತನಗೆ ಸೇರುವ ಹೂರಣಗಡಬುಗಳನ್ನೇ ಮಾಡಿಸುತ್ತಿದ್ದಳು.
ಹಬ್ಬದ ದಿವಸ ತನ್ನ ದಿನಚರ್ಯದ ಕೆಲಸಗಳಂತೆ ಎಲ್ಲ ಕೆಲಸಗ
ಳನ್ನು ಆನಂದದಿಂದ ಮಾಡಿ ಸ್ವಾಮಿಗಳ ಕೂಡ ಶಿವ ಪ್ರಸಾದವನ್ನು
ಸಲ್ಲಿಸುತ್ತಿದ್ದಳು. ಈ ಸಂದರ್ಭದಲ್ಲಿ ಕಡಬಿನ ಆಶೆಗಾಗಿ ಅಥವಾ ತನ್ನ
ಹುಟ್ಟುಸ್ವಭಾವದಂತೆ ತಾಯಿತಂದೆಗಳ ಆಜ್ಞೆಗಳಲ್ಲಿ ಅನುಕೂಲಳಾಗಿರು
ವದೇ ಶ್ರದ್ಧಾಭಕ್ತಿಯು ಆ ಆಜ್ಞೆಗಳನ್ನು ಸರಿಯಾದ ವೇಳೆಯಲ್ಲಿ ಮಾಡು
ವದೇ ನೈಷ್ಠಿಕಾಭಕ್ತಿಯು. ತಾನು ತಿಂಬುಂಬುವ ಪದಾರ್ಥಗಳನ್ನು
ಲಿಂಗದೇವರಿಗೆ ಅರ್ಪಿಸಿ ಸ್ವೀಕರಿಸುವದೇ ಸಾವಧಾನ ಭಕ್ತಿಯು. ತಾನು
ಮಾಡುವ ಕೃತ್ಯಗಳನ್ನು ಉತ್ಸಾಹದಿಂದಲೂ ತಿಳುವಳಿಕೆಯಿಂದಲೂ
ಒಂದೇ ಮನಸ್ಸಿನಿಂದಲೂ ಮಾಡುವ ಜ್ಞಾನವೇ ಅನುಭಾವಭಕ್ತಿಯು.
ಕಡಬು ತಿನ್ನುವ ಛಂದ ಆನಂದವೇ ಆನಂದ ಭಕ್ತಿಯು. ಪ್ರತ್ಯಕ್ಷ ಕಡ
ಬಿನ ರೂಪು ರುಚಿ ಸ್ಪರ್ಶ ಶಬ್ದಗಳೊಂದಿಗೆ ಕಡಬುಗಳನ್ನು ಊಟ ಮಾ
ಡುವದೇ ಸಮರಸಭಕ್ತಿ.

ಒಂದು ಪಟ್ಟಣದಲ್ಲಿ ಲಿಂಗಸೆಟ್ಟಿಯೆಂಬ ಪೂರ್ವ ವಯಸ್ಸಿನ ಪ್ರಾಮಾಣಿಕ ವೀರಶೈವ ಕಿರಾಣಿ ವ್ಯಾಪಾರಿಯಿದ್ದನು. ಆ ಊರಿಗೆ ಒಬ್ಬ ವೀರಶೈವ ಸಾತ್ವಿಕ ಸರಕಾರೀ ನೂತನ ನೌಕರದಾರನಾದ ನಂದೀಶನೆಂಬವನು ವರ್ಗಾಗಿ ಬಂದನು. ನಂದೀಶನು ತನ್ನ ಮನೆಗೆ ಬೇಕಾದ ಬೆಲ್ಲ ಜೋಳ ಮುಂತಾದ ಸಾಮಾನುಗಳನ್ನು ತನ್ನ ಚಾಕರರಿಗೆ ಹೇಳದೆ ತಾನೇ ತಂದಿಡುವವನಾಗಿದ್ದನು. ಆ ಪಟ್ಟಣದಲ್ಲಿ ಪ್ರತಿವಾರಕ್ಕೊಮ್ಮೆ ಬೇರೆ ಬೇರೆ ಕಿರಾಣಿ ಅಂಗಡಿಗಳಿಗೆ ಹೋಗಿ ತನಗೆ ಬೇಕಾದ ಸಾಮಾನುಗಳನ್ನು ತರಹತ್ತಿದನು. ಇಷ್ಟರಲ್ಲಿ ಅದನು ಯಾವ ಕಿರಾಣಿ ಅಂಗಡಿಯೂ ವಿಶ್ವಾಸಿನದಲ್ಲೆಂದು ಮನಗಂಡನು. ಕಡೆಗೆ ಒಂದು ದಿವಸ ಲಿಂಗಸೆಟ್ಟಿಯು ಕಿರಾಣಿ ಅಂಗಡಿಗೆ ಹೋಗಿ ತನಗೆ ಬೇಕಾದ ಎಲ್ಲ ಸಾಮಾನುಗಳನ್ನು ಖರೀದಿ ಮಾಡಿದನು. ಆ ಎಲ್ಲ ಸಾಮಾನುಗಳು ಉತ್ತಮತರದವೂ ಸರಿಯಾದ ತೂಕವುಳ್ಳವೂ ಒಂದೇ ಮಾತಿನ ಯೋಗ್ಯದರವುಳ್ಳವೂ ಇದ್ದವು. ಮುಂದೆ ನಂದೀಶನು ಹಲವು ಕಿರಾಣಿ ಅಂಗಡಿಗಳ ಸಾಮಾನುಗಳ ದರಗಳನ್ನು ಚೌಕಶಿ ಮಾಡಿ ಲಿಂಗಸೆಟ್ಟಿಯ ಅಂಗಡಿಯಲ್ಲಿಯೇ ಕೊಳ್ಳುತ್ತಿದ್ದನು. ಹೀಗೆ ಮೇಲಿಂದ ಮೇಲೆ ಸಾಮಾನುಗಳ ಖರೀದಿಯು ಒತ್ತಟ್ಟಿಗೆ ಮಾಡುತ್ತಿದ್ದದರಿಂದ ಅವರೀರ್ವರಲ್ಲಿ ಪರಿಚಯವು ಹೆಚ್ಚಾಗಿ ನಂಬಿಗೆ ವಿಶ್ವಾಸ ಪ್ರೇಮ ಸ್ನೇಹಭಾವಗಳು ಬಲಿಯಹತ್ತಿದವು. ಅಂಗಡಿಯಲ್ಲಿ ಗಿರಾಕಿಗಳು ಕಡಿಮೆ ಇದ್ದಾಗ ಧಾರ್ಮಿಕ ಸಂಭಾಷಣಗಳೂ ವೇದಾಂತ ಸಿದ್ಧಾಂತಗಳ ತತ್ವಗಳೂ ಶಿವಾನುಭವದ ಸಂಗತಿಗಳೂ ನಿರಭಿಮಾನದಿಂದ ಚರ್ಚಿಸಲ್ಪಡಹತ್ತಿದವು. ಅದೇ ಗ್ರಾಮದೊಳಗೆ ಹಿರೇಮಠದಲ್ಲಿ ಮಠಾಧ್ಯಕ್ಷರು ಸಂಜೆಯ ೭ ಘಂಟೆಗೆ ದಿನಂಪ್ರತಿ " ವಚನಗ್ರಂಥಗಳನ್ನು ಓದಿ ಬಂದ ಭಕ್ತರಿಗೆ ಬಿತ್ತರಿಸಿ ಮನವರಿಕೆ ಮಾಡಿಕೊಡುತ್ತಿದ್ದರು. ನಂದೀಶ ಲಿಂಗಸೆಟ್ಟಿಯವರೂ ದಿನಾಲು ತಪ್ಪದೆ ಮಠಕ್ಕೆ ಹೋಗಿ ಶಿವಶರಣರ ವಚನವಾಙ್ಮಯವನ್ನೂ ಶಿವಾನುಭವವನ್ನೂ ಶ್ರವಣಗೈದು ಮನನ ನಿಧಿಧ್ಯಾಸಂಗಳಿಗೆ ಅವಕಾಶಗೊಡಹತ್ತಿದರು. ದಿನಾಲು ಹೊತ್ತು ಸಿಕ್ಕಾಗ ಅಂಗಡಿಯಲ್ಲಿ ನಂದೀಶ ಲಿಂಗಸೆಟ್ಟಿಯರ ನಡುವೆ ಶಿವಾನುಭವದ ಗೋಷ್ಠಿಗಳು ಹೆಚ್ಚು ಹೆಚ್ಚು ಸಾಗಹತ್ತಿದವು. ತಮ್ಮ ತಮ್ಮ ಮನೆಯಲ್ಲಿಯೂ ವಚನಸಾರ ಗ್ರಂಥಗಳ ಓದುವಿಕೆಯೂ ಬೆಳೆಯಹತ್ತಿತು. ಹೀಗೆ ಒಂದೆರಡು

ಠಿಕ ಮಾನಸಿಕ ನೈತಿಕ ಶಿಕ್ಷಣಗಳು ಸರಿಯಾಗಿ ಸಾಗಿದ್ದವು. ಗುರು
ದೇವನ ಕಾಯಕವು ಸಾವುಕಾರರ ಅಂಗಡಿಯಲ್ಲಿ ಬರೆದುಕೊಳ್ಳುವದು.
ಗಂಗಾದೇವಿಯ ಕಾಯಕವು ಮನೆಗೆಲಸ ಮಾಡಿಕೊಂಡು ಖೋರಾ
ರೇಶ್ಮಿಯ ತೋಡುವದು. ದಂಪತಿಗಳಿರ್ವರೂ, ಆಚಾರಸ್ಥರೂ ಸದ್ಭಕ್ತರೂ
ಆಗಿದ್ದರು. ವೀರಶೈವ ಸದಾಚಾರ ಸಂಪತ್ತು ಇವರ ಗ್ರಹದಲ್ಲಿ ಮನೆ
ಮಾಡಿತ್ತು ಇದರಿಂದ ಸುಶೀಲೆಯಲ್ಲಿ ಸದಾಚಾರವು ಚಿಕ್ಕಂದಿನಿಂದಲೇ
ಬೆಳೆಯುತ್ತಲಿತ್ತು. ಮಡಿ ಮೈಲಿಗೆಗಳ ಜ್ಞಾನವಾಗಿತ್ತು. ತಿಂಬುಂಬುವ
ಪದಾರ್ಥಗಳು ದೊರೆತಾಗ ತನ್ನ ಲಿಂಗಕ್ಕೆ ತೋರಿಸದೆ ತಾನು ಸಲ್ಲಿ
ಸುತ್ತಿದ್ದಿಲ್ಲ. ಅವರಲ್ಲಿ ಒಂದು ಆಕಳು ಇದ್ದದರಿಂದ ಆ ಆಕಳನ್ನು
ಜಂಗುಳಿದನದೊಳಗೆ ಸರಿಯಾದ ವೇಳೆಗೆ ದಿನಾಲು ಅವಳೇ ಹಚ್ಚಿ
ಬರುತ್ತಿದ್ದಳು. ಊಟದ ವೇಳೆಯಲ್ಲಿ ಮಠದ ಕ್ರಿಯಾಜಂಗಮ ಮೂರ್ತಿ
ಯನ್ನು ತಾನೇ ಕರೆಯುತ್ತಿದ್ದಳು. ಅಷ್ಟಾವರಣ ಕ್ರಿಯೆಯು ನಡೆದಾಗ
ಪಾದಸ್ತೋತ್ರ ಮಂಗಳಾರತಿಗಳನ್ನು ಮಾಡುತ್ತಿದ್ದಳು. ಕರಣಪ್ರಸಾದ
ಪಡೆಯುತ್ತಿದ್ದಳು. ಹಬ್ಬಹುಣ್ಣಿವೆಗಳಲ್ಲಿ ತರತರದ ಅಡಿಗೆಯು ಆಗು
ತ್ತಿತ್ತು ಊಟದ ಪದಾರ್ಥಗಳಲ್ಲಿ ಹೂರಣಗಡಬಿನ ಮೇಲೆ ಸುಶೀ
ಲೆಯ ಪ್ರೀತಿ ವಿಶೇಷವಾಗಿತ್ತು. ಹಬ್ಬದ ಮುನ್ನಾದಿವಸ ತನ್ನ ತಾಯಿಗೆ
ಹೇಳಿ ತನಗೆ ಸೇರುವ ಹೂರಣಗಡಬುಗಳನ್ನೇ ಮಾಡಿಸುತ್ತಿದ್ದಳು.
ಹಬ್ಬದ ದಿವಸ ತನ್ನ ದಿನಚರ್ಯದ ಕೆಲಸಗಳಂತೆ ಎಲ್ಲ ಕೆಲಸಗ
ಳನ್ನು ಆನಂದದಿಂದ ಮಾಡಿ ಸ್ವಾಮಿಗಳ ಕೂಡ ಶಿವಪ್ರಸಾದವನ್ನು
ಸಲ್ಲಿಸುತ್ತಿದ್ದಳು. ಈ ಸಂದರ್ಭದಲ್ಲಿ ಕಡಬಿನ ಆಶೆಗಾಗಿ ಅಥವಾ ತನ್ನ
ಹುಟ್ಟುಸ್ವಭಾವದಂತೆ ತಾಯಿತಂದೆಗಳ ಆಜ್ಞೆಗಳಲ್ಲಿ ಅನುಕೂಲಳಾಗಿರು
ವದೇ ಶ್ರದ್ಧಾಭಕ್ತಿಯು ಆ ಆಜ್ಞೆಗಳನ್ನು ಸರಿಯಾದ ವೇಳೆಯಲ್ಲಿ ಮಾಡು
ವದೇ ನೈಷ್ಠಿಕಾಭಕ್ತಿಯು. ತಾನು ತಿಂಬುಂಬುವ ಪದಾರ್ಥಗಳನ್ನು
ಲಿಂಗದೇವರಿಗೆ ಅರ್ಪಿಸಿ ಸ್ವೀಕರಿಸುವದೇ ಸಾವಧಾನ ಭಕ್ತಿಯು. ತಾನು
ಮಾಡುವ ಕೃತ್ಯಗಳನ್ನು ಉತ್ಸಾಹದಿಂದಲೂ ತಿಳುವಳಿಕೆಯಿಂದಲೂ
ಒಂದೇ ಮನಸ್ಸಿನಿಂದಲೂ ಮಾಡುವ ಜ್ಞಾನವೇ ಅನುಭಾವಭಕ್ತಿಯು.
ಕಡಬು ತಿನ್ನುವ ಛಂದ ಆನಂದವೇ ಆನಂದ ಭಕ್ತಿಯು. ಪ್ರತ್ಯಕ್ಷ ಕಡ
ಬಿನ ರೂಪು ರುಚಿ ಸ್ಪರ್ಶ ಶಬ್ದಗಳೊಂದಿಗೆ ಕಡಬುಗಳನ್ನು ಊಟ ಮಾ
ಡುವದೇ ಸಮರಸಭಕ್ತಿ.

ಒಂದು ಪಟ್ಟಣದಲ್ಲಿ ಲಿಂಗಸೆಟ್ಟಿಯೆಂಬ ಪೂರ್ವ ವಯಸ್ಸಿನ ಪ್ರಾಮಾಣಿಕ ವೀರಶೈವ ಕಿರಾಣಿ ವ್ಯಾಪಾರಿಯಿದ್ದನು. ಆ ಊರಿಗೆ ಒಬ್ಬ ವೀರಶೈವ ಸಾತ್ವಿಕ ಸರಕಾರೀ ನೂತನ ನೌಕರದಾರನಾದ ನಂದೀಶ ನೆಂಬವನು ವರ್ಗವಾಗಿ ಬಂದನು. ನಂದೀಶನು ತನ್ನ ಮನೆಗೆ ಬೇಕಾದ ಬೆಲ್ಲ ಬೇಳೆ ಮುಂತಾದ ಸಾಮಾನುಗಳನ್ನು ತನ್ನ ಚಾಕರರಿಗೆ ಹೇಳದೆ ತಾನೇ ತಂದಿಡುವವನಾಗಿದ್ದನು. ಆ ಪಟ್ಟಣದಲ್ಲಿ ಪ್ರತಿವಾರಕ್ಕೊಮ್ಮೆ ಬೇರೆ ಬೇರೆ ಕಿರಾಣಿ ಅಂಗಡಿಗಳಿಗೆ ಹೋಗಿ ತನಗೆ ಬೇಕಾದ ಸಾಮಾನುಗಳನ್ನು ತರಹತ್ತಿದನು. ಇಷ್ಟರಲ್ಲಿ ಅದನು ಯಾವ ಕಿರಾಣಿ ಅಂಗಡಿಯೂ ನಿಶ್ಚಯಿಸಿನದಲ್ಲೆಂದು ಮನಗಂಡನು. ಕಡೆಗೆ ಒಂದು ದಿವಸ ಲಿಂಗಸೆಟ್ಟಿಯು ಕಿರಾಣಿ ಅಂಗಡಿಗೆ ಹೋಗಿ ತನಗೆ ಬೇಕಾದ ಎಲ್ಲ ಸಾಮಾನುಗಳನ್ನು ಖರೀದಿ ಮಾಡಿದನು. ಆ ಎಲ್ಲ ಸಾಮಾನುಗಳು ಉತ್ತಮತರದವೂ ಸರಿಯಾದ ತೂಕವುಳ್ಳವೂ ಒಂದೇ ಮಾತಿನ ಯೋಗ್ಯದರವುಳ್ಳವೂ ಇದ್ದವು. ಮುಂದೆ ನಂದೀಶನು ಹಲವು ಕಿರಾಣಿ ಅಂಗಡಿಗಳ ಸಾಮಾನುಗಳ ದರಗಳನ್ನು ಚೌಕಶಿ ಮಾಡಿ ಲಿಂಗಸೆಟ್ಟಿಯ ಅಂಗಡಿಯಲ್ಲಿಯೇ ಕೊಳ್ಳುತ್ತಿದ್ದನು. ಹೀಗೆ ಮೇಲಿಂದ ಮೇಲೆ ಸಾಮಾನುಗಳ ಖರೀದಿಯು ಒತ್ತಟ್ಟಿಗೆ ಮಾಡುತ್ತಿದ್ದದರಿಂದ ಅವರೀರ್ವರಲ್ಲಿ ಪರಿಚಯವು ಹೆಚ್ಚಾಗಿ ನಂಬಿಗೆ ವಿಶ್ವಾಸ ಪ್ರೇಮ ಸ್ನೇಹಭಾವಗಳು ಬಲಿಯಹತ್ತಿದವು. ಅಂಗಡಿಯಲ್ಲಿ ಗಿರಾಕಿಗಳು ಕಡಿಮೆ ಇದ್ದಾಗ ಧಾರ್ಮಿಕ ಸಂಭಾಷಣಗಳೂ ವೇದಾಂತ ಸಿದ್ಧಾಂತಗಳ ತತ್ವಗಳೂ ಶಿವಾನುಭವದ ಸಂಗತಿಗಳೂ ನಿರಭಿಮಾನದಿಂದ ಚರ್ಚಿಸಲ್ಪಡಹತ್ತಿದವು. ಅದೇ ಗ್ರಾಮದೊಳಗೆ ಹಿರೇಮಠದಲ್ಲಿ ಮಠಾಧ್ಯಕ್ಷರು ಸಂಜೆಯ ೭ ಘಂಟೆಗೆ ದಿನಂಪ್ರತಿ "ವಚನಗ್ರಂಥಗಳನ್ನು ಓದಿ ಬಂದ ಭಕ್ತರಿಗೆ ಬಿತ್ತರಿಸಿ ಮನವರಿಕೆ ಮಾಡಿಕೊಡುತ್ತಿದ್ದರು. ನಂದೀಶ ಲಿಂಗಸೆಟ್ಟಿಯವರೂ ದಿನಾಲು ತಪ್ಪದೆ ಮಠಕ್ಕೆ ಹೋಗಿ ಶಿವಶರಣರ ವಚನವಾಙ್ಮಯವನ್ನೂ ಶಿವಾನುಭವವನ್ನೂ ಶ್ರವಣಗೈದು ಮನನ ನಿಧಿಧ್ಯಾಸಂಗಳಿಗೆ ಅವಕಾಶಗೊಡಹತ್ತಿದರು. ದಿನಾಲು ಹೊತ್ತು ಸಿಕ್ಕಾಗ ಅಂಗಡಿಯಲ್ಲಿ ನಂದೀಶ ಲಿಂಗಸೆಟ್ಟಿಯರ ನಡುವೆ ಶಿವಾನುಭವದ ಗೋಷ್ಠಿಗಳು ಹೆಚ್ಚು ಹೆಚ್ಚು ಸಾಗಹತ್ತಿದವು. ತಮ್ಮ ತಮ್ಮ ಮನೆಯಲ್ಲಿಯೂ ವಚನಸಾರ ಗ್ರಂಥಗಳ ಓದುವಿಕೆಯೂ ಬೆಳೆಯಹತ್ತಿತು. ಹೀಗೆ ಒಂದೆರಡು

ವರ್ಷ ತಪ್ಪದಲೆ ಶಿವಾನುಭವ ಮಂಟಪದಂತಿರುವ ಮಠಕ್ಕೆ ಶ್ರದ್ಧೆಯಿಂದಲೂ ನಿಷ್ಠೆಯಿಂದಲೂ ಈರ್ವರು ಹೋಗುತ್ತಿದ್ದದರಿಂದ ಮಠಾಧ್ಯಕ್ಷರ ಕರುಣಾಕಟಾಕ್ಷವು ಈರ್ವರಲ್ಲಿಯೂ ಉಂಟಾಗಿ ಬಹಿರಂಗಾಂತರಂಗಗಳ ಅನುಭವಗಳನ್ನು ಪಡೆಯಹತ್ತಿದರು. ಇವರಾದರೂ ಸ್ವಾಮಿಗಳಲ್ಲಿ ಭಕ್ತಿಯಿಂದ ನಡೆಯಹತ್ತಿ ಪಿಂಡಸ್ಥಲ ಪಿಂಡಜ್ಞಾನಸ್ಥಲಗಳ ಜ್ಞಾನಿಗಳಾಗಿ ಸಂಸಾರ ಹೇಯಸ್ಥಲವುಳ್ಳವರಾಗಿ ಅದೇ ಸ್ವಾಮಿಗಳಿಂದ ಗುರುಕಾರುಣ್ಯಕ್ಕೆ ಪಾತ್ರರಾಗಿ ದೀಕ್ಷಾಬದ್ಧರಾದರು. ಬಳಿಕ ಭಕ್ತಸ್ಥಳದೊಳಗಿನ ೧೫ ಸ್ಥಳಗಳ ಅನುಯಾಯಿಗಳಾದರು. ಪಂಚಾಚಾರಗಳೂ ಸ್ವಾಮಿಗಳ ಅನುಗ್ರಹದಿಂದ ಅಷ್ಟಾವರಣ ಕ್ರಿಯೆಯೂ ನಡೆಯಹತ್ತಿ ಶಿವಾನುಭವ ಜ್ಞಾನವು ಅಳವಡಹತ್ತಿತು. ಷಟ್‌ಸ್ಥಲಗಳ ಸಕೀಲುಗಳ ಜ್ಞಾನವು ಗುರುಮುಖದಿಂದ ಮುಂದರಿಯುತ್ತ ನಡೆಯಿತು. ಇತ್ತ ಶಿವಾನುಭವ ಮಂಟಪಕ್ಕೆ ಇವರಂತೆ ಲಿಂಗಾಂಗಿಗಳು ಬಂದು ಬಂದು ಇವರ ಅನುಕರಣ ಮಾಡಹತ್ತಿದ್ದರಿಂದ ಅವರಲ್ಲಿ ಭಕ್ತರೂ ಮಹೇಶ್ವರೂ ಪ್ರಸಾದಿಗಳೂ ಕ್ರಮವಾಗಿ ತಲೆದೋರಹತ್ತಿದರು. ಸತ್ಕ್ರಿಯಕ ಸದಾಚಾರಗಳು ಸರಿಯಾಗಿ ನಡೆದು ಸದ್ಭಕ್ತಿಯು ಸವೆಯದಲೆ ಸಂಧಿಸಿತು. ಸದ್ಭಕ್ತಿ ಸತ್ಕ್ರಿಯೆಗಳಿಂದ ಸುಜ್ಞಾನವೂ ಲಿಂಗಾಂಗ ಸಾಮರಸ್ಯವೂ ಉಂಟಾಗಿ ಜಾತಿಭೇದವೂ ಅನ್ಯ ದೇವತಾ ಹಂಬಲವೂ ಇಲ್ಲದಂತಾದವು.

ಲಿಂಗಸೆಟ್ಟಿಯೂ ನಂದೀಶನೂ ಶಿವಾನುಭವ ಸಂಘಾಧ್ಯಕ್ಷರ ಮಠಕ್ಕೆ ದಿನಾಲು ಹೋಗಬೇಕೆಂಬ ಹಂಬಲವೂ ಅಲ್ಲಿ ನಡೆಯುವ ಪ್ರವಚನಗಳಲ್ಲಿ ತೋರಬರುವ ಶಿವತತ್ವಗಳಲ್ಲಿ ನಂಬಿಗೆಯೂ ಶ್ರದ್ಧಾಭಕ್ತಿಯನ್ನು ವ್ಯಕ್ತಗೊಳಿಸುತ್ತವೆ. ದಿನಾಲು ನಿಯಮಿತ ವೇಳೆಗೆ ಹೋಗುವ ಕ್ರಿಯೆಯಿಂದಲೂ ಆಚಾರಲಿಂಗದೊಳಗಣ ಗುರುಲಿಂಗದ ನಿಯತಾಚಾರದಿಂದಲೂ ನೈಷ್ಠಿಕಾಭಕ್ತಿಯು ಪುಷ್ಟೀಕರಿಸಲ್ಪಡುತ್ತದೆ. ಅಂತರಂಗದ ಅರ್ಚಣೆಯಾದ ಷಟ್‌ಲಿಂಗಗಳಲ್ಲಿ ನಂಬಿಗೆ, ವಿಶ್ವಾಸ, ಪ್ರೇಮ, ಪ್ರೀತಿ, ಸ್ನೇಹ, ಸಮರಸಗಳು ಅವ್ಯಾಹತವಾಗಿ ಅಳವಟ್ಟಂತೆ ಶ್ರದ್ಧಾಭಕ್ತಿ, ನೈಷ್ಠಿಕಾಭಕ್ತಿ, ಸಾವಧಾನಭಕ್ತಿ, ಅನುಭಾವಭಕ್ತಿ, ಆನಂದಭಕ್ತಿ, ಸಮರಸಭಕ್ತಿಗಳ ಅನುಭಾವವು ಅಂಗದೊಳು ಅಂಕುರಿಸಿ ರೋಮಾಂಚಾಶ್ರುಧಾರೆಗಳಿಂದ ಒಡೆದು ಕಾಣಹತ್ತಿರುತ್ತದೆ. ಇದರಂತೆ ಬಹಿರಂಗದೊಳು ನೋಡಿದರೂ ತಮ್ಮ ದಿನದ ಸತ್ಕ್ರಿಯಕವನ್ನು ಸದಾಚಾರದಿಂದ ಮುಗಿಸಿ

ವ್ಯವಹಾರಿಕ ಧಾರ್ಮಿಕ ಕೃತ್ಯಗಳಲ್ಲಿ ಶಿವಶರಣರ ನಡೆನುಡಿಗಳನ್ನನುಸರಿಸುವ ಸ್ಮರಣವೇ ಸಾವಧಾನಭಕ್ತಿ. ಲಿಂಗಭೋಗೋಪಭೋಗಗಳನ್ನು ಶಬ್ದಸ್ಪರ್ಶ ರೂಪುರುಚಿ ವಾಸನೆಗಳಲ್ಲಿ ಅನುಭೋಗಿಸುತ್ತ ಕರಣಮಥನಕ್ಕೆ ಅಸ್ಪದಕೊಡದೆ ಸದಾ ಪಂಚಪ್ರಣವದ ನಾದಾನುಸಂಧಾನವೇ ಅನುಭಾವಭಕ್ತಿ. ಪಂಚಲಿಂಗಗಳ ಮುಖದಿಂದುಂಟಾದ ಆನಂದವನ್ನು ಪಂಚಲಿಂಗಗಳ ಕೇಂದ್ರಸ್ಥಳದಂತಿರುವ ಮಹಾಲಿಂಗದೊಳು ತೋರುವ ಮಹಾನಂದವೇ ಆನಂದಭಕ್ತಿ. ಹೀಗೆ ಮಹದಲ್ಲಿ ಮನವ ನಿಲ್ಲಿಸಿ ಮನವನ್ನು ಘನಮಾಡುವ ಏಕರೂಪತೆಯೇ ಸಮರಸಭಕ್ತಿ.

ಜಲವಿಲ್ಲದೆ ಹೊಲದೊಳಗಿನ ಫಲವಿಲ್ಲದಂತೆ ಭಕ್ತಿ ಇಲ್ಲದೆ ಮುಕ್ತಿ ಇಲ್ಲೆಂಬ ಸತ್ಪುರುಷರ ಸನ್ನುಡಿಯು ಶಿವಭಕ್ತರಲ್ಲಿ ನೆಲೆಗೊಂಡು ಸಮಾಜದಲ್ಲಿ ಶಿವದಾಸೋಹವು ಕಂಗೊಳಿಸುತ್ತಲಿರುವದು. ಭಕ್ತಿಭೂಮಿಕೆಯನ್ನು ವ್ಯಕ್ತಗೊಳಿಸುವದು.

ಕೂಲಿಕುಂಬಳಿ ಮಾಡಿ ಹೊಟ್ಟೆಹೊರಕೊಳ್ಳುತ್ತಿದ್ದ ಒಬ್ಬ ಒಕ್ಕಲಿಗನು ಮಿತವ್ಯಯದಿಂದ ಸಂಸಾರ ಮಾಡಿ ತನ್ನಲ್ಲಿ ಕೂಡಿದ ಹಣದಿಂದ ಕಡಿಮೆ ಬೆಲೆಯಲ್ಲಿ ಕರಿಕೆಹತ್ತಿದ ನಾಲ್ಕು ಕೂರಿಗೆ ಹೊಲವನ್ನು ಕೊಂಡನು. ತಾನು ಒಪ್ಪತ್ತು ಕೂಲಿ ಮಾಡಿ ಉಳಿದ ಒಪ್ಪತ್ತಿನಲ್ಲಿ ತನ್ನ ಸ್ವಂತ ಹೊಲದ ನಟ್ಟು ಕಡಿಯಹತ್ತಿದನು. ತನ್ನ ಮಗನೂ ಕೈಗುಟಕಕ್ಕೆ ಬಂದದ್ದರಿಂದ ೩—೪ ವರ್ಷಗಳಲ್ಲಿ ಕೊಂಡ ಹೊಲದ ಕರಿಕೆಯು ಕಡೆಗಾಗಿ ಅಲ್ಪಸ್ವಲ್ಪ ಬೆಳೆಯುತ್ತ ಹೆಚ್ಚು ಹಣ ಸಂಗ್ರಹವಾಗಿ ಕಸುವುಳ್ಳ ಎರಡು ಎತ್ತುಗಳನ್ನು ಕೊಂಡನು. ಮನೆಯಿಂದ ತಂದೆ ಮಕ್ಕಳಿಬ್ಬರೂ ಹೊಲದ ಕೆಲಸವನ್ನು ಮನಗೊಟ್ಟು ಮಾಡಿದ್ದರಿಂದ ವರ್ಷವರ್ಷಕ್ಕೆ ಹೊಲದ ಸತ್ವವು ಹೆಚ್ಚಾಗಿ ಅನುಕೂಲ ಮಳೆಯೂ ಗಾಳಿಯೂ ಸಿಕ್ಕಂತೆ ಬೆಳೆಯು ಭರದಿಂದ ಬರಹತ್ತಿತು. ಸುತ್ತಲು ಒಡ್ಡು ಹಾಕಿ ನಡುನಡುವೆ ಪ್ಲಾಟಮಾಡಿ ಇಡೀ ಹೊಲವನ್ನು ಸಮತಳಗೈದು ಗೊಬ್ಬರಹಾಕಿ ಮಡಿಕೆ ಹೊಡೆದು ಹದನೋಡಿ ಹರಗಿ ಸಕಾಲಕ್ಕೆ ಮಳೆಯಾಗಲು ಬಿತ್ತಿ ಆಯಾಫಲಕ್ಕೆ ಸರಿಯಾದ ಎಡೆ ಹೊಡೆಯಲು ನಾಲ್ಕೆಂಟು ವರ್ಷಗಳಲ್ಲಿ ದೊಡ್ಡದೊಡ್ಡ ಒಕ್ಕಲಿಗರು ತನ್ನಷ್ಟೇ ಹೊಲದೊಳಗೆ ತರುವ ಕಾಳಿನ ಪ್ರಮಾಣಕ್ಕಿಂತ ಹೆಚ್ಚು ಕಾಳು ತರಹತ್ತಿದನು. ಜೋಳದ ಒಂದು ದಂಟಿನಲ್ಲಿ ಒಂದೇ ತೆನೆಯಾಗದೆ ಗಣಿಕೆಗಳ ಗಣ್ಣು

ಗಣ್ಣಿಗೆ ಉಣಚಿಯೊಡೆದು ಒಂದು ದಂಟಿಗೆ ೨।೩ ತೆನೆಗಳಾಗಹತ್ತಿದವು. ಹೀಗೆಯೇ ಪ್ರತಿವರ್ಷ ಹೆಚ್ಚು ಹೆಚ್ಚು ಕೆಲಸ ಮಾಡಿದಂತೆ ೧೦—೧೨ ವರ್ಷಗಳಲ್ಲಿ ದೇವರ ಕೃಪೆಯಿಂದ ಮಳೆಯು ಮನಗಂಡಾಗಲು ಒಂದೊಂದು ದಂಟಿಗೆ ೨।೩, ೪।೫, ೬।೭, ತೆನೆಗಳು ತಲೆದೋರಹತ್ತಿದವು. ಹೊಲದ ತುಂಬ ಅಡ್ಡಾಡಿ ನೋಡಲು ಒಂದು ದಂಟಿಗೆ ಮಾತ್ರ ಏಳುಗಣ್ಣುಗಳಿದ್ದು ಪ್ರತಿಯೊಂದು ಗಣ್ಣಿಗೆ ಒಂದು ಉಣಚಿಯೂ ತೀರ ಮೇಲಿನ ದೊಡ್ಡ ಉಣಚಿಯು ಹತ್ತಿರ ಅಂದರೆ ೭ನೇ ಗಣ್ಣಿಗೆ ಬೇರೆ ಎರಡು ಉಣಚಿಗಳೂ ಒಡೆದಿದ್ದವು. ಅದನ್ನು ನೋಡಿ ಒಕ್ಕಲಿಗನಿಗೆ ಅಚ್ಚರಿಯಾಯಿತು. ೬ ನೇ ಗಣ್ಣಿಗೆ ೬ ತೆನೆಗಳೂ ೭ ನೇ ಗಣ್ಣಿಗೆ ೩ ತೆನೆಗಳೂ ಭರದಿಂದ ಬೆಳೆದಿದ್ದವು. ದಂಟು ನೋಡಿದರೆ ಒಂದೇ. ತಲೆದಂಟಿನಲ್ಲಿ ನೋಡಲು ೩ ತೆನೆಗಳು. ಆರುಗಣ್ಣುಗಳಲ್ಲಿ ಬೊಡ್ಡೆಯಿಂದ ತಲೆಯವರೆಗೆ ಆರು ತೆನೆಗಳು. ಒಂಭತ್ತು ತೆನೆಗಳು ಕಾಳಿನಿಂದ ತುಂಬಿ ತೆನೆಮುತ್ತಿದ್ದವು. ಅಗ್ಗೆ ಅವನು ಬೆರಗಾಗಿ ಹನ್ನೆರಡು ವರ್ಷ ಕಷ್ಟಪಟ್ಟು ಕಾಯಕವನ್ನು ಸಾಗಿಸಿದ ಫಲವೇ ಇದೆಂದನು. ಆದರೆ ಇದರಂತೆ ಹೊಲವೆಲ್ಲ ಇದ್ದಿಲ್ಲ. ಕೋಟಿಗಟ್ಟಲೆ ದಂಟಿದ್ದರೂ ಒಂದಕ್ಕೆ ಒಂದೇ ತೆನೆ. ಕೆಲವುಗಳಲ್ಲಿ ೨-೩ ಕೆಲವುಗಳಲ್ಲಿ ೪-೫, ಕೆಲವುಗಳಲ್ಲಿ ೫-೬ ತೆನೆಗಳು ಇದ್ದದ್ದು ಕಂಡುಬಂತು. ನೆರೆ ಹೊಲದಲ್ಲಿ ಬೆಳೆಗೆ ಬಾಟಿಹಾಯ್ದು. ತೆನೆಯೇ ಇದ್ದಿಲ್ಲ. ಅವನು ೧೨ ವರ್ಷ ಶ್ರದ್ಧೆಯಿಂದಲೂ ನಿಷ್ಠೆಯಿಂದಲೂ ಕೆಲಸ ಮಾಡಿದ್ದರಿಂದ ನೆಲದೊಳಗಿನ ಜಲಾಂಶವು ೯ ತೆನೆಗಳಿಗೂ ಸರಿಯಾಗಿ ಪೂರೈಸುವಷ್ಟು ಮಣ್ಣಿನಲ್ಲಿ ಸಂಗ್ರಹವಿರಬೇಕು. ಆ ನೀರನ್ನು ಎಳೆದುಕೊಳ್ಳುವ ಶಕ್ತಿಯು ದಂಟಿನಲ್ಲಿ ಉಂಟಾಗಿರಬೇಕು. ಇಷ್ಟೇ ಅಲ್ಲ, ಬೆಳೆಗೆ ಬೇಕಾದ ಎಲ್ಲ ದ್ರವ್ಯಗಳು (ಗೊಬ್ಬರಾಂಶವು) ಮಣ್ಣಿನಲ್ಲಿ ಎಣ್ಣೆಯಂತೆ ಎರಕವಾಗಿರಬೇಕು. ಅಂದರೇನೇ ಕೆಳಗಿನ ಗಣ್ಣಿನ ಉಣಚಿಯು ದ್ರವ್ಯಗಳಿಂದೊಡಗೂಡಿದ ಜಲವನ್ನು ಹೀರಿ ಹೆಚ್ಚಾದ ಜಲವನ್ನು ತನ್ನ ಮೇಲಿನ ಮತ್ತೊಂದು ಗಣ್ಣಿನ ಉಣಚಿಗೆ ಕಳಿಸುವದು. ಅಂಶೂ ದ್ರವ್ಯ (ಶಕ್ತಿ) ರೂಪಜಲವು ೬ ಸ್ಥಲದ ೬ ತೆನೆಗಳಿಗೆ ಪೂರೈಸಿ ತಲೆದಂಟಿನೊಳಗಿನ ಮೂರು ತೆನೆಗಳಿಗೂ ಪೂರೈಸುವದರಿಂದಲೇ ಒಂಭತ್ತು ತೆನೆಗಳು ಬೆಳೆದು ಬೀಜಗಳು (ಫಲಗಳು) ಬೆಳಗುತ್ತಿರುವವೆಂಬದು ಮನವರಿಕೆಯಾಯಿತು. ಈ ಜಲಾಂಶವೇ ಭಕ್ತಿರಸವೆಂಬದು.

ಸವೆಯದ ಭಕ್ತಿರಸವಿಲ್ಲದೆ ಮುಕ್ತಿಬೀಜಬಾರದೆಂಬ ಮಾತು ಪ್ರತಿಯೊಬ್ಬ ಶಿವಾನುಭವಿಗೆ ಗೊತ್ತಾಗದೆ ಇರದು.

ನಿವೃತ್ತಿಕಲೆಯುಳ್ಳ ಕ್ರಿಯಾಶಕ್ತಿ ಶ್ರದ್ಧಾಭಕ್ತಿಗಳಿಂದ ಆಚಾರಲಿಂಗವನ್ನೂ ಪ್ರತಿಷ್ಠಾಕಲೆಯುಳ್ಳ ಜ್ಞಾನಶಕ್ತಿ ನೈಷ್ಠಿಕಾ ಭಕ್ತಿಗಳಿಂದ ಗುರುಲಿಂಗವನ್ನೂ ವಿದ್ಯಾಕಲೆಯುಳ್ಳ ಇಚ್ಛಾಶಕ್ತಿ ಸಾವಧಾನ ಭಕ್ತಿಗಳಿಂದ ಶಿವಲಿಂಗವನ್ನೂ ಶಾಂತಿಕಲೆಯುಳ್ಳ ಆದಿಶಕ್ತಿ ಅನುಭಾವ ಭಕ್ತಿಗಳಿಂದ ಜಂಗಮಲಿಂಗವನ್ನೂ ಶಾಂತ್ಯಾತೀತ ಕಲೆಯುಳ್ಳ ಪರಾಶಕ್ತಿ ಆನಂದ ಭಕ್ತಿಗಳಿಂದ ಪ್ರಸಾದಲಿಂಗವನ್ನೂ ಶಾಂತ್ಯಾತೀತೋತ್ತರ ಕಲೆಯುಳ್ಳ ಚಿಚ್ಛಕ್ತಿ ಸಮರಸಭಕ್ತಿಗಳಿಂದ ಮಹಾಲಿಂಗವನ್ನೂ ಪ್ರಭಾವಿಸುವ ಸರ್ವಸಂಪತ್ತಿನಾಚರಣೆಯ ಶಿವಾಚಾರದ ಸುಗ್ಗೀಕಾಲದ (ಶಿವಯೋಗದ) ಸುಪ್ರಸಾದದ ಬೆಳೆಯು ಪ್ರಮಥಾಧೀಶರ ಸಂಗದಿಂದಲೂ ಸಾಧನಗಳಿಂದಲೂ ಶಿವಾನುಗ್ರಹದಿಂದಲೂ ಶಿವದಾಸೋಹಗಳೊಳು ಷಟ್‌ಭಕ್ತಿಗಳಿಂದ ಹುದುಗಿದ ಉಪಾಧಿ, ನಿರುಪಾಧಿ, ಸಹಜಮಾಟಸ್ಥಳಗಳಿಂದಲೂ ಪ್ರಾಪ್ತವಾಗದೆ ಇರದೆಂಬದು ಶಿವಾನುಭವಿಗಳಿಗೆ ಹೊಳೆಯದೆ ಇರದು.

ಆದಕಾರಣ ಶಿವಾನುಭವ ಸಂಘದವರೂ ಶಿವಾನುಭವ ಪತ್ರಿಕೆಯ ಓದಿ ಮೋದಿಸುವ ಶಿವಭಕ್ತರೂ ತಮ್ಮ ತಮ್ಮ ನಡೆನುಡಿ, ಆಚಾರವಿಚಾರ, ಮಾತುಕತೆ, ಲೌಕಿಕಾಲೌಕಿಕ, ನೀತಿನಿಷ್ಠೆ, ಅಂಗಲಿಂಗಗಳನ್ನು ಸುಸಂಸ್ಕರಿಸಿ, ಸದ್ಭಕ್ತ-ಸದ್ಗುರು, ಶ್ರೀಲಿಂಗ, ಸುಜ್ಞಾನಜಂಗಮದಲ್ಲಿ ನಂಬಿಗೆ, ವಿಶ್ವಾಸ, ಪ್ರೇಮ, ಪ್ರೀತಿ, ಸ್ನೇಹ, ಸಮರಸ-ಸದ್ಭಕ್ತಿಯುಳ್ಳವರಾಗಬೇಕೆಂದು ಬಸವಾದಿ ಪ್ರಮಥರನ್ನು ಪ್ರಾರ್ಥಿಸುತ್ತೇನೆ.

## ಶಿವಶರಣರ ಚರಿತ್ರೆಗಳ ಮಹತ್ವ.

ಈಗ ನಾವು ಶಿವಶರಣರ ಚರಿತ್ರೆಗಳನ್ನು ಸಂಶೋಧನ ಮಾಡುವ ಕಾರ್ಯವನ್ನು ಕೈಕೊಂಡಿದ್ದು ಶಿವಾನುಭವದ ವಾಚಕರ ಲಕ್ಷಕ್ಕೆ ಬಂದಿರಬಹುದು. ವೀರಶೈವ ಚಳುವಳಿಯ ಇತಿಹಾಸದಲ್ಲಿ ಅವುಗಳಿಗೆ ಮಹತ್ವದ ಸ್ಥಾನವಿರುತ್ತದೆ.

ಶಿವಶರಣರ ಚರಿತ್ರೆಗಳು ಕೇವಲ ದಂತಕಥೆಗಳು, ಆದ್ದರಿಂದ ಅವುಗಳಿಗೆ ಯಾವ ಮಹತ್ವವಿಲ್ಲೆಂದು ಅನೇಕರು ಭಾವಿಸಿರಬಹುದು. ಆದರೆ ಹೀಗೆ ಇವುಗಳನ್ನು ತಿಳಿಯುವದು ಸಮಂಜಸವಾಗಲಾರದು. ಬ್ರಾಹ್ಮಣ, ಬೌದ್ಧ, ಜೈನ ಕ್ರಿಶ್ಚನ್, ಇಸ್ಲಾಮ ಮೊದಲಾದ ಎಲ್ಲ ಧರ್ಮಗಳಲ್ಲಿ ದಂತಕಥೆಗಳು ಪ್ರಚಲಿತವಿರುತ್ತವೆ. ಹಿಂದೂ ಧರ್ಮ ಗ್ರಂಥಗಳಲ್ಲಿ ಅಷ್ಟಾದಶ ಪುರಾಣಗಳೂ ಮಹಾಭಾರತ ರಾಮಾಯಣಾದಿಗಳೂ ಮಹತ್ವದ ಸ್ಥಾನವನ್ನು ಹೊಂದಿರುತ್ತವೆ. ಅವು ಆಯಾ ಸಮಾಜಗಳ ಸಂಸ್ಕೃತಿಯ ದ್ಯೋತಕವಾಗಿರುತ್ತವೆ. ಈ ದೃಷ್ಟಿಯನ್ನಿಟ್ಟುಕೊಂಡು ಶಿವಶರಣರ ಚರಿತ್ರೆಗಳ ಪರಿಶೀಲನೆ ಮಾಡಬೇಕೆಂದು ವಾಚಕರಿಗೆ ನಮ್ಮ ಸವಿನಯ ಸೂಚನೆ ಇದೆ.

ನಾವು ಶಿವಶರಣರ ಚರಿತ್ರೆಗಳನ್ನು ಪ್ರಕಟ ಮಾಡುವಲ್ಲಿ ಪುರಾತನರ ಗ್ರಂಥಗಳಲ್ಲಿ ಉಪಲಬ್ಧವಿರುವ ಸಂಗತಿಗಳನ್ನೇ ನಿರೂಪಿಸಿದ್ದೇವೆ. ಅವುಗಳಲ್ಲಿ ನಾವು ಎಷ್ಟು ಮಾತ್ರವೂ ಬದಲಾವಣೆ ಮಾಡಿಲ್ಲ. ಆದರೆ ಅವರ ಚರಿತ್ರೆಗಳಿಂದ ಯಾವ ಶಿವಾನುಭವದ ತತ್ವಗಳು ನಿಷ್ಪನ್ನವಾಗುತ್ತನೆಂಬದನ್ನು ನಾವು ಅತಿ ಸಂಕ್ಷಿಪ್ತವಾಗಿ ಅವುಗಳಲ್ಲಿ ವಿವರಿಸುತ್ತ ಬಂದಿದ್ದೇವೆ. ಶಿವಶರಣರಲ್ಲಿ ಅನೇಕರು ವಚನಕಾರರಿದ್ದಾರೆ. ಅವರ ವಚನಗಳನ್ನು ಸಹ ಮಾದರಿಗಾಗಿ ಅವರವರ ಚರಿತ್ರೆಗಳಲ್ಲಿ ಉಲ್ಲೇಖಿಸಿದ್ದೇವೆ. ಇದು ಒಂದು ಹೊಸ ಮಾದರಿಯ ಪ್ರಯತ್ನವಿರುತ್ತದೆ. ಅವುಗಳಿಂದ ಬಸವಾದಿ ಪ್ರಮಥರ ಉದಾತ್ತ ವಿಚಾರಗಳು ಎಷ್ಟರಮಟ್ಟಿಗೆ ಮತ್ತು ಹೇಗೆ ಹೇಗೆ ಕರ್ನಾಟಕ ಜನತೆಯಲ್ಲಿ ಪ್ರಸಾರ ಹೊಂದುತ್ತ ಹೋದವೆಂಬದನ್ನು ವಾಚಕರು ಅರಿತುಕೊಳ್ಳಬಹುದಾಗಿದೆ. ಈ ದೃಷ್ಟಿಯನ್ನಿಟ್ಟುಕೊಂಡು ಈ ಚರಿತ್ರೆಗಳಲ್ಲ ಪರಿಶೀಲಿಸಬೇಕೆಂದು ವಾಚಕರಿಗೆ ನಮ್ಮ ಸವಿನಯ ವಿಜ್ಞಾಪನೆ ಇದೆ.

---

ಹೀಗಿರುವಲ್ಲಿ ರೇವಣಸಿದ್ಧೇಶ್ವರನು ಮಂಗಳವಾಡದಲ್ಲಿ ಬಿಜ್ಜಳನ ಓಲಗದಲ್ಲಿ ಪ್ರಸಿದ್ಧನಾಗಿದ್ದನು. ಮುಂದೆ ಅವನಲ್ಲಿ ಪ್ರವಾಸ ಮಾಡುವ ಇಚ್ಛೆಯು ಉಂಟಾಗಲು ಅವನು ಕೊಲ್ಲಾಪುರಕ್ಕೆ ಬಂದನು. ಅಲ್ಲಿ ಅವನು ಗೋರಕ್ಷನ ಮನೆಗೆ ಬಂದು ಭಿಕ್ಷೆಯನ್ನು ಬೇಡುತ್ತಿರಲು ಗೋರಕ್ಷನು ಗರ್ವದಿಂದ ತನ್ನ ಹೆಂಡತಿಯಾದ ಚಿಕ್ಕಲಕ್ಕಾದೇವಿಯ ಕೈಯಿಂದ ಅವನ ಜೋಳಿಗೆಯಲ್ಲಿ ಒಂದು ಉಕ್ಕಿನ ಕಠಾರಿಯನ್ನು ನೀಡಿಸಿದನು. ಆಗ ರೇವಣಸಿದ್ಧೇಶ್ವರನು ಸಿಟ್ಟಿನಿಂದ ತನ್ನ ನೊಸಲಗಣ್ಣನ್ನು ತೆರೆಯಲು, ಆ ಕಠಾರಿಯು ಕರಗಿ ನೀರಾಯಿತು ಮತ್ತು ಆ ನೀರನ್ನೇ ಅವನು ಕುಡಿದುಬಿಟ್ಟನು. ಕುಡಿದುಬಿಡಲು ಆ ಕಠಾರಿಯು ಗೋರಕ್ಷನ ಎದೆಯಲ್ಲಿ ಮೂಡಿ ಅವನಿಗೆ ಅತ್ಯಂತ ವೇದನೆಯನ್ನುಂಟುಮಾಡಹತ್ತಿತು. ಆಗ ಅವನ ಇನ್ನೊಬ್ಬ ಹೆಂಡತಿಯಾದ ಹಿರಿಯ ಲಕ್ಕಾದೇವಿಯು ಪಟ್ಟಣದ ಮುಖ್ಯ ದೇವತೆಯಾದ ಮಹಾಲಕ್ಷ್ಮಿದೇವಿಗೆ ಮೊರೆಯಿಡಲು ಅವಳು ರೇವಣಸಿದ್ಧನಿದ್ದಲ್ಲಿಗೆ ಬಂದು ಗೋರಕ್ಷನನ್ನು ಕ್ಷಮಿಸೆಂದು ಹೇಳಿಕೊಳ್ಳಲಾಗಿ ಆದನ್ನು ಅವನು ಮನ್ನಿಸಿ ಗೋರಕ್ಷನ ಕಡೆಯಿಂದ ಆ ಕಠಾರಿಯನ್ನು ಉಗುಳಿಸಿದನು. ಇದಾದ ಮೇಲೆ ರೇವಣಸಿದ್ಧನು ಕೊಲ್ಲಾಪುರದಿಂದ ಕಾಶಿಗೆ ಹೊರಟುಹೋದನು.

ಹೀಗೆ ಗೋರಕ್ಷನು ರೇವಣಸಿದ್ಧೇಶ್ವರನಿಂದ ಗರ್ವಭಂಗಿತನಾಗಲು ಇನ್ನು ಮೇಲೆ ತಾನು ವಜ್ರಕಾಯನಾಗಬೇಕೆಂಬ ಬಲವಾದ ಅಪೇಕ್ಷೆಯು ಅವನಲ್ಲಿ ಹುಟ್ಟಿತು. ಆದ್ದರಿಂದ ಅವನು ಕೊಲ್ಲಾಪುರವನ್ನು ಬಿಟ್ಟು ಸಿದ್ಧರ ಬೀಡಾಗಿದ್ದ ಶ್ರೀಶೈಲ ಪರ್ವತಕ್ಕೆ ಬಂದನು. ಅಲ್ಲಿ ಅವನು ಉಗ್ರವಾದ ತಪಸ್ಸನ್ನು ಆಚರಿಸಿ ವಜ್ರಕಾಯವನ್ನು ಪಡೆದನು. ಆದರೆ ಇದರಿಂದ ಅವನು ಮೊದಲಿನಕಿಂತಲೂ ಹೆಚ್ಚಿಗೆ ಗರ್ವಿಷ್ಠನಾಗಿ ಮಾತ್ರ ವರ್ತಿಸಹತ್ತಿದನು.

ಹೀಗಿರಲು ಸಿದ್ಧಶ್ರೇಷ್ಠನಾದ ಅಲ್ಲಮಪ್ರಭುವು ಬಳ್ಳಿಗಾವಿಯಲ್ಲಿರಲು ಅವನು ಮುಂದೆ ಅನುಮಿಷದೇವನಿಂದ ವೀರಶೈವೋಪದೇಶವನ್ನು ಹೊಂದಿ ಶಿವಾನುಭವದ ಮಾರ್ಗದಂತೆ ಆಚರಿಸುತ್ತ ಕಲ್ಯಾಣ ಪಟ್ಟಣದಲ್ಲಿ ಶಿವಶರಣರನ್ನು ಕಂಡವನಾದನು. ಅಲ್ಲಿ ಕೆಲವು ಕಾಲ ಇದ್ದು ಮುಂದೆ ಅವನು ಲಿಂಗಾಂಗ ಸಾಮರಸ್ಯದ ರೀತಿಯನ್ನು ದೇಶದಲ್ಲೆಲ್ಲ ಬೋಧಿಸುತ್ತ ಶ್ರೀಶೈಲ ಪರ್ವತಕ್ಕೆ ಬರಲು ಅವನು ಅಲ್ಲಿ ಮದಾಂಧ

ನಾಗಿ ವರ್ತಿಸುತ್ತಿದ್ದ ಗೋರಕ್ಷನನ್ನು ಕಂಡನು. ಆಗ ಅವರೀರ್ವರಲ್ಲಿ ನಡೆದ ಸಂಭಾಷಣೆಯು ಏನೆಂದರೆ—

ಗೋರಕ್ಷನುಃ – "ನೀನಾರು?"

ಪ್ರಭುದೇವರುಃ – "ನಾನು ಪ್ರಭುದೇವರು"

ಗೋರಕ್ಷನುಃ— "ನೀನು ದೇವರೇ? ನೀನು ದೇವರು ಹೇಗೆ?"

ಪ್ರಭುದೇವರುಃ— "ಒಂದು ಎರಡಾಗುತ್ತದೆ. ಎರಡು ಒಂದಾಗುತ್ತದ."

ಎಂದು ತನ್ನ ನಿಜತ್ವವನ್ನು ಪ್ರಭುವು ಅವನಿಗೆ ತಿಳಿಸಿದನು.

ಗೋರಕ್ಷನುಃ – "ಒಂದು ಎರಡಾದುದ ಕಂಡಿದ್ದೇನೆ. ಆದರೆ ಎರಡು ಒಂದಾದುದ ಕಾಣೆನು."

ಪ್ರಭುದೇವರುಃ— "ಇಗೋ ಇದು ನನ್ನ ಕರಸ್ಥಲದ ಲಿಂಗವು. ಇದು ನನ್ನ ಅಂಗದಲ್ಲಿ ಅಡಗಿದೆ ನೋಡು."

ಪ್ರಭುದೇವನು ಹೀಗೆ ಹೇಳಿ ತನ್ನ ಇಷ್ಟ ಲಿಂಗವನ್ನು ತನ್ನ ಪ್ರಾಣಲಿಂಗದಲ್ಲಿ ತೋರಲು, ಆಗ

ಗೋರಕ್ಷನುಃ – "ನಿನ್ನ ಸಿದ್ಧಿಯನ್ನು ನಾನು ಕಂಡೆನು. ಆದರೆ ನನ್ನ ವಜ್ರಸಿದ್ಧಿಯನ್ನು ನಿನಗೆ ತೋರಿಸುವೆನು, ನೋಡು.

ಎಂದು ಹೇಳಿ ತನ್ನ ಕೈಯ್ಯಲ್ಲಿದ್ದ ಚಂದ್ರಾಯುಧವನ್ನು ಪ್ರಭುದೇವರ ಕೈಯಲ್ಲಿ ಕೊಟ್ಟು ಅವನಿಗೆ,

ಗೋರಕ್ಷನುಃ – "ಈ ಆಯುಧದಿಂದ ನನ್ನನ್ನು ಹೊಡೆ" ಎಂದು ಹೇಳಿದನು.

ಆಗ ಪ್ರಭುದೇವರು ತನ್ನಲ್ಲಿದ್ದ ಸಾಮರ್ಥ್ಯದಿಂದ ಗೋರಕ್ಷನನ್ನು ಹೊಡೆಯಲು ಅವನ ಶರೀರದಲ್ಲಿ 'ಖಣ್' ಎಂಬ ಶಬ್ದವು ಮಾತ್ರ ಹೊರಟು ಅದರಲ್ಲಿ ಕಿಡಿಗಳುದುರಿದವು. ಅವನ ದೇಹಕ್ಕೆ ಎಷ್ಟು ಮಾತ್ರವೂ ಅಪಾಯವಾಗಲಿಲ್ಲ.

ಆಗ ಪ್ರಭುದೇವರು— "ನಿನ್ನ ಸಿದ್ಧಿಯನ್ನು ನಾನು ಕಂಡೆನು. ಆದರೆ ಇದೇತರ ಸಿದ್ಧಿ? ಸುಡು. ಹೀಗೆ ದೇಹ ಗಟ್ಟಿಯಾದಷ್ಟು ಭವ ದೊಟ್ಟಲು" ಎಂದು ಹೇಳಿದನು.

ಪ್ರಭುದೇವರು ಹೀಗೆ ಹೇಳಿ: – "ಗೋರಕ್ಷನೇ ಇನ್ನು ಮೇಲೆ ನನ್ನ ಸಿದ್ಧಿಯನ್ನು ನೋಡು. ಇಗೋ ಈ ನಿನ್ನ ಚಂದ್ರಾಯುಧವನ್ನು ನೀನು ತೆಗೆದುಕೋ. ಅದರಿಂದ ನನ್ನನ್ನು ಹೊಡಿ" ಎಂದು ಅಂದನು.

ಹಾಗೆ ಗೋರಕ್ಷನು ಅದರಿಂದ ಪ್ರಭುದೇವರನ್ನು ಹೊಯ್ಯಲು ಅದು ಅವನಿಗೆ ಬಯಲು ಹೊಯ್ದಂತಾಯಿತು!

ಆಗ ಗೋರಕ್ಷನು–"ಪ್ರಭುವೇ ನಿನ್ನ ಸಾಮರ್ಥ್ಯವು ನನ್ನಕಿಂತಲೂ ಬಹಳ ಹೆಚ್ಚಿನದು. ನಿನ್ನ ಅಂಗವು ಲಿಂಗದಲ್ಲಿ ನಿರವಯವಾದುದನ್ನು ಕಂಡೆನು. ಈ ರೀತಿಯನ್ನು ನನಗೆ ತಿಳಿಸು."

ಹೀಗೆಂದು ಗೋರಕ್ಷನು ಅಲ್ಲಮಪ್ರಭುವಿಗೆ ಅಡ್ಡಬೀಳಲು,

ಪ್ರಭುದೇವರು– "ಗೋರಕ್ಷನೇ ನೀನು ತ್ರಿಲಿಂಗದ ರೀತಿಯನ್ನು ಅರಿತುಕೋ. ಇದು ನಿನಗೆ ತಿಳಿದಲ್ಲದೆ ಈ ನನ್ನ ಸಿದ್ಧಿಯು ನಿನಗೆ ಸಾಧಿಸದು. ಇದಕ್ಕೆ ನೀನು ಲಿಂಗಧಾರಣವನ್ನು ಹೊಂದಬೇಕು" ಎಂದು ಹೇಳಿದನು.

ಆಗ ಗೋರಕ್ಷನು ಇದಕ್ಕೆ ಒಪ್ಪಿ ಅಲ್ಲಮಪ್ರಭುವಿನಿಂದ ವೀರಶೈವ ದೀಕ್ಷೆಯನ್ನು ಪಡೆದು ಷಟ್‌ಸ್ಥಲಾಚರಣೆಯಂತೆ ಆಚರಿಸಹತ್ತಿದನು. ಆ ಮೇಲೆ ಅಲ್ಲಮಪ್ರಭುವು ಅಲ್ಲಿಂದ ಹೊರಟುಹೋದನು.

ಗೋರಕ್ಷನು ಹೀಗೆ ಶಿವಶರಣರ ಮಾರ್ಗವನ್ನು ಕೈಕೊಂಡು ಅದರಂತೆ ಆಚರಿಸುತ್ತ ತನಗುಂಟಾದ ಅನುಭವವನ್ನು ಜಗತ್ತಿಗೆಲ್ಲ ತಿಳಿಯಬೇಕೆಂದು ವಚನಗಳನ್ನು ರಚಿಸಹತ್ತಿದನು. ಅವನ ಮುದ್ರಿಕೆಯು "ಗೋರಕ್ಷಪಾಲಕ ಸಿದ್ಧಸೋಮನಾಥ" ಎಂದಿದೆ.

ಗೋರಕ್ಷನು ಈ ಪ್ರಕಾರ ಸಿದ್ಧರ ಸಿದ್ಧಮಾರ್ಗವನ್ನು ಬಿಟ್ಟು ವೀರಶೈವ ಧರ್ಮವನ್ನು ಸ್ವೀಕರಿಸಿ ಶ್ರೀಶೈಲದಲ್ಲಿಯೇ ಸಮಾಧಿಸ್ಥನಾದನು. ಅವನ ಚಿಕ್ಕದೊಂದು ದೇವಾಲಯವು ಕೊಲ್ಲಾಪುರದಲ್ಲಿ ಈಗಲೂ ಉಂಟು. ಅವನ ಹತ್ತು ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳಲ್ಲಿ ಎರಡು ವಚನಗಳನ್ನು ನಾವು ಮಾದರಿಗಾಗಿ ಇಲ್ಲಿ ಕೊಡುತ್ತೇವೆ.

## ವಚನಗಳು.

(೧) ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾದುದಿಲ್ಲ. ನಾನಾ ಕಲ್ಪಯೋಗ ಅದೃಶ್ಯ ಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೇ? ನಾನಾ ವಾಗ್ವಾದಂಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮನಿಹಿತವಾದುದಿಲ್ಲ. ನೀ ನಾನೆಂದಲ್ಲಿ ನೀನು ನಾನಾದೆಯಲ್ಲದೆ ನಾನು ನೀನಾದುದಿಲ್ಲ, ಗೋರಕ್ಷಪಾಲಕಮಹಾಪ್ರಭು ಸಿದ್ಧಸೋಮನಾಥಲಿಂಗವಾಗಿ ಆ ಲಿಂಗವೆಯಾದುದಿಲ್ಲ.

(೨) ಅವಧಿಜ್ಞಾನ, ಅಂತರಿಕ್ಷಜ್ಞಾನ, ಪವನಜ್ಞಾನ, ಪರಮಸ್ವರೂಪಜ್ಞಾನ, ಪರಬ್ರಹ್ಮಜ್ಞಾನ, ಪರತತ್ವಜ್ಞಾನ, ಸ್ವಯಂಜ್ಞಾನ, ಸ್ವಾನುಭವಜ್ಞಾನ, ಸರ್ವಪರಿಪೂರ್ಣಜ್ಞಾನ, ದಿವ್ಯಜ್ಞಾನವೆಂದು ಸಂಕಲ್ಪಿಸುವಾಗ ಆ ಆತ್ಮಕ್ಕೆ ಅದು ನಿಜವೋ? ಅದರ ಪರಿಭ್ರಮಣವೋ? ಸಕಲ ಶಸ್ತ್ರಂಗಳಿಂದ ಕಡಿವಡೆದಂಗ ಆತ್ಮ ಬಿಡುವಲ್ಲಿ, ಹಲವು ಶಸ್ತ್ರದ ಭೇದವೋ, ಲಿಂಗದಾಯುದ ಭೇದವೋ, ಎಂಬುದ ತಿಳಿದು, ಪದಪದಾರ್ಥಂಗಳ ಲಕ್ಷೀಕರಿಸಿ ನಿರೀಕ್ಷಿಸಿ ಆರೋಪಿಸಬೇಕು. ಒಂದು ವಿಶ್ವವಾದಲ್ಲಿ ವಿಶ್ವ ಒಂದಾದಲ್ಲಿ ಉಭಯದಲ್ಲಿ ನಿಂದು ಅಳಿದಲ್ಲಿ ಗೋರಕ್ಷಪಾಲಕ ಮಹಾಪ್ರಭುಸಿದ್ಧಸೋಮನಾಥ ಲಿಂಗವು ಎಂದೆನಬೇಕು.

ಮೇಲಿನ ಎರಡು ವಚನಗಳಲ್ಲಿ ಗೋರಕ್ಷನು ಶಿವಾನುಭವ ಮತ್ತು ಸಿದ್ಧರ ಸಿದ್ಧಿಗಳು ಇವುಗಳಲ್ಲಿರುವ ವ್ಯತ್ಯಾಸವನ್ನು ಬಹು ಚನ್ನಾಗಿ ನಿರೂಪಿಸಿದ್ದಾನೆ.

---

## ಮಾರಗೌಡ.

ಮಾರಗೌಡನೆಂಬ ಭಕ್ತನು ಒಕ್ಕಲುತನವನ್ನು ಮಾಡುತ್ತ ಜೀವಿಸುತ್ತಿದ್ದನು. ಅವನಲ್ಲಿ ಆಸೆ ರೋಷ ವಂಚನೆಗಳೇನೂ ಇರಲಿಲ್ಲ. ಅವನು ಲಿಂಗಾರ್ಪಿತಭಾವದಿಂದ ತನ್ನ ವ್ಯವಸಾಯವನ್ನು ನಡಿಸುತ್ತಾ ಬರುತ್ತಿದ್ದನು. ಆವನು ಹದಿನೆಂಟು ಧಾನ್ಯಗಳನ್ನು ಬೆಳೆದು ರಾಜರಿಗೆ ತೆರಿಗೆ ಹೊರೆ ಕಾಣಿಕೆ ಕಡ್ಡಾಯವನ್ನು ಮಾಡಿ ಬೆಳೆದ ದವಸದಲ್ಲಿ ರಾಜಪಾಲೆಂದು ಕೋರನಿಕ್ಕಿ ತನಗೆ ಉಳಿದ ಧಾನ್ಯದಲ್ಲಿ ದಾಸೋಹಭಾವದಿಂದ ಜನಗಳಿಗೆ ಮಾಡಿ ನೀಡಿ ಕೀರ್ತಿವಂತನಾಗಿದ್ದನು. ಇದರಿಂದ

ಅವನ ಕರ್ಮಗಳೆಲ್ಲ ಹರಿದು ಅಂಗಲಿಂಗ ಸಾಮರಸ್ಯ ಸ್ಥಿತಿಯು ಪ್ರಾಪ್ತ ವಾಗಲು ಪರಮಾತ್ಮನು ಪ್ರೀತನಾಗಿ ಜಂಗಮವೇಷಧಾರಣ ಮಾಡಿ ಕೊಂಡು ಮಾರಗೌಡನು ನೆಲ್ಲ ರಾಶಿಯನ್ನು ತೂರುವ ಸಮಯದಲ್ಲಿ ಅಲ್ಲಿಗೆ ಬಂದು ಕಣದಲ್ಲಿ ನಿಂದು, "ಎಲೋ ಮಾರಗೌಡನೇ,. ನಾನು ನಿನಗೆ ಪ್ರೀತನಾದೆನು. ನಿನ್ನ ಕಷ್ಟಗಳನ್ನು ಪರಿಹಾರ ಮಾಡುತ್ತೇನೆ. ನಿನ್ನ ಧನವು ಹುಲುಸಾಗುವದಕ್ಕೆ ನಾನು ನಿನಗೆ ಒಂದು ಪರುಷ ವನ್ನು ಕೊಡುತ್ತೇನೆ. ನೀನು ಈ ಪರುಷವನ್ನು ಕಬ್ಬಿನಕ್ಕೆ ಮುಟ್ಟಿಸಿ ಚಿನ್ನವ ಮಾಡಿ ಸುಖಿಯಾಗಿ ಬಾಳು" ಎಂದು ಹೇಳಿ ಅದನ್ನು ಕೊಡ ಹೋಗಲು ಮಾರಗೌಡನು "ಅದು ನನಗೆ ಬೇಡ" ಎಂದು ಹೇಳಿ ತನ್ನ ತೂರುವ ಕೆಲಸದಲ್ಲಿ ತೊಡಗಿದನು. ಜಂಗಮನಾದರೂ ಅಲ್ಲಿಂದ ಹೋಗದೆ ಅವನನ್ನು ನೋಡುತ್ತ ಅಲ್ಲಿಯೇ ಕುಳಿತುಬಿಟ್ಟನು. ಆಗ ಮಾರಗೌಡನು ತನ್ನ ಶಿವಾನುಭವದ ಮಹಿಮೆಯನ್ನು ಆ ಜಂಗಮನಿಗೆ ತಿಳಿಸಬೇಕೆಂದು ಬಯಸಿ, ಅವನು ತನ್ನ ನೆಲ್ಲನ್ನೆಲ್ಲ ತೂರಿ, ಅದರ ಸುತ್ತಲೂ ಬೂದಿ ಯನ್ನು ತಳಿದು, ತನ್ನ ಮನಸ್ಸೆಂಬ ಪರುಷದಿಂದ ನೆನೆಯಲು ಅಲ್ಲಿ ಬಿದ್ದಿದ್ದ ರಾಶಿ ಎಲ್ಲವು ಹೊನ್ನ ರಾಶಿಯಾಯಿತು! ಆಗ ಅವನು ಆ ರಾಶಿ ಯನ್ನು ಆ ಜಂಗಮನಿಗೆ ತೋರಿಸಿ, "ಎಲೋ ಜಂಗಮನೇ, ನೀನು ನನಗೆ ಪರುಷವನ್ನು ಕೊಡಲು ಬಂದಿರುವಿ. ಆದರೆ ಇಗೋ, ಈ ನನ್ನ ಮನಪರುಷದಿಂದ ಕಾಳು ಹೊನ್ನಿನ ರಾಶಿಯಾಗಿದೆ. ಇದನ್ನು ನಿನಗೆ ದಾನಕೊಡುತ್ತೇನೆ. ಒಡೆಯರೇ, ದಯವಿಟ್ಟು ತೆಗೆದುಕೊಂಡು ಹೋಗಿರಿ" ಎಂದು ಮೊರದಲ್ಲಿ ಹೊನ್ನನ್ನು ತುಂಬಿ ಅವನ ಮುಂದೆ ಮಡಗಿದನು. ಆಗ ಶಿವನು ನಾಚಿ, ನನ್ನ ಭಕ್ತರಿಗೆ ರೆಂಟೆಹೊಡೆದು ಬಿತ್ತಿ ಬೆಳೆದ ಧಾನ್ಯವು ಮನವೆಂಬ ಪರುಷದಿಂದ ಹೊನ್ನ ರಾಶಿಯಾಯಿತ್ತು ಎಂದು ತಿಳಿದು ಶಿವಭಕ್ತರ ಕಾಯಕದ ರೀತಿಯನ್ನು ಹೊಗಳುತ್ತ ಕೈಲಾಸದತ್ತ ಹೊರಟುಹೋದನು.

'ಚಿತ್ತಶುದ್ಧನಾಗಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತನೋಡಿ ದತ್ತ ಲಕ್ಷ್ಮಿ ತಾನಾಗಿಪ್ಪಳು' ಎಂಬ ಶಿವಶರಣರ ವಾಕ್ಯವನ್ನು ಮಾರ ಗೌಡನು ತನ್ನ ನಡೆಯಿಂದ ಸ್ಥಿರಪಡಿಸಿ ಜಗತ್ತಿಗೆ ತೋರಿ ಪ್ರಸಿದ್ಧ ನಾದನು.

---

# ಸಪ್ಪೆಯಲ್ಲಮದೇವ.

ಸಿದ್ಧನಕೆರೆ ಎಂಬ ಗ್ರಾಮದಲ್ಲಿ ಅಲ್ಲಮದೇವನೆಂಬೊಬ್ಬ ಶಿವಶರಣನು ವಾಸಮಾಡಿಕೊಂಡಿದ್ದನು. ಅವನು ಇಷ್ಟಲಿಂಗಧಾರಕನಾಗಿ ತ್ರಿಲಿಂಗಗಳ ನಿಜವನ್ನರಿತು ಜಂಗಮದಾಸೋಹವನ್ನು ನಡಿಸುತ್ತ ಬರುತ್ತಿದ್ದನು. ಅವನು ಬಸವಾದಿಪ್ರಮಥರ ಖ್ಯಾತಿಯನ್ನು ಕೇಳಿ ಅವರ ಸನ್ನಿಧಿಯಲ್ಲಿರಲು ಅಪೇಕ್ಷಿಸಿ ತನ್ನ ಗ್ರಾಮವನ್ನು ಬಿಟ್ಟು ಕಲ್ಯಾಣಪಟ್ಟಣದಲ್ಲಿ ಬಂದಿರಹತ್ತಿದನು. ಆದರೆ ಅವನು ಅಲ್ಲಿ ಭಿಕ್ಷಾರ್ಥಿಯಾಗಿರದೆ ಕುರುಳು (ಬೆರಣಿ) ಮಾರಿ ಹಣ ತಂದು ತನ್ನ ನಿರ್ವಾಹ ಸಾಗಿಸುವ ಕಾಯಕವನ್ನು ಪ್ರಾರಂಭಿಸಿದನು. ಹೀಗೆ ಅವುಗಳನ್ನು ಮಾರಿ ಬಂದ ಹಣವನ್ನು ಲಿಂಗಾರ್ಪಿತದಿಂದ ಸೇವಿಸುತ್ತ ಉಳಿದದ್ದನ್ನು ಜಂಗಮರಿಗೆ ದಾಸೋಹಕಾರ್ಯ ಮಾಡುವಲ್ಲಿ ಉಪಯೋಗಿಸುವನು.

ಕಾಯಕದ ಈ ರೀತಿಯನ್ನು ಅವನು ಅನುಸರಿಸುತ್ತಿರುವಾಗ ತನ್ನ ಅಂಗದ ಆಶೆ ಆಕಾಂಕ್ಷೆಗಳನ್ನು ತಡೆಯಲಪೇಕ್ಷಿಸಿ ತನ್ನ ಆಹಾರದಲ್ಲಿ ಲವಣವನ್ನು ವರ್ಜಿಸಿ ಊಟಮಾಡಹತ್ತಿದನು. ಹೀಗೆ ಅವನು ಅನೇಕ ದಿನ ವರ್ತಿಸಹತ್ತಲು, ಅವನಿಗೆ ಲೋಕದಲ್ಲಿ 'ಸಪ್ಪೆಯಲ್ಲಮದೇವ' ಎಂಬ ಹೆಸರು ಪ್ರಾಪ್ತವಾಯಿತು.

ಹೀಗೆ ಸಪ್ಪೆಯಲ್ಲಮದೇವನು ಆಚರಿಸುತ್ತಿರಲು, ಅವನು ಶಿವಶರಣರ ಸೇವೆಯನ್ನು ಮಾಡಲಪೇಕ್ಷಿಸಿದವನಾಗಿ ಲಿಂಗಜಂಗಮಕ್ಕೆ ವೀಳೆಯವನ್ನು ನೀಡಬೇಕೆಂಬ ಬೇರೊಂದು ನಿಯಮವನ್ನು ಮಾಡಿಕೊಂಡು ಅದನ್ನು ನಡಿಸುವವನಾದನು. ಆದರೆ ಹೀಗೆ ಭಕ್ತರು ನಿಯಮಗಳನ್ನು ಕೈಕೊಂಡ ಬಳಿಕ ಪರಮಾತ್ಮನು ಅವರನ್ನು ಪರೀಕ್ಷಿಸಿ ನೋಡುವನೆಂಬ ಶಿವಶರಣರ ನುಡಿಗಳುಂಟು. ಪರಮಾತ್ಮನು ಹೀಗೆ ಆಚರಿಸುವವರನ್ನು ಅನೇಕ ರೀತಿಯಾಗಿ ಕಾಡಿನೋಡುತ್ತಾನೆ. ಆದ್ದರಿಂದ ಅವನು ಅಲ್ಲಮದೇವನಿಗೆ ಸಮೀಪದಲ್ಲಿ ಅಡಿಕೆಯು ಎಲ್ಲಿಯೂ ದೊರೆಯದಂತೆ ಮಾಡಿದನು. ಆಗ ಅಲ್ಲಮನು ನಾಲ್ಕು ಮೂರು ಯೋಜನ ದಾರಿ ನಡೆದು ತನ್ನ ವೀಳೆಯದ ನೇಮವನ್ನು ನಡಿಸಹತ್ತಿದನು. ಇದರಲ್ಲಿ ಅವನು ಎಷ್ಟು ಮಾತ್ರವೂ ಬೇಸರಿಯಲಿಲ್ಲ.

ಹೀಗಿರಲು ಮುಂದೆ ಪರಮಾತ್ಮನು ಅವನ ಜೀವನಕ್ಕೆ ಅವಶ್ಯವಾಗಿ ಬೇಕಾಗುವ ಕುರುಳೂ ಸಹ ಸಮೀಪದಲ್ಲಿ ದೊರೆಯದಂತೆ

ಮಾಡಿದನು. ಆದರೆ ಸಪ್ಪೆಯಲ್ಲಮನು ದೂರ ದೂರ ಹೋಗಿ ಅವುಗಳನ್ನು ಹುಡಿಕಿಕೊಂಡು ಬಂದು ತನ್ನ ಕಾಯಕವನ್ನು ನಡಿಸಹತ್ತಿದನು. ಹೀಗಿರುವಲ್ಲಿ ಒಂದು ದಿನ ಈ ಕುರುಳೂ ಸಹ ಅವನಿಗೆ ದೊರೆಯದೆ ಹೋಯಿತು! ಅಗ ಅವನು ಎಲ್ಲ ಕಡೆಗೂ ಸುತ್ತುತ್ತ ತಿರುಗುತ್ತ ಬಳಲಿಬೆಂಡಾಗಿ ಕಾಡಿನಲ್ಲಿ ಒಂದು ನದೀತೀರದಲ್ಲಿ ಚಿಂತಾಕ್ರಾಂತನಾಗಿ ಕುಳಿತುಬಿಟ್ಟನು. ಆದರೆ ಬಸವೇಶ್ವರನು ಯಾವಾಗಲೂ ಭಕ್ತರಾಚಾರಕ್ಕೆ ಪ್ರಾಣವಾದವನು. ಅವನು ಅಡವಿಯಲ್ಲಿ ಸಪ್ಪೆಯಲ್ಲಮದೇವನು ಹೀಗೆ ಕಷ್ಟಪಡುತ್ತಿರುವದನ್ನು ಭಾವದಿಂದ ತಿಳಿದವನಾಗಿ ಸೇವಕರನ್ನು ಅಲ್ಲಮನಲ್ಲಿಗೆ ಕಳಿಸಿ ಅವನನ್ನು ತನ್ನಲ್ಲಿಗೆಬರಮಾಡಿಕೊಂಡು, ತನ್ನ ದನಕರುಗಳನ್ನು ತರುಬುವ ಮಂದಿರವನ್ನು ಅವನಿಗೆ ತೋರಿಸಿ, ಇನ್ನುಮೇಲೆ ಇಲ್ಲಿ ದೊರೆಯುವ ಸಗಣಿಯಿಂದಲೇ ಕುರುಳುಗಳನ್ನು ಮಾಡುತ್ತ ಅವುಗಳನ್ನು ಮಾರಿ ನಿನ್ನ ಕಾಯಕವನ್ನು ನಡಿಸು ಎಂದು ಹೇಳಿದನು. ಆಮೇಲೆ ಅಲ್ಲಮನು ತನ್ನ ಕಾಯಕವನ್ನು ನಡಿಸುತ್ತ ಬಂದನು.

ಈ ಪ್ರಕಾರ ಶಿವಶರಣರು ಕೆಲವೊಂದು ಕಾಯಕವನ್ನು ಕೈಕೊಂಡು ದಾಸೋಹವನ್ನು ನಡಿಸಿದಲ್ಲಿ ಅದು ಸದಾಚಾರವೆನಿಸುವದು. ಆದರೆ ಅವರು ಕೆಲವೊಂದು ವಿಶಿಷ್ಟ ವ್ರತವನ್ನು ನಡಿಸಿದಲ್ಲಿ ಅದು ನಿಯತಾಚಾರವೆನಿಸುವದು. ಹೀಗೆ ನಿಯತಾಚಾರಿಗಳಾಗಿ ನಿಷ್ಠೆಯಿಂದ ಅದನ್ನು ಪ್ರಾಣಾಂತ್ಯದ ವರೆಗೆ ನಡಿಸಿದಲ್ಲಿ ಅದು ಗಣಾಚಾರವೆನಿಸಿಕೊಳ್ಳುತ್ತದೆ. ಇದು ಶಿವಾನುಭವದ ಆಚಾರದ ರೀತಿಯು. ಇದು ಶಿವಶರಣರಿಗೆ ತಪಸ್ಸಾಗಿ ಪರಿಣಮಿಸುತ್ತದೆ. ಸಪ್ಪೆಯಲ್ಲಮನು ಈ ಪ್ರಕಾರ ಆಚರಿಸಿದ್ದಾನೆ.

ಈ ಪ್ರಕಾರ ಸಪ್ಪೆಯಲ್ಲಮದೇವನು ಕಲ್ಯಾಣಪಟ್ಟಣದಲ್ಲಿರುತ್ತಿರಲು ಅಲ್ಲಿ ಮುಂದೆ ಅನಾಹುತಗಳೆದ್ದು ಬಿಜ್ಜಳನ ವಧೆಯಾಯಿತು. ಶಿವಶರಣರು ರಾಜಧಾನಿಯನ್ನು ಬಿಟ್ಟುಕೊಟ್ಟು ಉಳಿವೆಯ ಮಹಾಮನೆಗೆ ತೆರಳಿದರು. ಚನ್ನಬಸವಾದಿಗಳು ಕಾಡನ್ನು ಸೇರಿದರು. ಆಗ ಸಪ್ಪೆಯಲ್ಲಮದೇವನೂ ಕೂಡ ಅವರೊಡನೆ ಬಿಜಯಂಗೈದು ಉಳಿವಿಯ ಮಹಾಮನೆಯಲ್ಲಿಯೇ ಲಿಂಗೈಕ್ಯನಾದನು.

---

## ಅಲ್ಲಯ್ಯ.

ಅಲ್ಲಯ್ಯನೆಂಬ ಶಿವಶರಣನು ಸಂಗೀತದಲ್ಲಿ ಬಲ್ಲಿದನಾಗಿ ಲಿಂಗಕ್ಕೆ ಗಾನವನ್ನು ಕೇಳಿಸುವ ಕಾಯಕವನ್ನು ಕೈಕೊಂಡಿದ್ದನು. ಇವನು ಯಾವಾಗಲೂ ಭಕ್ತಿಭಾವಪೂರಿತವಾದ ಹಾಡುಗಳನ್ನೇ ಹಾಡುವನು. ಭಕ್ತರು ಇವನಿಗೆ ಹೇಳಿಕಳುಹಲು, ಇವನು ಅವರ ಹಬ್ಬ ಮದುವೆಗಳಿಗೆ ಹೋಗಿ ಅವರಲ್ಲಿ ಗಾನವನ್ನು ಮಾಡಿ, ಅವರು ಕೊಟ್ಟುದನ್ನು ಸ್ವೀಕರಿಸಿ, ಲಿಂಗಾರ್ಪಿತ ಮಾಡಿ, ತನ್ನ ಉಪಜೀವನವನ್ನು ಸಾಗಿಸುತ್ತ ಬಂದನು ಮತ್ತು ಅದರಲ್ಲಿ ಉಳಿದದ್ದನ್ನು ದಾಸೋಹ ಕಾರ್ಯಗಳಲ್ಲಿ ಉಪಯೋಗಿಸುವನು. ಈ ರೀತಿ ಅಲ್ಲಯ್ಯನು ಬಹುಕಾಲ ಆಚರಿಸುತ್ತ ಬರಲು ಪರಮಾತ್ಮನು ಅವನ ಭಕ್ತಿಗೆ ಪ್ರೀತನಾಗಿ ಅವನಿಗೆ ಸಾಮರಸ್ಯ ಪದವನ್ನಿತ್ತನು.

ಮನುಷ್ಯನು ತನ್ನಲ್ಲಿರುವ ವಿಶೇಷ ಗುಣಗಳನ್ನು ಜನಸೇವೆಗೋಸ್ಕರ ಉಪಯೋಗಿಸುವದರಲ್ಲಿಯೇ ಶಿವಾನುಭವವಿರುತ್ತದೆಂಬುದು ಅಲ್ಲಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ.

---

## ಭದ್ರಯ್ಯ.

ಭದ್ರಯ್ಯನೆಂಬ ಶಿವಶರಣನು ತನ್ನ ಭಕ್ತಿಗೋಸ್ಕರ ಜನರಲ್ಲಿ ಬಹು ಪ್ರಸಿದ್ಧನಾಗಿದ್ದನು. ಅವನು ಶೈವರು ವರ್ಷದಲ್ಲಿ ಶಿವರಾತ್ರಿಯ ಒಂದು ದಿನ ಮಾತ್ರ ಶಿವನನ್ನು ವಿಶೇಷವಾಗಿ ಭಜಿಸುತ್ತಿರುವದನ್ನು ನೋಡಿ, ಈ ರೀತಿಯು ಸಲ್ಲದ್ದು, ಭಕ್ತರು 'ನಿಚ್ಚ ಶಿವರಾತ್ರಿ'ಯನ್ನು ಮಾಡಬೇಕು, ಹೀಗೆ ಮಾಡುವದೇ ಶಿವಾನುಭವದ ನಡೆಯು ಎಂದು ಶಿವಶರಣರ ವಾಕ್ಯವಿರುವದನ್ನು ತಿಳಿದು ಅವನು ಹಾಗೆಯೇ ಆಚರಿಸುವವನಾದನು. ಅವನು ಯಾವಾಗಲೂ ಲಿಂಗದೊಡನಾಡುವನು, ಲಿಂಗದೊಡನೆ ಭುಂಜಿಸುವನು, ಲಿಂಗಸ್ವರೂಪನಾಗಿ ನಡೆಯುವನು. ಪರಮಾತ್ಮನು ಅವನ ಈ ನಡೆಯನ್ನು ನೋಡಿ ಅಂತ್ಯದಲ್ಲಿ ಅವನು ಲಿಂಗದಲ್ಲಿಯೇ ಬಯಲಾಗುವಂತೆ ಕರುಣಿಸಿದನು.

ಶಿವಾನುಭವಿಗಳಿಗೆ ಆ ದಿನ, ಈ ದಿನವೆಂಬುದಿಲ್ಲ. ಅವರಿಗೆ ದಿನಗಳೆಲ್ಲವೂ ಒಂದೇ. ಅವರು ಹುಣ್ಣಿವೆ, ಅಮಾವಾಸ್ಯ, ಹಬ್ಬ, ತಿಥಿ, ವಾರ, ನಕ್ಷತ್ರಗಳನ್ನು ನೋಡಿ ಆಚರಿಸುವವರಲ್ಲ. ಭದ್ರಯ್ಯನು ಹೀಗೆ ಆಚರಿಸಿ ಪ್ರಸಿದ್ಧನಾಗಿದ್ದಾನೆ.

---

## ತೆಲುಗೇಶ ಮಸಣಯ್ಯ.

ತೆಲುಗೇಶ ಮಸಣಯ್ಯನು ಆಂಧ್ರದೇಶದವನು. ಅವನು ಲಿಂಗಂಪಲ್ಲಿ ಎಂಬ ಗ್ರಾಮದವನು. ಅವನು ಈ ಗ್ರಾಮದಲ್ಲಿ ಗೋವುಗಳನ್ನು ಕಾಯುವ ಕಾಯಕವನ್ನು ಮಾಡುತ್ತಿದ್ದನು. ಶಿವಶರಣರ ಶಿವಾನುಭವದ ವಿಚಾರಗಳು ಈ ನಾಡಿನಲ್ಲಿ ಪಸರಿಸಹತ್ತಲು ತೆಲುಗೇಶ ಮಸಣಯ್ಯನು ಅವುಗಳಿಗೆ ಒಲಿದವನಾಗಿ ಇತರ ಮತಗಳ ಮೇಲಿನ ಮಮತೆಯನ್ನು ತ್ಯಜಿಸಿದನು. ಆಗ ಅವನು ವೀರಶೈವ ದೀಕ್ಷೆಯನ್ನು ಹೊಂದಿ ವೀರಶೈವಾಚಾರದಂತೆ ನಡೆಯಹತ್ತಿದನು. ಆದರೆ ಅವನು ಗೋವುಗಳನ್ನು ಕಾಯುವ ತನ್ನ ಮೊದಲಿನ ಕಾಯಕವನ್ನು ಬಿಡಲಿಲ್ಲ. ಅವನು ಅದನ್ನು ಹಾಗೆಯೇ ನಡಿಸುತ್ತ, ಆದರಿಂದ ತನಗೆ ಬಂದದ್ದನ್ನು ದಾಸೋಹಕಾರ್ಯಗಳಲ್ಲಿ ಉಪಯೋಗಿಸುವನು. ಹೀಗಿರಲು ಒಂದು ದಿನ ಅವನ ಗೃಹಕ್ಕೆ ಅವನಿಗೆ ದೀಕ್ಷೆ ಕೊಟ್ಟ ಗುರುವು ಬರಲಾಗಿ, ಲಿಂಗತತ್ವದ ವಿಶೇಷ ಜ್ಞಾನವನ್ನು ತನಗೆ ಅರುಹಬೇಕೆಂದು ಅವನಿಗೆ ಬಿನ್ನವಿಸಿಕೊಂಡನು ಆಗ ಗುರುವು ಅವನಿಗೆ ಆರಂಗಗಳಲ್ಲಿ ಆರು ಲಿಂಗಗಳಿವೆ, ಮೂರಂಗಗಳಲ್ಲಿ ಮೂರು ಲಿಂಗಗಳಿವೆ, ಅವುಗಳ ಷಡ್ವರ್ಣಗಳ ರೂಪು, ನಿರೂಪು, ಮತ್ತು ಚಿದ್ರೂಪುಗಳ ನೆಲೆ ಕಲೆಗಳು, ಇವುಗಳನ್ನೆಲ್ಲ ವಿಶದವಾಗಿ ಅರುಹುವನಾದನು. ಆಮೇಲೆ ತೆಲುಗೇಶ ಮಸಣ್ಣಯ್ಯನು ಗುರುವಾಕ್ಯವಿಡಿದು ಆಚರಿಸುತ್ತ ಶಿವಾನುಭವದ ಆಚರಣೆಯಲ್ಲಿ ಆಸಕ್ತಿಯುಳ್ಳವನಾಗಿ ಬಹು ಪ್ರಸಿದ್ಧಿಯನ್ನು ಹೊಂದಿದನು. ಅವನು ತನ್ನ ಅನುಭವವನ್ನು ವಚನಗಳ ಮೂಲಕ ನಾಡಿನಲ್ಲಿ ಪ್ರಸಾರ ಮಾಡಿದ್ದಾನೆ. 'ಶಂಭು ತೆಲುಗೇಶ' ಎಂಬುದೇ ಅವನ ವಚನಗಳ ಮುದ್ರಿಕೆಯಾಗಿದೆ. ಅವನದೊಂದೇ ವಚನವು ನಮಗೆ ದೊರೆತಿರುತ್ತದೆ. ಅದನ್ನು ನಾವು ಕೆಳಗೆ ಕೊಟ್ಟಿದ್ದೇವೆ. ಅದರಲ್ಲಿ ಅವನು ತನ್ನ ದನ ಕಾಯುವ ಕಾಯಕವನ್ನು ಯಥಾವ

ತ್ತಾಗಿ ವರ್ಣಿಸಿದ್ದಾನೆ. ಅದರ ಮೇಲಿಂದ ಅವನು ಉಡುವ ಬಟ್ಟೆ ಹಳದೀ ವರ್ಣದ್ದು, ಅವನ ಕಿವಿಯಲ್ಲಿ ಬಳಪದ ಓಲೆ, ಕೊರಳಲ್ಲಿ ಗುರು ಗುಂಜಿಯ ಮಾಲೆ, ಕಯ್ಯಲ್ಲಿ ಒಂದು ಢಕ್ಕೆ, ಮತ್ತು ಊದುವ ಕೊಳಲು, ಕಾಲಲ್ಲಿ ಗಂಟೆ ಇವುಗಳನ್ನು ಧಾರಣ ಮಾಡಿಕೊಂಡವನಾಗಿ ತನ್ನ ದನಕಾಯುವ ಕಾಯಕವನ್ನು ನಡಿಸುತ್ತಿದ್ದುದು ವ್ಯಕ್ತವಾಗುತ್ತಿದೆ.

ಪ್ರಮಥರ ಶಿವಾನುಭವದ ತತ್ವಗಳು ಮೊದಲಿನ ಕಾಲದಲ್ಲಿ ಇಂಥ ತರಗತಿಯ ಜನರನ್ನು ಸಹ ಬಲವಾಗಿ ಆಕರ್ಷಿಸಿರುತ್ತವೆಂಬುದು ಮುಸಣಯ್ಯನ ಚರಿತ್ರೆಯಿಂದ ತಿಳಿದುಬರುತ್ತದೆ. ಇವರು ವಚನಗಳನ್ನು ರಚಿಸುವವರಾಗಿ ಜನತೆಗೆ ಉಪದೇಶಮಾಡಿದ್ದಾರೆ ಮತ್ತು ಅದರಂತೆ ನಡೆದು ತೋರಿಸಿದ್ದಾರೆ. ಇಂಥ ಬಡಜನರಿಂದಲೇ ವೀರಶೈವ ಧರ್ಮವು ಹಿಂದಿನಕಾಲದಲ್ಲಿ ಪ್ರಸಾರಹೊಂದಿದೆ.

ತೆಲುಗೇಶ ಮುಸಣಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಇದರಿಂದ ಅವನು ಶಿವಶರಣರಲ್ಲಿ ಉಚ್ಚ ಸ್ಥಾನವನ್ನು ಹೊಂದಿದವನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ. ನಮಗೆ ದೊರೆದ ಅವನ ಒಂದು ವಚನಕ್ಕೆ ಪುರಾತನ ಟೀಕೆಯೂ ಇದ್ದು ಅದನ್ನು ನಾವು ಇಲ್ಲಿ ಯಥಾವತ್ತಾಗಿ ಉದಹರಿಸುತ್ತೇವೆ.

### ವಚನ.

(೧) ಹಳದಿಯ ಸೀರೆಯನುಟ್ಟು, ಬಳಹದ ಓಲೆಯ ಕಿವಿಯಲ್ಲಿಕ್ಕಿ, ನೊಳೆಯ ಥಂಗೆಯ ಪಿಡಿದು, ಗುಲುಗಂಜಿಯ ದಂಡೆಯ ಕಟ್ಟಿ, ತುತ್ತುರು ತುರು ಎಂದು ಕೊಳಲ ಬಾರಿಸುತ, ಅಪಳತಪಳವೆಂಬ ಉಲಿವ ಘಂಟೆಯ ಕಟ್ಟಿ ತುತ್ತುರು ಜಂಗುಳಿದೈವಗಳನೆಲ್ಲವ ಹಿಂಡಮಾಡಿ, ಆಳುವ ನಮ್ಮ ಶಂಭು ತೆಲುಗೇಶ್ವರನ ಮನೆಯ ಗೋವಳನೀತ.

ಟೀಕು:— ಚಿತ್ಪ್ರಕಾಶವಾದ ಜ್ಞಾನಾಂಬರವ ಸರ್ವಾಂಗಕ್ಕೆ ಶರಣನಲಂಕರಿಸಿದನೆಂಬುದೀಗ, ಹಳದಿಯ ಸೀರೆಯನುಟ್ಟು ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣ ನಿರ್ಮಲವಾದ ಸರ್ವಾಚಾರ ಸಂಪತ್ತೆಂಬಾಚಾರವ ತನ್ನನಾಹತಕರ್ಣದ್ವಾರದಲ್ಲಿ ಧರಿಸಿದನೆಂಬುದೀಗ, ಬಳಹದ ಓಲೆಯ ಕಿವಿಯಲ್ಲಿಕ್ಕಿ ಎಂಬ ಶಬ್ದಕ್ಕರ್ಥ. ನೈಷ್ಠೆ ಎಂಬುದೇ ಮೊಳೆ ಶಿವಭಾವವೆಂಬುದೇ ಥಂಗೆ ಈ ಉಭಯುವನು ದೃಢನಿಶ್ಚಯ ಹಸ್ತದಲ್ಲಿ

ದೃಢವಿಡಿದನೆಂಬುದೀಗ, ಮೊಳೆಯು ಢಂಗೆಯು ಪಿಡಿದು, ಎಂಬ ಶಬ್ದ ಕ್ಕರ್ಥ. ಇಂತಪ್ಪ ನೈಷ್ಠೆಭಾವ ಸಂಬಂಧವಾದ ಶರಣ ತನ್ನ ಷಡ್ವಿಧಾಂಗದಲ್ಲಿ ಷಡ್ವಿಧ ಲಿಂಗವನು ಸ್ವಾನುಭಾವ ಸೂತ್ರದಿಂ ಬಂಧಿಸಿದನೆಂಬುದೀಗ, ಗುಲುಗುಂಜಿಯು ದಂಡೆಯು ಕಟ್ಟಿ ಎಂಬ ಶಬ್ದಕ್ಕರ್ಥ. ಇಂತಪ್ಪ ಷಟ್‌ಸ್ಥಲ ಜ್ಞಾನಕ್ರಿಯೆವಿಡಿದಾಚರಿಸುತ್ತಿರ್ದ ಶರಣ ಶಿವೋಹಂ ವೆಂದು ಶಿವಮಂತ್ರ ಸ್ಮರಣೆಯು ಮಾಡುತ್ತಿರ್ದನೆಂಬುದೀಗ, ತುತ್ತುರು ತುರು ಎಂಬ ಕೊಳಲ ಬಾರಿಸುತ ಎಂಬ ಶಬ್ದಕ್ಕರ್ಥ. ಚಿದ್ರೂಪನಾದ ಶರಣ ಚಿದ್ಘನ ಲಿಂಗಕ್ಕೆ ಮಾಡುವ ಅಷ್ಟವಿಧಾರ್ಚನೆ ಷೋಡಶೋಪಚಾರ ಮುಖ್ಯವಾದ ಕ್ರಿ ಟಹಳವಾದ ಕಾರಣ, ಅಪಳವೆಂಬ ಶಬ್ದಕ್ಕರ್ಥ. ಚಿತ್ಸ್ವರೂಪನಾದ ಶರಣನ ನಿಜಾಂತರಂಗದ ಸುಜ್ಞಾನ ಪ್ರಕಾಶವೆಂಬುದೀಗ, ತಪಳವೆಂಬ ಶಬ್ದಕ್ಕರ್ಥ. ಇಂತಪ್ಪ ಸುಜ್ಞಾನವಿಡಿದಾಚರಿಸುತ್ತಿರ್ದ ಶರಣ ಶಿವೋಹಂ ಶಿವೋಹಂವೆಂದು ಪ್ರಣಮಮಂತ್ರವನುಚ್ಚರಿಸುತ್ತಿರ್ದನೆಂಬುದೀಗ, ಉಲಿವ ಘಂಟೆಯು ಕಟ್ಟಿ ಎಂಬ ಶಬ್ದಕ್ಕರ್ಥ. ಅಂತು ಶಿವೋಹಂಭಾವದಲ್ಲಿ ಸನ್ನಿಹಿತನಾಗಿ ಶರಣನು ಬ್ರಹ್ಮ ವಿಷ್ಣ್ವಾದಿ ದೇವತೆಗಳೆಲ್ಲರನು ಸೇವಕರ ಮಾಡಿ ಭೋಗಭುಕ್ತಿಗಳ ಕೊಟ್ಟು, ರಕ್ಷಿಸುತ್ತಿಹನೆಂಬುದೀಗ, ತುತ್ತುರು ಜಂಗುಳಿ ದೈವಗಳನೆಲ್ಲವ ಹಿಂಡಮಾಡಿ ಆಳುವ ನಮ್ಮ ಶಂಭು ತೆಲುಗೇಶ್ವರನ ಮನೆಯು ಗೋವಳನೀತಯೆಂಬ ಶಬ್ದಕ್ಕರ್ಥ.

---

## ಬಳ್ಳೇಶ ಮಲ್ಲಯ್ಯ.

ಮಲ್ಲಿಸೆಟ್ಟಿ ಎಂಬವನು ಜೈನ ಕುಲದಲ್ಲಿ ಹುಟ್ಟಿ ಒಬ್ಬ ಜೈನ ಸ್ತ್ರೀಯಳನ್ನು ಮದುವೆಯಾಗಿದ್ದನು. ಅವನು ಹೇರಿನ ವ್ಯವಹಾರವನ್ನು ಮಾಡುತ್ತ ಉಪಜೀವಿಸುತ್ತಿದ್ದನು. ಹೇರಿನ ವ್ಯವಹಾರವೆಂದರೆ ಒಂದು ಪ್ರಾಂತದಲ್ಲಿಯು ಸರಕುಗಳನ್ನು ಬೇರೊಂದು ಪ್ರಾಂತಕ್ಕೆ ಸಾಗಿಸಿ ವ್ಯವಹಾರವನ್ನು ಸಾಗಿಸುವದು ಇರುತ್ತದೆ. ಹೀಗಿರಲು ಮಲ್ಲಯ್ಯನಿಗೆ ಜೈನ ಧರ್ಮವು ಮನಸ್ಸಿಗೆ ಬಾರದಿರಲು ಅವನು ಅದನ್ನು ಬಿಟ್ಟು ಶಿವಾಚಾರವನ್ನು ಪಾಲಿಸುವವನಾದನು. ಆದ್ದರಿಂದ ಅವನು ದಿನಾಲು ಒಂದು ಶಿವಾಲಯಕ್ಕೆ ಹೋಗಿ ಲಿಂಗವನ್ನು ಪೂಜಿಸಿ ಲಿಂಗಕ್ಕೆ ನೈವೇದ್ಯವನ್ನು ಕೊಟ್ಟು ಊಟಮಾಡುವನು. ಇದನ್ನೇ ಅವನು ತನ್ನ ವ್ರತವನ್ನಾಗಿ

ಇಟ್ಟುಕೊಂಡನು. ಹೀಗಿರುವಲ್ಲಿ ಅವನು ಒಂದು ದಿನ ತನ್ನ ಹೇರಿನ ವ್ಯವಹಾರಕ್ಕೋಸ್ಕರ ಪ್ರಯಾಣ ಮಾಡಿದಾಗ್ಗೆ ಪ್ರವಾಸದಲ್ಲಿ ಅವನಿಗೆ ಕಣ್ಣುಬೇನೆಯು ಬಂದು, ಬೇನೆ ಬಹಳವಾಗಲು ಕಣ್ಣು ಕಾಣದಂತಾದವು. ಇದರಿಂದ ಶಿವಾಲಯಗಳನ್ನು ಶೋಧಿಸುವದೂ ಅಲ್ಲಿಗೆ ಹೋಗಿ ಪೂಜಿಸುವದೂ ಅವನಿಗೆ ಕಷ್ಟವಾಗಹತ್ತಿತು. ಅವನ ಜೈನ ಸಂಗಡಿಗರಾದರೂ ಇದರಲ್ಲಿ ಅವನಿಗೆ ಏನೂ ಸಹಾಯ ಮಾಡುತ್ತಿರಲಿಲ್ಲ. ಆದರೆ ಲಿಂಗಪೂಜೆ ಇಲ್ಲದೆ ಉಣ್ಣೆನೆಂಬ ವ್ರತವನ್ನು ಅವನು ಇಟ್ಟುಕೊಂಡವನಾದ್ದರಿಂದ ಶಿವಲಿಂಗ ಪೂಜೆ ತಪ್ಪಿದ ದಿನ ಅವನು ಉಪವಾಸವಿರಹತ್ತಿದನು. ಇದನ್ನು ನೋಡಿ ಜೈನರಾದ ಅವನ ಭಾವ ಮೈದುನರು ಅವನಿಗೆ ಮತ್ತಿಷ್ಟು ಕುಚೇಷ್ಟೆ ಮಾಡತೊಡಗಿದರು. ಅವರು ಒಂದು ದಿನ ತಮ್ಮಲ್ಲಿ ಆಲೋಚನೆ ಮಾಡಿಕೊಂಡು, ಕೆಲವು ಅಂತರದ ಮೇಲೆ ಒಂದು ಬೆಟ್ಟದಡಿಯಲ್ಲಿ ಹುಲ್ಲಿನ ಗುಡಿಸಲನ್ನು ಕಟ್ಟಿ ಅದರ ಮಧ್ಯದಲ್ಲಿ ಧಾನ್ಯವನ್ನು ಅಳಿಯಲು ಉಪಯೋಗಿಸುತ್ತಿದ್ದ ಒಂದು ಬಳ್ಳವನು ತಂದು ನಡಿಸಿದರು. ಆಮೇಲೆ ಅವರು ಮಲ್ಲಿಸೆಟ್ಟಿ ಇದ್ದಲ್ಲಿಗೆ ಬಂದು "ನೀನು ಹೀಗೆ ಹಸಿದಿರಬೇಡ. ಸಮೀಪದಲ್ಲಿ ಶಿವಾಲಯವಿದೆ. ಅಲ್ಲಿ ಲಿಂಗವನ್ನು ನಿನಗೆ ತೋರಿಸುವೆವು. ಪೂಜೆಮಾಡಲು ಬನ್ನಿ" ಎಂದು ಹೇಳಿ ಅವನನ್ನು ಕರೆದುಕೊಂಡು ಹೋಗಿ ಗುಡಿಸಲಿನ ಒಳಹೊಕ್ಕು ಅವನಿಗೆ "ಇದೇ ಶಿವಲಿಂಗವು, ಇದನ್ನು ಪೂಜೆ ಮಾಡು" ಎಂದು ಆ ಬಳ್ಳವನ್ನು ತೋರಿಸಿದರು. ಆಗ ಮಲ್ಲಿಶೆಟ್ಟಿಯು ಆ ಬಳ್ಳವೇ ಲಿಂಗವೆಂದು ಭಾವಿಸಿ, ನಿತ್ಯದಂತೆ ಭಕ್ತಿಭಾವದಿಂದ ಅದನ್ನು ಅರ್ಚಿಸಿ ಅದಕ್ಕೆ ನೈವೇದ್ಯವನ್ನು ಮಾಡಿ ಅದೇ ಪ್ರಸಾದವೆಂದು ನಂಬಿ ಭುಂಜಿಸಿದನು. ಊಟವಾದ ಮೇಲೆ ಮಲ್ಲಿಸೆಟ್ಟಿಯೊಡನೆ ಇದ್ದ ಶೆಟ್ಟಿಗಳೆಲ್ಲರು ಅವನನ್ನು ನೋಡಿ ಬಿದ್ದು ಬಿದ್ದು ನಕ್ಕು, "ನಮ್ಮ ಕಟ್ಟಿನ ಬಳ್ಳಕ್ಕೆ ನೀನು ಶರಣೆಂದು ಹೊಟ್ಟೆ ಬಿರಿಯುವಂತೆ ಉಂಡೆ. ಅದು ಲಿಂಗವಲ್ಲ, ಅದು ಬಳ್ಳವು. ಅದನ್ನು ತೆಗೆದುಕೊಂಡು ಬನ್ನಿರಿ. ನಮಗೆ ಈಗ ಧಾನ್ಯ ಅಳಿಯಲಿಕ್ಕೆ ಅದು ಬೇಕಾಗಿದೆ. ಹೋ! ಹೋ!! ಹೋ!!!" ಎಂದು ಹಾಸ್ಯ ಮಾಡಿ ಬಿದ್ದು ಬಿದ್ದು ನಗಹತ್ತಿದರು. ಆಗ ಮಲ್ಲಯ್ಯನು--"ಹೀಗೋ? ಆ ಬಳ್ಳವನ್ನು ನನಗೆ ದಯವಿಟ್ಟು ತೋರಿಸಿರಿ" ಎಂದು ಹೇಳಲಾಗಿ ಅವರು ಅವನನ್ನು ಗುಡಿಸಲಿಗೆ ಕರೆದುಕೊಂಡು ಹೋದರು. ಆದರೆ

ಅವರು ಒಳಗೆ ಹೋಗಿ ನೋಡುತ್ತಾರೆಯೋ, ಆ ಬಳ್ಳವು ಒಂದು ಪ್ರಕಾಶ ಮಯವಾದ ಲಿಂಗವಾಗಿತ್ತು! ಅದನ್ನು ಆ ಜೈನರು ನೋಡಿ ಕೌತುಕ ಗೊಂಡರು. ಭಕ್ತಿಯ ಪರಿಣಾಮವಾಗಿ ಮತ್ತು ಮಲ್ಲಯ್ಯನ ಭಾವ ಮತ್ತು ಮನದಲ್ಲಿ ನೆಲೆಗೊಂಡ ಲಿಂಗ ಶಕ್ತಿಯ ಮೂಲಕವಾಗಿ ಆ ಬಳ್ಳವು ತೇಜೋ ಮಯವಾದ ಲಿಂಗವಾಗಿತ್ತು. ಆಗ ಮಲ್ಲಯ್ಯನು ನಿಜವಾದ ಶಿವಾನುಭ ವಿಯು ಎಂದು ಅವನನ್ನು ಎಲ್ಲರೂ ಹೊಗಳಿದರು. ಅಂದಿನಿಂದ ಅವನು 'ಬಳ್ಳೇಶ ಮಲ್ಲಯ್ಯ'ನೆಂದು ಪ್ರಸಿದ್ಧಿಯನ್ನು ಹೊಂದಿದನು. ಮಲ್ಲಯ್ಯ ನಾದರೂ ತನ್ನ ಜೈನಧರ್ಮವನ್ನು ಬಿಟ್ಟುಕೊಟ್ಟು ಬಸವಾದಿ ಪ್ರಮ ಥರ ಶಿವಾನುಭವದ ಮಾರ್ಗವನ್ನು ಕೈಕೊಂಡು ವೀರಶೈವಾಚರಣೆಯನ್ನು ಅನುಸರಿಸಹತ್ತಿದನು. ಇಷ್ಟೇ ಅಲ್ಲ, ಅವನು ತನ್ನ ಶಿವಾನುಭವವನ್ನು ವಚನಗಳ ಮೂಲಕ ಜಗತ್ತಿಗೆ ಬೋಧಿಸತೊಡಗಿದನು. ಅವನ ಮುದ್ರಿ ಕೆಯು 'ಬಳ್ಳೇಶ್ವರಾ' ಎಂದಿದೆ. ನಮ್ಮ ಹತ್ತಿರ ಅವನ ಐದು ವಚನಗಳು ಮಾತ್ರ ಉಪಲಬ್ಧವಿವೆ. ಅವು ಬೆಡಗಿನ ವಚನಗಳಿವೆ. ವಿಸ್ತಾರಭಯ ಕ್ಕಾಗಿ ಅವುಗಳನ್ನೆಲ್ಲ ನಾವು ಇಲ್ಲಿ ಕೊಡದೆ ಎರಡು ವಚನಗಳನ್ನು ಮಾತ್ರ ಇಲ್ಲಿ ಉದಹರಿಸುತ್ತೇವೆ.

ಬಳ್ಳೇಶ ಮಲ್ಲಯ್ಯನು ಪುರಾತನಕಾಲದವನು. ಅವನ ಹೆಸರು ಗಣಸಹಸ್ರದಲ್ಲಿದೆ.

ಈ ಪ್ರಕಾರ ಬಳ್ಳೇಶ ಮಲ್ಲಯ್ಯನು ಬಳ್ಳವನ್ನು ಲಿಂಗವನ್ನಾಗಿ ಮಾಡಿದ ಸ್ಥಳವು ಬಳ್ಳಾರಿ ಪಟ್ಟಣಕ್ಕೆ ಸಮೀಪವಾಗಿದೆ. ಅದು ಎರಡು ಮೈಲುಗಳ ಮೇಲೆ ಒಂದು ಬೆಟ್ಟದಡಿಯಲ್ಲಿದ್ದು ಅಲ್ಲಿ ಒಂದು ಅಂದವಾದ ದೇವಾಲಯವಿದೆ. ಅದರ ಪ್ರಾಕಾರದಲ್ಲಿ ಮಲ್ಲಿಶೆಟ್ಟಿಯು ಬಳ್ಳವನ್ನು ಪೂಜಿಸಿದ್ದರ ಮತ್ತು ಅದು ಲಿಂಗವಾದದ್ದರ ಚಿತ್ರವು ಕೊರೆಯಲ್ಪಟ್ಟಿದೆ. ಬಳ್ಳೇಶ ಮಲ್ಲಯ್ಯನು ಈ ಪ್ರಾಂತದಲ್ಲಿ ಬಹು ಪ್ರಸಿದ್ಧಿಯನ್ನು ಹೊಂದಿ ದ್ದರಿಂದ ಬಳ್ಳವಿದ್ದ ಈ ಪಟ್ಟಣಕ್ಕೆ 'ಬಳ್ಳಾರಿ' (ಬಳ್ಳ+ಅರೆ = ಬಳ್ಳವಿದ್ದ ಕಲ್ಲುಬಂಡೆ) ಎಂದು ಬಳ್ಳದ ಹೆಸರೇ ಪ್ರಾಪ್ತವಾಗಿರುತ್ತದೆ.

### ವಚನಗಳು.

(೧) ಅಪಾರ ಮಹಿಮನೆಂದು ನಿಮ್ಮ ಭೇರಿ. ಜೇಡಿತ್ತನೀವ ನೆಂಬುದು ನಿಮ್ಮ ತಮ್ಮಟ. ಜಗವಂದಿತ ಲೋಕದೊಡೆಯನೆಂಬುದು

ನಿಮ್ಮ ಕೊಂಬು. ಪರದೈವವಿಲ್ಲವೆಂಬುದು ನಿಮ್ಮ ಡಮರು. ಶಿವ ಕೊಡ ನೆಂಬವರ ಬಾಯ ತ್ರಿಶೂಲದಲ್ಲಿರಿವ ಬಳ್ಳೇಶ್ವರಲಿಂಗದ ಡಂಗುರ ಮೂಜಗ ದೊಳಯ್ಯಾ.

(೨) ಸಹಸ್ರ ಮುಖ ಕೊರಳೊಂದು ನಾಸಿಕದಲುಂಬ ಸುಖ. ಘಾಸಿಮಾಡಿದ ಹರದರ ರೂಪು ನೋಡಾ! ಘಾಸಿಯಾದ ಭಾಷೆ ಏಕೆ? ಏಕ ವರ್ಣದ ಕೌತುಕದಿಂದ ಕಾಂತೆ ನೋಡಿದಳು ಕನ್ನಡಿಯ ಬೆಳಗ. ಸೂಸ ಲಿಯ್ಯದೆ ಉಣಬಲ್ಲವನ ತೋರುತ್ತಿದೆ, ಬಳ್ಳೇಶ್ವರನ ಕೊರಳ ಮುಚ್ಛವ ನೋಡಿ ನಗುತ್ತಿದೆ.

ಟೀಕು: — ಜೀವಹಂಸನ ಹಲವು ಮುಖವಾಗಿ ಚರಿಸುವ ಇಂದ್ರಿಯಂಗಳಿಗೆ ಮನ ಒಂದೇ ಕಾರಣವಾಗಿರ್ಪುದೆಂಬುದೀಗ ಸಹಸ್ರ ಮುಖ ಕೊರಳೊಂದು ಎಂಬ ಶಬ್ದಕ್ಕರ್ಥ. ಆ ಜೀವಹಂಸನು ದುರ್ವಾಸನೆಯ ಸ್ವೀಕಾರವೆಂಬ ನಾಸಿಕದಿಂದನ್ಯ ವಿಷಯಂಗಳನನುಭವಿಸುತ್ತಿಹುದೆಂಬುದೀಗ ನಾಸಿಕದಲುಂಬ ಸುಖವೆಂಬ ಶಬ್ದಕ್ಕರ್ಥ. ಆ ಜೀವನ ಜಡ ದೃಶ್ಯವ ಸತ್ಕ್ರಿಯಾಮುಖದಿಂ ದೇಹಧರ್ಮ ಕೆಡಲು ಆ ಜೀವನ ಶಬ್ದ ಜಾಲಂಗಳು ಸುಜ್ಞಾನಮುಖದಿಂದಳಿಯಬೇಕೆಂಬುದೀಗ ಘಾಸಿಯಾದ ಭಾಷೆ ಏಕೆ ಎಂಬ ಶಬ್ದಕ್ಕರ್ಥ. ಇಂತಪ್ಪ ಸತ್ಕ್ರಿಯಾಜ್ಞಾನದಿಂ ಕಾಯಜೀವದ ಗುಣವಳಿದ ಶರಣ ಸತಿ ಪ್ರಾಣ ಮಧ್ಯ ಕರಿಗೊಂಡು ಸದ್ವಿವೇಕ ದರ್ಪಣವ ನಿರೀಕ್ಷಿಸಿ ತನ್ನ ಪ್ರತಿಬಿಂಬ ಭಾವವನವಗ್ರಹಿಸಿದಳೆಂಬುವೀಗ ಏಕವರ್ಣದ ಕೌತುಕದಿಂದ ಕಾಂತೆ ನೋಡಿದಳು ಕನ್ನಡಿಯ ಬೆಳಗನು ಎಂಬ ಶಬ್ದಕ್ಕರ್ಥ. ಆ ಪ್ರತಿಬಿಂಬಭಾವವು ಶರಣ ಮುಖ ಲಿಂಗವಾಗಿ ಸರ್ವೇಂದ್ರಿಯ ಸುಖವ ಬಿಡದೆ ಭೋಗಿಸುವ ಲಿಂಗದ ನಿಜವನರುಹಿ ಆ ಶರಣನ ನೈಷ್ಠಿಕಾಚಾರವ ಕಂಡು, ಸಂಭ್ರಮಿಸುತ್ತಿಹುದೆಂಬುದೀಗ ಸೂಸಲೀಯ್ಯದೆ ಉಣಬಲ್ಲವನ ತೋರುತ್ತಿದೆ ಬಳ್ಳೇಶ್ವರನ ಕೊರಳಮುಚ್ಛವ ನೋಡಿ ನಗುತ್ತಿದೆ ಎಂಬ ಶಬ್ದಕ್ಕರ್ಥ. (ಅಲ್ಲಲ್ಲಿ ಅಶುದ್ಧ ಶಬ್ದಗಳಿವೆ.)

## ನಗೆಮಾರಿತಂದೆ.

ಬಸವೇಶ್ವರನು ತನ್ನ ಒಂದು ವಚನದಲ್ಲಿ 'ಸಂಸಾರದಲ್ಲಿ ಹುಟ್ಟಿ ಮತ್ತೊಂದು ಬಯಸಲೇಕಯ್ಯಾ? ನಗುವುದು ನುಡಿವುದು ಶಿವಭಕ್ತ ರೊಡನೆ. ಸುಮ್ಮನೆ ಹಮ್ಮು ಬಿಮ್ಮಾಗಿರಲೇಕಯ್ಯಾ?...... ನಮ್ಮ ಕೂಡಲ ಸಂಗನ ಶರಣರೊಡನೆ ಮನದೆರೆದು ಮಾತನಾಡುವುದಯ್ಯಾ." ಎಂದು ನುಡಿದಿದ್ದಾನೆ. ಆದ್ದರಿಂದ ಶಿವಾನುಭವಿಗಳು ಯಾವಾಗಲೂ ಆನಂದ ದಲ್ಲಿರಬೇಕು. ಅವರು ಎಂದೂ ದುಃಖಿಸತಕ್ಕದ್ದಲ್ಲ. ಅವರು ತಮ್ಮ ಕ್ರಿಯೆಗಳನ್ನು ಮತ್ತು ಕಾಯಕಗಳನ್ನು ಆನಂದದಲ್ಲಿದ್ದುಕೊಂಡು ಅವು ಗಳನ್ನು ಪರಮಾತ್ಮನಿಗರ್ಪಿಸಿ ಮಾಡುವುದು. ಇದು ಕಾಯಕವೆಂದೆನಿ ಸಿಕೊಳ್ಳುತ್ತದೆ. ಆದ್ದರಿಂದ ಭಕ್ತರಲ್ಲಿ ಆನಂದ ವೃತ್ತಿಯನ್ನು ಬೀರುವ ದನ್ನೇ ತಮ್ಮ ಕಾಯಕವನ್ನಾಗಿಟ್ಟುಕೊಂಡ ಕೆಲವು ಶರಣರಿದ್ದಾರೆ. ಇಂಥವರಲ್ಲಿ ನಗೆಮಾರಿತಂದೆಯು ಒಬ್ಬನು.

ಭಕ್ತರನ್ನು ನಗಿಸುವದೇ ಮಾರಿತಂದೆಯ ಕಾಯಕವಾಗಿತ್ತು. ಅವನು ಈ ಕಾಯಕವನ್ನು ಮಾಡುತ್ತಿರುವಾಗ ಭಕ್ತರು ಕೊಟ್ಟುದನ್ನು ತಾನು ಸ್ವೀಕರಿಸಿ ಅದರಲ್ಲಿ ಉಳಿದದ್ದನ್ನು ಶಿವಶರಣರ ದಾಸೋಹ ಕ್ಕಾರ್ಯಗಳಿಗೆ ಉಪಯೋಗಿಸುವನು. ಈ ಪ್ರಕಾರ ಹಾಸ್ಯದ ಕಾಯಕ ವನ್ನು ಅವನು ಬಹುಕಾಲ ನಡಿಸುತ್ತ ಬಂದನು.

ಹೀಗಿರುವಲ್ಲಿ ಒಂದು ದಿನ ಅವನು ತನ್ನ ಈ ಕಾಯಕವನ್ನು ಮಾಡುತ್ತ ಬೇರೊಂದೂರಿಗೆ ಹೊರಟಿದ್ದನು. ದಾರಿಯಲ್ಲಿ ಮಳೆಯು ಹೆಚ್ಚಾಗಿ ಬೀಳಹತ್ತಿತು ಮತ್ತು ಅವನನ್ನು ಒಂದು ಹೊಳೆಯು ಕಟ್ಟಿತು. ಈ ಸ್ಥಿತಿಯಲ್ಲಿ ಇದಿರಿನ ದಂಡೆಗೆ ಅವನು ಹೋಗದಂತಾಯಿತು. ಅವನು ಮಳೆಯಲ್ಲಿ ತೋಯಿಸಿಕೊಳ್ಳುತ್ತ ಕುಳಿತಿದ್ದಾಗ ಅವನ ಮನಸ್ಸಿನ ಸ್ಥಿತಿಯನ್ನು ಪರೀಕ್ಷಿಸಬೇಕೆಂದು ಪರಮಾತ್ಮನು ಒಬ್ಬ ಭಕ್ತನ ವೇಷವನ್ನು ಧಾರಣಮಾಡಿ, ಒಂದು ಎತ್ತಿನ ಮೇಲೆ ಪಾರ್ವತೀದೇವಿಯನ್ನು ಕುಳ್ಳಿರಿಸಿ ನಗೆಮಾರಿತಂದೆಯ ಸಮೀಪಕ್ಕೆ ಬಂದು ನಿಂತನು. ಅಲ್ಲಿ ಅವನನ್ನು ಕಂಡು, "ನೀನೆಲ್ಲಿಗೆ ಹೋಗುತ್ತೀ" ಎಂದು ಕೇಳಲಾಗಿ ನಗೆಮಾರಿತಂದೆಯು ನನ್ನ ಕಾಯಕಕ್ಕೆ ಮುಂದಿನ ಊರಿಗೆ ಹೋಗುತ್ತೇನೆಂದು ಹೇಳಿ "ನೀನು ಈ ತುಂಬಿದ ನದಿಯನ್ನು ಹೇಗೆ ದಾಟುವಿ?" ಎಂದು ಮಾರಿ ತಂದೆಯು

ಪರಮಾತ್ಮನಿಗೆ ಕೇಳಿದನು. ಆಗ ಪರಮಾತ್ಮನು-"ನಾನು ಈ ಎತ್ತಿನ ಮೇಲೆ ಕುಳಿತು ನನ್ನ ಹೆಗಲಮೇಲೆ ನನ್ನ ಹೆಂಡತಿಯನ್ನು ಹತ್ತಿಸಿ ಕೊಂಡು ನದಿಯನ್ನು ದಾಟುವೆನು" ಎಂದು ಅಂದು ನಗೆಮಾರಿತಂದೆಗೆ "ನೀನು ಈಗ ತೊಂದರೆಯಲ್ಲಿರುವಿ. ಈ ನದಿಯನ್ನು ನೀನು ಹೇಗೆ ದಾಟುವಿ?" ಎಂದು ಕೇಳಿದನು. ಆದಕ್ಕೆ ನಗೆಮಾರಿತಂದೆಯು, "ನಾನು ನಿನ್ನ ಸತಿಯ ಹೆಗಲಮೇಲೆ ಕುಳಿತುಕೊಂಡು ನಿನ್ನೊಡನೆ ನದಿಯನ್ನು ದಾಟುವೆನು" ಎಂದು ಅಂದನು. ಪರಮಾತ್ಮನು ನಗೆಮಾರಿತಂದೆಯ ಇಂಗಿತವನ್ನು ತಿಳಿದವನಾಗಿ ನಕ್ಕುಬಿಟ್ಟನು. ಎತ್ತಿನ ಮೇಲೆ ತಾನು ಕುಳಿತುಕೊಂಡು ನದಿಯನ್ನು ಸುರಕ್ಷಿತವಾಗಿ ದಾಟುವದಾದರೆ, ಪಾರ್ವತೀ ದೇವಿಯನ್ನು ತನ್ನ ಹೆಗಲಮೇಲೆ ಕುಳ್ಳಿರಿಸಿಕೊಳ್ಳುವ ಅವಶ್ಯವೇನು? ಹಾಗೆ ಕುಳ್ಳಿರಿಸಿಕೊಂಡು ಹೋಗಿದ್ದರೆ ತಾನು ಅಪಹಾಸ್ಯಕ್ಕೆ ಗುರಿಯಾ ಗುತ್ತಿದ್ದಿಲ್ಲವೇ? ಎಂದು ಅವನು ಭಾವಿಸಿದನು. ಇದಕ್ಕನುಸರಿಸಿಯೇ ನಗೆಮಾರಿತಂದೆಯು ಅವನಿಗೆ ಹಾಸ್ಯಮಾಡಿದ್ದಾನೆ. ತೊಂದರೆಯಲ್ಲಿ ದ್ದರೂ ಕೂಡ ತನ್ನಹಾಸ್ಯವೃತ್ತಿಯನ್ನು ಬಿಡದೆ ಇದ್ದದರಿಂದ ಪರಮಾ ತ್ಮನು ಅವನಿಗೆ ಪ್ರೀತನಾಗಿ ಅವನಿಗೆ ಕಾಯಕದ ಹಣವನ್ನು ಕೊಟ್ಟು ತೆರಳಿದನು. ಹೀಗೆ ಎಂಥ ವಿಪತ್ತುಗಳು ಬಂದರೂ ನಗೆಮಾರಿತಂದೆಯು ಯಾವಾಗಲೂ ಆನಂದದಿಂದಿದ್ದು ತನ್ನ ಶಿವಾನುಭವವನ್ನು ನಡಿಸಿದ್ದ ರಿಂದ ಅವನು ಲಿಂಗಾಂಗಸಾಮರಸ್ಯ ಸ್ಥಿತಿಯನ್ನು ಹೊಂದಿದನು.

ಆದರೆ ನಗೆಮಾರಿತಂದೆಯು ಕೇವಲ ಪರಿಹಾಸಕನಲ್ಲ, ವಿದೂಷಕ ನಲ್ಲ. ಅವನು ವಚನಕಾರನಿದ್ದಾನೆ. ಅವನು ಜ್ಞಾನಿಯು. ವಚನ ಕಾರರಲ್ಲಿ ಅವನ ಸ್ಥಾನವು ಉಚ್ಚತರದ್ದಿದೆ. ಅವನ ಮುದ್ರಿಕೆಯು 'ಆತುರವೈರಿ ಮಾರೇಶ್ವರಾ' ಎಂದಿದೆ. ಅವನ ೨೫ ವಚನಗಳು ನಮ್ಮಲ್ಲಿ ಉಪಲಬ್ಧವಿವೆ. ಅವುಗಳಲ್ಲಿ ಮಾದಿರಿಗಾಗಿ ಕೆಲವುಗಳನ್ನು ಮಾತ್ರ ನಾವು ಇಲ್ಲಿ ಉದಹರಿಸುತ್ತೇವೆ. ಅವುಗಳು ಎಷ್ಟು ಉದಾತ್ತವಾದವುಗಳೆಂಬು ದನ್ನು ವಾಚಕರು ಕೂಡಲೆ ಕಂಡುಹಿಡಿಯಬಹುದಾಗಿದೆ.

**ವಚನಗಳು.**

(೧) ಕಂಗಳ ಮುಂದಣ ಕಾಮುವ ಕೊಂದು, ಮನದ ಮುಂದಣ ಆಸೆಯ ತಿಂದು, ಆತನನರಿ ಆತುರವೈರಿ ಮಾರೇಶ್ವರಾ.

## ಶಿವಾನುಭವ ಸಹಾಯ ಧನ

| | | |
|---|---|---|
| ೧ | ಶ್ರೀ ಗುರಪಾದಪ್ಪ ಸಂಗಪ್ಪ ಮಾಳವಾಡ ಗೋವನಕೊಪ್ಪ ತಾ. ಬದಾಮಿ ಇವರು ತಮ್ಮ ಅಣ್ಣಂದಿರಾದ ಶ್ರೀ ಸಂಗನಬಸಪ್ಪ ಮಾಳವಾಡ ಇವರು ೨೨.೪-೪೪ನೇ ದಿವಸ ಶಿವಾಧೀನರಾದ ಕಾಲಕ್ಕೆ ಶಿವಾನುಭವಕ್ಕೆ ಕಾಣಿಕೆ ಸಲ್ಲಿಸಿದ್ದು. | ೫—೦—೦ |

### ತಿದ್ದುಪಡಿ

ಹೋದ ತಿಂಗಳ ಶಿವಾನುಭವದಲ್ಲಿ ಶ್ರೀ ಬಸಪ್ಪ ಮೂಗಪ್ಪ ರೂಗಿ ಸಾ. ಹೆಬ್ಬಳ್ಳಿ ಇವರು ೫ ರೂ. ಕಾಣಿಕೆ ಸಲ್ಲಿಸಿದರೆಂದು ತಪ್ಪು ಪ್ರಕಟವಾಗಿದೆ. ಆದರೆ ಕಾಣಿಕೆ ಸಲ್ಲಿಸಿದವರು ಶ್ರೀ ಬಸಪ್ಪ ಮೂಗಪ್ಪ ಧಾರವಾಡ ಸಾ. ಹೆಬ್ಬಳ್ಳಿ ತಾ. ಧಾರವಾಡ ಇವರು ಇರುತ್ತಾರೆ.

R. N. B. 2554

**BOOK-POST.**

ಶ್ರೀ. ರಾ॥ ರಾ॥ ಚನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)

From,
Shivanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ॥ ಸಾ॥ ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ಗುಂ (೫) ನೇ ಮನೆಯಲ್ಲಿ ಪ್ರಸಿದ್ಧಿಸಿದರು.

ಕಾವ್ಯಗ್ರಂಥಗಳನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಶಿವತತ್ವ ರತ್ನಾಕರ ಗ್ರಂಥದಿಂದ ಅವನು ಅನೇಕ ಶಾಸ್ತ್ರಗಳಲ್ಲಿ ಹೆಚ್ಚಿನ ಜ್ಞಾನವನ್ನು ಸಂಪಾದನೆ ಮಾಡಿದ್ದು ವ್ಯಕ್ತವಾಗುತ್ತದೆ. ಅವನು ಅತ್ಯಂತ ದಾನಶೂರನಾಗಿದ್ದನು. ತನ್ನ ರಾಜ್ಯದಲ್ಲಿ ಯಾರಾದರೂ ಜಂಗಮರೂ ಫಕೀರರೂ ಬಂದರೆ ಅವರಿಗೆ ಒಂದು ಕೊಡೆ ಮತ್ತು ಒಂದು ಕಂಬಳಿಯನ್ನು ದಾನಮಾಡುವನು. ಅವನ ಕಾಲದಲ್ಲಿ ರಾಜ್ಯದಲ್ಲೆಲ್ಲ ಅನೇಕ ದಾಸೋಹ ಮಠಗಳು ಉಂಟಾಗಿದ್ದವು. ಅವುಗಳಲ್ಲಿ ಎಲ್ಲರಿಗೂ ಉಚಿತ ಭೋಜನವು ಪ್ರಯಾಣಿಕರಿಗೆ ದೊರೆಯುತ್ತಿತ್ತು. ರಾತ್ರೀ ಕಾಲದಲ್ಲಿ ಅರಣ್ಯಪ್ರದೇಶಗಳಲ್ಲಿ ಜನರು ದಾರೀತಪ್ಪಿ ಹೋಗಿರಬಹುದೆಂದು ತಿಳಿದು ಚಾರರನ್ನು ಅಲ್ಲಲ್ಲಿ ಇಟ್ಟು ಇಂಥವರಿಗೆ ಅನ್ನವನ್ನೂ ಚಿಕ್ಕಮಕ್ಕಳಿದ್ದರೆ ಅವರಿಗೆ ಹಾಲನ್ನೂ ಒದಗಿಸಿಕೊಡುವ ವ್ಯವಸ್ಥೆ ಮಾಡುತ್ತಿದ್ದನು. ಅವನ ರಾಜ್ಯದಲ್ಲೆಲ್ಲ ಬಹು ಕಡೆಗೆ ಛತ್ರಗಳು ಸರಕಾರದ ಸಹಾಯದಿಂದ ಸ್ಥಾಪಿತವಾಗಿದ್ದವು. ಮತ್ತು ಅಲ್ಲಿ ಪ್ರವಾಸಿಕರಿಗೆ ಪುಕ್ಕಟೆ ಆಹಾರವು ದೊರಿಯುತ್ತಿತ್ತು. ಈ ಪ್ರಕಾರ ಬಸವಪ್ಪನಾಯಕನು ೧೭ ವರ್ಷ ಅತ್ಯುತ್ತಮ ರೀತಿಯಿಂದ ರಾಜ್ಯಪರಿಪಾಲನೆ ಮಾಡಿದನು. ಈ ಮೂಲಕ ಅವನಿಗೆ ಹಿರಿಯ ಬಸವಪ್ಪನಾಯಕ, ಅಥವಾ ಬುದ್ಧಿ ಬಸವಪ್ಪನಾಯಕ ಎಂಬ ಹೆಸರುಗಳು ಪ್ರಾಪ್ತವಾಗಿರುತ್ತವೆ

**ಸೋಮಶೇಖರನಾಯಕಃ**— ಬಸವಪ್ಪನಾಯಕನ ತರುವಾಯ ಅವನ ಹಿರಿಯಮಗನಾದ ಸೋಮಶೇಖರನಾಯಕನು ಪಟ್ಟವೇರಿದನು. ಇವನು ತನ್ನ ತಂದೆಯಂತೆಯೇ ಧರ್ಮಿಷ್ಠನಾಗಿ ಜಾಣತನದಿಂದ ರಾಜ್ಯಭಾರನಡಿಸಿದನು. ಅವನ ಕಾಲದಲ್ಲಿ ಮೈಸೂರು ರಾಜರು ಚಿಕ್ಕದೇವರಾಜನ ತರುವಾಯ ಬಹಳ ದುರ್ಬಲರಾಗಿದ್ದರಿಂದ ಅಲ್ಲಿಯ ದಳವಾಯಿಗಳ ಮತ್ತು ಮಂತ್ರಿಗಳ ಪ್ರಾಬಲ್ಯವು ಹೆಚ್ಚಾಗಿ ಅತ್ತಕಡೆಯಿಂದ ರಾಜ್ಯಕ್ಕೆ ತೊಂದರೆಗಳು ಉಂಟಾಗುವದು ಕಡಿಮೆಯಾಗಿತ್ತು. ಉತ್ತರದಲ್ಲಿ ಸ್ವಾದಿಯ ಅರಸನಾದ ಬಸವಲಿಂಗರಾಜನೂ ಕೆಳದಿಯ ರಾಜನ ಗೊಡವೆಗೆ ಹೋಗುತ್ತಿದ್ದಿಲ್ಲ. ಸುಮಾರು ೩೦—೪೦ ವರ್ಷಗಳಿಂದಲೂ ಕೆಳದಿ ಮತ್ತು ಸ್ವಾದಿಯ ಅರಸರು ಪರಸ್ಪರ ಸ್ನೇಹದಿಂದ ವರ್ತಿಸುತ್ತಾ ಬಂಧರು. ಈ ಉಭಯ ರಾಜ್ಯಗಳ ಅರಸರು ವ್ಯಾಪಾರೋದ್ಯೋಗಗಳಿಗೆ ಸಹಾಯಮಾಡುತ್ತ ಸುಧಾರಣೆಯ ಕಾರ್ಯಗಳಿಗೆ

ಹೆಚ್ಚಿಗೆ ಮನಸ್ಸು ಹಾಕಿದವರಾಗಿದ್ದರು. ಕೆಳದಿಯ ರಾಜ್ಯದ ಈಶಾನ್ಯ ಮತ್ತು ಪೂರ್ವಭಾಗಗಳಲ್ಲಿ ಸವಣೂರ ನವಾಬನೂ ಬೇಡರ ಅರಸರೂ ರಾಜ್ಯವಾಳುತ್ತಿದ್ದರು. ಅವರೆಲ್ಲರಲ್ಲಿ ಈ ಕಾಲದಲ್ಲಿ ಅಂತಸ್ಥ ಕಲಹಗಳು ಬಹಳ ಹೆಚ್ಚಾಗಿದ್ದವು. ಆದ್ದರಿಂದ ಅವರೆಲ್ಲರು ಸೋಮಶೇಖರನಾಯಕನ ಸಹಾಯವನ್ನು ಆಗಿಂದಾಗ್ಗೆ ಅಪೇಕ್ಷಿಸುತ್ತಾ ಇದ್ದರು. ಕೆಲವೊಂದು ಸಮಯದಲ್ಲಿ ಸವಣೂರ ನವಾಬನಿಗೆ ಸೋಮಶೇಖರನಾಯಕನು ಹಣದಿಂದಲೂ ಸೈನ್ಯದಿಂದಲೂ ಸಹಾಯ ಮಾಡಿದನು. ಚಿಂತನಕಲ್ಲಿನ ಬೇಡರ ಅರಸನು ತನ್ನನ್ನು ವಿರೋಧಿಸಿದ್ದರಿಂದ ಸೋಮಶೇಖರ ನಾಯಕನು ಅವನ ಮೇಲೆ ಸಾಗಿ ಹೋಗಿ ಅವನ ಮುಖ್ಯ ಗ್ರಾಮವಾದ ಸಂತೇಬೆನ್ನೂರನ್ನು ಕಸೆದುಕೊಂಡಿನು. ಹರಪನಹಳ್ಳಿ, ರಾಯದುರ್ಗ ಮತ್ತು ತರೀಕೆರೆ ಇಲ್ಲಿಯ ಬೇಡರ ದೊರೆಗಳಲ್ಲಿ ಪರಸ್ಪರ ಕದನಗಳುಂಟಾಗುತ್ತಿದ್ದವು. ಆದರೆ ಸೋಮಶೇಖರ ನಾಯಕನು ಅವರಲ್ಲಿ ಪರಸ್ಪರ ಒಡಂಬಡಿಕೆಯಾಗಲು ಒಂದು ಕಾಲದಲ್ಲಿ ಬಹಳ ಪ್ರಯತ್ನಿಸಿದನು. ಈ ಪ್ರಕಾರ ಕೆಳದಿಯ ರಾಜ್ಯದ ವರ್ಚಸ್ಸು ನೆರೆಹೊರೆಯ ರಾಜ್ಯಗಳಲ್ಲಿ ಬಹಳ ಹೆಚ್ಚಾಗಿತ್ತು.

ಇವನ ಕಾಲದಲ್ಲಿ ಮಹಾರಾಷ್ಟ್ರ ದೇಶದಲ್ಲಿ ಪೇಶ್ವೆಯವರು ಪ್ರಬಲರಾಗಿದ್ದರು. ಅವರಲ್ಲಿ ಬಾಳಾಜಿವಿಶ್ವನಾಥನು ಕರ್ನಾಟಕವನ್ನು ಅಭಿಯೋಗಿಸಿ ಚಿಕ್ಕಚಿಕ್ಕ ಪಾಳ್ಯಗಾರರನ್ನು ಸೋಲಿಸುತ್ತ ಮೈಸೂರಿನ ವರೆಗೂ ಸಾಗಿಹೋದನು. ಮರಾಠರು ಜನರನ್ನು ನಿರ್ಬಂಧಿಸಿ ಅವರಿಂದ ಹಣವನ್ನು ದೋಚಿಕೊಂಡು ಹೋಗುವದೇ ಅವರ ಮುಖ್ಯ ಕಾಯಕವಾಗಿತ್ತು. ಒಮ್ಮೆ ಕೆಳದಿಯ ರಾಜನು ತನ್ನ ಮೇಲೇರಿ ಬಂದ ಸೇನಾಪತಿಗೆ ಬಹಳ ಹಣವನ್ನು ಕೊಟ್ಟು ಅವನನ್ನು ಹಿಂದಿರುಗಿಸಬೇಕಾಯಿತು.

ಸೋಮಶೇಖರ ನಾಯಕನು ಘಟ್ಟದ ಮೇಲಿನ ಪ್ರಾಂತವನ್ನೂ ಅದರ ಕೆಳಗಿದ್ದ ಮಂಗಳೂರ ಜಿಲ್ಲೆಯನ್ನೂ ಬಹು ಭದ್ರವಾಗಿ ತನ್ನ ವಶದಲ್ಲಿಟ್ಟುಕೊಂಡನು. ಮಂಗಳೂರಿನಲ್ಲಿಯ ಕೆಲವು ಪಾಳ್ಯಗಾರರು ದಂಗೆ ಎಬ್ಬಿಸಲು ಅವರನ್ನು ಸೋಲಿಸಿ ತನ್ನ ಅಂಕಿತದಲ್ಲಿಟ್ಟುಕೊಂಡನು. ಈ ಪ್ರಕಾರ ರಾಜನು ಬಂದರ ಪ್ರದೇಶಗಳಲ್ಲಿ ಅವ್ಯವಸ್ಥೆಯುಂಟಾಗದಂತೆ ಬಹಳ ಜಾಗ್ರತೆ ಪಡುತ್ತಿದ್ದನು.

ಅರಸನು ಬಹಳ ಧರ್ಮಿಷ್ಠನಾಗಿದ್ದನು. ರಾಜ್ಯದಲ್ಲಿ ಗೋಕರ್ಣ, ಮಹಾಬಳೇಶ್ವರ, ಕೊಲ್ಲೂರು ಮೂಕಾಂಬಿಕೆ, ಸುಬ್ರಹ್ಮಣ್ಯ, ಕೋಟಿಲಿಂಗೇಶ್ವರ ಹೀಗೆ ಅನೇಕ ಮಹತ್ವದ ದೇವಾಲಯಗಳಿದ್ದು ಅವುಗಳನ್ನು ಅವನು ಆಗಿಂದ್ದಾಗ್ಗೆ ಕಂಡು ಅಲ್ಲಿ ವಿಶೇಷ ದಾನಧರ್ಮಗಳನ್ನು ನಡಿಸುತ್ತಾ ಬಂದನು. ಬಿದನೂರಿನ ರಾಜಧಾನಿಗೆ ಉಪನಗರವಾಗಿ ಇನ್ನೊಂದು ನಗರವನ್ನು ಕಟ್ಟಿಸಿ ಅದಕ್ಕೆ ಚಂದ್ರಶೇಖರ ಪುರವೆಂಬ ಹೆಸರನ್ನು ಇಟ್ಟನು. ಶೃಂಗೇರಿಯಲ್ಲಿದ್ದ ಶ್ರೀಶಂಕರಾಚಾರ್ಯ ಸ್ವಾಮಿಗಳಿಗೆ ಬಹಳ ಸಾಲವಾಗಿ ಅವರು ಕಷ್ಟಪಡುತ್ತಿದ್ದರು. ರಾಜನು ಅವರ ಸಾಲವನ್ನೆಲ್ಲ ತೀರಿಸಿಬಿಟ್ಟನು ಮತ್ತು ಅವರನ್ನು ರಾಜಧಾನಿಗೆ ಬರಮಾಡಿಕೊಂಡು ಬಹಳ ಸನ್ಮಾನಿಸಿದನು.

ರಾಜನು ವೀರಶೈವ ಧರ್ಮವನ್ನು ಪೋಷಿಸುತ್ತ ಅದರ ವಿದ್ವಾಂಸರಿಗೆ ಬಹಳ ಸಹಾಯ ಮಾಡುವನು. ಅವನಿಗೆ ನಿರ್ವಾಣಯ್ಯ ಎಂಬ ಪಂಡಿತನು ಮಂತ್ರಿಯಾಗಿದ್ದನು. ಈತನು ಶಿವಪೂಜಾವಿಧಿ ಎಂಬ ಗ್ರಂಥವನ್ನು ರಚಿಸಿದ್ದಾನೆ. ಈ ಪ್ರಕಾರ ಸೋಮಶೇಖರ ನಾಯಕನು ಅತ್ಯುತ್ತಮ ರೀತಿಯಿಂದ ೨೨ ವರ್ಷ ರಾಜ್ಯವಾಳಿದನು.

**೨ನೇ ಬಸವಪ್ಪನಾಯಕನು**:—ಸೋಮಶೇಖರನಾಯಕನ ತರುವಾಯ ಅವನ ತಮ್ಮನ ಮಗನಾದ ೨ನೇ ಬಸವಪ್ಪನಾಯಕನು ಪಟ್ಟವೇರಿದನು. ಇವನ ಆಳಿಕೆಯ ಆರಂಭದಲ್ಲಿ ಅವನ ಮಲತಾಯಿಯ ಮೂಲಕ ಬಹಳ ತೊಂದರೆಗಳುಂಟಾದವು. ಆದರೆ ಅವುಗಳನ್ನು ಹೋಗಲಾಡಿಸಿಕೊಂಡನು. ಮುಂದೆ ಅವನ ರಾಜ್ಯದಲ್ಲಿ ಶಾಂತಿಸಮಾಧಾನಗಳು ನೆಲೆಗೊಂಡವು. ಮಧ್ಯದಲ್ಲಿ ಮೈಸೂರಿನ ಅರಸನು ತರೀಕೆರೆಯ ನಾಯಕನನ್ನು ಕೂಡಿಕೊಂಡು ರಾಜ್ಯದಲ್ಲಿ ನುಗ್ಗಲು ಪ್ರಯತ್ನಿಸಿದನು. ಆದರೆ ಅದು ಸಫಲವಾಗಲಿಲ್ಲ. ಮಂಗಳೂರು ಪ್ರಾಂತವನ್ನು ಮಲಬಾರಿನ ನಾಯರರು ಅಭಿಯೋಗಿಸಲು ಅಲ್ಲಿಯ ಕೆಳದಿಯ ಸೈನ್ಯಗಳು ಅವರನ್ನು ಹಿಂದಕ್ಕಟ್ಟಿದವು. ರಾಜನು ಇತ್ತಕಡೆಯ ರಾಜ್ಯದ ಮೇರೆಯನ್ನು ಭದ್ರಪಡಿಸುವದಕ್ಕೋಸ್ಕರ ಉಡುಪಿಯ ಸಮೀಪದಲ್ಲಿ ದರಿಯಾಬಾದ ಮತ್ತು ತೊಸಕೆ ಎಂಬಲ್ಲಿ ಕೋಟೆಗಳನ್ನು ಕಟ್ಟಿಸಿದನು. ಶಿವರಾಜೇಂದ್ರಗಡವನ್ನು ಹೆಚ್ಚಿಗೆ ಭದ್ರಪಡಿಸಿದನು. ಈ ಪ್ರಕಾರ ವ್ಯವಸ್ಥೆಯನ್ನು ಮಾಡುತ್ತಿರಲಾಗಿ ಚಿತ್ರಕಲ್ಲದುರ್ಗದ ಪಾಳ್ಯಗಾರನೊಡನೆ ಕಡುತರವಾದ ಕಾಳಗ

ವನ್ನು ಅವನು ಪ್ರಾರಂಭಿಸುವ ಪ್ರಸಂಗವು ಬಂದೊದಗಿತು. ಹರಪನ ಹಳ್ಳಿಯ ಸೋಮಶೇಖರನಾಯಕನಿಗೂ ಚಿತ್ರಕಲ್ಲದುರ್ಗದ ಬೇಡರ ನಾಯಕನಿಗೂ ಮೊದಲು ಕದನವು ಉಂಟಾಯಿತು. ಇದರಲ್ಲಿ ಹರಪನ ಹಳ್ಳಿಯ ನಾಯಕನು ಬಸವಪ್ಪನಾಯಕನ ಸಹಾಯವನ್ನು ಅಪೇಕ್ಷಿಸ ಲಾಗಿ ಬಸವಪ್ಪನಾಯಕನು ಚಿತ್ರಕಲ್ಲದುರ್ಗದ ನಾಯಕನ ರಾಜ್ಯವನ್ನು ಅಭಿಯೋಗಿಸಿದನು. ಈ ಕಾಲದಲ್ಲಿ ಅರ್ಕಾಟ ನವಾಬನ ರಾಜ್ಯದ ವಿಷಯವಾಗಿ ಇಂಗ್ಲಿಷರಿಗೂ ಫ್ರೆಂಚರಿಗೂ ಕದನಗಳು ಪ್ರಾರಂಭವಾಗಿ ದ್ದವು. ಇಂಗ್ಲಿಷರು ಮಹಮ್ಮದಲ್ಲಿಯ ಪಕ್ಷವನ್ನು ಮತ್ತು ಫ್ರೆಂಚರು ಚಂದಾಸಾಹೇಬನ ಪಕ್ಷವನ್ನು ವಹಿಸಿದ್ದರು. ಆದರೆ ಚಂದಾಸಾಹೇ ಬನು ತನ್ನ ಸಂರಕ್ಷಣೆಗೋಸ್ಕರ ಸಾತಾರೆಗೆ ಓಡಿಹೋಗಿ ಅಲ್ಲಿ ಆಶ್ರಯ ಹೊಂದಿದ್ದನು. ಅವನು ಫ್ರೆಂಚ ಗವ್ಹರ್ನರನಾದ ಡುಪ್ಲೆಯ ಸೂಚ ನೆಯ ಮೇರೆಗೆ ಸಾತಾರೆಯಿಂದ ಹೊರಟು ಅರ್ಕಾಟಕ್ಕೆ ಬರುವ ದಾರಿ ಯಲ್ಲಿ ಅವನು ಚಿತ್ರಕಲ್ಲದುರ್ಗದ ಪ್ರಾಂತದಲ್ಲಿ ಬರಲು ಇಲ್ಲಿಯ ಬೇಡರ ದೊರೆಗಳು ಬಹಳ ಪ್ರಬಲರೆಂದು ಭಾವಿಸಿ ಅವರಿಂದ ಮುಂದೆ ತಾನು ಸಹಾಯವನ್ನು ಹೊಂದಬೇಕೆಂದು, ಈ ಕಾಲದಲ್ಲಿ ಕೆಳದಿಯ ರಾಜರ ಕೂಡ ನಡೆದ ಯುದ್ಧದಲ್ಲಿ ಅವನು ಚಿತ್ರಕಲ್ಲದುರ್ಗದ ದೊರೆಗಳ ಪಕ್ಷವನ್ನು ವಹಿಸಿ ಅವನಿಗೆ ಸಹಾಯವಾಗಿ ಯುದ್ಧದಲ್ಲಿ ಸೇರಿಕೊಂಡನು. ಆಗ ಮಾಯಕೊಂಡೆಯಲ್ಲಿ ಉಭಯಪಕ್ಷಗಳ ನಡುವೆ ಘೋರವಾದ ಕಾಳಗವು ಸಂಭವಿಸಿತು. ಈ ಕಾಳಗದಲ್ಲಿ ಚಿತ್ರಕಲ್ಲದುರ್ಗದ ನಾಯ ಕನು ಕೆಳದಿಯ ಅರಸನಿಂದ ಪರಾಜಿತನಾದನು. ಅವನು ರಣಭೂಮಿ ಯಲ್ಲಿ ಮಡಿದು ಬಿದ್ದನು. ಚಂದಾಸಾಹೇಬನ ಮಗನು ಹತನಾ ದನು. ಚಂದಾಸಾಹೇಬನು ಕೆಳದಿಯ ದಂಡಾಳುಗಳ ಕೈಯ್ಯಲ್ಲಿ ಸಿಕ್ಕಿ ಬಿದ್ದು ಬಿದನೂರು ರಾಜಧಾನಿಗೆ ಒಯ್ಯಲ್ಪಟ್ಟನು. ಮುಂದೆ ಚಂದಾ ಸಾಹೇಬನು ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಫ್ರೆಂಚರನ್ನು ಕೂಡಿ ದನು. ಈ ಯುದ್ಧದ ತರುವಾಯ ಕೆಳದಿಯ ರಾಜ್ಯವನ್ನು ಅಭಿಯೋ ಗಿಸಲಿಕ್ಕೆ ಮುಂದೆ ಯಾವ ನೆರೆಹೊರೆಯ ಅರಸನು ಧೈರ್ಯ ಮಾಡ ಲಿಲ್ಲ. ಈ ಯುದ್ಧವು ೧೭೪೮ ರಲ್ಲಿ ಸಂಭವಿಸಿತು.

ಬಸವಪ್ಪ ನಾಯಕನಾದರೂ ಧರ್ಮಿಷ್ಠನಾಗಿ ಅನೇಕ ಮಠಗಳಿಗೆ ಉಂಬಳಿಗಳನ್ನು ಹಾಕಿಕೊಟ್ಟನು. ಅವನು ಮಂತ್ರರಾಜಪುರ ಆನಂದ

ಮುಂಬಯಿ ಸರಕಾರದವರು
ಪಾಸ ಮಾಡಿದ "ಲೋಣಿ" ಇವರ ಗ್ಯಾಸ ಪ್ಲಾಂಟಗಳನ್ನೇ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯ ಖರ್ಚು ಬಹಳೇ ಕಡಿಮೆ ಇದ್ದು, ಬೇಗನೆ ಸ್ಟಾರ್ಟವಾಗಿ ಭರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳೇ ಸುಲಭ. ಮಶಿನರಿಗಳಿಗೆ ಬಿಲಕೂಲ ಅಪಾಯವಿಲ್ಲ. ದೃಷ್ಟಿಗೆ ಶುಭಕ. ಇದಲ್ಲದೆ ಟುಯಿರಿಂಗ ಕಾರ್ಸ ಮತ್ತು ಆಯಿಲ್ ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟಿವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

ದಿ ಲೋಣಿ ಇಂಜನಿಯರಿಂಗ ವರ್ಕ್ಸ ಸೋಲಾಪೂರ.

---

**BOOK-POST.** R. N B. 2554

ಶ್ರೀ. ರಾ|| ರಾ||

ಪ್ರ ಸಿದ್ದಪ್ಪ ಬಡಿಗೇರ
ಪೋ. ಬೆಳಗಟ್ಟಿ
ಜ್ಹಿ. ಧಾರವಾಡ
(M. S. M. R.)

From,
Shivanubhava
Office
Bijapur.

ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಪಿ. ಜಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ಸ್ವಂತ ಮನೆಯಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚ ಸಹಿತ ರೂ ೩—೧೦-೦

ಸಂಪುಟ ೧೮]  ಜುಲೈ ೧೯೪೪.  [ಸಂಚಿಕೆ ೧೦

## ವಿಷಯಾನುಕ್ರಮಣಿಕೆ

# ಶಿವಾನುಭವ

| ವರ್ಷ ೧೮ | ಜುಲೈ ೧೯೪೪. | ಸಂಚಿಕೆ ೧೦ |
| --- | --- | --- |

## ಕನ್ನಡ ಭಕ್ತಿದೀಪಕ ಬಸವಣ್ಣ.

### ೨. "ಗೆಲುವೆನೆಂಬ ಭಾಷೆ."

(ಲೇ:— ಶ್ರೀಯುತ ಸಿಂಪಿ ಲಿಂಗಣ್ಣ.)

---

### ಸ್ವದರ್ಶನ.

ಆತ್ಮತಿರಸ್ಕಾರವು ತಲೆದೋರಿದ ವ್ಯಕ್ತಿಗೆ, ತನ್ನನ್ನುಳಿದು ಎಲ್ಲವು ಶ್ರೇಷ್ಠವೆಂದೂ, ತಥ್ಯಪೂರ್ಣವೆಂದೂ ಕಾಣಿಸ ತೊಡಗುವದು; ಸುತ್ತಲಿನ ವೈಭವದಲ್ಲಿ ತಾನೊಂದು ಕನಿಷ್ಠವೆಂದೂ ನಿರುಪಯುಕ್ತ ವಸ್ತುವೆಂದೂ ಅನಿಸಹತ್ತುವದು. ಗುಣಾಂಶಗಳೆಲ್ಲವೂ ಮಾಯವಾದಂತೆ ತೋರುವದು ತನ್ನ ಭಕ್ತಿ ಡಂಭಾಚಾರವಾಗಿಯೂ, ತಿಳಿವು ಕಡಲೊಳಗಿನ ಮಳಲಕಣವಾಗಿಯೂ ಕಾಣಿಸುವವು. ತಾನು ವಹಿಸಿದ ಸದಾಚಾರವು 'ಕಾಕಸಂಘಾತದೊಳಗಿರ್ದ ಕೋಗಿಲೆಯ ಮರಿ'ಯಂತೆ ಭಾಸವಾಗುವದು. ಒಟ್ಟಿನ ಮೇಲೆ ಆತನ ಕಣ್ಣಿಗೆ ಭೂತಕನ್ನಡಿಯೇ ಬಂದು ಬಿಡುವದು; ಅದರಲ್ಲಿಯೂ ಆ ಕನ್ನಡಿಯು ಅವಗುಣಗಳ ಕಡ್ಡಿಯನ್ನು ಗುಡ್ಡವನ್ನಾಗಿ ಮಾಡಿತೋರಿಸುವದು. ಇನ್ನೊಬ್ಬರನ್ನು ತಿದ್ದುವುದಕ್ಕೆ ತೊಡಗುವುದು ಲಜ್ಜಾಸ್ಪದವೆನಿಸುವದು. "ತನ್ನ ವಿಚಾರಿಸಲೊಲ್ಲದು. ಇದಿರ ವಿಚಾರಿಸಹೋಹುದೀ ಮನವು" ಎನ್ನುವದು. ಬಾಹ್ಯಕವೇಷಭೂಷಣಗಳು ಶುದ್ಧ ಸೋಗೆನ್ನುವದು. ಅದು "ತೊತ್ತಿನ ಕೊರಳಲ್ಲಿ ಹೊಂಬಿತ್ತಾಳೆಯ ಸಿಂಗಾರ" ಮಾಡಿದಂತೆ. "ಗುರುಗಂಜಿ ಮಾಣಿಕಕ್ಕೆ

ಸರಿಯುಪ್ಪುದೇ?" ಎಂದು ತನ್ನನ್ನು ತಾನು ಕೇಳುವದು. ತನ್ನ ಮನಸಿನ ತಿದ್ದುಪಡೆಯು ನಾಯುಬಾಲದಂತೆ ಆಗಹತ್ತಲು, "ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯುಕಟ್ಟಿ, ಆಕಳ ಹಾಲನೆರೆದು, ಜೇನತುಪ್ಪವ ಹೊಯ್ದರೆ ಕಹಿಯುಹುದಲ್ಲದೆ ಸಿಹಿಯಾಗಬಲ್ಲದೇ?" ಎಂದು ಹೆಸರಿಡುವದು. ಮನದ ವಿಕಾರಗಳು ಹೊತ್ತುಸಾಧಿಸಿ ವ್ಯಕ್ತಿಯನ್ನು ತೊಡಕಾಲುಹಾಕಿ ಕೆಡವಿದಾಗ ತಲೆಗೆ ಬಡಿದು, ಆ ಚಕಮಕಿಯ ಮಿಂಚಿನಲ್ಲಿ-- "ತನುವಿನ ಕೋಪ ತನ್ನ ಹಿರಿಯತನದ ಕೇಡು, ಮನದ ಕೋಪ ತನ್ನ ಅರುಹಿನ ಕೇಡು; ಮನೆಯೊಳಗಣ ಕಿಚ್ಚು ತನ್ನ ಮನೆಯ ಸುಟ್ಟಲ್ಲದೆ ನೆರೆಮನೆಯ ಸುಡದು." ಎಂಬ ಬುದ್ಧಿಕಲಿಯುವದು. "ತನ್ನ ಮುನ್ನಿನ ಸ್ವಭಾವವನ್ನು ಬಿಡದ ಅಂದಣವನೇರಿದ ಸೊಣಗ"ನಂಥ ಮನುಷ್ಯ! "ಕಲ್ಲು ಎನಿಸು ಕಾಲ ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲದೇ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ, ಮನದಲ್ಲಿ ದೃಢವಿಲ್ಲದನ್ನಕ್ಕ? ನಿಧಾನವ ಕಾಯ್ದಿದ್ದ ಬೆಂತರನಂತೆ ಅದರ ವಿಧಿ." ಧರ್ಮದ ಬಾಹ್ಯಕರ್ಮಗಳು, ಅಂತರಂಗದ ಪರಿಶುದ್ಧತೆಯಿಲ್ಲದಿದ್ದರೆ ಬಸವಣ್ಣನಿಗೆ ಸಹನೆಯುನ್ನುಂಟುಮಾಡಬಲ್ಲವೇ? ಲಿಂಗಬಂಧನವಾದ ಮಾತ್ರಕ್ಕೆ "ಲಿಂಗದುಂಡಿಗೆಯ ಪಶು" ವಿಗಿಂತ ಹೆಚ್ಚಿಗೇನು? ವಿಭೂತಿ ರುದ್ರಾಕ್ಷಿಗಳನ್ನು ಧರಿಸಿದರೆ ತಾನೊಂದು "ವೇಷಧಾರಿ; ಉದರಪೋಷಕ;" ಬಹಳವಾದರೆ 'ಶರಣರ ಧರ್ಮದ ಕಪಿಲೆ. ಇಂಥ ಕರ್ಮಗಳೆಲ್ಲ 'ಬೆಳ್ಳಿತ್ತಿನ ಮರೆಯಲಿದ್ದು ಹುಲ್ಲೆಗೆ ಅಂಬತೊಡುವ' ಮೋಸ; 'ಹಾವ ತೋರಿ ಹವಿಯ ಬೇಡುವ' ಮೋಡಿ; "ಮೋಟನ ಪರೌಳ; ಮೂಕೊರತೆಯ ಶೃಂಗಾರ; ಕುರುಡನ ಬೇಟ," "ಕಾಲಸಾಲದಾರಿದ್ರ್ಯಕ್ಕಂಜಿ, ಬಸಿರಬಾಳುವೆಗೆ ಮಸಿಯ ಹೂಸಿ ನೇರಿಲಹಣ್ಣು ಮಾರುವ" ಮಾಟ.

"ಓಡೆತ್ತಬಲ್ಲದು ಅವಲಕ್ಕಿಸವಿಯ? ಕೊಡಗನೆತ್ತಬಲ್ಲದು ಸೆಳೆಮಂಚ ಸುಖವ? ಕಾಗೆ ನಂದನವನದೊಳಗಿದ್ದರೇನು? ಕೋಗಿಲೆಯಾಗಬಲ್ಲದೇ ಹೇಳಾ? ಕೊಳನ ತಡೆಯಲೊಂದು ಬಕ ಕುಳಿತಿದ್ದರೇನು? ಕಳಹಂಸನಾಗಬಲ್ಲದೇ?"

"ತನುಮುಟ್ಟಿ ಮನಮುಟ್ಟದಿದ್ದರೆ ಅದು ಒಳಗೆಲ್ಲ ಸಣಬು ತುಂಬಿದ ಒಳ್ಳೆಯ ವೈಲಾರ" ನಂಥ ಬರಿಯ ಬಾಹ್ಯಾಚಾರವೂ, "ಹಾಗದ ಕೆರಹ ಹೊರಗೆ ಕಳೆದು ದೇಗುಲಕ್ಕೆ ಹೋಗಿ (ಕೆರಹಿನ ಧ್ಯಾನವಲ್ಲದೆ ದೇವರ

ಧ್ಯಾನವಿಲ್ಲ.) ನಮಸ್ಕಾರ ಮಾಡುವವನ "ಧ್ಯಾನ"ವೂ ಒಂದೇ ಜಾತಿಯವು.

ಈ ರೀತಿಯಾಗಿ ಸ್ವದರ್ಶನವಾಗಲು — "ಭಕ್ತಿ ಎಳ್ಳನಿತಿಲ್ಲ ಯುಕ್ತಿಶೂನ್ಯನಯ್ಯ ನಾನು; ಒಂದುವನರಿಯದ ಸಂದೇಹಿ; ನಂಬುಗೆಯಿಲ್ಲದ ಡಂಭಕ; ಮುಳಲೊಟ್ಟಲೆನ್ನ ಮಾತು; ಆನು ವೇಷಧಾರಿ; ಕಾಟುಗ, ಕೆತ್ತುಗ, ಪೊಳ್ಳುಗನೆಂಬುದು ಎನ್ನ ಹೆಸರು. ಲೌಕಿಕರ ಕಂಡು ಆಡುವೆ ಹಾಡುವೆ; ಸಹಜಗುಣ ಎನ್ನಲಿಲ್ಲವಯ್ಯ; ನಿಜಭಕ್ತಿ ಎನಗಿಲ್ಲ" ಎಂಬ ಆತ್ಮನಿವೇದನಕ್ಕೆ ಬಂದ ಬಸವಣ್ಣನಿಗೆ ಶಾಸ್ತ್ರಪುರಾಣಾದಿ ಪಠನಕರ್ಮವು ಗಿಳಿಯೋದಿನಂತೆ ವ್ಯರ್ಥವೆಂದೂ, ತನ್ನ ಕೊಲ್ಲುವ ಬೆಕ್ಕು ಯಾವಾಗ ಬಂದೀತೆನ್ನುವುದು ಅದಕ್ಕೇ ತಿಳಿಯದೆಂದೂ ಅದನ್ನು ಮರೆದಲಿಸಿ, ತಾನೊಬ್ಬ ಅಲ್ಪ ಜೀವಿಯೆಂಬ ಭಾವನೆಯು ಬಲಗೊಳ್ಳುವದು.

## ಇರುವೆ ಸಕ್ಕರೆ ಸವಿಯುವದು.

"ತನ್ನ ತಾನು ಕೊಂದುಕೊಳ್ಳಲು ಒಂದು ಸೂಜಿ ಸಾಕು; ಹೆರವರನ್ನು ವಧಿಸಲು ಕತ್ತಿಗುರಾಣಿ ಬೇಕು" ಎಂದು ರಾಮಕೃಷ್ಣರು ಹೇಳುತ್ತಾರೆ. ಆತ್ಮೋದ್ಧಾರಕನು ತಾನು ಕಿರಿಯನೆಂಬ ಭಾವನೆಯುಳ್ಳವನಿರುತ್ತಾನೆ. ಕಿರಿಯನೆಂದರೆ ಜ್ಞಾನಶಕ್ತಿಪ್ರೇಮಗಳು ತನ್ನಲ್ಲಿಲ್ಲವೆಂಬ ಭಾವನೆಯುಳ್ಳವನು. ತನ್ನಲ್ಲಿಲ್ಲವೆಂಬ ಭಾವನೆಯುಳ್ಳವನೇ ಅವನ್ನು ಗಳಿಸಲು ಹೊರಡುತ್ತಾನೆ. ಜೀವನಲ್ಲಿ ಅದೆಷ್ಟು ದ್ರವ್ಯವಿದ್ದರೂ ತನ್ನಲ್ಲಿದ್ದುದು ತೀರ ಅಲ್ಪವೆನ್ನುವ ಆಶೆಬುರುಕತನವೊಂದರಿಂದಲೇ ಆತನು ಹೆಚ್ಚು ಗಳಿಸಲು ಹೆಣಗಾಡುತ್ತಾನೆ. ಆನೆಯು ಕಬ್ಬಿನ ತೋಟವನ್ನು ಹಾಳುಮಾಡಿ ತಿಂದರೂ ಇರುವೆ ತಿನ್ನುವಷ್ಟು ಸಕ್ಕರೆಯನ್ನು ಅದು ತಿಂದಿರಲಾರದು. ಬಸವಣ್ಣನಿಗೆ ಆತ್ಮತಿರಸ್ಕಾರದಿಂದ ಅಲ್ಪನೆಂಬ ಭಾವನೆಯು ಮೊಳೆಯಿತು. ಆ ಮೊಳೆಯು ಮೊನೆಯಾಗಿ ಜ್ಞಾನಪರ್ವತವನ್ನೇ ಇಂದ್ರಾಯುಧದಂತೆ ಆಗೆದಗೆದು ನೋಡಿತು; ಕೂಡಲಸಂಗನ ಕೃಪಾಭಾಂಡಾರವನ್ನು ಭಕ್ತಿಯ ಬಿಸಿಯಿಂದ ಕರಗಿಸಿತು; ಕರ್ಮದಲ್ಲಿ ತೇಜವನ್ನು ತುಂಬಿ ಕಾಯಕದ ಕೈಲಾಸವನ್ನು ಕೈಗಿತ್ತಿತು. "ಎನಗಿಂತ ಕಿರಿಯರಿಲ್ಲ; ಶರಣರಿಗಿಂತ ಹಿರಿಯರಾರಿಲ್ಲ"ವೆಂಬುದು ಆತನಿಗೆ ಬರಿಯ ಬಾಯ ಮಾತಾಗಿರಲಿಲ್ಲ. ಅಂತರಂಗದ ಅನಾಸಿಕೆಯಾಗಿತ್ತು. ತನಗೆ ತನ್ನ

ಕೀರ ಸನಿಹದ ಮನಸ್ಸು ತಿಳಿದಂತೆ ಕೆರರ ಮನಸ್ಸು ಸುಲಭವಾಗಿ ಗೋಚರಿಸಲಾರದು. ಅಂತೆಯೇ "ಮಾವಿನ ಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯ" ಎನ್ನುವನು. ತನ್ನಲ್ಲಿ ತಾನು ಒಪ್ಪಿಕೊಳ್ಳುವುದೂ ದೊಡ್ಡತನದ ಲಕ್ಷಣವೇ. ಅದು ಅಹಂಕಾರದ ಪರಿವರ್ಜನೆ; ಅದರಲ್ಲಿಯೇ ಜ್ಞಾನಕಿರಣಗಳು ಪ್ರತಿಬಿಂಬಿಸುವವು.

"ಮರದ ನೆಳಲಲ್ಲಿದ್ದು ತನ್ನ ನೆಳಲನರಸಬಹುದೇ? ನಿಮ್ಮ ಶರಣರ ಮುಂದೆ ನಾನೇತರ ಭಕ್ತನಯ್ಯ? "ಆನೆ ಆ ದಾರಿಯಲ್ಲಿ ಹೋಯಿತ್ತೆಂದರೆ, ಆಡು ಆ ದಾರಿಯಲ್ಲಿ ಹೋಯಿತ್ತೆನ್ನಬಹುದೇ?

ಕಪ್ಪಡಿಸಂಗಮದಲ್ಲಿ ಕೂಡಲಸಂಗನ ಪಾದಕ್ಕೆ ನಮ್ರಭಕ್ತನಾಗಿಯೂ ಈಶಾನ್ಯ ಗುರುಗಳ ಸನ್ನಿಧಿಗೆ ವಿದ್ಯಾರ್ಥಿಯಾಗಿಯೂ ಬಸವಣ್ಣನು ಸೇರಿದ್ದೂ, ಕಲ್ಯಾಣದಲ್ಲಿ ಕರಣಿಕತನದ ಕಿರಿಯ ವೃತ್ತಿಯಿಂದಲೇ ಕಾಯಕವನ್ನು ಆರಂಭಿಸಿದ್ದೂ ಇರುವೆಯಾಗಿ ಸಕ್ಕರೆ ಮೇದುದಕ್ಕೆ ಉದಾಹರಣೆಗಳು.

ಡೋಹರ ಕಕ್ಕಯ್ಯ, ಮಾದಿಗರ ಚೆನ್ನಯ್ಯ, ಹಡಪದ ಅಪ್ಪಣ್ಣ, ನುಲಿಯ ಚಂದಯ್ಯ, ಮಡಿವಳ ಮಾಚಯ್ಯ ಮೊದಲಾದ ಕಡಿಮೆ ಕುಲದವರೆಂದು ಅನ್ನಿಸಿಕೊಳ್ಳುವವರೊಡನೆ ಹೊಂದಿಕೊಂಡಿರಬೇಕಾದರೆ ಅವರ ಅಂತರಂಗವನ್ನು ಅರಿತುಕೊಂಡಿರಬೇಕಷ್ಟೇ? ಅಂತರಂಗ ಪ್ರವೇಶ ಮಾರ್ಗವು ಅತಿ ಸೂಕ್ಷ್ಮವಾದದ್ದು. ಅಂಥ ಪ್ರವೇಶವು ಹಿರಿಯರಿಗೆ ಸಾಧ್ಯವೇ?

"ಅಪ್ಪನು ನಮ್ಮ ಮಾದಾರ ಚೆನ್ನಯ್ಯ. ಬೊಪ್ಪನು ನಮ್ಮ ಡೋಹರ ಕಕ್ಕಯ್ಯ ಚಿಕ್ಕಯ್ಯನೆಮ್ಮಯ್ಯ ಕಾಣಿರಣ್ಣ; ಅಣ್ಣನು ನಮ್ಮ ಕಿನ್ನರಿಬೊಮ್ಮಯ್ಯ. "ಚೆನ್ನಯ್ಯನ ಮನೆಯ ದಾಸನ ಮಗನು: ಕಕ್ಕಯ್ಯನ ಮನೆಯ ದಾಸಿಯ ಮಗಳು; ಇವರಿಬ್ಬರು ಹೊಲದಲು ಬೆರಣಿಯನಾಯ ಹೋಗಿ...ಮಾಡಿದರು ಅವರಿಬ್ಬರಿಗೆ ಹುಟ್ಟಿದ ಮಗ ನಾನು, ಕೂಡಲಸಂಗಮದೇವಸಾಕ್ಷಿಯಾಗಿ" ದೇವ ಸಾಕ್ಷಿಯಾಗಿ ಹೀಗೆ ಹೇಳುವ ಬಸವಣ್ಣನು ಹಾರುವನಲ್ಲವೇ, ಎಂದು ಮೂದಲಿಸಿ ಕೇಳಬಹುದು. ಅವರಿಗೆ ಈ ಮಾತು ಸಾಕು.—"ಹೊನ್ನು ಹೆಣ್ಣು ಮಣ್ಣೆಂಬ ಕರ್ಮದ ಬಲೆಯಲ್ಲಿ ಸಿಲುಕಿ ವೃಥಾ ಬರುದೊರೆಹೋಹ ಕೆಡುಕ ಹಾರುವ

ನಾನಲ್ಲ. ಹಾರುವೆನಯ್ಯ ಭಕ್ತರ ಬರವ ಗುಡಿಗಟ್ಟಿ" "ಹಾರುವೆ, ಹಾರುವೆನವ್ವ ನಾನು—ಸದ್ಭಕ್ತರೆನ್ನುವರೆನ್ನುವರೆಂದು. ಹಾರುವೆ, ಹಾರುವೆನವ್ವ ನಾನು – ಶರಣರೆನ್ನವರೆನ್ನವರೆಂದು"

ದೇವನೊಲಿದ ಜಾತಿಯುವನಾದ ಬಸವಣ್ಣನು ಆತನನ್ನೊಲಿಸಲು ಅತಿ ನಮ್ರನಾಗಿದ್ದನು. ಬೀಗಿ ಬೆಳೆದ ಕೊನೆವಾಳೆಯಂತೆ ಬಾಗಿ ಕೊಂಡು" ಇದ್ದನು. ಆದರಿಂದಲೇ, ಕೂಡಲಸಂಗನು ಬೇಡಿದ ಪದ ವಿಯನೀಯುವನೆಂದು ನಂಬಿದನು. "ಜನ್ಮಜನ್ಮಕ್ಕೆ ಹೋಗಲೀಯದೆ, ಸೋಹಂ ಎಂದೆನಿಸದೆ, ದಾಸೋಹಂ ಎಂದೆನಿಸಯ್ಯ" ಎಂದು ಮೊರೆಯಿಟ್ಟನು. "ತನುವ ಕೊಟ್ಟು ಗುರುವನೊಲಿಸಬೇಕು; ಮನವ ಕೊಟ್ಟು ಲಿಂಗವನೊಲಿಸಬೇಕು; ಧನವ ಕೊಟ್ಟು ಜಂಗಮವನೊಲಿಸ ಬೇಕು" ಎಂಬ ಉಪಾಯವೂ ಅವನಿಗೆ ತಿಳಿದಿತ್ತು. ಕೆಯ್ಯಬೋರಿಗೆ, ಮುಡಿಯ ಮೇಲೆ ಸಿಂಬಿ, ಸಿಂಬಕನ ಮನೆಯ ಮಗ ನಾನಯ್ಯ. ಕೂಡಲಸಂಗಮದೇವರ ಮಂಚದ ಕೂಡೇರಿ ಬಂದ ತೊತ್ತಿನ ಮಗ ನಾನಯ್ಯ" ಎನ್ನುವಲ್ಲಿ ಯಾವ ಕಾಯಕ ಕೈಕೊಂಡರೇನು, ಎಂಥ ವಂಶದಲ್ಲಿ ಹುಟ್ಟಿದರೇನು, ಕೂಡಲಸಂಗನ ತೊತ್ತಿನ ಮಗನೆಂದರೂ, ಅದು ಕೇಡಿಲ್ಲದ ಪದವಿಯೇ.

ಬಸವಣ್ಣನ ಈ ವಿನಯ, ಕಿರಿಯತನದ ಭಾವ—ನಮ್ರತೆಗಳು ಕಡೆತನಕವೂ ಅಚ್ಚಳಿಯದೆ ಉಳಿದವು. ತನ್ನ ಜೀವನದ ಮಹಾ—ಉದ್ದೇಶವು ಸಾಧಿಸಿದ ಮೇಲೆಯೂ ತಾನು "ಬರಿಯ ಬಸವ"ನೆನಿಸಿದರೆ ಸಾಕೆನ್ನುತ್ತಿದ್ದನು.

"ತಮತಮಗೆಲ್ಲ ನೊಸಲಕಣ್ಣವರು. ತಮತಮಗೆಲ್ಲ ನಂದಿವಾಹನರು. ತಮತಮಗೆಲ್ಲ ಖಟ್ವಾಂಗ ಕಪಾಲ ತ್ರಿಶೂಲಧರರು. ದೇವರಾರು ಭಕ್ತರಾರು ಹೇಳಿರಯ್ಯ. ಎನ್ನ ಒಚ್ಚಬರಿಯಬಸವನೆನಿಸಯ್ಯ."

ಈ ಮಾತನ್ನು ನಾಳೆ ಶಿವಲೋಕದಲ್ಲಿಯೂ ಹೇಳಲಿಕ್ಕೆ ಬಸವಣ್ಣನು ಸಿದ್ಧನೇ.

"ಬಸವ ಬಾರಯ್ಯ! ಮರ್ತ್ಯಲೋಕದೊಳಗೆ ಭಕ್ತರುಂಟೇ ಹೇಳಯ್ಯ. ಮತ್ತಾರೂ ಇಲ್ಲಯ್ಯ. ಮತ್ತಾರೂ ಇಲ್ಲಯ್ಯ. ನಾನೊಬ್ಬನೇ ಭಕ್ತ. ಮರ್ತ್ಯಲೋಕದೊಳಗಣ ಭಕ್ತರೆಲ್ಲರು ಜಂಗಮಲಿಂಗ ನೀನೇ ಅಯ್ಯ."

## ಸತ್‌ಸಹವಾಸ.

ಬಸವಣ್ಣನು ಇಡಿಯ ಜೀವಮಾನದಲ್ಲಿ ಭಕ್ತನೇ ಆಗಬೇಕೆಂದು ಹಾರಯಿಸಿದನು. ಅವನು ಹಾಗೆ ಆಗಿಯೂ ಬಿಟ್ಟನು. ಭಕ್ತಿಯೆಂದರೆ— ತನ್ನ ಇಷ್ಟದೇವತೆಯ ಮೂರ್ತಿಯನ್ನೋ, ಪಾದಾರವಿಂದಗಳನ್ನೋ, ಹೃದಯದಲ್ಲಿ ಸದಾ ನೆಲೆಸಿರುವಂತೆ ಧ್ಯಾನಿಸುವುದು, ಪ್ರಾರ್ಥಿಸುವುದು. ಹೃತ್‌ಗುಹೆಯು ದೇವಮಂದಿರವಾಗುವಂತೆ ಮಾರ್ಪಡಿಸುವುದು ಅದ ಕ್ಕಾಗಿ ಹೃದಯಶುದ್ಧಿ ಅಂದರೆ, ಆಚಾರವಿಚಾರಗಳ ಪಾವಿತ್ರ್ಯ ಬೇಕು. ಹಾಗಾಗಬೇಕಾದರೆ, ತನ್ನಲ್ಲಿರುವ ಗುಣಾಂಶಗಳನ್ನು ಕಂಡುಹಿಡಿದು, ಅವನ್ನು ಶಾಸ್ತ್ರಗಳು, ಸತ್ಪುರುಷರು, ಧ್ಯಾನಪ್ರಾರ್ಥನೆ ಇವುಗಳನ್ನೊದ ವಿಸಿ ಬೆಳೆಸುತ್ತಿರಬೇಕು. ಭಕ್ತನಾಗಬೇಕೆಂಬ ಸಂಕಲ್ಪವೇ ಬಸವಣ್ಣ ನವರ ಹೃದಯದಲ್ಲಿ ಬೆಳಗಿದ ದಿವ್ಯಮಿಂಚು. ಆರಂಭದಲ್ಲಿ ಅದೊಂದು ಕಿಡಿಯಂತೆ. ಆ ಕಿಡಿಯು ಜೀವಂತವಾಗಿದ್ದರೆ ಅದನ್ನು ಧರಿಸಿದ ವ್ಯಕ್ತಿಯೂ ಜೀವಂತ ಇದ್ದಹಾಗೆ. ಕಿಡಿಯ ಬದುಕುವಿಕೆಗೆ ಅನೇಕ ಕಿಡಿಕೆಂಡಗಳ ಜೊತೆ ಬೇಕು; ಸತ್ಪುರುಷರ ಸಮಾಗಮವೇ ಕಿಡಿಕೆಂಡಗಳ ಸಾನ್ನಿಧ್ಯ. ಕಿಡಿಯು ಉತ್ತರೋತ್ತರ ಕೆಂಡವಾಗಬೇಕಾದರೆ ಸುಳಿಗಾಳಿಯು ಸೂಸು ತ್ತಿರಬೇಕು; ಧ್ಯಾನಪ್ರಾರ್ಥನೆಗಳೇ ಆ ಸುಳಿಗಾಳಿ. ಇಷ್ಟು ಅನುಕೂಲತೆ ಗಳಿದ್ದರೆ ಶುದ್ಧ ಇದ್ದಲಿಯು ಸಹ ಕೆಂಡವಾಗಬಹುದು; ತಪ್ಪಿಸೇರಿದ ಹರಳು ಸಹ ಸುಟ್ಟುಸುಣ್ಣವಾಗಿ ಮಾರ್ಪಡಬಹುದು; ಈ ಸಂಕಲ್ಪವು ಈಡೇರಲು ದೇವರೊಲ್ಮೆ ಬೇಕು. ಸಂಕಲ್ಪವೊಂದು ದೃಢತರವಾದರೆ ತಡೆಯಬಂದ ಎಡರುಗಳೆಲ್ಲ ತೊಲಗಿ ಅವೇ ಅನುಕೂಲಗಳಾಗಿ ಪರಿ ಣಮಿಸುವವು. ಅದಕ್ಕಾಗಿ ಸತ್‌ಸಹವಾಸ ಅವಶ್ಯ.

" ಅಯ್ಯಾ, ಸಜ್ಜನಸದ್ಭಾವರ ಸಂಗದಿಂದ ಮಹಾನುಭಾವರ ಕಾಣಬಹುದು; ಮಹಾನುಭಾವರ ಸಂಗದಿಂದ ಶ್ರೀ ಗುರುವನರಿಯ ಬಹುದು; ಲಿಂಗವನರಿಯಬಹುದು; ಜಂಗಮವನರಿಯಬಹುದು; ಪ್ರಸಾ ದವನರಿಯಬಹುದು; ತನ್ನ ತಾನರಿಯಬಹುದು. " ಮರಮರಮಥನ ದಿಂದ ಅಗ್ನಿಹುಟ್ಟಿ ಆ ಮರನೆಲ್ಲವ ಸುಡದಿಪ್ಪುದೇ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ ಎನ್ನ ತನುಗುಣವೆಲ್ಲವ ಸುಡದಿಪ್ಪುದೇ? ಇದು ಕಾರಣ ಮಹಾನುಭಾವರ ತೋರಿಸು "

ಹೀಗೆ ಬಸವಣ್ಣನು ಕೂಡಲಸಂಗನನ್ನೇ ಕೇಳಿಕೊಂಡಿದ್ದಾನೆ. ಮಿತ್ರರನ್ನು ಆರಿಸಿಕೊಳ್ಳುವುದೂ ಬಲು ಬಿಗಿಯಾದ ಕೆಲಸವೇ. "ಮಾನಕ್ಕೆ ಹಾನಿಯಿಲ್ಲದ ಠಾವಿನಲ್ಲಿರಬೇಕು." "ಸಮಾನಶೀಲೇ ವ್ಯಸನೇಷು ಸಖ್ಯಂ" "ಅಲ್ಪರ ಸಂಗ ಅಭಿಮಾನ ಭಂಗ" "ಜಾತಿಹೀನರ ಸಂಗ ಏನು ಕೊಟ್ಟರೂ ಬೇಡ" ಮೊದಲಾದ ವ್ಯಾವಹಾರಿಕ ಒರೆಗಲ್ಲುಗಳೊಳಗಿಂದ ಇಳಿದು, ಆತ್ಮೋದ್ಧಾರಕನಾದ ಆತ್ಮಸ್ನೇಹಿತನು ಸಿಗಬೇಕಾದರೆ ಪೂರ್ವಪುಣ್ಯಾ ಬೇಕು. ಅಂಥ ಗಡುಚಾದ ಕೆಲಸವು ತನ್ನಿಂದಾಗದೆಂದು ಬಸವಣ್ಣನು ಸಂಗನನ್ನು ಕೇಳಿದ್ದು ಯೋಗ್ಯವದೆ. ಅಂಥ ಮಹಾನುಭಾವರ ಸಹವಾಸವು ಸಿಕ್ಕಷ್ಟೂ ಬೇಕು; ಸಿಕ್ಕಷ್ಟೇ ಸಾಕು. ಯಾಕಂದರೆ —"ಸಿರಿಯಾಳನ ಸಾರಿರ್ದ ನರರೆಲ್ಲ ಸುರರಾಗರೇ ?" ಅಂತೆಯೇ "ಒಂದು ನಿಮಿಷವಾದರೂ ನಿಮ್ಮ ಶರಣರ ಸಂಗವಲಿರಿಸಯ್ಯ ಆದರೆ "ಅಂತರಂಗ ಶುದ್ಧವಿಲ್ಲದವರ ಸಂಗ ಸಿಂಗಿಕಾಳಕೂಟ ವಿಷ. ನಿಮ್ಮವರಲ್ಲದವರ ಒಲ್ಲೆನಯ್ಯ. ಜಗವೆಲ್ಲರಿಯಲು ಒಲ್ಲೆನಯ್ಯ; ಒಲ್ಲೆನಯ್ಯ. ನೀ ಮುನಿದರೆ ಮುನಿ" ಎಂದು ಆಣೆಮಾಡಿ ಹೇಳುತ್ತಾನೆ.

"ತನುವನೊಪ್ಪಿಸಿದವರ, ಮನವನೊಪ್ಪಿಸಿದವರ, ಧನವನೊಪ್ಪಿಸಿದವರ ಬಾಗಿಲ ತೋರಯ್ಯ. ಇವೆಲ್ಲವನೊಪ್ಪಿಸಿ ಜಂಗಮುವೆನ್ನವರೆನ್ನವರೆಂಬರ ಕೆರಹ ಹೊತ್ತಿರಿಸೆನ್ನ." ಅಂಥ ಮಹಾನುಭಾವರು ಸಿಕ್ಕರೆ — "ಕಾಮಸಂಗವಳಿದು, ಅನುಭಾವಸಂಗದಲುಳಿದವರ ಅಗಲಲಾರೆನು. ಶಿವಂಗೆ ಮಿಗೆ ಒಲಿದವರನು ನಾನು ಅಗಲಲಾರೆನು." ಅಂಥ ಆತ್ಮಸ್ನೇಹಿತರನ್ನು ಅಗಲುವದೆಂದರೆ ಜಗತ್ತೆಲ್ಲ ಮುಳುಗಿದಂತೆ; ತಾನೊಬ್ಬನೇ ಒಂಟಿಗನಾಗಿ ಬದುಕಿದಂತೆ.

"ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯ. ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ ನೋಡಯ್ಯ ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು, ಕೂಡಲಸಂಗಮದೇವಾ, ನಿಮ್ಮ ಶರಣರನಗಲಿದ ಕಾರಣ."

ಆದುದರಿಂದ "ಅರಸರ ಮನೆಯುಲ್ಲಿ ಅರಸಿಯಾಗಿಪ್ಪುದರಿಂದ ಭಕ್ತರ ಮನೆಯುಲ್ಲಿ ತೊತ್ತಾಗಿಪ್ಪುದು ಕರ ಲೇಸಯ್ಯ." 'ಲಿಂಗಸಾಹಿತ್ಯವಿಲ್ಲದವರು

ಅಣ್ಣಾ, ತಮ್ಮ, ಹೆತ್ತಪ್ಪ ಗೋತ್ರವಾದರೂ' ಫಲವೇನು? 'ಲಿಂಗಾಂಗಿಗಳಲ್ಲದವರ, ಶರಣರ ಸಂಗವಿಲ್ಲದವರ ಕಂಡರೆ ನಾಚುವೆ; ಅವರ ನುಡಿ ಎನಗೆ ಸಮನಿಸದಯ್ಯ? ಯಾಕಂದರೆ—"ದೇವಾ, ನೀನು ಅಲ್ಲಿಲ್ಲದ ಕಾರಣ." ಆದರೆ ಅರ್ಧ ಸುಟ್ಟ ಗಡಿಗೆಯಂತೆ 'ಅರೆ ಭಕ್ತರಾದವರ ನೆರೆ'ಯು ತುಂಬ ವಿಘಾತಕ. 'ಅಚ್ಚ ಲಿಂಗೈಕ್ಯಂಗೆ ತೊತ್ತಾಗಿಪ್ಪುದು ಕರಲೇಸು.' ಸತ್‌ಸಹವಾಸವು ಸಿಗುವುದಾದರೆ ಇನ್ನೇನೂ ಬೇಡ; ಸದ್ಭಕ್ತರ ಪಾದ ಸಿಕ್ಕರೂ ಮಹದ್ಭಾಗ್ಯವೇ. ದೇವಪಟ್ಟ ದೊರೆತರೂ ಅದು ಸದ್ಭಕ್ತರ ಪಾದಪದವಿಗಿಂತ ಹೆಚ್ಚಿನದಲ್ಲ.

"ಬ್ರಹ್ಮಪದವಿಯನೊಲ್ಲೆ; ವಿಷ್ಣು ಪದವಿಯನೊಲ್ಲೆ; ರುದ್ರಪದವಿಯನೊಲ್ಲೆ. ನಾನು ಮತ್ತಾವ ಪದವಿಯನೊಲ್ಲೆನಯ್ಯ! ಕೂಡಲಸಂಗಮದೇವಾ, ನಿಮ್ಮ ಸದ್ಭಕ್ತರ ಪಾದವನರಿದಿಪ್ಪ ಮಹಾಪದವಿಯ ಕರುಣಿಸಯ್ಯಾ." 'ಪಾದ" ಎಂದೆವಲ್ಲ! ಅಷ್ಟೇ ಏಕೆ? ಅವನಾದೊಡೇನು? ಶ್ರೀಮಹಾದೇವನ ನೆನೆವವನ ಬಾಯತಂಬುಲ ಮೆಲುವೆ; ಬೀಳುಡಿಗೆಯ ಹೊದಿವೆ; ಪಾದರಕ್ಷೆಯ ಕಾಯ್ದು ಬದುಕುವೆ" ಎಂದು ಬಸವಣ್ಣನು ಬಾಯಿಬಿಚ್ಚಿ, ಎದೆಬಿಚ್ಚಿ ಹೇಳಿದವನು "ಶರಣರಿಗಾಗಿ ಮಂಡೆ ಬೋಳಿಸಿಕೊಂಡು ಗಂಡುದೊತ್ತಾದೆ "ನೆನ್ನುವುದು ಅಗಾಧವೇ?

ಮಹಾನುಭಾವರ ಸಹವಾಸವನ್ನು ತೂಗಿಸಿಕೊಂಡು ಹೋಗುವುದೂ, ನೀಗಿಸಿಕೊಂಡು ನಡೆಯುವದೂ ಹಗುರಾದ ಕೆಲಸವಲ್ಲ; ವೈಮರೆತರಾಗದು. 'ಉರಿವ ಕೊಳ್ಳಿಯ ಮಂಡೆಯಲಿಕ್ಕುವುದೂ, ಕಲ್ಲುಗುಗ್ಗರಿ ಮೆಲ್ಲುವುದೂ' ಸಾಧ್ಯವೇ? ವಿಶ್ವರೂಪ ದರ್ಶನದಿಂದ ಶ್ರೀಕೃಷ್ಣನ ಅಪಾರ ಮಹಿಮೆಯು ಗೋಚರವಾದ ಮೇಲೆ ಅರ್ಜುನನು ಭಯಭಕ್ತಿಯಿಂದ ಕೈಮುಗಿದು, ನಡಗುತ್ತ—"ಸಖನೇ! ಕೃಷ್ಣಾ-ಎಂದು ನಿನ್ನನು ಇಷ್ಟು ದಿವಸ ಸಲುಗೆಯಿಂದ ಸಂಬೋಧಿಸುತ್ತಿದ್ದ ತಿಳಿಗೇಡಿಯಾದ ತನ್ನನ್ನು ಮನ್ನಿಸೆ"ಂದು ಕೇಳಿಕೊಳ್ಳಲಿಲ್ಲವೇ? 'ಸಜ್ಜನರ ಸಂಗ ಹೆಜ್ಜೇನು ಸವಿದಂತೆ' ಸರಿಯೇ. ಆದರೆ ಕೈತಪ್ಪಿದರೆ ಅಷ್ಟೇಕೆ, ಕಣ್ಣು ತಪ್ಪಿದರೆ ಆ ಹೆಜ್ಜೇನನೊಣಗಳ ಕಡಿತ ಕಡಿಮೆಯದೇ? ಅದು—

"ಹಾವಿನ ಹೆಡೆಗಳ ಕೊಂಡು ಕೆನ್ನೆಯ ತುರಿಸುವಂತೆ, ಉರಿವ ಕೊಳ್ಳಿಯ ಕೊಂಡು ಮಂಡೆಯ ಸಿಕ್ಕುಬಿಡಿಸುವಂತೆ, ಹುಲಿಯ ಮೀಸೆಯ ಹಿಡಿದುಕೊಂಡು ಒಲೆದು ಉಯ್ಯಾಲನಾಡುವಂತೆ ಸುಣ್ಣದ ಕಲ್ಲು

ಮಡಿಲಲ್ಲಿ ಕಟ್ಟಿಕೊಂಡು ಮಡುವ ಬಿದ್ದಂತೆ." ಅಷ್ಟು ವಿಘಾತಕವಾ ದದ್ದು; ವಿರಸವಂತೂ ಸರಿಯೇ ಸರಿ. ವಿರಸವು ಮರಣವಷ್ಟೇ? ವಿರ ಸವನ್ನು ಹುಟ್ಟಿಸುವ ಸರಸವೂ ಅಷ್ಟೇ. ಅದುದರಿಂದ "ಅರಗಿನ ಪುತ್ಥ ಳಿಯನ್ನು ಉರಿಯ ನಾಲಿಗೆ ಹೊಯಿದು ಮಾತಾಡುವ ಸರಸ ಬೇಡ. ಬೆಣ್ಣೆಯ ಬೆನಕಂಗೆ ಕೆಂಡದುಂಡಲಿಗೆಯ ಮಾಡಿ ಚೆಲ್ಲವಾಡಿದರೆ ಹಲ್ಲು ಹೋಹುದು."

ಇಂಥ ಹಲ್ಲು ಹೋಹುವ ದಾರಿಯಾಗಲಿ, 'ಹಲುದೋರಿ ಮೂಗು ಕೊಯಿಸಿಕೊಳ್ಳುವುದಾಗಲಿ ಜೀವನೋದ್ದೇಶವಲ್ಲ; ಸಿಪ್ಪುಹೋಗಿ ಮುತ್ತು ಆಗಬೇಕಾದುದು ಜೀವನೋದ್ದೇಶ. 'ಮುನ್ನೂರರವತ್ತು ನಕ್ಷತ್ರಕ್ಕೆ ಬಾಯಿ ಬಿಟ್ಟುಕೊಂಡಿಪ್ಪುದೇ ಸಿಪ್ಪು?' ಅದು ಸ್ವಾತಿಗಲ್ಲದೆ ಬಾಯಿ ತೆರೆಯದು. ಎಲ್ಲವಕ್ಕೆ ಬಾಯಿಬಿಟ್ಟರೆ ತಾನೆಲ್ಲಿಯ ಮುತ್ತು? ಸತ್‌ಸಹವಾಸವು ವ್ಯರ್ಥವಾಗದು. ಮಹಾಮಹಿಮರೊಡನೆ ಮಾತನಾಡಿದರೂ ಲೆಕ್ಕವಿಲ್ಲದ ಲಾಭ. ಹೀನರ ಒಡನಾಟಕ್ಕಿಂತ ಯೋಗ್ಯರೊಡನೆ ಕಡಿದಾಟ ಒಳ್ಳಿತೆಂದು ವ್ಯವಹಾರ ನೀತಿ ಇಲ್ಲವೇ?

## ತಾನು ಸತ್ತರೇ ಸ್ವರ್ಗ.

ನೆಲವು ಬೇಕಾದಷ್ಟು ಹದವಾಗಿದೆ; ಹಸಿಯಾಗಿದೆ; ಅನುಕೂಲ ಗಾಳಿಯಿದೆ. ಆದರೆ ಬೀಜಕ್ಕೆ ಮೂಗಿಲ್ಲವಾದರೆ ಅದು ಮೊಳೆಯಲೇ ಅರದೆನ್ನುವುದು ತ್ರಿಕಾಲ ಸತ್ಯ. ಸತ್‌ಸಹವಾಸವಾಗಲಿ, ಅನುಕೂಲ ಪರಿಸ್ಥಿತಿಯಾಗಲಿ ಗಾಳಿ-ಬೆಳಕುಗಳಿದ್ದಂತೆ. ಅನುಕೂಲ ಪರಿಸ್ಥಿತಿಯಿದ್ದಾಗ ನಾವು ಕಿಡಿಯಿರದೆ ಇದ್ದಲಿಯಾಗಿದ್ದರೂ ಕೆಂಡವಾದೇವು; ಅದೂ ಇಲ್ಲ ದಿದ್ದರೆ ಕೆಂಡವಾಗುವ ಬಗೆ ಹೇಗೆ? ಬರಿಯ ಇದ್ದಲಿಯಿದ್ದರೆ ತೀರದು; ಅದಕ್ಕೆ ಬೆಂಕಿಯಾಗುವ ತೀವ್ರ ಆಶೆ ಬೇಕು. ಅದಿದ್ದ ಜೀವವು ತನ್ನ ಕೈಯಲ್ಲಿದ್ದ— ತನಗೆ ಶಕ್ಯವಾದ ಉಪಾಯುಗಳನ್ನು ಕೈಕೊಳ್ಳುವುದು; ಉಪಾಯ ಕೈಕೊಳ್ಳೋಣವೆಂದರೆ ವಿನಾಶಗೊಳಿಸಲು ಸಿದ್ಧನಾಗಿರುವುದು; ಅಂದರೆ ಮೊದಲಿದ್ದ ಶರೀರ ಪ್ರಾಣ ಮನಗಳನ್ನು ಕೊಲ್ಲುವುದು; ಅದರ ಅವಾಸ್ತವಿಕ ವಿಕಾರಗಳನ್ನು ನಿರ್ಮೂಲನಗೊಳಿಸುವುದು. ಆಗ ಅಲ್ಲಿಯೇ ಸ್ವರ್ಗವು ನಿರ್ಮಾಣವಾಗುವದು; ತನ್ನ ಉದ್ಧಾರವು ತಾನಾಗಿ[illegible] ಸಾಧಿಸುವದು. "ಆತ್ಮೈವಹ್ಯಾತ್ಮನೋ ಬಂಧು" ಅಲ್ಲವೇ? "ತನ್ನಾಶ್ರ ಯದ...ಸುಖವನು, ತಾನುಂಬ ಊಟವನು ಬೇರೆ ಮತ್ತೊಬ್ಬರ ಕೆಯ್ಯಲು

ಮಾಡಿಸಬಹುದೇ!" ಎಂದು ಬಸವಣ್ಣನ ಪಶ್ನೆಯಿದೆ. ಎಂಥ ಪರಾಕ್ರಮಿಗಳ ಆಶ್ರಯವಿದ್ದರೇನು? ಯಾವ ಮೇಧಾವಿಗಳ ಸಹವಾಸದಲ್ಲಿದ್ದರೇನು? ತನ್ನ ನೆರಳು ತನ್ನೊಡನೆಯೇ. ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡದು. ದ್ರೌಪದಿಯ ವಸ್ತ್ರಾಪಹರಣ ಕಾಲಕ್ಕೆ ಆಕೆಯ ಪ್ರಾಣಪದಕರೂ ಅತಿರಥಿ-ಮಹಾರಥಿಗಳೂ ಆದ ಪಾಂಡವರ ಪಂಚಶಕ್ತಿಗಳು ಆಕೆಗೆ ನೆರವಾದವೇ? ಆಕೆಯು ಸ್ವಶಕ್ತಿಯಿಂದಲೇ ಆ ದಿವ್ಯವನ್ನು ತನ್ನೆಡೆಗೆ ಬರಮಾಡಿಕೊಂಡು ಆತ್ಮರಕ್ಷಣೆ ಮಾಡಿಕೊಳ್ಳಲಿಲ್ಲವೇ?

"ಚಂದ್ರೋದಯಕ್ಕೆ ಅಂಬುಧಿ ಹೆಚ್ಚುವುದಯ್ಯ, ಚಂದ್ರ ಕುಂದೆ ಕುಂದುವದಯ್ಯ. ಚಂದ್ರಂಗೆ ರಾಹು ಅಡ್ಡಬಂದಲ್ಲಿ ಅಂಬುಧಿ ಬೊಬ್ಬಿಟ್ಟಿತ್ತೇ? ಅಂಬುಧಿಯ ಮುನಿ ಆಪೋಷಣಕೊಂಬಲ್ಲಿ ಚಂದ್ರಮನಡ್ಡ ಬಂದನೇ? ಆರಿಗಾರು ಇಲ್ಲ"

ಸ್ವಾವಲಂಬನವೇ ಪರಮಮಿತ್ರತ್ವ. ಆದರೆ ತನ್ನನ್ನು ತಾನು ಅವಲಂಬಿಸುವುದು ಅಷ್ಟು ಸುಲಭವೇ? ತನ್ನ ಶಕ್ತಿ ಎಷ್ಟಿದೆ? ಅದು ಈ ಜೀವನ ಹೋರಾಟದಲ್ಲಿ ಕಡೆಯ ವರೆಗೆ ತಾಳಬಲ್ಲದೇ? ಗೆಲುವನ್ನು ಪಡೆಯಬಹುದೇ? ಸ್ವಾವಲಂಬನದ ಸೆಲೆಯು ಅದೇನು ಗಂಗಾಪ್ರವಾಹವೇ? ಎಂದೂ ಬತ್ತಲಾರದ ದೇವನದಿಯೇ?

## ಸಮರ್ಪಣ.

ಶರೀರ ಮನಸ್ಸು ಪ್ರಾಣಗಳು ತನ್ನವು ಎನಿಸುವವು; ಅಂದಮೇಲೆ ತಾನು ಎಂಬುದು ಬೇರೆ ಇರಬೇಕಷ್ಟೇ? ಆ 'ತಾನು' ಎಂಬುದು ಆತ್ಮವೆಂದು ಇಟ್ಟುಕೊಂಡರೆ, ತನ್ನನ್ನು ಅಂದರೆ ಆತ್ಮನನ್ನು ಅವಲಂಬಿಸುವುದೇ ಸ್ವಾವಲಂಬನವೆಂದಂತಾಯ್ತು. ನಮಗೆ ಆತ್ಮನೂಗೊತ್ತಿಲ್ಲ; ಪರಮಾತ್ಮನೂ ಗೊತ್ತಿಲ್ಲ. ಆದರೆ ಸಂಕಟಬಂದಾಗ ವೆಂಕಟರಮಣ ಅನ್ನುವುದು ಮಾತ್ರ ಗೊತ್ತಿದೆ. ಶಬ್ದಪ್ರಸಾದವೇ ಆಗಲಿ, ನಾದಪ್ರಭಾವವೇ ಆಗಲಿ ನಮಗೆ ತಾತ್ಕಾಲಿಕವಾದರೂ ಶಾಂತಿಯನ್ನು ಕೊಡುತ್ತದೆ. ಆಗ, ನೀರಲ್ಲದಿದ್ದರೂ ನೀರಮೇಲಿನ ಗಾಳಿಯಾದರೂ ಸದ್ಯಕ್ಕೆ ಬದುಕಿಸಿತೆನ್ನುವಂತೆ, ಆ ಶಾಂತಿಯು ದೇವನಲ್ಲದಿದ್ದರೂ ಆತನ ದಿವ್ಯ ಕಿರಣದ ಎಳೆಯಾದರೂ ಅಹುದೆನ್ನಲಿಕ್ಕೆ ಅಡ್ಡಿ ಇಲ್ಲ. ಅಂಥ ಶಾಂತಿಯ ಕ್ಷಣಗಳು ಮೇಲಿಂದ ಮೇಲೆ ಜೀವಕ್ಕೆ ಬೇಕೆನಿಸುತ್ತದೆ; ವಿರಲವಾದ

ಕ್ಷಣಗಳು ಸಾಂದ್ರವಾದರೆ ಅನುಭವವು ಗಟ್ಟಿಗೊಳ್ಳುತ್ತದೆಂದು ಹೇಳಬಹುದು. ಅದೇ ಆತ್ಮನದಾಗಲಿ ಪರಮಾತ್ಮನದಾಗಲಿ ಕುರುಹು. ಅದನ್ನು ಆಶ್ರಯಿಸುವುದೇ ಸ್ವಾವಲಂಬನ. ಶರೀರ ಮನಸು ಪ್ರಾಣಗಳಿಗೆ ಮುಸುಕಿದ ಕತ್ತಲೆ ಅದೆಂಥದಿದ್ದರೂ ಆ ಶಾಂತಿಯು ಎಳೆಯು ನುಸುಳಿದಾಗ ಅದೆಲ್ಲ ಮಾಯವಾಗುವದೆಂಬ ಮಾತನ್ನು ಹೇಳಬೇಕಾಗಿಲ್ಲ. "ತಮ್ಮಂಥ ಘನ, ಜ್ಯೋತಿ ಕಿರಿದೆನ್ನಬಹುದೇ"? ಆತ್ಮದ ಸೆಲೆಯು ಪರಮಾತ್ಮಸಾಗರಕ್ಕೆ ಸಂಬಂಧಪಟ್ಟಾಗ ನಿತ್ಯಪ್ರವಾಹವು ನಿಶ್ಚಯ; ಅದು ಅನಿವಾರ್ಯ. ಆ ಸಂಬಂಧ ತಪ್ಪಿದರೆ 'ತುಂಬಿದ ಹರವಿಯು ಕಲ್ಲು ಕೊಂಡಂತೆ.' ಆದ್ದರಿಂದ ಅವರಿವರನ್ನು ಯಾಚಿಸದೆ, ಬೇಡುವುದನ್ನೆಲ್ಲ ಎಲ್ಲರಿಗೂ ಕೊಡುವ ಪರಮಾತ್ಮನಿಗೇ ಬೇಡತಕ್ಕದ್ದು. ಆ ಸಿಗೆ ಬೇಡುವುದೆಂದರೆ - ತನ್ನನ್ನು ಒಪ್ಪಿಸುವುದು. "ಕೊಟ್ಟದ್ದು ತನಗೆ-" ಒಪ್ಪಿಸಿದಷ್ಟು ತನ್ನದಾಗುವದು. ಒಪ್ಪಿಸಿ ಒಲಿಸಿದರೆ—"ಕೊರಡು ಕೊನರುವದು; ಬರಡು ಹಯನವಹುದು; ವಿಷವೆಲ್ಲ ಅಮೃತವಹುದು. ಸಕಲಪಡಿಪದಾರ್ಥ ಇದರಲ್ಲಿಪ್ಪವು."

ಒಪ್ಪಿಸಿ ಒಲಿಸಿಕೊಳ್ಳುವುದೂ, ಆ ಮೇಲೆ ಪಡಕೊಳ್ಳುವುದೂ ದ್ರಾವಿಡೀ ಪ್ರಾಣಾಯಾಮ. ಅದು ಬೇಡ; ನಾವೇ ಪಡಕೊಳ್ಳುವಾ. ಅದು ನಮ್ಮ ಕೈಯಿಂದಾಗದೇ? ಎಂದರೆ—"ಆತ ಹುಟ್ಟಿಸಿದಲ್ಲಿ ಹುಟ್ಟಿ ಕೊಂದಲ್ಲಿ - ಸಾಯದೆ ಎನ್ನ ವಶವೇ?" 'ಮದನಂಗೆ ಮಾರುಗೊಡುವ' ದೇವನ ಮನೆಯ ಮಗನೆನಿಸುವುದು ಒಳ್ಳೆಯದಲ್ಲವೇ? ಬಸವಣ್ಣನು "ಎನ್ನವನೆನ್ನವನೆನ್ನಯ್ಯ. ನಿಮ್ಮ ಮನೆಯ ಮಗನೆಂದೆನಿಸಯ್ಯ" ಎಂದು ಮೊರೆಯಿಟ್ಟಿದ್ದಾನೆ. ದೇವನನ್ನು ಒಲಿಸುವ ಬಾಹ್ಯ ಉಪಾಯವು ನಿಶ್ಚಿತವಾಗಿ ತಿಳಿಯದು.

"ನರ ಕೂರಂಬಿನಲೆಚ್ಚ ವಂಗೊಲಿದೆಯಯ್ಯ. ಅರಳಂಬಿನಲೆಚ್ಚ ಕಾಮನನುರುಹಿದೆ. ಇರುಳುಹಗಲೆನ್ನದೆ ಘಾತಕ ಮಾಡುವ ಬೇಡನ ಕೈಲಾಸಕೊಯ್ದೆಯಯ್ಯ."

ಆದ್ದರಿಂದ ಒಡೆಯನದನ್ನು ಒಡೆಯನಿಗೊಪ್ಪಿಸಿ, ತಾನೂ ಒಬ್ಬ ಆಳಾಗಿ ನಿಲ್ಲುವ ಉಪಾಯಕ್ಕೆ ಬಂದಮೇಲೆ ಬಾಹ್ಯಕರ್ಮಗಳು ತುಸು ತುಸು ಕಳೆಗುಂದಹತ್ತುವವು; ಒಳಗಿನ ಯಂತ್ರವು ಸಚಲವಾಗುವ ವರೆಗಲ್ಲವೇ ಹೊರಗಿನ ಹ್ಯಾಂಡಲ್ ಹೊಡೆಯುವುದು? ಪೂಜಾದಿಕರ್ಮ

ಗಳಲ್ಲಿ ಕುಂದುಕೊರತೆಗಳುಂಟಾಗಲು—"ಮನೆಯ ತೊತ್ತಲಸಿದರೆ ಒಡತಿ ಮಾಡಿಕೊಂಡಂತೆ ನಿನಗೆ ನೀ ಮಾಡಿಕೋ ಕೂಡಲಸಂಗಮದೇವಾ" ಎಂದು ಬಸವಣ್ಣನು ಧಾರಾಳವಾಗಿ ಬೆಸಸಿದ್ದನ್ನು ನೋಡಿದರೆ 'ನಲ್ಲ' ನೊಡನೆ ಅದೆಂಥ ಸಲುಗೆಯು ನ್ಯೆಗೊಳ್ಳುತ್ತಲಿದೆಯೆಂಬುದು ಕಂಡು ಬರುವದು. ದಿವ್ಯದ ನಿತ್ಯ ಸಂಬಂಧವುಂಟಾದ ಮೇಲೆ ಹಾಲಲದ್ದಿದರೂ ನೀರಲದ್ದಿದರೂ ಸರಿಯೇ. "ಎನ್ನ ಮನದೊಡೆಯ ಮಹಾದೇವ, ನಿಮ್ಮ ಮನವ ನಿಮಗೊಪ್ಪಿಸಿ ನಾನು ಶುದ್ಧ ಕಾಣಾ." ಎಂದು ಜೀವವು ಭಾರ ವಿಳಿಸಿಕೊಳ್ಳುವದು. ಸಮರ್ಪಿಸಿದ ಜೀವನ ಯಾವ ಲೋಪದೋಷಗ ಳಿಗೂ ಇಂಬಿಲ್ಲ "ಮೇರು ಗುಣವನರಸುವುದೇ ಕಾಗೆಯಲ್ಲಿ? ಪರುಷ ಗುಣವನರಸುವುದೇ ಕಬ್ಬಿನದಲ್ಲಿ? ಸಾದು ಗುಣವನರಸುವುದೇ ಅವ ಗುಣಿಯಲ್ಲಿ? ಚಂದನ ಗುಣವನರಸುವುದೇ ತರುಗಳಲ್ಲಿ?" ಹಾಗಾ ದರೆ ಆ ಲೋಪದೋಷಗಳು ಯಾವಾಗ ಅಡಗುವವು? "ಹಲವು ಕಾಲ ಧಾವತಿಗೊಂಡು ಒಟ್ಟಿರ್ದ ಹಿದಿರೆ ಒಂದು ಕಿಡಿಕಿಡಿಯಲ್ಲಿ ಬೇವಂತೆ" ಅವೆಷ್ಟೋ ಲೋಪದೋಷಗಳು ಒಂದು ಭಕ್ತಿಯ ಕಣದಿಂದ ತುಂಬಿ ಬರುವವು.

ಹೀಗೆ ಸಮರ್ಪಣ ಮಾಡಿದ ಭಕ್ತನು "ಮೇರುವ ಸಾರಿದ ಕಾಗೆ ಹೊಂಬಣ್ಣವಪ್ಪುವಂತೆ" ತಪ್ಪದೆ ದೇವಪ್ರೀತನಾಗುವನು. ಆತ್ಮತಿರಸ್ಕಾ ರದಿಂದುಂಟಾದ "ಸೋಲು,ಸೋಲು" ಎಂಬ ಸೊಲ್ಲು, ಸ್ವದರ್ಶನ-ಸ್ವಾವ ಲಂಬನಗಳ ಕುದಿಯಲ್ಲಿ "ಸೋಲೆಲ್ಲಿ, ಸೋಲೆಲ್ಲಿ?" ಎಂದು ಹೆಡೆಯೆತ್ತಿ ಸಮರ್ಪಣಕ್ಕೆ ಬಂದ ಭಕ್ತನ ಹೃದಯವೀಣೆಯು—"ಗೆಲುವೆ,ಗೆಲುವೆ" ಎಂದು ಒಲಿದುಲಿಯತೊಡಗುವದು. ಅದೇ 'ಗೆಲುವೆನೆಂಬ ಭಾಷೆ.' ಅದು ಭಕ್ತನದು. ಕೈಗೆ ಸಿಗದೆ ಕೊಸರಿಕೊಳ್ಳುವ ದೇವದೇವನು ಎಲ್ಲಿಯೋ ಅವಿತು "ಕೊಲುವೆ,ಕೊಲುವೆ" ಎಂದು ಕೂಗಿ, ಭಕ್ತನನ್ನು ಹೆದರಿಸಿ ದರೂ ಬಸವಣ್ಣನು ಅತ್ತು, ಕರೆದು, ಬಸವಳಿದು, ಬೇಗುದಿಗೊಂಡು, ಸೊರಗಿ, ಸುಣ್ಣಾಗಿ-ಮಣ್ಣಾಗಿ ಕಡೆಗೂ ತನ್ನ 'ಗೆಲುವೆನೆಂಬ ಭಾಷೆ' ಯ ದುಂದುಭಿಯನ್ನು ಮೊಳಗಿಸಿದನು. ಈ ಗೆಲವಿನಲ್ಲಿ ಗೆದ್ದವನಿಗೆ ಹಿಗ್ಗು ಆಗುವುದಂತೂ ಸಹಜವೇ; ಸೋತವನಿಗೂ ಸಾವಿರಮಡಿ ಸಂ ತೋಷ ತಪ್ಪಿದ್ದಲ್ಲ.

೧೦೧

## ಬಡಿಹೋರಿ ಬ್ರಹ್ಮಯ್ಯ.

ಬಡಿಹೋರಿ ಬ್ರಹ್ಮಯ್ಯನು ಒಕ್ಕಲಿಗನಾಗಿದ್ದು ಅವನು ಹೊಲ ಗದ್ದೆಯನ್ನು ಮಾಡಿಕೊಂಡು ಉಪಜೀವಿಸುತ್ತಿದ್ದನು. ಹೀಗಿರುವಲ್ಲಿ ಬಿತ್ತುವ ದಿನ ಬರಲು ಅವನು ಬಿತ್ತುವ ಕೆಲಸ ಪ್ರಾರಂಭಮಾಡುವ ಷ್ಟರಲ್ಲಿ ಅವನ ಎರಡು ಹೋರಿಗಳಲ್ಲಿ ಒಂದು ಹೋರಿಯು ಸತ್ತಿತು. ಆಗ ಅವನು ಇನ್ನೊಬ್ಬ ಒಕ್ಕಲಿಗನಿಂದ ಒಂದು ಎತ್ತನ್ನು ಮುಯ್ಯಿಗೆ ತೆಗೆದುಕೊಂಡು ಬಿತ್ತುವದನ್ನು ಪ್ರಾರಂಭಿಸಿದನು. ಆಗ ಅವನದು ಹೊಸ ಹೋರಿಯಾದದ್ದರಿಂದ ಅದು ಚಂಡಿತನಕ್ಕೆ ಬೀಳಲು, ಬ್ರಹ್ಮ ಯ್ಯನು ಅದನ್ನು ಒಳಿತಾಗಿ ಹೊಡೆದನು. ಆಗ ಅವನ ಒಂದು ಹೊಡೆ ತವು ಹೋರಿಯ ಆಯಕ್ಕೆ ಬಿದ್ದು ಅದು ಸತ್ತುಹೋಯಿತ.. ಇದ ರಿಂದ ಬಿತ್ತಿಗೆಯ ಕೆಲಸವು ಕಟ್ಟಾಗಿ ಪುನಃ ಬಿತ್ತಬೇಕಾದರೆ ಅದು ಹದತಪ್ಪಿದ್ದರಿಂದ ಬೆಳೆ ಸರಿಯಾಗಿ ಬರಲಿಲ್ಲ. ಇದರಿಂದ ಬ್ರಹ್ಮಯ್ಯ ನಿಗೆ ಸಾಕಷ್ಟು ಕಾಳು ಬರದ್ದರಿಂದ ಅವನು ಕಷ್ಟಕ್ಕೆ ಈಡಾದನು. ಆಗ ತಾನು ಹೋರಿಯನ್ನು ಹೊಡೆದು ಕೊಂದುಹಾಕಿದ್ದರಿಂದ ತನಗೆ ಇಂಥ ಕಷ್ಟ ಬಂದಿತೆಂದು ಅವನಿಗೆ ಬಹಳ ಪಶ್ಚಾತ್ತಾಪವಾಯಿತು ಮತ್ತು ತನ್ನಿಂದ ಪ್ರಾಣಹಿಂಸೆಯಾಯಿತೆಂದು ಕಳವಳಿಸಹತ್ತಿದನು. ಹೀಗೆ ಒಂದು ದಿನ ಚಿಂತಿಸುತ್ತ ಕುಳಿತಿರುವಾಗ ಅವನು ನಿದ್ರಾಪರವಶನಾಗಲು, ಕನಸಿ ನಲ್ಲಿ ಪರಮೇಶ್ವರನು ಬಂದಂತಾಗಿ, ಅವನು ಬ್ರಹ್ಮಯ್ಯನಿಗೆ— ಎಲೋ ಬ್ರಹ್ಮಯ್ಯನೇ, ನೀನು ಇನ್ನುಮೇಲೆ ಈ ಹೊಲದ ಕೆಲಸವನ್ನು ಬಿಡು, ಅದನ್ನು ಬಿಟ್ಟು ನೀನು ಹೋರಿಯಂತೆ ಹೊಡಿಸಿಕೊಂಡು ಕಾಯಕ ವನ್ನು ಮಾಡುತ್ತ ದಾಸೋಹದಲ್ಲಿರು, ಎಂದು ಹೇಳಿದಂತಾಯಿತು. ಆಗ ಅವನಿಗೆ ಎಚ್ಚರವಾಯಿತು. ಎಚ್ಚರವಾದ ಬಳಿಕ ಅವನು—ನಾನು ಮಾಡಿದ ಅಪರಾಧಕ್ಕೆ ಜನರಿಂದ ಹೊಡಿಸಿಕೊಳ್ಳುವದೇ ನನಗೆ ಯೋಗ್ಯ ಶಿಕ್ಷೆಯು. ಈ ಶಿಕ್ಷೆಯನ್ನು ನಾನು ಅನುಭವಿಸುತ್ತ ಜನರಿಂದ ಕಾಯಕ (ಪ್ರತಿಫಲ) ವನ್ನು ತಂದು ಗುರುಲಿಂಗಜಂಗಮಕ್ಕೆ ದಾಸೋಹ [illegible] ಗಳನ್ನು ನಡಿಸುತ್ತ ಹೋಗಬೇಕೆಂದು ಒಂದು ವ್ರತವನ್ನು [illegible] ಕೊಂಡನು.

ಅಂದಿನಿಂದ ಜನರಿಂದ ಹೊಡಿಸಿಕೊಳ್ಳುವದೇ ಬ್ರಹ್ಮಯ್ಯನಿಗೆ ಕಾಯ ಕವಾಯಿತು. ಜನರಾದರೂ ಅವನ ಈ ಕಾಯಕದ ಕಾರಣವನ್ನು

ಮೊದಲು ತಿಳಿದವರಾಗಿ ಅವನಿಗೆ ಗುದ್ದಿ ಏನಾದರೂ ಹಣ ಕೊಡುವರು. ಬ್ರಹ್ಮಯ್ಯನು ಹೀಗೆ ತನಗೆ ಬಂದದ್ದರಲ್ಲಿ ತನ್ನ ಪ್ರಪಂಚವನ್ನು ಸಾಗಿಸುತ್ತ, ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವನು. ಆದರೆ ಅವನ ಈ ಕಾಯಕವು ಬಹಳ ದಿವಸ ನಡಿಯಲಿಲ್ಲ. ಜನರ ಮನಸ್ಸಿಗೆ ಇದು ಬರಲಿಲ್ಲ.

ಜನರು ಮುಂದೆ-- ಬ್ರಹ್ಮಯ್ಯನನ್ನು ನಾವು ಹೀಗೆ ಹೊಡೆಯಲಿಕ್ಕೆ ಅವನು ನಮಗೇನು ಮಾಡಿದ್ದಾನೆ? ಅವನು ನಮಗೇನು ಕೇಡುಮಾಡಿಲ್ಲ. ನಾವು ಅವನಿಗೆ ಕೊಟ್ಟದನ್ನು ಅವನು ಪುಣ್ಯಕಾರ್ಯಕ್ಕೆ ಉಪಯೋಗಿಸುತ್ತಾನೆ. ಆದ್ದರಿಂದ ನಾವು ಹಾಗೆಯೇ ಅವನಿಗೆ ಕಾಯಕ ಕೊಡುವೆವು. ನಿಷ್ಕಾರಣವಾಗಿ ಅವನನ್ನು ನಾವು ಹೊಡೆದರೆ ನಮಗೆ ಪಾಪ ಬಂದೀತು, ಎಂದು ಯೋಚಿಸಿ ಅವನನ್ನು ಹೊಡೆಯುವದನ್ನು ಬಿಟ್ಟುಬಿಟ್ಟರು ಮತ್ತು ಹಾಗೆಯೇ ನೀನು ಕಾಯಕ ತೆಗೆದುಕೊಂಡು ಹೋಗು ಎಂದು ಹೇಳಹತ್ತಿದರು. ಆದರೆ ಹೊಡಿಸಿಕೊಳ್ಳದೆ ನಾನು ಕಾಯಕ ತೆಗೆದುಕೊಳ್ಳುವದಿಲ್ಲ' ಎಂದು ಹೇಳಿ ಬ್ರಹ್ಮಯ್ಯನು ಹೊರಟುಹೋಗಿ ಬಿಡುವನು. ಇದರಿಂದ ಅವನಿಗೆ ಅನ್ನೋದಕಗಳಿಲ್ಲದೆ ಉಪವಾಸವಿರುವ ಪ್ರಸಂಗವು ಬಂದಿತು. ಆದರೆ ಹೀಗೆ ಉಪವಾಸವಿದ್ದುದಕ್ಕೆ ಬ್ರಹ್ಮಯ್ಯನಿಗೆ ದುಃಖವಾಗಲಿಲ್ಲ. ಆದರೆ ಹೊಡಿಸಿಕೊಳ್ಳುವದು ತಪ್ಪಿತಲ್ಲಾ ಎಂದು ಅವನು ಬಹಳ ಚಿಂತಿಸಹತ್ತಿದನು.

ಒಂದುದಿನ ಹೀಗೆ ಚಿಂತಿಸುತ್ತ, ನಾನು ಹೇಗೆ ಹೊಡಿಸಿಕೊಳ್ಳಲಿ, ಎಂಬುದನ್ನೇ ಯೋಚಿಸುತ್ತ ಒಂದು ಏಕಾಂತಸ್ಥಳದಲ್ಲಿ ಕುಳಿತಿರಲು ಅವನಿಗೆ ನಿದ್ರೆಯು ಬಂದಿತು. ಆಗ ಕನಸಿನಲ್ಲಿ ಪರಮಾತ್ಮನು ಅವನಿಗೆ-- ಜನರು ತಮ್ಮ ಕಾಳುಗಳನ್ನು ಅಂಗಳದಲ್ಲಿ ಒಣಹಾಕುತ್ತಾರೆ. ಅವುಗಳನ್ನು ನೀನು ದೋಚಿಕೊಂಡು ಹೋದರೆ ಜನರು ಬಡಿಯುವರು. ಹಾಗೆ ಮಾಡೆಂದು ಹೇಳಿದಂತಾಯಿತು. ಅವನಿಗೆ ನಿದ್ರೆಯು ತಿಳಿದ ಬಳಿಕ ಹಾಗೆಯೇ ಮಾಡಬೇಕೆಂದು ಊರೊಳಗೆ ಹೊರಟನು.

ಅವನು ಬೀದಿಯಲ್ಲಿ ಬರುವಾಗ ಜನರು ಅಂಗಣದಲ್ಲಿ ಒಣಹಾಕಿದ ದವಸವನ್ನು ಕಂಡು ಅದನ್ನು ಎತ್ತಿಕೊಳ್ಳಹತ್ತಿದನು. ಅವರು ಇದನ್ನು ಕಂಡು ಇವನು ತುಡುಗನೆಂದು ಅವನನ್ನು ಹೊಡೆಯುವರು. ಹೊಡೆದ

ಕೂಡಲೆ ಆ ಕಾಳನ್ನು ಅಲ್ಲಿಯೇ ಅವನು ಬಿಸಾಡುವನು. ಅವರು ಅವನ ಭಾವವನ್ನು ಕೂಡಲೆ ತಿಳಿದವರಾಗಿ ಅವನಿಗೆ ಕೆಲವು ದವಸವನ್ನು ಕೊಟ್ಟು ಕಳಿಸುವರು. ಹೀಗೆ ದೊರಕಿದ್ದರ ಮೇಲೆ ಅವನು ಉಪಜೀವಿಸುತ್ತ ಕೆಲವು ದಿವಸ ತನ್ನ ದಾಸೋಹ ಕಾರ್ಯಗಳನ್ನು ನಡಿಸಿದನು. ಆದರೆ ಈ ಯುಕ್ತಿಯೂ ಕೂಡ ಬಹಳ ದಿವಸ ನಡಿಯಲಿಲ್ಲ. ಜನರು— ಇವನು ಕಳ್ಳನಲ್ಲ, ಇವನು ತನಗೆ ಬಂದುದನ್ನು ಪುಣ್ಯಕಾರ್ಯಕ್ಕೆ ಉಪಯೋಗಿಸುತ್ತಾನೆ, ಎಂದು ತಿಳಿದವರಾಗಿ ಅವನು ಧಾನ್ಯವನ್ನು ತೆಗೆದುಕೊಂಡರೂ ಅವನನ್ನು ಹೊಡೆಯದೆ ಸುಮ್ಮನೆ ಇರಹತ್ತಿದರು. ಅವರು ಹೀಗೆ ಮಾಡಿದ ಕೂಡಲೆ ಅವನು ಆ ಧಾನ್ಯವನ್ನು ಅಲ್ಲಿಯೇ ಚೆಲ್ಲಿಬಿಡುವನು ಮತ್ತು ಅವರು ಹಣ ಕೊಟ್ಟರೂ ಅವನು ಸ್ವೀಕರಿಸುತ್ತಿರಲಿಲ್ಲ. ಇದರಿಂದ ಅವನು ಪುನಃ ಉಪವಾಸವಿರಹತ್ತಿದನು. ಹೀಗಿರುವಲ್ಲಿ ಒಂದು ದಿನ ಒಬ್ಬ ಭಕ್ತನು ಅಂಗಣದಲ್ಲಿ ದವಸವನ್ನು ಒಣಹಾಕಿರಲು, ಅದನ್ನು ಬ್ರಹ್ಮಯ್ಯನು ದೋಚಿಕೊಳ್ಳಲು ಆ ಭಕ್ತನು ಸುಮ್ಮನಿದ್ದು— ಇದನ್ನು ನೀನು ತೆಗೆದುಕೊಂಡು ಹೋಗು ಎಂದು ಹೇಳಿದನು. ಆದರೆ ಬ್ರಹ್ಮಯ್ಯನು— ನೀನು ನನ್ನನ್ನು ಹೊಡೆದಲ್ಲದೆ ಇದನ್ನು ತೆಗೆದುಕೊಳ್ಳಲಾರೆನು ಎಂದು ಹೇಳಿ ಅಲ್ಲಿಯೇ ಕುಳಿತನು. ಆದರೆ ಅಷ್ಟರಲ್ಲಿ ಬ್ರಹ್ಮಯ್ಯನು ಅನೇಕ ದಿವಸಗಳ ವರೆಗೆ ಉಪವಾಸವಿದ್ದ ಮೂಲಕ ಬಹಳ ನಿರ್ವಿಣ್ಣನಾಗಿದ್ದನು ಮತ್ತು ಅವನ ಮನೆಯ ಮುಂದೆಯೇ ಪ್ರಾಣಬಿಟ್ಟನು.

ಆಗ ಆ ಭಕ್ತನು ಹೆದರಿ ಬ್ರಹ್ಮಯ್ಯನ ಮನೆಗೆ ಓಡಿಹೋಗಿ ಆದ ಸಂಗತಿಯನ್ನು ಅವನ ಹೆಂಡತಿಗೆ ತಿಳಿಸಿದನು. ಆಗ ಅವಳು ಬ್ರಹ್ಮಯ್ಯನಲ್ಲಿಗೆ ಬಂದು ಅವನನ್ನು ನೋಡಿ, ಆ ಭಕ್ತನಿಗೆ— ನೀನು ಈ ಮೃತ ದೇಹದ ಬೆನ್ನ ಮೇಲೆ ಗುದ್ದು ಎಂದು ಹೇಳಿ ಬ್ರಹ್ಮಯ್ಯನಿಗೆ ಅವಳು— ಎಲೋ ಬ್ರಹ್ಮಯ್ಯನೇ, ಈ ಭಕ್ತನು ನಿನ್ನನ್ನು ಗುದ್ದುತ್ತಾನೆ. ಏಳೇಳು ಎಂದು ಅನ್ನುತ್ತಿರಲು, ಆ ಭಕ್ತನು ಆ ದೇಹವನ್ನು ಗುದ್ದಲು ಬ್ರಹ್ಮಯ್ಯನ ಮೃತಶರೀರದಲ್ಲಿ ಜೀವ ಕಳೆಯು ತುಂಬಿ ಅವನು ಎದ್ದು ಕುಳಿತನು! ಮನುಷ್ಯನು ಮೃತಹೊಂದಿದ ಕೂಡಲೆ ಅವನ ಸೂಕ್ಷ್ಮ ಶರೀರದಲ್ಲಿರುವ ಜೀವವು ಅವನ ಶರೀರದ ಬಳಿಯಲ್ಲಿಯೇ ಕೆಲಹೊತ್ತು ಸಂಚರಿಸುತ್ತಿರುತ್ತದೆ. ಆದ್ದರಿಂದ ಮೃತದೇಹವನ್ನು ಹೊಡೆದ ಕೂಡಲೆ, ಹೊಡಿಸಿ

ಕೊಳ್ಳಬೇಕೆಂಬ ಬ್ರಹ್ಮಯ್ಯನ ಉತ್ಕಟೇಚ್ಛೆಯು ಆ ಜೀವವನ್ನು ಪುನಃ ಆ ದೇಹದಲ್ಲಿ ಆಕರ್ಷಿಸಲಾಗಿ ಅವನು ಎದ್ದು ಕುಳಿತನು.

ಬ್ರಹ್ಮಯ್ಯನಿಗೆ ಈ ಪ್ರಕಾರ ಪುನಃ ಪ್ರಾಣಬಂದಿದ್ದು ಗ್ರಾಮವಾಸಿಗಳಿಗೆಲ್ಲ ತಿಳಿಯಲು, ಅವರು ಬ್ರಹ್ಮಯ್ಯನು ಒಬ್ಬ ಮಹಾ ಶಿವಶರಣನು, ಮಹಾನುಭಾವಿಯು, ಅಹಿಂಸಾ ವ್ರತವನ್ನು ಅಚ್ಚಳಿಯದೆ ಪಾಲಿಸುವವನು, ಎಂದು ಭಾವಿಸಿ ಅವನ ಕಾಯಕದಲ್ಲಿ ಎಲ್ಲರೂ ಸಹಾಯವಾಗಹತ್ತಿದರು. ಅಂದಿನಿಂದ "ಬಡಿಹೋರಿ ಬ್ರಹ್ಮಯ್ಯ" ಎಂಬ ಹೆಸರಿನಿಂದ ಬ್ರಹ್ಮಯ್ಯನು ಲೋಕದಲ್ಲಿ ಪ್ರಸಿದ್ಧನಾದನು.

ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ವೀರಶೈವರಿಗೆಲ್ಲ ಅವನು ಪೂಜ್ಯನಾಗಿದ್ದಾನೆ.

---

## ಬಡಿಹೋರಿ ಬ್ರಹ್ಮಯ್ಯನ ಕಾಯಕದ ರೀತಿ.

ಬಡಿಹೋರಿ ಬ್ರಹ್ಮಯ್ಯನ ಚರಿತ್ರೆಯಿಂದ ಬೋಧೆ ತೆಗೆದುಕೊಳ್ಳುವ ಸಂಗತಿಗಳು ಅನೇಕವಿರುತ್ತವೆ. ಅವುಗಳನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ವಿವರಿಸುತ್ತೇವೆ.

ಶಿವಾನುಭವಿಗಳು ಅಹಿಂಸಾವ್ರತಕ್ಕೆ ಯಾವಾಗಲೂ ಬಹಳ ಮಹತ್ವ ಕೊಟ್ಟಿದ್ದಾರೆ. 'ದಯವೇ ಧರ್ಮದ ಮೂಲ'ವೆಂದು ಶಿವಶರಣರು ನುಡಿದಿದ್ದಾರೆ. ಬಡಿಹೋರಿ ಬ್ರಹ್ಮಯ್ಯನು ತನ್ನ ಹೋರಿಯನ್ನು ಹೊಡೆದು ಕೊಂದದ್ದರಿಂದ ಅವನಿಗೆ ಹಿಂಸಾದೋಷವು ಪ್ರಾಪ್ತವಾಯಿತು. ಆಗ ಅವನು ತಾನು ಪಾಪವನ್ನು ಮಾಡಿದೆನೆಂದು ಅತ್ಯಂತ ಪಶ್ಚಾತ್ತಾಪಬಟ್ಟನು. ಇದನ್ನು ಪರಿಹಾರ ಮಾಡಲು ಅವನು ಹೊಡಿಸಿಕೊಳ್ಳುವ ಕಾಯಕವನ್ನು ಕೈಕೊಂಡನು. ಇದು ಕಾಯಕವೇ ಹೇಗೆಂಬ ಪ್ರಶ್ನೆಯು ಮೊದಲು ಉದ್ಭವಿಸುತ್ತದೆ.

'ಕಾಯಕ' ಎಂದರೆ ಉಪಜೀವನದ ಉದ್ಯೋಗವೆಂದು ಸಾಮಾನ್ಯವಾಗಿ ಜನರು ತಿಳಿಯುವದುಂಟು. ಆದರೆ ಇದು ಅಕುಂಚಿತ ವಿಚಾ

ರವು ಶಿವಶರಣರ ಚರಿತ್ರೆಗಳನ್ನು ನಾವು ಪರಿಶೀಲಿಸಿದಲ್ಲಿ ಅವರ ಕಾಯ ಕಗಳಲ್ಲಿ ಬರೇ ಹೊಟ್ಟೆ ಹೊರೆಯುವದಷ್ಟೇ ಅಲ್ಲ, ಜನಸೇವೆ ಮತ್ತು ಆತ್ಮಸುಧಾರಣೆ ಇವುಗಳು ಇಲ್ಲವೆ ಇವುಗಳಲ್ಲೊಂದು ಇರುವದು ಕಂಡುಬರುತ್ತದೆ. ಇವುಗಳಿರದೆ ಹೋದರೆ ಅಂಥ ಹೋರೆಗಳು ಅಥವಾ ಉದ್ಯೋಗಗಳು ಕಾಯಕಗಳಾಗಲಾರವು. ಆಗ ಅವು ಕೇವಲ ಉಪಜೀವ ನದ ಸಾಧನಗಳು. ಈ ದೃಷ್ಟಿಯಿಂದ ಬಡಿಹೋರಿ ಬ್ರಹ್ಮಯ್ಯನ ವ್ರತವನ್ನು ನಾವು ಪರೀಕ್ಷಿಸುವದು ಅವಶ್ಯವು.

ಮನುಷ್ಯನು ಪ್ರತಿದಿವಸ ಅಪರಾಧಗಳನ್ನು ಅಥವಾ ಪಾಪಗಳನ್ನು ಮಾಡಿಯೇ ಮಾಡುತ್ತಾನೆ. ಅವುಗಳಾಗದಂತೆ ಇರುವದು ಅಶಕ್ಯವೇ ಸರಿ. ಆದರೆ ಅವು ಘಟಿಸಿದರೆ ಅವುಗಳನ್ನು ಹೇಗೆ ದೂರ ಮಾಡಬೇಕೆಂ ಬುದು ಪ್ರತಿಯೊಂದು ಧರ್ಮದಲ್ಲಿ ಮಹತ್ವದ ಪ್ರಶ್ನೆಯಾಗಿದೆ.

ಇಂಥ ಅಪರಾಧಗಳನ್ನು ಕಾಯಕದ ಮೂಲಕವೇ ದೂರಮಾ ಡಿಕೊಳ್ಳಬೇಕೆಂದು ಶಿವಶರಣರ ವಿಚಾರಗಳಿವೆ. ಅವರ ಚರಿತ್ರೆಗಳೆಲ್ಲ ಈ ಸಂಗತಿಯನ್ನೇ ಹೇಳುತ್ತವೆ.

ಬಡಿಹೋರಿ ಬ್ರಹ್ಮಯ್ಯನು ತಾನು ಜೀವಹಿಂಸೆ ಮಾಡಲಾಗಿ ಈ ಪಾಪವನ್ನು ಪರಿಹಾರ ಮಾಡಲು ಜನರಿಂದ ಹೊಡಿಸಿಕೊಳ್ಳಬೇ ಕೆಂಬ ಕಾಯಕವನ್ನು ಆರಂಭಿಸಿದನು. ಹೀಗೆ ಹೊಡಿಸಿಕೊಳ್ಳುವದು ಹೇಗೆ ಕಾಯಕವಾದೀತೆಂದು ಅನೇಕರು ಶಂಕಿಸಬಹುದು.

ಆದರೆ ಹೊಡಿಸಿಕೊಳ್ಳುವದು ಇದು ಒಂದು ಕ್ರಿಯೆಯಷ್ಟೇ? ಇದರಲ್ಲಿ ಹೊಡಿಸಿಕೊಳ್ಳುವವನು ಮನಸ್ಸನ್ನು ಗಟ್ಟಿಗೊಳಿಸಬೇಕು ಮತ್ತು ತಾಡನೆಯನ್ನು ಸಹಿಸಬೇಕು. ಮನಸ್ಸನ್ನು ಚನ್ನಾಗಿ ಗಟ್ಟಿಗೊಳಿ ಸುವದೂ ಸಹನೆಯೂ ಅತ್ಯಂತ ಮಹತ್ವದ ಕ್ರಿಯೆಗಳಾಗಿವೆ.

ಇಂಥ ಕ್ರಿಯೆಗಳಲ್ಲಿ ಆತ್ಮಸುಧಾರಣೆ ಮತ್ತು ಲೋಕಸೇವೆ ಇದ್ದರೆ ಅವುಗಳಿದ್ದ ಕಾರ್ಯವು ಕಾಯಕವಾಗುತ್ತವೆ. ಹೊಡಿಸಿಕೊಳ್ಳುವ ಬ್ರಹ್ಮಯ್ಯನ ಕ್ರಿಯೆಯಲ್ಲಿ ಇವೆರಡೂ ಇರುತ್ತವೆಂಬುದು ಸ್ವಲ್ಪ ವಿಚಾರ ಮಾಡಿದಲ್ಲಿ ತಿಳಿದುಬರುತ್ತದೆ.

ಬ್ರಹ್ಮಯ್ಯನಿಂದ ಹೋರಿಯು ಸತ್ತ ಬಳಿಕ ಅವನಿಗೆ ಪಶ್ಚಾತ್ತಾಪ ವಾಯಿತು. ಅದರಿಂದ ಅವನು ಜನರಿಂದ ಹೊಡಿಸಿಕೊಳ್ಳಲು ಸಿದ್ಧ

ಕೊಳ್ಳಬೇಕೆಂಬ ಬ್ರಹ್ಮಯ್ಯನ ಉತ್ಕಟೇಚ್ಛೆಯು ಆ ಜೀವವನ್ನು ಪುನಃ ಆ ದೇಹದಲ್ಲಿ ಆಕರ್ಷಿಸಲಾಗಿ ಅವನು ಎದ್ದು ಕುಳಿತನು.

ಬ್ರಹ್ಮಯ್ಯನಿಗೆ ಈ ಪ್ರಕಾರ ಪುನಃ ಪ್ರಾಣಬಂದಿದ್ದು ಗ್ರಾಮವಾಸಿಗಳಿಗೆಲ್ಲ ತಿಳಿಯಲು, ಅವರು ಬ್ರಹ್ಮಯ್ಯನು ಒಬ್ಬ ಮಹಾ ಶಿವಶರಣನು, ಮಹಾನುಭಾವಿಯು, ಅಹಿಂಸಾ ವ್ರತವನ್ನು ಅಚ್ಚಳಿಯದೆ ಪಾಲಿಸುವವನು, ಎಂದು ಭಾವಿಸಿ ಅವನ ಕಾಯಕದಲ್ಲಿ ಎಲ್ಲರೂ ಸಹಾಯವಾಗಹತ್ತಿದರು. ಅಂದಿನಿಂದ "ಬಡಿಹೋರಿ ಬ್ರಹ್ಮಯ್ಯ" ಎಂಬ ಹೆಸರಿನಿಂದ ಬ್ರಹ್ಮಯ್ಯನು ಲೋಕದಲ್ಲಿ ಪ್ರಸಿದ್ಧನಾದನು.

ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ. ಆದ್ದರಿಂದ ವೀರಶೈವರಿಗೆಲ್ಲ ಅವನು ಪೂಜ್ಯನಾಗಿದ್ದಾನೆ.

---

## ಬಡಿಹೋರಿ ಬ್ರಹ್ಮಯ್ಯನ ಕಾಯಕದ ರೀತಿ.

ಬಡಿಹೋರಿ ಬ್ರಹ್ಮಯ್ಯನ ಚರಿತ್ರೆಯಿಂದ ಬೋಧೆ ತೆಗೆದುಕೊಳ್ಳುವ ಸಂಗತಿಗಳು ಅನೇಕವಿರುತ್ತವೆ. ಅವುಗಳನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ವಿವರಿಸುತ್ತೇವೆ.

ಶಿವಾನುಭವಿಗಳು ಅಹಿಂಸಾವ್ರತಕ್ಕೆ ಯಾವಾಗಲೂ ಬಹಳ ಮಹತ್ವ ಕೊಟ್ಟಿದ್ದಾರೆ. 'ದಯವೇ ಧರ್ಮದ ಮೂಲ'ವೆಂದು ಶಿವಶರಣರು ನುಡಿದಿದ್ದಾರೆ. ಬಡಿಹೋರಿ ಬ್ರಹ್ಮಯ್ಯನು ತನ್ನ ಹೋರಿಯನ್ನು ಹೊಡೆದು ಕೊಂದದ್ದರಿಂದ ಅವನಿಗೆ ಹಿಂಸಾದೋಷವು ಪ್ರಾಪ್ತವಾಯಿತು. ಆಗ ಅವನು ತಾನು ಪಾಪವನ್ನು ಮಾಡಿದೆನೆಂದು ಅತ್ಯಂತ ಪಶ್ಚಾತ್ತಾಪಬಟ್ಟನು. ಇದನ್ನು ಪರಿಹಾರ ಮಾಡಲು ಅವನು ಹೊಡಿಸಿಕೊಳ್ಳುವ ಕಾಯಕವನ್ನು ಕೈಕೊಂಡನು. ಇದು ಕಾಯಕವೇ ಹೇಗೆಂಬ ಪ್ರಶ್ನೆಯು ಮೊದಲು ಉದ್ಭವಿಸುತ್ತದೆ.

'ಕಾಯಕ' ಎಂದರೆ ಉಪಜೀವನದ ಉದ್ಯೋಗವೆಂದು ಸಾಮಾನ್ಯವಾಗಿ ಜನರು ತಿಳಿಯುವದುಂಟು. ಆದರೆ ಇದು ಅಕುಂಚಿತ ವಿಚಾ

ರವು ಶಿವಶರಣರ ಚರಿತ್ರೆಗಳನ್ನು ನಾವು ಪರಿಶೀಲಿಸಿದಲ್ಲಿ ಅವರ ಕಾಯ ಕಗಳಲ್ಲಿ ಬರೀ ಹೊಟ್ಟೆ ಹೊರೆಯುವದಷ್ಟೇ ಅಲ್ಲ, ಜನಸೇವೆ ಮತ್ತು ಆತ್ಮಸುಧಾರಣೆ ಇವುಗಳು ಇಲ್ಲವೆ ಇವುಗಳಲ್ಲೊಂದು ಇರುವದು ಕಂಡುಬರುತ್ತದೆ. ಇವುಗಳಿರದೆ ಹೋದರೆ ಅಂಥ ಹೋರಿಗಳು ಅಥವಾ ಉದ್ಯೋಗಗಳು ಕಾಯಕಗಳಾಗಲಾರವು. ಆಗ ಅವು ಕೇವಲ ಉಪಜೀವ ನದ ಸಾಧನಗಳು. ಈ ದೃಷ್ಟಿಯಿಂದ ಬಡಿಹೋರಿ ಬ್ರಹ್ಮಯ್ಯನ ವ್ರತವನ್ನು ನಾವು ಪರೀಕ್ಷಿಸುವದು ಅವಶ್ಯವು.

ಮನುಷ್ಯನು ಪ್ರತಿದಿವಸ ಅಪರಾಧಗಳನ್ನು ಅಥವಾ ಪಾಪಗಳನ್ನು ಮಾಡಿಯೇ ಮಾಡುತ್ತಾನೆ. ಅವುಗಳಾಗದಂತೆ ಇರುವದು ಅಶಕ್ಯವೇ ಸರಿ. ಆದರೆ ಅವು ಘಟಿಸಿದರೆ ಅವುಗಳನ್ನು ಹೇಗೆ ದೂರ ಮಾಡಬೇಕೆಂ ಬುದು ಪ್ರತಿಯೊಂದು ಧರ್ಮದಲ್ಲಿ ಮಹತ್ವದ ಪ್ರಶ್ನೆಯಾಗಿದೆ.

ಇಂಥ ಅಪರಾಧಗಳನ್ನು ಕಾಯಕದ ಮೂಲಕವೇ ದೂರಮಾ ಡಿಕೊಳ್ಳಬೇಕೆಂದು ಶಿವಶರಣರ ವಿಚಾರಗಳಿವೆ. ಅವರ ಚರಿತ್ರೆಗಳೆಲ್ಲ ಈ ಸಂಗತಿಯನ್ನೇ ಹೇಳುತ್ತವೆ.

ಬಡಿಹೋರಿ ಬ್ರಹ್ಮಯ್ಯನು ತಾನು ಜೀವಹಿಂಸೆ ಮಾಡಲಾಗಿ ಈ ಪಾಪವನ್ನು ಪರಿಹಾರ ಮಾಡಲು ಜನರಿಂದ ಹೊಡಿಸಿಕೊಳ್ಳಬೇ ಕೆಂಬ ಕಾಯಕವನ್ನು ಆರಂಭಿಸಿದನು. ಹೀಗೆ ಹೊಡಿಸಿಕೊಳ್ಳುವದು ಹೇಗೆ ಕಾಯಕವಾದೀತೆಂದು ಅನೇಕರು ಶಂಕಿಸಬಹುದು.

ಆದರೆ ಹೊಡಿಸಿಕೊಳ್ಳುವದು ಇದು ಒಂದು ಕ್ರಿಯೆಯಷ್ಟೇ? ಇದರಲ್ಲಿ ಹೊಡಿಸಿಕೊಳ್ಳುವವನು ಮನಸ್ಸನ್ನು ಗಟ್ಟಿಗೊಳಿಸಬೇಕು ಮತ್ತು ತಾಡನೆಯನ್ನು ಸಹಿಸಬೇಕು. ಮನಸ್ಸನ್ನು ಚನ್ನಾಗಿ ಗಟ್ಟಿಗೊಳಿ ಸುವದೂ ಸಹನೆಯೂ ಅತ್ಯಂತ ಮಹತ್ವದ ಕ್ರಿಯೆಗಳಾಗಿವೆ.

ಇಂಥ ಕ್ರಿಯೆಗಳಲ್ಲಿ ಆತ್ಮಸುಧಾರಣೆ ಮತ್ತು ಲೋಕಸೇವೆ ಇದ್ದರೆ ಅವುಗಳಿದ್ದ ಕಾರ್ಯವು ಕಾಯಕವಾಗುತ್ತದೆ. ಹೊಡಿಸಿಕೊಳ್ಳುವ ಬ್ರಹ್ಮಯ್ಯನ ಕ್ರಿಯೆಯಲ್ಲಿ ಇವೆರಡೂ ಇರುತ್ತವೆಂಬುದು ಸ್ವಲ್ಪ ವಿಚಾರ ಮಾಡಿದಲ್ಲಿ ತಿಳಿದುಬರುತ್ತದೆ.

ಬ್ರಹ್ಮಯ್ಯನಿಂದ ಹೋರಿಯು ಸತ್ತ ಬಳಿಕ ಅವನಿಗೆ ಪಶ್ಚಾತ್ತಾಪ ವಾಯಿತು. ಅದರಿಂದ ಅವನು ಜನರಿಂದ ಹೊಡಿಸಿಕೊಳ್ಳಲು ಸಿದ್ಧ

ನಾದನು. ಇದು ಒಂದು ಬಗೆಯ ಆತ್ಮಸುಧಾರಣೆಯ ಕಾರ್ಯವಲ್ಲದೆ ಮತ್ತೇನು ?

ಅಲ್ಲದೆ ಇದರಲ್ಲಿ ಲೋಕಸೇವೆಯೂ ಉಂಟು. ಜನರು ಅವನನ್ನು ಹೊಡೆಯಲು ಸಿದ್ಧರಾಗಬೇಕಾದರೆ ಜೀವಹಿಂಸೆಯು ಸರಿಯಾದುದಲ್ಲ ವೆಂಬ ತಿಳಿವಳಿಕೆಯು ಅವರಲ್ಲಿ ದೃಢಪಡಬೇಕಾಗುತ್ತದೆ. ಇಂಥ ತಿಳಿ ವಳಿಕೆಯನ್ನು ಅವರಲ್ಲಿ ಉಂಟುಮಾಡಲು ಬ್ರಹ್ಮಯ್ಯನ ಕ್ರಿಯೆಯು ಕಾರಣವಾಯಿತು. ಬರೇ ಬಾಯಿ ಮಾತಿನ ಬೋಧೆಯಿಂದ ಪರಿಣಾ ಮವಾಗದು. ಬ್ರಹ್ಮಯ್ಯನು ತನ್ನ ಕಾಯವನ್ನು ಕ್ಲೇಶಪಡಿಸುವದ ರಿಂದ ಅವನು ಜನರಿಗೆ ಅಹಿಂಸೆಯ ಮಹತ್ವವನ್ನು ತಿಳಿಸಿಕೊಟ್ಟಂತಾ ಯಿತು. ಆದ್ದರಿಂದ ಇದರಲ್ಲಿ ಲೋಕಸೇವೆಯೂ ಇದೆ.

ಹೀಗೆ ಬ್ರಹ್ಮಯ್ಯನ ಕ್ರಿಯೆಯಲ್ಲಿ ಆತ್ಮಸುಧಾರಣೆಯೂ ಇದೆ, ಲೋಕಸೇವೆಯೂ ಇದೆ. ಆದುದರಿಂದ ಅವನ ಈ ಕ್ರಿಯೆಯು ಕಾಯ ಕವಾಗುತ್ತದೆ.

ಈ ಕಾಯಕ ಮಾಡುವಲ್ಲಿ ಬ್ರಹ್ಮಯ್ಯನಿಗೆ ಕೆಲವು ತೊಂದರೆಗಳು ಉಂಟಾದವು. ಮೊದಲು ಜನರು ಅವನನ್ನು ಹೊಡೆಯಲು ಸ್ವಾಭಾವಿಕ ವಾಗಿ ಸಂಕೋಚಪಡಹತ್ತಿದರು. ಮುಂದೆ ಅವರು ಇದರಲ್ಲಿ ಪೂರ್ಣವಾಗಿ ಹಿಂದೆಗೆದರು. ಅಂದರೆ ಅವರು ಅವನನ್ನು ಹೊಡೆಯುವದನ್ನು ನಿರಾಕ ರಿಸಿದರು. ಆದರೂ ಬ್ರಹ್ಮಯ್ಯನು ತನ್ನ ಕಾಯಕವನ್ನು ಬಿಡಲಿಲ್ಲ. ಉಪವಾಸವಿರಹತ್ತಿದನು. ಅವನಿಗೆ ಜೀವ ಹೋಗುವ ಪ್ರಸಂಗವೂ ಬಂದಿತು. ಇದಕ್ಕೂ ಸಿದ್ಧನಾದನು. ಆಗ ಮಾತ್ರ ಜನರು ಅವನ ಅಹಿಂ ಸೆಯ ವ್ರತವನ್ನು ಚನ್ನಾಗಿ ತಿಳಿದವರಾದರು. ಇದೊಂದು ಬಗೆಯ ಸತ್ಯಾಗ್ರಹವೆಂದು ಹೇಳಬಹುದು.

ಹೀಗೆ ಜನರು ಅಹಿಂಸಾವ್ರತವನ್ನು ತಿಳಿದ ಬಳಿಕ ಅವರು ಅವನ ಇಚ್ಛೆಯ ಪ್ರಕಾರ ಅವನ ಕಾಯಕದಲ್ಲಿ ಅವನಿಗೆ ಸಹಾಯಕರಾಗಿ ನಡೆ ಯಹತ್ತಿದರು. ಅಂದರೆ ಅವನನ್ನು ಬಡಿಯಹತ್ತಿದರು. ಇದರಿಂದ ಅವರು ಅಹಿಂಸೆಯ ಮಹತ್ವವನ್ನು ಆಗಿಂದಾಗ್ಗೆ ನೆನಪಿಗೆ ತಂದಂತಾಗಲಿಲ್ಲವೇ ?

ಬಡಿಹೋರಿ ಬ್ರಹ್ಮಯ್ಯನು ಜನರಿಂದ ಹೊಡಿಸಿಕೊಂಡ ಬಳಿಕ ಅವರು ಅವನಿಗೆ 'ಕಾಯಕ' ಅಂದರೆ ಕೆಲವೊಂದು ಪ್ರತಿಫಲವನ್ನು

ಕೊಡುವರು. ಅದರ ಮೇಲೆ ಅವನು ಉಪಜೀವಿಸುವನು. ಹೀಗೆ ಉಪಜೀವಿಸಿ ಉಳಿದದ್ದನ್ನು ದಾಸೋಹ ಕಾರ್ಯಕ್ಕೆ ಉಪಯೋಗಿಸುವನು.

ಅಂದರೆ ಒಬ್ಬನ ಕಾಯಕದಿಂದ ಯಾವ ಜನರು ಸಹಾಯವನ್ನು ಹೊಂದುತ್ತಾರೋ ಅವರು ಅವನಿಗೆ ಏನಾದರೂ ಸಲ್ಲಿಸತಕ್ಕದ್ದು ಅವರ ಕರ್ತವ್ಯವು. ಅವರು ಹೀಗೆ ಸಲ್ಲಿಸುವದು ದಾನವಾಗಲಾರದು. ಯಾಕಂದರೆ ಅದಕ್ಕೆ ಕೆಲವೊಂದು ಪ್ರತಿಫಲವಿದೆ. ಅಂದರೆ ಏನೂ ತೆಗೆದುಕೊಳ್ಳದೆ ಅದು ಕೊಟ್ಟದ್ದಲ್ಲ.

ಹಾಗೆಯೇ ಕಾಯಕ ಮಾಡುವವನು ತನ್ನ ಉಪಜೀವನಕ್ಕೋಸ್ಕರ ಅಥವಾ ತನ್ನ ಅಥವಾ ಜನರ ಸುಧಾರಣೆಯ ಕಾರ್ಯಗಳಿಗೋಸ್ಕರ ಹಣವನ್ನು ಬೇಡುವದೂ ತಪ್ಪಾಗಲಾರದು. ಇದು ಭಿಕ್ಷೆ ಬೇಡಿದಂತಲ್ಲ.

ಈ ಬಗೆಯಾಗಿ ಶಿವಾನುಭವದ ಕಾರ್ಯದಲ್ಲಿ ದಾನವೂ ಇಲ್ಲ, ಭಿಕ್ಷೆಯೂ ಇಲ್ಲ. ಶಿವಶರಣರಿಗೆ ಇವೆರಡೂ ಕಾರ್ಯಗಳು ಸಮ್ಮತವಾದುವಲ್ಲ.

ಕಾಯಕ ಮಾಡುವವನು ಅದರ ಮೂಲಕ ತನ್ನ ನಿರ್ವಾಹ ಸಾಗಿಸುತ್ತ ಉಳಿದದ್ದನ್ನು ದಾಸೋಹಕ್ಕೆ ಉಪಯೋಗಿಸುತ್ತಾನೆ.

ಇಲ್ಲಿ ದಾಸೋಹವೆಂದರೆ ಸಿಕ್ಕ ಜನರಿಗೆ ಪುಕ್ಕಟೆ ಊಟಹಾಕುವದಲ್ಲ ಅಥವಾ ದಾನಕೊಡುವದಲ್ಲ. ದಾಸೋಹ ಮಾಡುವವನು ಮೊದಲು ಕಾಯಕವನ್ನು ಕೈಕೊಳ್ಳಬೇಕು. ಅಂದರೆ ಮೊದಲು ದುಡಿದು ಗಳಿಸಬೇಕು. ಹೀಗೆ ಗಳಿಸಿದ್ದನ್ನು ಪ್ರಸಾದರೂಪವಾಗಿ ಉಪಭೋಗಿಸಿ, ಆಮೇಲೆ ಅದರಲ್ಲಿ ಉಳಿದದ್ದನ್ನು ಯಾವ ಭಕ್ತಾದಿಗಳು ಅಥವಾ ಗುರುಲಿಂಗ ಜಂಗಮರು ತಮ್ಮ ಶಿವಾನುಭವದ ನಡೆಯ ಮೂಲಕ ಆತ್ಮಸುಧಾರಣೆ ಇಲ್ಲವೆ ಲೋಕಕಲ್ಯಾಣದಲ್ಲಿ ತೊಡಗಿರುತ್ತಾರೋ ಅವರಿಗೆ ಸಲ್ಲಿಸಬೇಕು. ಹೀಗೆ ಸಲ್ಲಿಸುವದೇ ದಾಸೋಹವು. ತಾನು ದಾಸನೆಂದು ತಿಳಿದು ಉತ್ತಮರ ಸೇವೆ ಮಾಡುವದೇ ದಾಸೋಹವಾಗಿದೆ.

ಮೇಲಿನ ಸಂಗತಿಯಿಂದ ಶಿವಾನುಭವಿಯು ದುಡಿಯದೆ ಹಣವನ್ನು ಸಂಗ್ರಹಿಸಕೂಡದೆಂದು ತಿಳಿದುಬರುತ್ತದೆ. ಶಿವಶರಣರ ಚರಿತ್ರೆಗಳು

ಇದನ್ನೇ ಹೇಳುತ್ತವೆ. ಶಿವಾನುಭವಿಯು ಶಕ್ತಿ ಇರುವ ವರೆಗೂ ದಿನಾಲು ಕಾಯಕ ಮಾಡುತ್ತಲೇ ಇರಬೇಕು. ಅದರ ಮೇಲೆಯೇ ಅವನು ಉಪ ಜೀವಿಸಬೇಕು. ಆದರೆ ತಾನು ಕೂಡಿಸಿಟ್ಟ ಹಣದ ಮೇಲೆ ಅವನು ಉಪಜೀವಿಸಲಾಗದು. ಅದು ಅವನನ್ನು ಸೋಮಾರಿಯನ್ನಾಗಿ ಮಾಡು ತ್ತದೆ. ಒಂದು ವೇಳೆ ಹಣ ಕೂಡಿಸಿದರೆ ಅವನು ಅದನ್ನು ಸತ್ಕಾರ್ಯಕ್ಕೆ ಅಂದರೆ ದಾಸೋಹಕ್ಕೆ ಉಪಯೋಗಿಸಬೇಕು. ಇದು ಶಿವಾನುಭವಿಯ ಕಾಯಕದ ತತ್ವವು.

ಅಪರಾಧಗಳು ಘಟಿಸಿದಾಗ್ಗೆ ಅಥವಾ ಪಾಪಗಳು ಒದಗಿದಾಗ್ಗೆ ಜನರು ಪ್ರಾಯಶ್ಚಿತ್ತವನ್ನು ತೆಗೆದುಕೊಳ್ಳುವದುಂಟು. ಅಂದರೆ ಅವರು ತಮ್ಮ ಶರೀರಕ್ಕೆ ನೋವನ್ನುಂಟು ಮಾಡಿಕೊಳ್ಳುತ್ತಾರೆ. ಇಲ್ಲವೆ ಸಾಧುಸ ತ್ಪುರುಷರಿಗೆ ಭೋಜನ ಮಾಡಿಸುತ್ತಾರೆ. ಇಲ್ಲವೆ ತೀರ್ಥಯಾತ್ರೆಗಳಿಗೆ ಹೋಗುತ್ತಾರೆ. ಆದರೆ ಇವುಗಳಿಂದ ಪಾಪಗಳು ಹೋಗಲಾರವು. ಹಾಗೆ ಮಾಡುವದು ಶಿವಾನುಭವದ ನಡೆಯಲ್ಲ.

ಆತ್ಮಹಿಂಸೆ ಮಾಡಿಕೊಳ್ಳುವದೂ, ಇಂದ್ರಿಯಗಳನ್ನು ವ್ಯಥೆಗೊಳಿ ಸುವದೂ ಜನರಿಗೆ ಊಟ ಹಾಕುವದೂ, ತೀರ್ಥಯಾತ್ರೆಗಳಿಗೆ ಹೋಗು ವದೂ ಶಿವಾನುಭವಿಗಳ ಮಾರ್ಗವಲ್ಲ. ಮಾಡಿದ ದೋಷಗಳು ಅವು ಗಳಿಂದ ಹೋಗಲಾರವು.

ಆದರೆ ದೋಷಗಳು ಹೋಗಬೇಕಾದರೆ ಮಾಡಿದ ಅಪರಾಧಕ್ಕೋ ಸ್ಕರ ಮೊದಲು ಪಶ್ಚಾತ್ತಾಪ ಪಡಬೇಕು. ಶಿವಶರಣರೂ ವಚನಕಾರರೂ ಇದಕ್ಕೆಯೇ ಮಹತ್ವ ಕೊಟ್ಟಿದ್ದಾರೆ. ಆ ಮೇಲೆ ಕೆಲವೊಂದು ಕಾಯಕ ವನ್ನು ಕೈಕೊಳ್ಳಬೇಕು. ಅದನ್ನು ಮಾಡುವಲ್ಲಿ ಶುದ್ಧ ಸಾತ್ವಿಕ ನೈತಿ ಕಾಚಾರದಿಂದ ನಡೆಯಬೇಕು. ಲಿಂಗಾರ್ಪಣಯುಕ್ತನಾಗಿ ತಾನು ಕೈಕೊಂಡ ಕಾಯಕಗಳನ್ನು ಮಾಡುತ್ತಲಿರಬೇಕು. ಇದರಿಂದ ದೋಷಗಳು ಹೊರಟುಹೋಗಿ ಲಿಂಗ ಕಳೆಯು ಅವನ ಪ್ರಾಣ, ಮನ, ಬುದ್ಧಿ ಇಂದ್ರಿಯಗಳಲ್ಲೆಲ್ಲ ಪ್ರಕಟವಾಗುತ್ತ ಹೋಗುತ್ತದೆ. ಇದೇ ಶಿವಾನುಭವದ ರೀತಿಯು, ಷಟ್‌ಸ್ಥಲಾಚರಣೆಯು. ಇದರಿಂದಲೇ ದೋಷಗಳು ಮತ್ತು ಪಾಪಗಳು ಲಯವಾಗುತ್ತವೆ.

ಮನುಷ್ಯನು ಪ್ರತಿಕ್ಷಣ ಅಪರಾಧಗಳನ್ನು ಮಾಡುತ್ತಾನಷ್ಟೇ. ಇಂಥ ಅಪರಾಧಗಳನ್ನು ಅವನು ಈ ರೀತಿಯ ಕಾಯಕದ ಮೂಲಕವೇ ದೂರ

ಮಾಡಿಕೊಳ್ಳಬೇಕು. ಇದೇ ಅವನಿಗೆ ವ್ರತ, ಜಪ, ತಪ, ನಿಯಮವಾಗಿ ಪರಿಣಮಿಸುತ್ತದೆ.

ಇಲ್ಲಿ ಒಂದು ಲೌಕಿಕ ಉದಾಹರಣೆಯನ್ನು ತೆಗೆದುಕೊಳ್ಳುವಾ. ಒಬ್ಬ ಮನುಷ್ಯನು ಕೆಲವೊಂದು ಅಪರಾಧವನ್ನು ಮಾಡಿದ್ದರಿಂದ ಅವ ನನ್ನು ನ್ಯಾಯಾಸನದ ಮುಂದೆ ತಂದಾಗ್ಗೆ ಅವನು ತಾನು ಮಾಡಿದ ಅಪರಾಧವು ನಿಜವಿದ್ದರೆ, ಅವನು ಪಶ್ಚಾತ್ತಾಪ ಹೊಂದಿ ಕೂಡಲೆ ಅದನ್ನು ಒಪ್ಪಿಕೊಂಡು ಸೆರೆಮನೆಗೆ ಹೋಗಬೇಕು. ಬ್ರಹ್ಮಯ್ಯನ ತತ್ವದ ಪ್ರಕಾರ ಇದು ಕಾಯಕವೆನಿಸಿಕೊಳ್ಳುತ್ತದೆ.

ಇದರಲ್ಲಿ ಆತ್ಮಸುಧಾರಣೆಯು ಇದೆ. ಜನಸೇವೆಯೂ ಉಂಟು.

ಶಿವಕಿಂಕರಯ್ಯನೆಂಬ ಇನ್ನೊಬ್ಬ ಶಿವಶರಣನಾದರೂ ಹೀಗೆಯೇ ಆಚರಿಸಿದ್ದಾನೆ. (ಹಿಂದೆ ಪುಟ ೪೫ ನೋಡಿರಿ.) ಆದರೆ ಅವನು ಜನ ಸೇವೆ ಮಾಡುವಲ್ಲಿ ತನ್ನ ಪ್ರಾಣವನ್ನು ಕಳೆದುಕೊಂಡನು. ಆದರೆ ಬಡಿ ಹೋರಿ ಬ್ರಹ್ಮಯ್ಯನು ಅವನಂತೆ ತನ್ನ ಪ್ರಾಣವನ್ನು ಕಳೆದುಕೊಳ್ಳದೆ ಅಂತ್ಯದಲ್ಲಿ ತನ್ನ ಕಾಯಕದಲ್ಲಿ ಜಯವನ್ನು ಹೊಂದಿದನು.

ಆದರೆ ಶಿವಶರಣರಲ್ಲಿ ಜಯಾಪಜಯಗಳೆಂಬುವಿಲ್ಲ. ಜಯವಾ ದರೆ ಹೆಚ್ಚು, ಅಪಜಯವಾದರೆ ಕಡಿಮೆ ಎಂದು ಅವರು ಭಾವಿಸುವದಿಲ್ಲ. ಮಾಡಿದ ಕ್ರಿಯೆಯು ಶರಣರಿಗೆ ಮಹತ್ವವಾದುದೇ ಹೊರ್ತು, ಅದರ ಪರಿಣಾಮಗಳು ಅಂದರೆ ಜಯಾಪಜಯಗಳು ಮಹತ್ವವಾದುವಲ್ಲ. ಅವು ಗಳನ್ನು ಪರಮಾತ್ಮನಿಗರ್ಪಿಸಿ ಕಾರ್ಯಮಾಡುವದೇ ಅವರ ಕರ್ತವ್ಯವು.

ಬಡಿಹೋರಿ ಬ್ರಹ್ಮಯ್ಯನ ಕಾಯಕವು ಮೇಲಿನ ತತ್ವಗಳನ್ನು ಸಮ ರ್ಥಿಸುತ್ತದೆ.

---

## ಸೇವಿಕೆ ಗೌರವ್ವೆ.

ಗೌರವ್ವೆಯು ಕಲ್ಯಾಣ ಪಟ್ಟಣದಲ್ಲಿ ವಾಸಿಸುತ್ತಿದ್ದು ಅವಳು ಬೆತ್ತ ವನ್ನು ಹಿಡಿದುಕೊಂಡು ಶಿವಭಕ್ತರ ಕೂಟಗಳ ಮತ್ತು ಮೆರವಣಿಗೆ ಗಳ ಕಾಲದಲ್ಲಿ ದಾರಿ ಬಿಡಿಸುವ ಕಾಯಕವನ್ನು ಕೈಕೊಂಡಿದ್ದಳು. ಭಕ್ತರ ಮನೆಗಳಲ್ಲಿ ಪ್ರಸ್ತಗಳು ನಡೆದ ಕಾಲದಲ್ಲಿ ಅಲ್ಲಿಗೆ ಬಂದ ಸ್ತ್ರೀ ಪುರುಷರುಗಳಿಗೆ ದಾರಿಯನ್ನು ತೋರಿಸುತ್ತ ಅವರವರ ಸ್ಥಾನದಲ್ಲಿ

ಕುಳ್ಳಿರಿಸುವಳು. ಇದರಿಂದ ತನಗೆ ಬಂದ ಹಣದಿಂದ ತನ್ನ ನಿರ್ವಾಹ ಸಾಗಿಸುತ್ತ ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವಳು. ಅದ್ದರಿಂದ ಕಲ್ಯಾಣದಲ್ಲಿ ಇವಳಿಗೆ ಸೇವಿಕೆ-ಗೌರವ್ವೆ ಎಂಬ ಹೆಸರು ಪ್ರಾಪ್ತವಾಯಿತು. ಈ ಕಾಯಕದಿಂದಲೇ ಅವಳು ಮೋಕ್ಷವನ್ನು ಹೊಂದಿದಳು.

---

## ಕದಿರೆ ರೆಮ್ಮವ್ವೆ.

ಕದಿರೆ ರೆಮ್ಮವ್ವೆಯು ಕಲ್ಯಾಣ ಪಟ್ಟಣದಲ್ಲಿದ್ದು ರಾಟೆಯಿಂದ ನೂಲನ್ನು ತೆಗೆಯುವ ಕಾಯಕವನ್ನು ಮಾಡಿಕೊಂಡಿದ್ದಳು. ಹೀಗೆ ಬಂದ ನೂಲನ್ನು ಮಾರಿ, ಬಂದ ಹಣದಿಂದ ತನ್ನ ನಿರ್ವಾಹ ಸಾಗಿಸುತ್ತಿದ್ದಳು. ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಉಪಯೋಗಿಸುವಳು. ಇವಳು ವಚನಕಾರಳಿದ್ದಾಳೆ ಈಕೆಯ ೩ ವಚನಗಳು ಮಾತ್ರ ನಮಗೆ ಉಪಲಬ್ಧವಿದ್ದು ಅವುಗಳಲ್ಲಿ ಎರಡನ್ನು ಕೆಳಗೆ ಉದಹರಿಸಿದ್ದೇವೆ. ಅವುಗಳಿಗೆ ಪುರಾತನ ಟೀಕೆಯುಂಟು.

### ವಚನಗಳು.

(೧) ಎಲ್ಲರ ಗಂಡಂದಿರು ಪರದಳವಿಭಾಡರು. ಎನ್ನ ಗಂಡ ಮನೆದಳವಿಭಾಡ. ಎಲ್ಲರ ಗಂಡಂದಿರು ಗಜಬೇಟೆಕಾರರು. ಎನ್ನ ಗಂಡ ಮನೆಯು ಬೇಟೆಕಾರ. ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು. ಎನ್ನ ಗಂಡ ತಾರದೆ ಇಕ್ಕಿಸಿಕೊಂಬ. ಎಲ್ಲರ ಗಂಡಂದಿರಿಗೆ ಮೂರು, ಎನ್ನ ಗಂಡಂಗೆ ಒಂದೇ. ಅದೊಂದು ಸಂದೇಹ ಕದಿರರೆಮ್ಮಿಯೊಡೆಯ ಗುಮ್ಮೇಶ್ವರಾ.

ಟೀಕು— ಮಾಯಾಶಕ್ತಿಯ ವಲ್ಲಭರಾದ ಖಂಡಿತ ಜ್ಞಾನಿಗಳೆಲ್ಲರು ಬಹಿರಂಗದ ಪ್ರಪಂಚು, ತನುದಂಡಣೆಗಳಿಂ ನಿವೃತ್ತಿ ಮಾಡಬೇಕೆನುತ್ತಿಹರೆಂಬುದೀಗ, ಎಲ್ಲರ ಗಂಡಂದಿರು ಪರದಳವಿಭಾಡರು ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪವಾದ ಶರಣಸತಿಗೆ ಮಹಾಘನ ಲಿಂಗವೇ ಪತಿಯಾದ ಕಾರಣ ಆ ಮಹಾಘನಲಿಂಗವು ಶರಣನ ಸರ್ವಾಂಗವನ

ವಗ್ರಹಿಸಿ ಮನಸ್ಸಿನಿಂ ತೋರುವ ಸಂಕಲ್ಪವಿಕಲ್ಪ ಮೊದಲಾದ ಸಕಲ ಪ್ರಪಂಚ ನಿವೃತ್ತಿಮಾಡಿ ಶಿವಜ್ಞಾನವ ಪ್ರಭಾವಿಸಿ, ಕೊಡುತ್ತಿಹುದೆಂಬುದೀಗ, ಎನ್ನ ಗಂಡ ಮನೆದಳವಿಭಾಡನೆಂಬ ಶಬ್ದಕ್ಕರ್ಥ. ಮಾಯಾಶಕ್ತಿ ವಲ್ಲಭರಾದ ಭಿನ್ನಜ್ಞಾನಿಗಳೆಲ್ಲರು ಬಹಿರಂಗದಷ್ಟ ಮದಂಗಳ ನಷ್ಟವ ಮಾಡಬೇಕೆನ್ನುತ್ತಿಹರು. ಚಿದ್ರೂಪನಾದ ಶರಣನ ಬಾಹ್ಯಾಭ್ಯಂತರಂಗಳನೊಳಕೊಂಡು, ಪರಿಪೂರ್ಣವಾಗಿರ್ಪ ಪರಶಿವತತ್ವವು ಅಂತರಂಗದಷ್ಟಮದಂಗಳ ನಷ್ಟವ ಮಾಡಿ, ಚಿದಹಂಕಾರ ಸ್ವರೂಪವನೆಯ್ದಿಸುತ್ತಿಹನೆಂಬುದೀಗ, ಎಲ್ಲರ ಗಂಡಂದಿರು ಗಜಬೇಟೆಕಾರರು, ಎನ್ನ ಗಂಡ ಮನೆಯ ಬೇಟೆಕಾರನೆಂಬ ಶಬ್ದಕ್ಕರ್ಥ. ತಮ್ಮ ನಿಜವೇ ಪರಬ್ರಹ್ಮವೆಂದರಿಯದೆ, ದ್ವೈತಭಾವದಿಂದೆ ಲಿಂಗಕ್ಕೆ ಸರ್ವಕ್ರಿಯೋಪಚಾರಂಗಳ ಮಾಡಿ ಭಿನ್ನ ಫಲಪದಂಗಳ ಪಡೆದು ಭೋಗಿಸಿದವರು ಭವಹೇತುವಪ್ಪ ಜನ್ಮಾಂತರಕ್ಕೆ ಬಂದು ಮಾಯಾಸಂಬಂಧವಾದ ಸಕಲ ವಿಷಯ ಪದಾರ್ಥಂಗಳ ಜೀವಭಾವದಿಂ ಭುಂಜಿಸುತ್ತಿಹರು. ಸುಜ್ಞಾನಸನ್ನಿಹಿತವಾದ ಶರಣಸತಿಗೆ ಪತಿಯಾಗಿರ್ಪ ಮಹಾಘನಲಿಂಗವು ಫಲಪದಂಗಳ ಕೊಟ್ಟು ಭವಕ್ಕೆ ತಾರದೆ, ಅಂಗ ಮನ ಪ್ರಾಣ ಸರ್ವೇಂದ್ರಿಯಂಗಳಲ್ಲಿ ಸಂಬಂಧವಾದ ಸಕಲಪದಾರ್ಥಂಗಳ ಭಕ್ತಿಯಿಂದರ್ಪಿಸಿಕೊಂಡು, ಪ್ರಸಾದವ ಕರುಣಿಸಿ ನಿತ್ಯವಾದ ಮುಕ್ತಿಯ ಕೊಡುತ್ತಿಹುದು ಶರಣಂಗೆಂಬುದೀಗ ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು, ಎನ್ನ ಗಂಡ ತಾರದೆ ಇಕ್ಕಿಸಿಕೊಂಬನೆಂಬ ಶಬ್ದಕ್ಕರ್ಥ. ಮಾಯಾಶಕ್ತಿಯ ವಲ್ಲಭರಾದ ಭಿನ್ನಜ್ಞಾನಿಗಳೆಲ್ಲರು ತ್ರಿಪುಟಿ ಜ್ಞಾನಸಂಬಂಧಿಗಳಾಗಿಹರು. ಚಿತ್ಪ್ರಭಾಂಗಸ್ವರೂಪವಾದ ಶರಣಸತಿಗೆ ಪ್ರಾಣವಲ್ಲಭನಾದ ಪರಬ್ರಹ್ಮಲಿಂಗಕ್ಕೆ ಅಖಂಡಜ್ಞಾನ ಪ್ರಕಾಶ ಒಂದೇ ಶರಣನ ಸರ್ವಾಂಗವನವಗ್ರಹಿಸಿ ನಿಷ್ಪತ್ತಿಯಾಯಿತ್ತೆಂಬುದೀಗ, ಎಲ್ಲರ ಗಂಡಂದಿರಿಗೆ ಮೂರು, ಎನ್ನ ಗಂಡಂಗೆ ಒಂದೇ, ಅದೊಂದು ಸಂದೇಹ, ಕದಿರರೆಮ್ಮಯೊಡೆಯ ಗುಮ್ಮೇಶ್ವರಾ ಎಂಬ ಶಬ್ದಕ್ಕರ್ಥ.

(೨) ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ! ಅಡಿಯಣಿ ಹಲಗೆ ಬ್ರಹ್ಮ, ತೋರಣ ವಿಷ್ಣು, ನಿಂದ ಬೊಂಬೆ ಮಹಾರುದ್ರ, ರುದ್ರನ ಬೆಂಬಳಿಯ ಮೆರಡು ಸೂತ್ರದ ಕರ್ಣ, ಅರಿವೆಂಬ ಕದಿರು, ಭಕ್ತಿ ಎಂಬ ಕೈಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು, ಕದುರು ತುಂಬಿತ್ತು, ರಾಟೆಯ ತಿರುಹಲಾರೆ. ಎನ್ನ ಗಂಡ ಕುಟ್ಟಿಹ. ಇನ್ನೇವೆ ಕದಿರರೆಮ್ಮಯೊಡೆಯ ಗುಮ್ಮೇಶ್ವರಾ?

ಟೀಕು:— ಶಿವಜ್ಞಾನೋದಯವಾಗಿ, ಶ್ರೀಗುರುಕಾರುಣ್ಯದಿಂ ಸರ್ವಾಂಗ ಲಿಂಗಸಂಬಂಧವಾಗಿರ್ಪ ಶರಣನ ಸರ್ವಾಚಾರ ಸಂಪತ್ತಿನ ಆಚರಣೆ ಎಂತೆಂದೊಡೆ, ಇಷ್ಟಲಿಂಗ ಸಂಬಂಧವಾದ ಆಚಾರವೆಂಬುದೀಗ, ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ, ಅಡಿಯಣ ಹಲಗೆ ಬ್ರಹ್ಮವೆಂಬ ಶಬ್ದಕ್ಕರ್ಥ. ತನ್ನ ಹೃದಯ ಕಮಲಕರ್ಣಿಕಾಮಧ್ಯದಲ್ಲಿ ಚಿತ್ಪ್ರಕಾಶವಾಗಿ ತೊಳಗಿ ಬೆಳಗುವ ಪ್ರಾಣಲಿಂಗದಲ್ಲಿ ಆಚರಿಸುವ ನೈಷ್ಠಿಕಾಭಾವಂಗಳೆರಡು ತೋರಣವಾಗಿಹುವೆಂಬುದೀಗ, ತೋರಣ ವಿಷ್ಣುವೆಂಬ ಶಬ್ದಕ್ಕರ್ಥ. ಆನೈಷ್ಠಿಕಾಭಾವಂಗಳನೊಳಕೊಂಡು, ಪರಿಪೂರ್ಣ ಜ್ಞಾನತೋರುತ್ತಿಹುದೆಂಬುದೀಗ, ನಿಂದ ಬೊಂಬೆ ಮಹಾರುದ್ರನೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನದ ಬೆಂಬಳಿಯಲ್ಲಿ ತೋರುವ ಜ್ಞಾನ ಕ್ರಿಯಂಗಳೆರಡು ಭಿನ್ನವಿಲ್ಲದಿರ್ಪುವೆಂಬುದೀಗ, ರುದ್ರನ ಬೆಂಬಳಿಯವೆರಡು ಸೂತ್ರದ ಕರ್ಣವೆಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರಿಯೆಗಳನೊಳಕೊಂಡು, ಸದ್ವಿವೇಕಜ್ಞಾನಸಂಬಂಧವಾದ ಶಿವಾದ್ವೈತಭಕ್ತಿಯಿಂದಾಚರಿಸುತ್ತಿಹನೆಂಬುದೀಗ, ಅರಿವೆಂಬ ಕದುರು ಭಕ್ತಿ ಎಂಬ ಕೈಯಲ್ಲಿ ತಿರುಹಲಾಗಿ, ಎಂಬ ಶಬ್ದಕ್ಕರ್ಥ. ಅಂತು ಸದ್ಭಕ್ತಿಯಿಂದಾಚರಿಸುತ್ತಿರ್ದ ಶರಣನ ಸ್ವಾನುಭಾವ ಸೂತ್ರವು ಸದ್ವಿವೇಕ ಜ್ಞಾನದಲ್ಲಿ ಪರಿಪೂರ್ಣವಾಯಿತ್ತೆಂಬುದೀಗ, ಸುತ್ತಿತ್ತು ನೂಲು, ಕದುರು ತುಂಬಿತ್ತು, ಎಂಬ ಶಬ್ದಕ್ಕರ್ಥ. ಅಂತು ಭಿನ್ನಕ್ರಿಯಾಚಾರವಿಡಿದಾಚರಿಸುತ್ತಿರ್ದ ಶರಣನು ಭಿನ್ನಕ್ರಿಯಾಚಾರವಿಡಿದಾಚರಿಸಿದೊಡೆ, ಆ ಮಹಾ ಘನಲಿಂಗವೆಂಬ ಪತಿ ಆಜ್ಞೆಯ ಮಾಡಿಹನೆಂದರಿದು ಭಿನ್ನಕ್ರಿಯಾಚಾರವ ವಿಸರ್ಜಿಸಿ ಸಾವಧಾನ ಸಂಪನ್ನನಾಗಿ ಉಪಾವಸ್ಥೆಯ ಮಾಡುತ್ತಿಹನೆಂಬುದೀಗ, ರಾಟೆಯ ತಿರುಹಲಾರೆ ಎನ್ನ ಗಂಡ ಕುಟ್ಟಿಹ. ಇನ್ನೇವೆ ಕದಿರೆರೆಮ್ಮಯೊಡೆಯಗುಮ್ಮೇಶ್ವರನೆಂಬ ಶಬ್ದಕ್ಕರ್ಥ.

---

## ಸಿದ್ಧದೇವಮ್ಮ

ಸಿದ್ಧದೇವಮ್ಮನು ನಾಟ್ಯಕಲೆಯಲ್ಲಿ ಬಹಳ ಪ್ರವೀಣಳಾಗಿದ್ದಳು. ಅವಳು ವೀಣೆ ಮೊದಲಾದ ವಾದ್ಯಗಳನ್ನು ತಾಳಕ್ಕೆ ಸರಿಯಾಗಿ ನುಡಿಸುವಲ್ಲಿ ಬಹು ಜಾಣಳಾಗಿದ್ದಳು. ತನ್ನ ಲಿಂಗ ಪೂಜೆಯಲ್ಲಿ ಇವುಗಳನ್ನು ಅವಳು ಸಮಗೊಳಿಸಿ ನುಡಿಸುವಳು. ಇದೇ ಆಕೆಗೆ ಕಾಯಕ

ವಾಗಿ ಪರಿಣಮಿಸಿತು. ಇದರಲ್ಲಿ ಅವಳು ಆತ್ಮಾನುಭವವನ್ನು ಹೊಂದಿ ಆನಂದಿಸುತ್ತಿದ್ದಳು. ಹೀಗೆ ಪರಮಾತ್ಮನಲ್ಲಿ ತನ್ನ ಭಕ್ತಿಯನ್ನು ತೋರಿಸಿ ಅವಳು ಲಿಂಗಾಂಗಸಾಮರಸ್ಯವನ್ನು ಹೊಂದಿದಳು.

ಪುರಾತನ ದೇವಿಯರ ತ್ರಿವಿದಿಯಲ್ಲಿ ಇವಳ ವಿಷಯವಾಗಿ ಹೇಳಿರುವದೇನಂದರೆ—

ಅರ್ಧನಾರೀಶನಿಗೆ ಶಬ್ದವನು ತಾಳದೊಳು ।
ಪೊರ್ದುಗೆಯನರಿದು ನುಡಿಸುತಲಿ ಒಲವೆತ್ತ
ಸಿದ್ಧದೇವಮ್ಮ ಶರಣಾಗು ॥

## ವೀರದೇವಮ್ಮ.

ವೀರದೇವಮ್ಮನು ಶಿವಾನುಭವಶಾಸ್ತ್ರದಲ್ಲಿ ಪಾರಂಗತಳಾಗಿದ್ದಳು. ಅವಳು ಶಿವಶರಣರ ವಚನಾನುಭವದಲ್ಲಿ ಇದ್ದುಕೊಂಡು ಅದಕ್ಕನುಸರಿಸಿ ಭಕ್ತಿಯಿಂದ ಆಚರಿಸುವವಳಾಗಿದ್ದಳು. ಅವಳು ವಚನಗಳನ್ನು ದಿನಾಲು ಮೂರುಹೊತ್ತು ಓದುವ ಪರಿಪಾಠವನ್ನಿಟ್ಟುಕೊಂಡು ಅವುಗಳನ್ನು ಅವಳು ಲಕ್ಷಪೂರ್ವಕವಾಗಿ ಓದಿ ಇತರ ಸ್ತ್ರೀಯರಿಗೂ ತಿಳಿಸಿ ಹೇಳುವಳು. ಇದೇ ಕಾಯಕವನ್ನು ಅವಳು ಕೈಕೊಂಡು ಅದರ ಮೇಲೆ ಉಪಜೀವಿಸುತ್ತಿದ್ದಳು. ಅಲ್ಲದೆ ಅವಳು ಈ ವಚನಗಳನ್ನು ರಾಜನ ಮುಂದೆಯೂ ದೇವಾಲಯಗಳಲ್ಲಿಯೂ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲ ಹೀಗೆ ಮೂರು ವೇಳೆಗಳಲ್ಲಿಯೂ ಎಲ್ಲರೂ ಕೇಳುವಂತೆ ನಿಚ್ಚಳವಾಗಿ ಉಗ್ಗಡಿಸುವಳು. ಆದ್ದರಿಂದ ಅವಳಿಗೆ 'ಉಗ್ಗಡಿಸುವ ಕನ್ನೆ ವೀರಾದೇವಿ' ಎಂಬ ಹೆಸರೂ ಉಂಟಾಗಿತ್ತು. ಈ ಪ್ರಕಾರ ರಾಘವಾಂಕ ಕಾವ್ಯದಲ್ಲಿ ಆಕೆಯ ಉಲ್ಲೇಖವಿರುತ್ತದೆ. ಈ ರೀತಿ ವೀರದೇವಮ್ಮನು ಆಚರಿಸುತ್ತ ನಿತ್ಯ ಪದವನ್ನು ಹೊಂದಿದಳು.

ಪುರಾತನ ದೇವಿಯರ ತ್ರಿವಿದಿಯಲ್ಲಿ ಆಕೆಯ ವಿಷಯವಾಗಿ ಹೇಳಿರುವದೇನಂದರೆ —

ಶ್ರೀರಮಣವಂದಿತಗೆ ಚಾರುಗದ್ಯಂಗಳನು
ಮೂರು ವೇಳೆಯೊಳು ಓದಿ ನಿತ್ಯವ ಪಡೆದ
ವೀರದೇವಮ್ಮ ಶರಣಾಗು ॥

ಕವಿಯು ಇಲ್ಲಿ ವಚನಗಳನ್ನು 'ಚಾರುಗದ್ಯ'ಗಳೆಂದು ಕರೆದಿದ್ದಾನೆ.

## ತೊಂಗಿನ ಮಹಾದೇವಿ.

ತೊಂಗಿನ ಮಹಾದೇವಿಯು ಕಲ್ಯಾಣ ಪಟ್ಟಣದಲ್ಲಿ ವಾಸ ಮಾಡುತ್ತಿದ್ದಳು. ಅವಳು ದಿನಾಲು ಬೆಳಿಗ್ಗೆ ಲಿಂಗವಂತರ ಮನೆಯ ಬಾಗಿಲಿಗೆ ಹೋಗಿ ಮನೆಯವರಿಗೆ ನಮಸ್ಕಾರ ಮಾಡುತ್ತ ಅವರನ್ನು ಎಚ್ಚರಿಸುವ ಕಾಯಕವನ್ನು ಕೈಕೊಂಡಿದ್ದಳು. ಅವಳು ಈ ಪ್ರಕಾರ ಅವರನ್ನು ಎಬ್ಬಿಸಿ ಅತ್ಯಂತ ಭಕ್ತಿಯಿಂದಲೂ ವಿನಯದಿಂದಲೂ ಅವರ ಮನೆಯ ಮುಂದೆ ನಿಂತುಬಿಡುವಳು. ಮನೆಯವರು ತಮ್ಮ ಗೃಹಕೃತ್ಯದ ಕಾರ್ಯಗಳಲ್ಲಿ ತೊಡಗಿದ ಕೂಡಲೆ ಬೇರೊಂದು ಮನೆಗೆ ಇದೇ ಕಾಯಕವನ್ನು ಮಾಡಲು ಹೋಗಿಬಿಡುವಳು.

'ತೊಂಗು' ಈ ಶಬ್ದಕ್ಕೆ 'ಬಾಗು' ಎಂಬ ಅರ್ಥವಿದ್ದು ಅವಳು ಯಾವಾಗಲೂ ವಿನೀತಳಾಗಿ ಬಾಗಿಕೊಂಡು ನಡೆಯುವವಳಾದ್ದರಿಂದ 'ತೊಂಗಿನ ಮಹಾದೇವಿ' ಎಂಬ ಹೆಸರು ಅವಳಿಗೆ ಪ್ರಾಪ್ತವಾಗಿತ್ತು. ಅವಳು ಈ ತನ್ನ ಕಾಯಕದಲ್ಲಿ ದೊರೆತದ್ದರ ಮೇಲೆ ಉಪಜೀವಿಸುತ್ತ ಉಳಿದದ್ದನ್ನು ದಾಸೋಹ ಕಾರ್ಯಗಳಿಗೆ ಸಲ್ಲಿಸುವಳು.

ಕೆಲವು ಗ್ರಂಥಗಳಲ್ಲಿ ಈಕೆಗೆ 'ಟೊಂಗಿನ ಮಹಾದೇವಿ' ಎಂದು ಕರೆದದ್ದು ತೋರಿಬರುತ್ತದೆ. ಆದರೆ ಈ ಹೆಸರು ಅಶುದ್ಧವಾದದ್ದು.

---

## ವಿಮಳಾದೇವಿ.

ವಿಮಳಾದೇವಿ ಎಂಬ ಶಿವಶರಣೆಯು ಕಲ್ಯಾಣ ಪಟ್ಟಣದಲ್ಲಿರುತ್ತಿದ್ದಳು. ಅವಳು ಶಿವಾನುಭವದಲ್ಲಿ ಹೆಚ್ಚಿನ ಜ್ಞಾನವನ್ನು ಸಂಪಾದಿಸಿದವಳಾಗಿದ್ದಳು. ಅವಳು ತನಗೆ ಉಂಟಾದ ಶಿವಾನುಭವವನ್ನು ಉಳಿದ ಸ್ತ್ರೀಯರಿಗೂ ತಿಳಿಸಿ ಹೇಳುವಳು. ಈ ಕಾಯಕವನ್ನು ಅವಳು ನಿತ್ಯ ಆಚರಿಸುವಳು. ಅವಳ ಬೋಧೆಗೆ ಜನರು ಮೆಚ್ಚಿ ಅವಳಿಂದ ಸುಜ್ಞಾನ ದೀಕ್ಷೆಯನ್ನು ಪಡೆಯುವವರಾದರು.

ವೀರಶೈವ ಧರ್ಮದ ಪ್ರಕಾರ ಸ್ತ್ರೀಪುರುಷರು ಸಮಾನಾಧಿಕಾರವುಳ್ಳವರು. ಆದ್ದರಿಂದ ಜ್ಞಾನಿಯಾದ ವಿಮಳಾದೇವಿಯಿಂದ ಅನೇಕರು ಲಿಂಗಧಾರಣವನ್ನು ಹೊಂದಿ ಪುನೀತರಾದರು.

ಶಿವಭಕ್ತೆಯರಿಗೆ ಬೋಧಿಸಿ ಸುಜ್ಞಾನ ದೀಕ್ಷೆಯನ್ನು ಕೊಡುವ ವಿಮಳಾದೇವಿ" ಎಂದು ಆಕೆಯ ವಿಷಯವಾಗಿ ಉಲ್ಲೇಖವು ರಾಘವಾಂಕ ಕಾವ್ಯದಲ್ಲಿ ಇರುತ್ತದೆ.

ಪುರಾತನ ದೇವಿಯರ ತ್ರಿವಿದಿಯಲ್ಲಿ ಆಕೆಯ ವಿಷಯವಾಗಿ ಹೇಳಿರುವದೇನಂದರೆ–

ಅಮಳ ಶಿವಭಕ್ತೆಯರ್ಗೆ ವಿಮಳ ಬೋಧೆಯ ತುಂಬಿ ।
ವಿಮಳ ಜಂಗಮಕೆ ನೀಡಿ ಮುಕ್ತಿಯ ಪಡೆದ ।
ವಿಮಳಾದೇವಿ ಶರಣಾಗು ॥

ದೀಕ್ಷೆಯಲ್ಲಿ ಕ್ರಿಯಾದೀಕ್ಷೆ, ಮಂತ್ರದೀಕ್ಷೆ, ಮತ್ತು ವೇಧಾದೀಕ್ಷೆ ಎಂಬ ಮೂರು ಭಾಗಗಳಿವೆ. ವೇಧಾದೀಕ್ಷೆಗೆ ಸುಜ್ಞಾನ ದೀಕ್ಷೆ ಎಂಬ ಹೆಸರೂ ಇದೆ. ಈ ದೀಕ್ಷೆಯಲ್ಲಿ ಲಿಂಗದ ನೆಲೆ ಕಲೆಗಳ ಜ್ಞಾನ ಮಾಡಿ ಕೊಡುವದೇ ಮುಖ್ಯವಾದದ್ದು. ಇದರಲ್ಲಿ ಮಂತ್ರದೀಕ್ಷೆ ಮತ್ತು ಕ್ರಿಯಾ ದೀಕ್ಷೆ ಇವೂ ಸಹ ಸಮಾವೇಶವಾಗುತ್ತವೆ. ಪ್ರಬುದ್ಧರಾದವರಿಗೆ ಲಿಂಗ ಧಾರಣೆ ಇಲ್ಲದಿದ್ದರೆ ಅವರಿಗೆ ಇದರ ಮರ್ಮವನ್ನರುಹಿ ಅವರನ್ನು ಲಿಂಗಧಾರಕರನ್ನಾಗಿ ಮಾಡುವ ಕಾರ್ಯವನ್ನು ವಿಮಳಾದೇವಿಯು ಮಾಡುತ್ತಿದ್ದಳು. ಈ ಪ್ರಕಾರ ಅವಳು ಮಠಾಧಿಕಾರಿಗಳು ಮಾಡತಕ್ಕ ಕಾರ್ಯಗಳನ್ನು ಭಕ್ತಾದಿಗಳಿಗೆ ಮಾಡುತ್ತಿದ್ದದರಿಂದ ಅವಳ ಯೋಗ್ಯತೆಯು ಎಷ್ಟಿತ್ತೆಂಬದು ಗೊತ್ತಾಗುತ್ತದೆ.

---

## ಶಿವಪ್ರಿಯನಾಚಿ.

ಚೋಳ ದೇಶದಲ್ಲಿ ಚಂದವೂರೆಂಬ ಪಟ್ಟಣವಿದ್ದು ಅಲ್ಲಿ ಅಣ್ಣಮಲ್ಲಯ್ಯನೆಂಬ[೧] ವರ್ತಕನು ವ್ಯಾಪಾರ ಮಾಡಿಕೊಂಡಿರುತ್ತಿದ್ದನು. ಅವನು ಹಡಗುಗಳ ಮೂಲಕ ಪರನಾಡುಗಳ ಕೂಡ ವ್ಯಾಪಾರವನ್ನು ನಡಿಸುತ್ತಾ ಇದ್ದನು. ಅವನಿಗೆ ಅಣ್ಣನಾಚಯ್ಯ[೨] ಮತ್ತು ಅರುಣಾದ್ರಿ ಎಂಬ ಇಬ್ಬರು ಗಂಡುಮಕ್ಕಳೂ ಶಿವಪ್ರಿಯನಾಚಿ ಎಂಬ ಒಬ್ಬ ಹೆಣ್ಣು ಮಗಳೂ ಇದ್ದರು. ಅವನು ಘನತರವಾದ ವ್ಯಾಪಾರ ಮಾಡಿಕೊಂಡು

(೧) ಪಲ್ಲಣ್ಣಶೆಟ್ಟಿ ಎಂಬ ಹೆಸರು ಕೆಲವು ಗ್ರಂಥಗಳಲ್ಲಿದೆ.
(೨) ಇವನಿಗೆ ಅಣ್ಣನಾಚಿಶೆಟ್ಟಿ ಎಂಬ ಹೆಸರು ಕೆಲವು ಗ್ರಂಥಗಳಲ್ಲಿದೆ.

ಬಹಳ ಶ್ರೀಮಂತನಾಗಿದ್ದನು. ಅಣ್ಣಮಲ್ಲಯ್ಯನು ಮುಂದೆ ತೀರಿಕೊಂಡನು. ಆಗ ಅವನ ಇಬ್ಬರು ಮಕ್ಕಳು ಅವನ ಆಸ್ತಿಯಲ್ಲಿ ಭಾಗ ಮಾಡಿಕೊಳ್ಳುವ ಕಾಲಕ್ಕೆ ಅವರು ತಮ್ಮ ತಂಗಿಯಾದ ಶಿವಪ್ರಿಯನಾಚಿಗೆ ತಮಗೆ ಸಮಾನವಾಗಿ ಅಂದರೆ ಒಂದು ಮೂರಾಂಶ ಭಾಗವನ್ನು ಬೇರೆ ಪಾಲು ಮಾಡಿ ಆವಳ ವಶಕ್ಕೆ ಕೊಟ್ಟರು. ಶಿವಪ್ರಿಯನಾಚಿಯು ತನ್ನ ಪಾಲಿಗೆ ಬಂದ ಹಣವನ್ನು ತೆಗೆದುಕೊಂಡು ಶಿವಾನುಭವಿಯಾಗಿ ದಾಸೋಹ ಕಾರ್ಯಗಳಿಗೆ ಉಪಯೋಗಿಸುತ್ತ ಬಂದಳು. ಅವಳು ಶಿವಶರಣರಿಗೋಸ್ಕರ ಭಕ್ತಿಯನ್ನು ತಾಳಿ ಅವರ ಆಚರಣೆಯನ್ನು ಪಾಲಿಸುವವಳಾಗಿದ್ದಳು.

ಹೀಗಿರುವಲ್ಲಿ ಅಣ್ಣನಾಚಯ್ಯನು ವ್ಯಾಪಾರಕ್ಕೋಸ್ಕರ ದ್ವೀಪಾಂತರಕ್ಕೆ ಹೋದನು. ಆದರೆ ಮಧ್ಯದಲ್ಲಿ ಅವನಿದ್ದ ಹಡಗವು ಒಡೆದು ಹೋದದ್ದರಿಂದ ಅವನು ಮರಣಹೊಂದಿದನು. ಆದುದರಿಂದ ಅವನು ಬಹು ದಿವಸ ಮರಳಿ ಬಾರದ್ದರಿಂದ ಅವನು ಸಮುದ್ರದಲ್ಲಿ ಮುಳುಗಿ ಸತ್ತನೆಂದು ಜನರೆಲ್ಲರೂ ತಿಳಿದರು.

ಅರುಣಾದ್ರಿಯಾದರೂ ತನ್ನ ಅಣ್ಣನು ತೀರಿಹೋದನೆಂದು ಭಾವಿಸಿದನು. ಆಗ ಅವನು ಮನೆತನದ ಎಲ್ಲ ಆಸ್ತಿಯನ್ನು ತಾನೇ ಆಕ್ರಮಿಸಬೇಕೆಂಬ ದುರಾಶೆಯುಳ್ಳವನಾಗಿ ತನ್ನ ತಂಗಿಗೆ--- ಸ್ತ್ರೀಯರಿಗೆ ಎಲ್ಲಾದರೂ ಪಾಲು ಕೊಡುವದುಂಟೇ? ನಿನಗೆ ಕೊಟ್ಟ ಪಾಲನ್ನು ನನಗೆ ತಿರುಗಿಕೊಡು, ಎಂದು ಅವಳೊಡನೆ ವಾದಿಸಹತ್ತಿದನು ಮತ್ತು ಅವಳನ್ನು ಬಹಳ ಬಾಧಿಸಿ ಆಕೆಯ ದ್ರವ್ಯವನ್ನೆಲ್ಲ ಬಲಾತ್ಕಾರದಿಂದ ಕಸೆದುಕೊಂಡು ಬಿಟ್ಟನು.

ಆದರೆ ಶಿವಪ್ರಿಯನಾಚಿಯು ಕೇವಲ ಲಿಂಗಭಕ್ತಳು. ಅವಳು ತನ್ನ ದಾಸೋಹ ಕಾರ್ಯಗಳು ಮುಂದೆ ನಿಂತು ಹೋದವಲ್ಲಾ ಎಂದು ಅತ್ಯಂತ ದುಃಖಿತಳಾದಳು. ಆಗ ಅವಳು ಪರಮಾತ್ಮನಿಗೆ---ಎಲೋ ಶಿವನೇ, ನಿನ್ನ ಸೇವೆ ಮಾಡಲೆಂದು ಅಣ್ಣನು ನನಗೆ ಪಾಲುಕೊಟ್ಟು ಹೋದನು. ಈಗ ಅರುಣಾದ್ರಿಯು ನನ್ನನ್ನು ಬಹಳ ಹಿಂಸೆಪಡಿಸಿ ಅದನ್ನು ಕಸೆದುಕೊಂಡು ಬಿಟ್ಟನು. ನಾನು ನಿನಗೆ ಮಾಡುವ ಸೇವೆಯು ನಿಂತಿತು. ಏನು ಮಾಡಲಿ?--- ಎಂದು ಅವನಲ್ಲಿ ಮೊರೆ ಇಟ್ಟಳು.

ಶಿವನಿಗೆ ಭಕ್ತೆಯಾದ ಆಕೆಯ ಮೊರೆಯು ಕೇಳಿಸಿತು. ಆಗ ಅವನು ಅಣ್ಣನಾಚಯ್ಯನ ರೂಪಾಗಿ ಪಟ್ಟಣಕ್ಕೆ ಬಂದು ತನ್ನ ಮನೆಯಲ್ಲಿಯೇ ಬಂದಿರಹತ್ತಿದನು. ಆಗ ಅರುಣಾದ್ರಿಯೂ ಪಟ್ಟಣಿಗರೂ ಅಣ್ಣನಾಚಯ್ಯನು ಸತ್ತಿಲ್ಲ, ಇನ್ನೂ ಬದುಕಿದ್ದಾನೆ ಎಂದು ತಿಳಿದರು. ಅಣ್ಣನಾಚಯ್ಯನು ತಮ್ಮನಿಗೆ–ನಾವು ಪಾಲು ಮಾಡಿಕೊಳ್ಳುವ ಕಾಲದಲ್ಲಿ ತಂಗಿಗೆ ಪಾಲು ಮಾಡಿ ಕೊಟ್ಟಿದ್ದಾಗಿದೆ. ಆಕೆಯ ದ್ರವ್ಯವನ್ನು ಆಕೆಗೆ ತಿರುಗಿಕೊಡು ಎಂದು ಹೇಳಿ ಅವಳ ದ್ರವ್ಯವನ್ನೆಲ್ಲ ಅವಳಿಗೆ ತಿರುಗಿ ಕೊಡಿಸಿದನು.

ಮುಂದೆ ಕೆಲವು ದಿವಸಗಳಾದ ಮೇಲೆ ಶಿವನು ತನ್ನ ಭಕ್ತೆಯಾದ ಶಿವಪ್ರಿಯನಾಚಿಗೋಸ್ಕರ ತಾನು ಮಾಡತಕ್ಕ ಕಾರ್ಯವು ಮುಗಿಯಿತೆಂದು ತಿಳಿದು ಬಯಲಾಗಿ ಹೋದನು.

ಅಣ್ಣನಾಚಯ್ಯನು ಮುಂದೆ ಮನೆಯಲ್ಲಿ ಕಾಣಬರಲಿಲ್ಲ. ಅವನನ್ನು ಎಲ್ಲಿ ಹುಡುಕಿದರೂ ಸಿಕ್ಕಲಿಲ್ಲ. ಜನರು ಚಕಿತರಾದರು. ಆಗ ಅವರು ಶಿವಪ್ರಿಯನಾಚಿಯು ನಿಜವಾದ ಭಕ್ತೆಯು. ಅವಳಿಗೆ ಶಿವನು ಪ್ರೀತನಾಗಿ ಅಣ್ಣನಾಚಯ್ಯನಾಗಿ ಬಂದು ಆಕೆಯ ಪಾಲು ಕೊಡಿಸಿ ಹೋದನು ಎಂದು ತಿಳಿದರು.

ಅಂದಿನಿಂದ ಶಿವಪ್ರಿಯನಾಚಿಗೆ ಅರುಣಾದ್ರಿಯಾಗಲಿ ಅಥವಾ ಬೇರೆ ಯಾರಾಗಲಿ ತೊಂದರೆಪಡಿಸಲಿಲ್ಲ. ಅವಳು ಲಿಂಗಭಕ್ತಿಯುಳ್ಳವಳಾಗಿ ಆಚರಿಸುತ್ತ, 'ಪಿರಿಯೊಡೆಯರು' ಎಂಬ ತನ್ನ ಲಿಂಗದಲ್ಲಿ ಬೆರೆದು ಬಯಲಾದಳು.

ಸ್ತ್ರೀಯರೂ ಪುರುಷರೂ ಸಮಾನಾಧಿಕಾರಿಗಳೆಂದು ಬಸವಾದಿ ಪ್ರಮಥರ ತತ್ವವಿದೆ. ಈ ಮಹತ್ವದ ತತ್ವವನ್ನು ಶಿವಪ್ರಿಯನಾಚಿಯೂ ಅಣ್ಣನಾಚಯ್ಯನೂ ದೃಢಪಡಿಸಿದ್ದಾರೆ. ಪರಮಾತ್ಮನೂ ಕೂಡ ಅವರಿಗೆ ಬೆಂಬಲಕೊಟ್ಟನು.

---

## ಆಯ್ದಕ್ಕಿ ಮಾರಯ್ಯ.

ಶಿವಾನುಭವಿಗಳು ತಾವು ನೀಡಿಸಿಕೊಂಡ ಆಹಾರದ ಅಗಳುಗಳಲ್ಲಿ ಯಾವುದನ್ನೂ ಹೊರಗೆ ಚೆಲ್ಲುವದಿಲ್ಲ. ಅವು ಪವಿತ್ರವಾದವುಗಳೆಂದು ಅವರು ಭಾವಿಸುತ್ತಾರೆ. ಯಾಕಂದರೆ ಅವುಗಳನ್ನು ಅವರು

ಲಿಂಗಾರ್ಪಣ ಮಾಡಿ ಸೇವಿಸುತ್ತಾರೆ. ಶಿವಾನುಭವಿಗಳಾದವರು ತಾವು ತೆಗೆದುಕೊಳ್ಳುವ ಆಹಾರವನ್ನು ಒಂದು ವಿಶೇಷ ರೀತಿಯಿಂದ ಅರ್ಪಣ ಮಾಡಿ ಭುಂಜಿಸುತ್ತಾರೆ. ಅವರು ಭುಂಜಿಸುವಲ್ಲಿ ಆಹಾರದ ರೂಪು, ರುಚಿ, ತೃಪ್ತಿಗಳನ್ನು ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳಿಗೆ ಅರ್ಪಿಸುವರು. ಹೀಗೆ ಅರ್ಪಿಸಿದಲ್ಲಿ ಅವು ಅನುಕ್ರಮವಾಗಿ ಕಾಯಾರ್ಪಣ, ಪ್ರಾಣಾರ್ಪಣ, ಭಾವಾರ್ಪಣಗಳಾಗುವವು. ಇಂಥ ಆಹಾರವು ಪ್ರಸಾದವು, ಪವಿತ್ರವಾದುದು. ಆದುದರಿಂದ ವೀರಶೈವರು ಅದನ್ನು ಎಷ್ಟು ಮಾತ್ರವೂ ಪಾತ್ರೆಯ ಹೊರಗೆ ಚೆಲ್ಲಕೂಡದು. ಚೆಲ್ಲಿದರೆ ಅದು ದೋಷವು. ಆದ್ದರಿಂದ ಊಟ ಮಾಡುವವರು ಸಾಕಷ್ಟಕ್ಕಿಂತಲೂ ಹೆಚ್ಚಿಗೆ ನೀಡಿಸಿಕೊಳ್ಳಬಾರದು. ನೀಡಿಸಿಕೊಂಡರೆ ಅದನ್ನೆಲ್ಲ ಅವರು ಊಟಮಾಡಬೇಕು. ಊಟ ಮಾಡುವಲ್ಲಿ ಆಹಾರವು ಹೊರಚೆಲ್ಲಬಾರದೆಂದು ಅವರು ಒಂದು ಪಾತ್ರೆಯಲ್ಲಿ ಅಥವಾ ಗಂಗಾಳದಲ್ಲಿ ಊಟ ಮಾಡುತ್ತಾರೆ. ಆದುದರಿಂದ ಅವರು ಎಲೆಗಳನ್ನು ಉಪಯೋಗಿಸುವದಿಲ್ಲ. ಯಾಕಂದರೆ ಅವುಗಳಲ್ಲಿ ನೀಡಿಸಿಕೊಂಡ ಆಹಾರವು ಹೊರಚೆಲ್ಲುವ ಸಂಭವವು ಹೆಚ್ಚು. ಅಲ್ಲದೆ ಅವರು ಊಟಮಾಡುವ ಪಾತ್ರೆಯನ್ನು ಅಡ್ಡಣಿಗೆಯ ಮೇಲಿಟ್ಟು ಊಟಮಾಡುತ್ತಾರೆ. ಯಾಕಂದರೆ ಇದರಲ್ಲಿ ಆಹಾರವು ಹೊರಕ್ಕೆ ಚೆಲ್ಲುವ ಸಂಭವವು ಕಡಿಮೆ. ಇಷ್ಟೇಅಲ್ಲ, ಊಟವಾದ ಬಳಿಕ ಕೈಗೆ ಹತ್ತಿದ ಅಗಳುಗಳು ಕೂಡ ಪ್ರಸಾದವಾಗಿರುವದರಿಂದ ಅವುಗಳನ್ನು ಸಹ ಹೊರಗೆ ಚೆಲ್ಲಬಾರದು. ಆದ್ದರಿಂದ ಶಿವಾನುಭವಿಗಳು ಪಾತ್ರೆಯಲ್ಲಿ ಎಷ್ಟನ್ನೂ ಬಿಡದೆ ಸ್ವಚ್ಛವಾಗಿ ಊಟಮಾಡಿ, ಕೈತೊಳೆದ ನೀರನ್ನೂ ಕೂಡ ಕುಡಿದುಬಿಡಬೇಕು. ಹೀಗೆ ಊಟಮಾಡಿದ್ದು ಮುಸುರಿಯಲ್ಲ. ವೀರಶೈವರಲ್ಲಿ ಉಚ್ಛಿಷ್ಟ ಸೂತಕವಿಲ್ಲ. ವೀರಶೈವರು ಊಟಮಾಡುವ ಈ ಪದ್ಧತಿಯ ಮೂಲಕ ಅವರ ಊಟದ ಸ್ಥಳವೂ ಪಾತ್ರೆಗಳೂ ಸ್ವಚ್ಛವಾಗಿ ಉಳಿಯಬೇಕು. ವೀರಶೈವರಲ್ಲಿ ಈ ಪದ್ಧತಿ ಇರುವದು ಸರ್ವಶ್ರುತವಿದೆ.

ಆದರೆ ಈ ತತ್ವವು ಕಾಳು ಮೊದಲಾದ ಆಹಾರ ಪದಾರ್ಥಗಳಿಗೆ ಅನ್ವಯಿಸುವದಿಲ್ಲೆಂದು ಬಹು ಜನರ ತಿಳಿವಳಿಕೆ ಇದೆ. ಆದರೆ ಶಿವಾನುಭವದ ತತ್ವವು ಹೀಗಿರುವದಿಲ್ಲ. ಅಟ್ಟಡಿಗೆ ಎಷ್ಟು ಪವಿತ್ರವಾದುದೋ ಅಷ್ಟೇ ಸೃಷ್ಟಪದಾರ್ಥಗಳೆಲ್ಲವೂ ಪವಿತ್ರವಾದವುಗಳೆಂದು ಅದು ಹೇಳುತ್ತದೆ. ವೀರಶೈವರು ಅವುಗಳಲ್ಲಾವುದೂ ತ್ಯಾಜ್ಯವೆಂದು ಭಾವಿಸುವ

ದಿಲ್ಲ. ದೇವರ ದಾಸಿಮಯ್ಯನು ತನ್ನ ಒಂದು ವಚನದಲ್ಲಿ 'ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ, ಸುಳಿದು ಬೀಸುವ ವಾಯು ನಿಮ್ಮ ದಾನ' ಎಂತಲೂ 'ಕಾಯ ನಿಮ್ಮ ದಾನ, ಜೀವ ನಿಮ್ಮ ದಾನ' ಎಂತಲೂ, 'ಎತ್ತು ನಿಮ್ಮ ದಾನ, ಬಿತ್ತು (= ಬೀಜ) ನಿಮ್ಮ ದಾನ, ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ' ಎಂತಲೂ ಹೇಳಿದ್ದಾನೆ. ಹೀಗೆ ಅವನು ಹೇಳಿ, ಪರಮಾತ್ಮನು ಇತ್ತಂಥ ಇಂಥ 'ದಾನವನುಂಡು ಅನ್ಯರ ಹೊಗಳುವ ಕುನ್ನಿಗಳನೇನೆಂಬೆ ಹೇಳಾ' ಎಂದು ಹೇಳುತ್ತಾನೆ. ಅದೇ ಮೇರೆಗೆ ಮಹಾದೇವಿಯಕ್ಕನು ತನ್ನ ಒಂದು ವಚನದಲ್ಲಿ 'ವನವೆಲ್ಲ ನೀವೇ, ವನದೊಳಗಣ ದೇವತರು ವೆಲ್ಲ ನೀವೇ, ತನುವಿನೊಳಗಾಡುವ ಖಗಮೃಗವೆಲ್ಲ ನೀವೇ' ಎಂದು ಹೇಳುತ್ತಾಳೆ. ಹೀಗೆ ಕಾಳು ಮೊದಲಾದ ಸೃಷ್ಟಪದಾರ್ಥಗಳೆಲ್ಲ ಪರ ಮಾತ್ಮ ಸ್ವರೂಪವೆಂದು ತಿಳಿಯಬೇಕು.

ಹೀಗೆ ಇಳೆ, ಬೆಳೆ, ಎತ್ತು, ಬೀಜ, ಗಿಡ, ಗಾಳಿ ಇವೆಲ್ಲವೂ ಪವಿತ್ರವಾದವುಗಳಿರುವದರಿಂದ ಶಿವಾನುಭವಿಯು ಇವುಗಳ ಸುಖವನ್ನು ಆಸ್ವಾದಿಸುವಲ್ಲಿ ತನ್ನಲ್ಲಿರುವ ಲಿಂಗಳಿಗೆ ಅವುಗಳನ್ನು ಅರ್ಪಿಸಿ ಅವೆಲ್ಲವೂ ಪ್ರಸಾದಗಳೆಂದು ಭಾವಿಸಿ ಅವುಗಳನ್ನು ಗ್ರಹಣಮಾಡಬೇಕು. ಇವುಗ ಳನ್ನು ಅರ್ಪಿಸುವ ರೀತಿಯು ಶಿವಾನುಭವ ಶಾಸ್ತ್ರದಲ್ಲಿ ಬಹು ವಿಸ್ತಾ ರವಾಗಿ ಹೇಳಿರುತ್ತದೆ. ಶಿವಾನುಭವಿಯು ಇದನ್ನು ಅರಿತುಕೊಂಡು ಆಚರಿಸುವದು ಲಿಂಗಭೋಗೋಪಭೋಗವೆಂದು ಹೇಳಲ್ಪಡುತ್ತದೆ.

ಆದ್ದರಿಂದ ಶಿವಾನುಭವಿಗಳು ಆಹಾರದ ಧಾನ್ಯಗಳು ತ್ಯಾಜ್ಯ ವಾದವುಗಳೆಂದು ಅವುಗಳನ್ನು ಹೊರಗೆ ಎಂದೂ ಒಗೆಯಬಾರದು. ಅವುಗ ಳನ್ನು ಕಾದಿಟ್ಟುಕೊಂಡು ಅವುಗಳಿಗೋಸ್ಕರ ಪೂಜ್ಯಭಾವವನ್ನು ತಾಳಿ ಅವು ಗಳನ್ನು ಪ್ರಸಾದರೂಪವಾಗಿ ಉಪಯೋಗಿಸಬೇಕು. ಇದು ಶಿವಶರಣರ ನಡೆಯಾಗಿದೆ.

ಆದರೆ ಇಂಥ ಪವಿತ್ರವಾದ ಜೀನಸುಗಳನ್ನು ಜನರು ಸಿಕ್ಕಲ್ಲಿ ಚೆಲ್ಲಿಬಿಡುತ್ತಾರೆ. ಅವುಗಳನ್ನು ತುಳಿದುಕೊಂಡು ಹೋಗುತ್ತಾರೆ. ಒಕ್ಕ ಲಿಗರೂ ಕುಟುಂಬಸ್ತರಾದ ಸ್ತ್ರೀಪುರುಷರೂ ಅವುಗಳನ್ನು ಜೋಕೆ ಯಿಂದಿಡುವದಿಲ್ಲ. ಧಾನ್ಯದ ವ್ಯಾಪಾರಿಗಳಿದ್ದ ಬೀದಿಗಳಲ್ಲಿಯೂ ಅವರ

ಅಂಗಡಿಗಳಲ್ಲಿಯೂ ಅವು ನೆಲದ ಮೇಲೆ ಬಿದ್ದು ಬಿಟ್ಟಿರುತ್ತವೆ. ಹೀಗೆ ಪವಿತ್ರವಾದ ಈ ಧಾನ್ಯಗಳನ್ನು ಜನರು ಹಾಳುಮಾಡಿ ಬಿಡುತ್ತಾರೆ. ಇಂಥವರು 'ಅನ್ಯಾಯಿ'ಗಳೆಂದು ಶಿವಶರಣರು ನುಡಿದಿದ್ದಾರೆ.

ಬಸವೇಶ್ವರನ ಕಾಲದಲ್ಲಿ ಅನೇಕ ಶಿವಶರಣರು ಉದಯವಾಗಿ ಕೆಲವೊಂದು ಉಪಯುಕ್ತ ಕಾಯಕವನ್ನು ಕೈಕೊಂಡು ಆಚರಿಸುವವರಾಗಿದ್ದರು. ಜನರನ್ನು ತಿದ್ದುಪಡೆ ಮಾಡುವ ಭಾವವು ಅವರ ಕಾಯಕಗಳಲ್ಲಿ ಯಾವಾಗಲೂ ಇರುತ್ತದೆ. ಇಂಥ ಕಾಯಕಗಳನ್ನು ಮಾಡುತ್ತ ಇದ್ದ ಶರಣರಲ್ಲಿ ಆಯುದಕ್ಕಿ ಮಾರಯ್ಯನು ಒಬ್ಬನಾಗಿದ್ದಾನೆ. ಅವನ ಹೆಂಡತಿಯ ಹೆಸರು ಲಕ್ಕಮ್ಮನು. ಈ ಉಭಯ ದಂಪತಿಗಳು ಬಹಳ ಬಡವರು. ಅವರಿಗೆ ತಿನ್ನಲಿಕ್ಕೆ ಅನ್ನವಿಲ್ಲ. ಹೊದೆಯಲಿಕ್ಕೆ ವಸ್ತ್ರವಿಲ್ಲ. ಹೀಗಿದ್ದರೂ ಅವರು ಯಾರನ್ನೂ ಬೇಡರು. ಒಂದು ದಿವಸ ಲಕ್ಕಾದೇವಿಯು ತನ್ನ ಪತಿಗೆ---ನಾವು ಧನವನ್ನು ಗಳಿಸಿ ಗುರು ಲಿಂಗಜಂಗಮಕ್ಕೆ ದಾಸೋಹ ಮಾಡಿ ಜನನ ಮರಣವ ಗೆಲಬೇಕು. ನಾವು ಆವ ಕಾಯಕ ಮಾಡಬೇಕು? – ಎಂದು ಕೇಳಲು ಮಾರಯ್ಯನು ಅವಳಿಗೆ–ನೀನು ಹೇಳಿದುದು ಲೇಸು: 'ನಾರಿ ಮೋಕ್ಷಕ್ಕೆ ದಾರಿ' ಎಂಬುದು ಸಟೆಯಲ್ಲ. ಆದರೆ ನಾವು ಪರ ದ್ರವ್ಯವ ತರಕೂಡದು. ಸತ್ಯ ಶುದ್ಧ ಕಾಯಕವನ್ನೇ ಮಾಡಬೇಕು---ಎಂದು ಅಂದು ಅವಳಿಗೆ---ಪರಮಾತ್ಮನು ದಯಪಾಲಿಸಿದ ಪವಿತ್ರವಾದ ಅಕ್ಕಿಯನ್ನು ಜನರು ಬೀದಿಗಳಲ್ಲಿ ಹಾಗೆಯೇ ಚೆಲ್ಲಿಕೊಡುತ್ತಾರೆ. ನಾವು ಅವುಗಳನ್ನು ಆಯಿದು ನಮ್ಮ ದಾಸೋಹ ಕಾರ್ಯ ನಡಿಸಬೇಕು---ಎಂದು ಹೇಳಿ ಅಂಥ ಅಕ್ಕಿಯನ್ನು ಆಯುವ ಕಾಯಕವನ್ನು ಮಾರಯ್ಯನು ಪ್ರಾರಂಭಿಸಿದನು.

ಈ ಕಾಯಕದಲ್ಲಿ ಪರದ್ರವ್ಯದ ಅಪಹಾರವಿಲ್ಲ. ಜನರು ತಮಗೆ ಬೇಡವೆಂದು ಬಿಟ್ಟುಕೊಟ್ಟಂಥ ಅಕ್ಕಿಯನ್ನು ಮಾರಯ್ಯನು ತರುವನು. ಇಂಥ ಅಕ್ಕಿಯನ್ನು ಆಯುವದರಿಂದ ಇದರ ಮಹತ್ವವು ಎಷ್ಟಿದೆಂಬದನ್ನು ಅವನು ಜನರಿಗೆ ತಿಳಿಸಿದಂತಾಯಿತು. ಅವನು ಜನರ ಗೃಹಗಳನ್ನು ಸಹ ಪ್ರವೇಶಿಸಿ ಅಲ್ಲಿ ಒರಳುಗಳ ಸುತ್ತಲೂ ಸಿಡಿದು ಬಿದ್ದ ಕಾಳುಗಳನ್ನೂ ಆಯುವನು. ಹೀಗೆ ಬಿಟ್ಟುಕೊಟ್ಟು ಅಲ್ಲಲ್ಲಿ ಬಿದ್ದಿರುವ ಕಾಳುಗಳನ್ನು ಆಯುವ ಕಾಲದಲ್ಲಿ ಯಾವ ಸ್ತ್ರೀಯೂ ಅವನಿಗೆ ವಿರೋಧ ಮಾಡುತ್ತಿರಲಿಲ್ಲ. ಸ್ತ್ರೀಯರು

ಮಿತವ್ಯಯದಿಂದ ಮನೆಗೆಲಸ ಮಾಡಲು ಇದರಿಂದ ಅವರಿಗೆ ತಿಳಿಸಿ ದಂತಾಯಿತು. ಬಸವೇಶ್ವರನ ಮನೆಯಲ್ಲಿ ಯಾವಾಗಲೂ ದೊಡ್ಡ ದೊಡ್ಡ ಊಟದ ಪ್ರಸ್ತಗಳಾಗುತ್ತಿದ್ದವು. ಆಗ ಅಲ್ಲಿಯೂ ಅವನು ಹೋಗಿ ಕಾಳುಗಳನ್ನು ಆಯುವನು. ಈ ಪ್ರಕಾರ ಅವನು ಮೂರು ಜಾವದ ವರೆಗೆ ಮೂರು ಸೊಲಿಗೆ ಅಕ್ಕಿಯನ್ನು ಕೂಡಿಸುವನು. ಹೆಚ್ಚಿಗೆ ದೊರೆ ಯುವಂತಿದ್ದರೂ ಅದನ್ನು ಆರಿಸುತ್ತಿರಲಿಲ್ಲ. ಯಾಕಂದರೆ ಅನಾವಶ್ಯಕವಾಗಿ ಕೂಡಿಸಬಾರದೆಂದು ಶಿವಶರಣರ ತತ್ವವಿದೆ. ಹೀಗೆ ಮಾರಯ್ಯನು ಅಕ್ಕಿ ಯನ್ನು ಕೂಡಿಸಿ ತನ್ನ ಹೆಂಡತಿಗೆ ದಿನಾಲು ತಂದುಕೊಡುವನು. ಅವಳು ಅದರಿಂದ ಬೋನವನ್ನು ಮಾಡಲು ಅದನ್ನು ಉಭಯತರು ಪ್ರಸಾದವಾಗಿ ಭುಂಜಿಸಿ ತಮ್ಮ ದಾಸೋಹ ಕಾರ್ಯಗಳನ್ನು ನಡಿಸುವರು.

ಭುಂಜಿಸುವ ಪೂರ್ವದಲ್ಲಿ ಅವರು ನಾನಾತರದ ಪುಷ್ಪಗಳನ್ನು ತಂದು ಧೂಪ ದೀಪ ಅಕ್ಷತೆಗಳಿಂದ ಶಿವಾರ್ಪಿತಭಾವದಿಂದ ಲಿಂಗ ಪೂಜೆಯನ್ನು ಮಾಡಿ ಅದರ ಮೂಲಕ ತಮ್ಮ ಆತ್ಮಾನುಭವವನ್ನು ಮಾಡಿಕೊಳ್ಳಲು ಅತ್ಯಂತ ತತ್ಪರರಾಗಿರುತ್ತಿದ್ದರು. ಈ ರೀತಿ ಮಾರ ಯ್ಯನು ಆಚರಿಸುತ್ತ ಬರಲು ಅವನು 'ಆಯುದಕ್ಕಿಮಾರಯ್ಯ' ಎಂಬ ಹೆಸರಿನಿಂದ ಕಲ್ಯಾಣದಲ್ಲಿ ಪ್ರಸಿದ್ಧನಾದನು.

ಹೀಗೆ ಮಾರಯ್ಯನು ದಿನಾಲು ಕಷ್ಟಪಡುತ್ತಿರುವದನ್ನು ಬಸವೇ ಶ್ವರನು ಕಂಡು ಅವನ ವಿಷಯವಾಗಿ ಅವನಿಗೆ ಕನಿಕರ ಉಂಟಾ ಯಿತು. ಆದುದರಿಂದ ಮಾರಯ್ಯನ ಶ್ರಮವನ್ನು ಉಳಿಸಬೇಕೆಂದು ಅವನ ಮನಸ್ಸಿನಲ್ಲಿ ಬಂದು, ಒಂದು ದಿವಸ ತನ್ನ ಸೇವಕರಿಗೆ ಮಾರ ಯ್ಯನು ಬರುವ ದಾರಿಯಲ್ಲಿ ಹೇರಳವಾಗಿ ಅಕ್ಕಿಯನ್ನು ಚಲ್ಲಿರಿ ಎಂದು ಹೇಳಲು ಅವರು ಹಾಗೆಯೇ ಚಲ್ಲಿದರು. ಮತ್ತು ತನ್ನ ಹೆಂಡಂದಿರಾದ ಗಂಗಾಬಿಕೆ ಮತ್ತು ನೀಲಾಂಬಿಕೆಯರಿಗೂ ಒರಳುಗಳ ಸುತ್ತಲೂ ಹೆಚ್ಚಾಗಿ ಕಾಳು ಚಲ್ಲಲು ತಿಳಿಸಿದನು. ಅವರು ಅದರಂ ತೆಯೇ ಮಾಡಿದರು.

ಮರುದಿನ ಮಾರಯ್ಯನು ಎಂದಿನಂತೆ ಬೆಳಿಗ್ಗೆ ಎದ್ದು ತನ್ನ ಕಾಯಕ ಮಾಡುತ್ತ ಬರುತ್ತಿರಲು ದಾರಿಯಲ್ಲಿ ಹೆಚ್ಚಾಗಿ ಕಾಳು ಬಿದ್ದದ್ದನ್ನು ಕಂಡು ಅವನು ಬಳಬಳನೆ ಅವುಗಳನ್ನು ಆಯ್ದುಕೊಂಡು ಬಸವೇಶ್ವರನ ಮನೆಯನ್ನು ಪ್ರವೇಶಿಸಲು ಅಲ್ಲಿಯೂ ಸಹ ಒರಳು

ಗಳ ಸುತ್ತಲೂ ಕಾಳು ದಟ್ಟಾಗಿ ಬಿದ್ದದ್ದನ್ನು ನೋಡಿ ಅವುಗಳನ್ನೆಲ್ಲ ಬಳಿದುಕೊಂಡು ಮೂರು ಮಾನ ಅಕ್ಕಿಯನ್ನು ಒಂದೇ ಜಾವದಲ್ಲಿ ಕೂಡಿಸಿಕೊಂಡು ಬಹಳ ಹರುಷಿತನಾಗಿ ತನ್ನ ಮನೆಗೆ ಬಂದು ಲಕ್ಕಮ್ಮನ ಕಯ್ಯಲ್ಲಿ ಅವುಗಳನ್ನು ತಂದುಕೊಟ್ಟನು.

ಆದರೆ ಲಕ್ಕಮ್ಮನು ತನ್ನ ಪತಿಯೊಂದಿಗೆ ಏನೂ ಮಾತಾಡದೆ ಸುಮ್ಮನಿದ್ದಳು. ಆಗ ಮಾರಯ್ಯನು ಅವಳಿಗೆ— ಸತಿಯೇ, ಮೌನವೇಕೆನಲು ಅವಳು ಅವನಿಗೆ—ಭಕ್ತರ ಅಂಗಣದಲ್ಲಿ ಮೂರು ಜಾವದಲ್ಲಿ ತರುವ ಅಕ್ಕಿಯನ್ನು ಒಂದೇ ಜಾವದಲ್ಲಿ ಹೇಗೆ ನೀನು ತಂದೆ? ಇದು ನೇಮವನ್ನು ಪಾಲಿಸಿದಂತಾಯಿತೇ? ಎಂದು ಕೇಳಲು ಮಾರಯ್ಯನು—ನಾನು ಬಸವನ ಮನೆಗೆ ಹೋದಾಗ್ಗೆ ಗಂಗಾಂಬಿಕೆ, ನೀಲಾಂಬಿಕೆಯರು ಬಸವನು ಈ ರೀತಿ ತನ್ನ ಸೇವಕರ ಕಡೆಯಿಂದ ಅಲ್ಲಲ್ಲಿ ಹೆಚ್ಚಿಗೆ ಅಕ್ಕಿಯನ್ನು ಚಲ್ಲಿಸಿದ್ದಾನೆಂದು ನನಗೆ ಹೇಳಿದರೆಂದು ಅವಳಿಗೆ ತಿಳಿಸಿದನು.

ಇದನ್ನು ಲಕ್ಕಮ್ಮನು ಕೇಳಿ ಅತ್ಯಂತ ಕೋಪಾವಿಷ್ಟಳಾದಳು. ಅವಳು ಆಗ— ನಾವು ಬಡವರೆಂದು ಬಸವನು ಹೀಗೆ ಗರ್ವಿಷ್ಠನಾಗಿದ್ದಾನೆ. ಶರಣರ ನಿಷ್ಠೆ ಎಂಬುದು ಅವನಿಗೆ ತಿಳಿಯದು. ಅವನು ನಮಗೆ ಹೀಗೆ ದಾನ ಮಾಡುತ್ತಾನೆಯೇ? ಅವನು ಆಚರಿಸಿದ್ದು ಸಮುದ್ರಕ್ಕೆ ಉಪ್ಪ ಕೊಡುವಂತೆ, ಹಾಲ ಸಮುದ್ರಕ್ಕೆ ಹಯನವನು ಕೊಡುವಂತೆ, ಸಿದ್ಧರಸಕ್ಕೆ ಬಡತನವೆಂದು ಅದಕ್ಕೆ ಕಾಣಿಯ[೧] ಕೊಡುವಂತೆ. ಹೀಗಿದ್ದು ನೀನು ಬಡವರೆಂಬುವರ ಮನೆಯಲ್ಲಿ ಈ ರೀತಿ ಕಾಯಕವನ್ನು ಹೇಗೆ ತಂದೆ, ಎಂದು ಪತಿಯನ್ನು ಗದರಿಸಿದಳು. ಅವಳು ಪತಿಗೆ— ನೀನು ತಂದ ಈ ಕಾಳುಗಳು ಕಾಯಕಕ್ಕೆ ಸಲ್ಲವು. ಅವು ಪರಮಾತ್ಮನಿಗೆ ಅರ್ಪಿತವಾಗಲಾರವು. ಅವುಗಳನ್ನು ಬಸವನ ಮನೆಯ ಅಂಗಣದಲ್ಲಿ ಚಲ್ಲಿಬಾ. ಬಸವೇಶ್ವರನು ತಾನು ೧ ಲಕ್ಷ ೯೬ ಸಾವಿರ ಜಂಗಮರಿಗೆ ಅನ್ನ ನೀಡುತ್ತಿದ್ದೇನೆಂದು ಗರ್ವಿಷ್ಠನಾಗಿದ್ದಾನೆ. ಆದ್ದರಿಂದ ನೀನು ಅವನಲ್ಲಿದ್ದ ಎಲ್ಲ ಗಣಂಗಳಿಗೂ ನಾಳಿನ ದಿವಸ ನಮ್ಮ ಮನೆಗೆ ಭೋಜನಕ್ಕೆ ಬರಬೇಕೆಂದು ಆಮಂತ್ರಣ ಕೊಡು, ಎಂದು ಹೇಳಿ ಪತಿಯನ್ನು ಕಳುಹಿಸಿ

---

(೧) **ಕಾಣಿ = ಕಾಸಿಕೆ, ದೇಣಿಗೆ.**

ದಳು. ಮಾರಯ್ಯನು— ಹಾಗೆಯೇ ಆಗಲೆಂದು ಸತಿಯ ಆಜ್ಞೆಯನ್ನು ಮೀರಲಾರದೆ ಬಸವೇಶ್ವರನ ಮನೆಯ ಅಂಗಣದಲ್ಲಿ ಹೋಗಿ ಆಕೆಯು ಹೇಳಿದಂತೆಯೇ ಕಾಳುಗಳನ್ನು ಅಲ್ಲಿ ಚಲ್ಲಿಕೊಟ್ಟನು. ಮತ್ತು ಅಲ್ಲಿದ್ದ ಗಣಾಧೀಶ್ವರರೆಲ್ಲರಿಗೂ ನಾಳಿನ ದಿವಸ ನಮ್ಮ ಮನೆಗೆ ಭೋಜನಕ್ಕೆ ಬರಬೇಕೆಂದು ಆಮಂತ್ರಣವನ್ನು ಕೊಟ್ಟನು. ಅವನ ಬಿನ್ನಹವನ್ನು ಬಸವ ಮೊದಲ್ಗೊಂಡು ಎಲ್ಲ ಶಿವಶರಣರೂ ಲಕ್ಷದ ಮೇಲೆ ತೊಂಬತ್ತಾರುಸಾವಿರ ಗಣಂಗಳೂ ಒಪ್ಪಿಕೊಂಡರು.

ಇತ್ತ ಲಕ್ಕಮ್ಮನು ಮರುದಿನ ಅಸಂಖ್ಯಾತ ಮಹಾಗಣಂಗಳು ತನ್ನ ಮನೆಗೆ ಭೋಜನಕ್ಕೆ ಬರುವರೆಂದು ಕಾಯಕದಿಂದ ತಂದ ಪದಾರ್ಥಗಳಿಂದ ಅಡಿಗೆಯನ್ನು ಸಿದ್ಧಮಾಡಿದಳು. ಆಮಂತ್ರಣವನ್ನಿತ್ತಂತೆ ಬಸವೇಶ್ವರ, ಚನ್ನಬಸವೇಶ್ವರ, ಮೊದಲಾದಗಣಂಗಳು ಮರುದಿನ ಸಕಾಲದಲ್ಲಿ ಮಾರಯ್ಯನ ಮನೆಗೆ ಊಟಕ್ಕೋಸ್ಕರ ಮನೆಗೆ ಬಂದರು. ಆದರೆ ಮನೆಯಲ್ಲೆಲ್ಲಿಯೂ ಅಡಿಗೆಯ ಸೌರಂಭವು ಅವರಿಗೆ ಕಾಣಿಸಲಿಲ್ಲ. ಅವರು ಆಶ್ಚರ್ಯಬಡುತ್ತ ಊಟಕ್ಕೋಸ್ಕರ ತಮ್ಮ ತಮ್ಮ ಸ್ಥಲಗಳಲ್ಲಿ ಬಂದು ಕುಳಿತುಕೊಂಡರು. ಆಗ ಲಕ್ಕಮ್ಮನು ತನ್ನ ಕಾಯಕದಿಂದ ಬಂದ ಮೂರು ಸೊಲಿಗೆ ಧಾನ್ಯದಿಂದ ಸಿದ್ಧಮಾಡಿದ ಅನ್ನವನ್ನು ಎಡೆಮಾಡಹತ್ತಲು ಅದು ಎಷ್ಟು ಮಾತ್ರವೂ ಕಡಿಮೆಯಾಗಲಿಲ್ಲ. ಅದು ಎಲ್ಲರಿಗೂ ಸಾಕಾಗಿ ಹೋಯಿತು. ಆಗ ಕಾಯಕದ ಮಹತ್ವವು ಎಷ್ಟಿದೆಂಬುದು ಎಲ್ಲರಿಗೂ ತಿಳಿದುಬಂದಿತು. ಅದನ್ನು ನೋಡಿ ಬಸವಣ್ಣನು ಲಕ್ಕಮ್ಮ ಮಾರಯ್ಯರಿಗೆ ನಮಿಸಿ ಮನೆಗೆ ಹೋದನು. ಈ ಪ್ರಕಾರ ಆಯುದಕ್ಕಿ ಮಾರಯ್ಯ ಲಕ್ಕಮ್ಮಗಳು ತಮ್ಮ ಕಾಯಕವನ್ನು ಮಾಡುತ್ತ ಅದರ ಮಹಿಮೆಯನ್ನು ಜಗತ್ತಿನಲ್ಲಿ ಮೆರೆದರು.

ಅವರು ಈ ರೀತಿ ಕಾಯಕವನ್ನು ಮಾಡುತ್ತ ದಿನಾಲು ತಮ್ಮ ಲಿಂಗಾರ್ಚನೆಯಲ್ಲಿ ತಲ್ಲೀನರಾಗಿ ತಮ್ಮ ಪ್ರಪಂಚವನ್ನು ಸಾಗಿಸುತ್ತ ಬಂದರು. ಅವರ ಲಿಂಗಾರ್ಚನೆ ಘನತರವಾದದ್ದು. ಆಗ ಅವರು ಇರವಂತಿ, ಸೇವಂತಿ, ಅಗರುಗಂತಿ, ಸುರಗಿ, ಸುರಹೊನ್ನೆ, ಸಂಪಗೆ, ತಾವರೆ, ಮೊಲ್ಲೆಮಲ್ಲಿಗೆ, ದಾಸಿವಾಳ, ಬಕುಳ, ಬಂದುಗೆ, ಪಚ್ಚೆ, ದವನ, ಕರವೀರ, ಪಾದರಿ, ಕರಿಯ ಮರುಗ, ಮುಡಿವಾಳ, ಜಾಲ, ಪಾಲಾಶ, ಕಂತಿವಾಲ ಮೊದಲಾದ ಸುಗಂಧವನ್ನು ಬೀರುವ ಪುಷ್ಪಗ

ಳನ್ನೂ ಎಲೆಗಳನ್ನೂ ಸಂಗ್ರಹಿಸಿ ಅವುಗಳಿಂದಲೂ, ಧೂಪ, ದೀಪ, ಅಕ್ಷತೆಗಳಿಂದಲೂ ತಮ್ಮ ಲಿಂಗಪೂಜೆಯ ಕಾರ್ಯವನ್ನು ದಿನಾಲು ಮಾಡುವರು. ಈ ಪ್ರಕಾರ ಸತಿಪತಿಗಳೀರ್ವರು ಲಿಂಗಭೋಗೋಪಭೋಗಿಗಳಾಗಿ ಅತ್ಯಂತ ಹರುಷದಿಂದ ತಮ್ಮ ಜೀವನ ಕ್ರಮವನ್ನು ಸಾಗಿಸುತ್ತ ಘನತರವಾದ ಸಾಮರಸ್ಯಪದವನ್ನು ಹೊಂದಿದರು.

ಆಯುದಕ್ಕಿ ಮಾರಯ್ಯನು ಮತ್ತು ಲಕ್ಕಮ್ಮನು ಈ ಉಭಯತರು ಶ್ರೇಷ್ಠತರಗತಿಯ ವಚನಕಾರರಿದ್ದಾರೆ. ಅವರು ಶಿವಾನುಭವ ಮಂಟದಲ್ಲಿ ಉಚ್ಚ ಸ್ಥಾನವನ್ನು ಹೊಂದಿದ್ದಾರೆ. ಆಯುದಕ್ಕಿ ಮಾರಯ್ಯನ ೩೫ ವಚನಗಳು ನಮ್ಮ ಹತ್ತರವಿದ್ದು ಅವು ಉಚ್ಚಭಾವನೆಗಳಿಂದ ತುಂಬಿ ಕೊಂಡಿವೆ. ಅವುಗಳಲ್ಲಿ ಕೆಲವುಗಳನ್ನಾದರೂ ಆರಿಸಿಕೊಳ್ಳದೆ ಇದ್ದ ಒಬ್ಬನಾದರೂ ವಚನ ಸಂಗ್ರಹಕಾರನು ದೊರೆಯುವದಿಲ್ಲ. ಅವನ ಮುದ್ರಿಕೆಯು 'ಅಮರೇಶ್ವರಾ' ಎಂದಿದೆ.

ಈ ಅಮರೇಶ್ವರ ದೇವಾಲಯವು ರಾಯಚೂರು ಜಿಲ್ಲೆಯಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ಕ್ಷೇತ್ರವಾಗಿದೆ. ಈ ಸ್ಥಳವು ಲಿಂಗಸುಗೂರಿನಿಂದ ಈಶಾನ್ಯ ದಿಕ್ಕಿಗೆ ೮ ಮೈಲುಗಳ ಮೇಲೆ ಒಂದು ಸುಂದರವಾದ ಪ್ರದೇಶದಲ್ಲಿದೆ. ಕೃಷ್ಣಾನದಿಯು ಅದರ ಉತ್ತರಕ್ಕೆ ೪ ಮೈಲು ದೂರವಿದೆ. ಇಲ್ಲಿ ಅಮರೇಶ್ವರನ ದೇವಾಲಯವಿದ್ದು ಅದಕ್ಕೆ ಸಮೀಪವಾಗಿ ಒಂದು ಸರೋವರವೂ ರೇವಣಸಿದ್ಧೇಶ್ವರನ ದೇವಾಲಯವೂ ಕುಂಭತೀರ್ಥ, ರಾಮತೀರ್ಥಗಳೆಂಬ ತೀರ್ಥಗಳೂ ಇದ್ದು ಅರ್ಧಮೈಲಿನ ಮೇಲೆ ಕಪಿಲೇಶ್ವರನ ಗುಡ್ಡವೆಂದು ಕರೆಯಲ್ಪಡುವ ಪವಿತ್ರ ಸ್ಥಳವಿದೆ. ಇದು ಪುಣ್ಯಕ್ಷೇತ್ರವೆಂದು ಪುರಾತನ ಕಾಲದಿಂದಲೂ ಪ್ರಸಿದ್ಧಿಯನ್ನು ಹೊಂದಿದೆ. ರಾಮಚಂದ್ರನು ಹಂಪಿಗೆ ಹೋಗುವಾಗ ಈ ಪುಣ್ಯಕ್ಷೇತ್ರದ ಮೇಲಿಂದಲೇ ಹಾಯ್ದು ಹೋದನೆಂಬ ಐತಿಹ್ಯವಿದೆ. ಆಯುದಕ್ಕಿ ಮಾರಯ್ಯನ ಮೊದಲಿನ ವಾಸಸ್ಥಾನವು ಇದೇ ಇರಬಹುದೆಂದು ಅವನ ವಚನಗಳ ಮುದ್ರಿಕೆಯಿಂದ ತಿಳಿದುಬರುತ್ತಿದೆ.

ಆಯುದಕ್ಕಿ ಮಾರಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ಆದ್ದರಿಂದ ಆತನು ವೀರಶೈವರಿಗೆಲ್ಲ ಅತ್ಯಂತ ಪೂಜ್ಯನಾಗಿದ್ದಾನೆ.

ಇಲ್ಲಿ ಅವನ ಕೆಲವು ವಚನಗಳನ್ನು ಮಾದಿರಿಗಾಗಿ ನಾವು ಇಲ್ಲಿ ಕೊಡುತ್ತೇವೆ.

## ವಚನಗಳು.

(೧) ಅಂಗಕ್ಕೆ ಬಡತನವಲ್ಲದೆ ಘನ ಮನಕೆ ಬಡತನ ಉಂಟೇ ? ಬೆಟ್ಟ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನವಿದ್ದಡೆ ಒಡೆಯದೇ ? ಘನ ಶಿವಭಕ್ತರಿಗೆ ಬಡತನವಿಲ್ಲ. ಸತ್ಯರಿಗೆ ದುಷ್ಕರ್ಮವಿಲ್ಲ. ಎನಗೆ ಅಮರೇಶ್ವರ ಲಿಂಗವುಳ್ಳನ್ನಕ್ಕ ಆರ ಹಂಗಿಲ್ಲ.

(೨) ಕಾಯಕದಲ್ಲಿ ನಿರುತನಾದಡೆ ಗುರುದರ್ಶನವಾದಡೂ ಮರೆಯಬೇಕು. ಲಿಂಗಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೂ ಹಂಗುಹರಿಯಬೇಕು, ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು.

'ಕಾಯಕವೇ ಕೈಲಾಸ' ಎಂದು ಈಗ ಎಲ್ಲೆಲ್ಲಿಯೂ ಪ್ರಸಿದ್ಧವಾದ ನುಡಿಯು ಆಯದಕ್ಕಿಮಾರಯ್ಯನದೆಂದು ನಾವು ವಾಚಕರ ಲಕ್ಷಕ್ಕೆ ಇಲ್ಲಿ ತರುತ್ತೇವೆ.

(೩) ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆಇಲ್ಲದ ನುಡಿ ಅರುವಿಂಗೆಹಾನಿ. ಕೊಡದೆತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿವೊಡೆದ ಕುಂಭದಲ್ಲಿ ಸುಜಲವ ತುಂಬಿದಂತೆ ಅಮರೇಶ್ವರ ಲಿಂಗವ ಮುಟ್ಟದ ಭಕ್ತಿ.

(೪) ಗೆಜ್ಜಲು ಮನೆಯ ಮಾಡಿ ಸರ್ಪಂಗಿಂಬಾದಂತೆ ತಾನತ್ತಣ ದ್ರವ್ಯವ ತಂದು ಇತ್ತ ಮಾಡಿದಡೆ ನನಗಿನ್ನೆತ್ತಣ ಮುಕ್ತಿ ಅಮರೇಶ್ವರ ಲಿಂಗವೇ?

(೫) ಚಂದ್ರಕಾಂತದ ಸಿಲೆಯಲ್ಲಿ ಬಿಂದುವಡಗಿಪ್ಪಂತೆ, ಗೋವುಗಳಲ್ಲಿ ಗೋರೋಜನ ರಂಜಿಸುವಂತೆ, ಶಿಲೆ ಕಾಷ್ಠಂಗಳಲ್ಲಿ ಅನಲವಡಗಿಪ್ಪಂತೆ, ಸೂಕ್ತಿಯ ಸತ್ಯದ ಹೃದಯದಲ್ಲಿ ಮೌಕ್ತಿಕದ ಉದಕದಂತೆ, ಭಾವವಿಲ್ಲದೆ ಅಡಗಿದೆಯಲ್ಲಾ ಅಮರೇಶ್ವರಲಿಂಗವೇ.

(೬) ತವನಿಧಿ ಬೆಳೆದವಂಗೆ ಕಣಜದ ಹಂಗುಂಟೇ? ವಿರಕ್ತಂಗಾರೈಕೆಗೊಂಬುವರುಂಟೇ? ಕಾಯಕವ ಮಾಡುವ ಭಕ್ತಂಗೆ ಇನ್ನಾರ ಕಾಡಲೇತಕ್ಕೆ? ಆ ಗುಣ ಅಮರೇಶ್ವರ ಲಿಂಗಕ್ಕೆ ದೂರ.

(೭) ನರನ ಮುಟ್ಟಿ ಓಲೈಸುವಲ್ಲಿ ಪರಿಪರಿಯ ಪದವಿಗಳುಂಟು. ಪರಶಿವಮೂರ್ತಿಯನರಿದಲ್ಲಿ ಇಹಪರದಲ್ಲಿ ಪರಮ ಸುಖವುಂಟು. ಇದೇ ಪರತತ್ವದಿರವು. ಅಮರೇಶ್ವರಲಿಂಗವ ಪೆರಿಸಬಲ್ಲಡೆ ಇದೇ ಸುಖ.

---

## ಲಕ್ಕಮ್ಮ

ಲಕ್ಕಮ್ಮನು ಆಯ್ದಕ್ಕಿ ಮಾರಯ್ಯನ ಹೆಂಡತಿಯು. ಅವಳ ಚರಿತ್ರೆಯು ಆತನ ಚರಿತ್ರೆಯಲ್ಲಿಯೇ ಸಮಾವೇಶವಾಗುತ್ತದೆ. ಆಯ್ದಕ್ಕಿ ಮಾರಯ್ಯನಂತೆಯೇ ಲಕ್ಕಮ್ಮನೂ ವಚನಕಾರಳಿದ್ದಾಳೆ. 'ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ' ಎಂಬುದು ಅವಳ ಮುದ್ರಿಕೆಯಾಗಿದೆ. ಅವಳ ೧೫ ವಚನಗಳು ಮಾತ್ರ ನಮಗೆ ಉಪಲಬ್ಧವಾಗಿವೆ. ಅವೆಲ್ಲವೂ ಉದಾತ್ತ ವಿಚಾರವುಳ್ಳವುಗಳಾಗಿವೆ. ಆಯ್ದಕ್ಕಿ ಮಾರಯ್ಯನ ಕಾಯಕದಲ್ಲಿ ಅವನಿಗೆ ತಾನೂ ಸಹಾಯಕಳಾಗಿ ಅವಳು ವರ್ತಿಸಿದ್ದಾಳೆ. ಶಿವಶರಣರು ಶಿವಾನುಭವದ ತತ್ವಗಳಂತೆ ಕಾಯಕಗಳನ್ನು ಮಾಡುತ್ತ ಅವುಗಳಲ್ಲಿ ತಮಗೆ ತೋರಿದ ಅನುಭವಗಳನ್ನು ತಮ್ಮ ವಚನಗಳ ಮೂಲಕ ನುಡಿದಿದ್ದಾರೆ. ಆದ್ದರಿಂದ ಇವುಗಳಲ್ಲಿ ತಮ್ಮ ಜೀವಿತದಲ್ಲಿ ತಮಗೊದಗಿದ ಪ್ರಸಂಗಗಳ ಉಲ್ಲೇಖಗಳು ಪ್ರತ್ಯಕ್ಷ ಅಥವಾ ಅಪ್ರತ್ಯಕ್ಷವಾಗಿ ಅಲ್ಲಲ್ಲಿ ಬರುವದುಂಟು. ಲಕ್ಕಮ್ಮನ ಕೆಳಗೆ ಕಾಣಿಸಿದ ವಚನಗಳು ಅವಳ ಮತ್ತು ಆಯ್ದಕ್ಕಿ ಮಾರಯ್ಯನ ಚರಿತ್ರೆಗಳ ಮೇಲೆ ಕೆಲಮಟ್ಟಿಗೆ ಪ್ರಕಾಶವನ್ನು ಕೆಡಹುವಂಥವಿರುತ್ತವೆ.

ಆಯ್ದಕ್ಕಿ ಮಾರಯ್ಯನು ಅಕ್ಕಿಯನ್ನು ಆಯುವ ಕಾಯಕವನ್ನು ಮಾಡುತ್ತಿದ್ದದರ ಮಹತ್ವವನ್ನು ಲಕ್ಕಮ್ಮನು ಕೆಳಗಿನ ವಚನದಲ್ಲಿ ಹೇಳಿದ್ದಾಳೆ. —

"ಆಯಿದು ಇಲ್ಲವಾದಂದಿಗಲ್ಲದೆ ಜಗದೊಳಗೆ ಆರಿಗೂ ಬಡತನವಿಲ್ಲ. ಆಯಿದುವುಳ್ಳನ್ನಕ್ಕ ಸಕಲ ಜೀವಕ್ಕೆ ಚೇತನ. ಮಾರಯ್ಯ ಪ್ರಿಯ ಅಮರೇಶ್ವರಲಿಂಗವುಳ್ಳನ್ನಕ್ಕರ ಧನಮನಸಂಪನ್ನರು.

ಆಯುವದರಲ್ಲಿ ಆಶೆ ಇರಬಾರದೆಂದು ಅವಳು ಕೆಳಗೆ ಹೇಳಿದ್ದಾಳೆ.

"ಆಸೆ ಎಂಬುದು ಅರಸಿಂಗಲ್ಲದೆ ಶಿವಶರಣರಿಗುಂಟೇ ? ದೋಷ ವೆಂಬುದು ಯಮದೂತರಿಗಲ್ಲದೆ ಅಜಾತಂಗುಂಟೇ? ಈಸಕ್ಕಿಯ ಆಸೆ ನಿಮಗೇಕೆ ಮಾರಯ್ಯಪ್ರಿಯ ಅಮರೇಶ್ವರಲಿಂಗಕ್ಕೆ ಸಲ್ಲದ ನೇಮವು?"

ಕಾಯಕದಲ್ಲಿ ಹೆಚ್ಚಿಗೆ ಬಯಸಬಾರದೆಂತಲೂ ಪೂರ್ವ ಕರ್ಮದಂತೆ ಎಲ್ಲರಿಗೂ ಸುಖದುಃಖಗಳಾಗುತ್ತವೆಂತಲೂ ಆವಳು ಕೆಳಗೆ ಹೇಳುತ್ತಾಳೆ.

" ಬಾಹಾಗ ಕೊಂಡುಬಂದ ಪ್ರಾಪ್ತಿಯಲ್ಲದೆ, ಬೇರೊಂದು ಗಳಿಸ ಲಿಲ್ಲ. ಬೇರೊಂದು ಕೆಡಿಸಲಿಲ್ಲ. ಬಂ[illegible]ಗು ನಿಂದುದು ಮಾರಯ್ಯಪ್ರಿಯ ಅಮಳೇಶ್ವರಲಿಂಗ ಕೊಟ್ಟಲ್ಲದಿಲ್ಲ."

ಮಾರಯ್ಯನು ಬಡವನೆಂದು ಬಸವನು ಹೆಚ್ಚಿಗೆ ಅಕ್ಕಿಯನ್ನು ದಾರಿಯಲ್ಲಿ ಚಲ್ಲಿಸಲಾಗಿ ಆದಕ್ಕೆ ಲಕ್ಕಮ್ಮನು ಸಿಟ್ಟಾಗಿ ನುಡಿದ ವಚನವು ಕೆಳಗಿನದಾಗಿರಬಹುದು.

"ಭಕ್ತಂಗೆ ಬಡತನ ಉಂಟೇ? ಸತ್ಯರಿಗೆ ಮರಣ ಉಂಟೇ? ಭಕ್ತರು ಬಡವರೆಂದು ಮತ್ತೊಂದು ಕೊಟ್ಟಹೆನೆಂದರೆ ಮಾರಯ್ಯಪ್ರಿಯ ಅಮ ಳೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ"

ಕಾಯಕದಲ್ಲಿ ತಮಗೆ ಸಾಕಾಗುವಷ್ಟನ್ನೇ ಗಳಿಸಬೇಕಲ್ಲದೆ ಅನಾ ವಶ್ಯಕವಾಗಿ ಸಂಗ್ರಹಿಸಕೂಡದೆಂಬ ಶಿವಶರಣರ ತತ್ವವಿದೆ. ಇದನ್ನೇ ಲಕ್ಕಮ್ಮನು ಕೆಳಗೆ ಹೇಳಿದ್ದಾಳೆ.

"ಭಕ್ತರು ಕಾಯಕವೆಂದು ಆಯಗಾರಿಕೆಯಲ್ಲಿದ್ದು ದಾಸೋಹವ ಮಾಡಬಹುದೇ? ಒಮ್ಮನವ(೧) ತಂದು ಒಮ್ಮನದಲ್ಲಿಯೇ ಮಾಡಿ ಇಮ್ಮ ನವಾಗದ ಮುನ್ನವೇ ಮಾರಯ್ಯಪ್ರಿಯ ಅಮಳೇಶ್ವರ ಲಿಂಗಕ್ಕೆ ಸಲ್ಲ ಬೇಕು"

ಲಕ್ಕಮ್ಮನು ಶುದ್ಧಮನಸ್ಸಿನಿಂದ ಸಂಪಾದಿಸಿದರೆ ಲಕ್ಷ್ಮಿಯು ತಾನಾಗಿಯೇ ನಡೆದು ಬರುವಳೆಂದು ಕೆಳಗೆ ಹೇಳಿದ್ದಾಳೆ.

" ಮನ ಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತ ಶುದ್ಧ ದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದತ್ತ ಲಕ್ಷ್ಮಿ

---

(೧) **ಒಮ್ಮನ, ಇಮ್ಮನ ಈ ಮಾಪುಗಳ ಹೆಸರುಗಳು ಈಗಲೂ ವಿಜಾ ಪುರ ಜಿಲ್ಲೆಯಲ್ಲಿ ಉಪಯೋಗದಲ್ಲಿವೆ.**

ತಾನಾಗಿಪ್ಪಳು, ಮಾರಯ್ಯಪ್ರಿಯ ಅಮರೇಶ್ವರ ಲಿಂಗದ ಸೇವೆಯುಳ್ಳ ನ್ನಕ್ಕ. ”

ಈ ಪ್ರಕಾರ ಲಕ್ಕಮ್ಮನು ತನ್ನ ಪತಿಯ ಕಾಯಕದಲ್ಲಿ ಅವನಿಗೆ ಸಹಾಯಕಳಾಗಿ ವರ್ತಿಸಿದ್ದಾಳೆ. ಅವನ ನಿತ್ಯದ ಹೋರೆಯಲ್ಲಿ ಅವನಿಗೆ ಯೋಗ್ಯ ದಾರಿಯನ್ನು ತೋರಿಸುತ್ತ ತನ್ನ ಜೀವನವನ್ನು ನಡಿಸಿದ್ದಾಳೆ. ಗಂಡನು ತಪ್ಪಿದಲ್ಲಿ ಅವನಿಗೆ ಎಚ್ಚರು ಹೇಳುತ್ತ ಬಂದಿದ್ದಾಳೆ. 'ಪತಿಯೇ ದೈವ'ವೆಂದು ಭಾವಿಸಿ ನಡೆಯುವದು ಸತಿಯ ಕರ್ತವ್ಯವೆಂದು ಸಾಮಾನ್ಯವಾಗಿ ಜನರ ತಿಳುವಳಿಕೆಯುಂಟು. ಆದರೆ ಶಿವಾನುಭವದ ಪ್ರಕಾರ ವೀರಶೈವ ಸ್ತ್ರೀಯರಿಗೆ ಲಿಂಗವೇ ಪತಿಯಾಗಿದೆ. ಆದ್ದರಿಂದ ಸ್ತ್ರೀಯರ ಮೋಕ್ಷಪದವು ಪತಿಯ ಮೇಲೆ ಅವಲಂಬಿಸಿರದೆ ಅದನ್ನು ಅವರು ಸ್ವತಂತ್ರರೀತಿಯಿಂದ ಹೊಂದಲು ಅರ್ಹರಾಗಿದ್ದಾರೆ. ಈ ತತ್ವವು ಬಸವೇಶ್ವರನ ಕಾಲದಲ್ಲಿ ಪ್ರಚಾರದಲ್ಲಿ ಬಂದದ್ದರಿಂದ ಆಗ ಅಸಂಖ್ಯ ಸ್ತ್ರೀಯರು ಸಮಾಜೋದ್ಧಾರ ಕಾರ್ಯಮಾಡಲು ಶಕ್ತರಾದರು. ಅವರಲ್ಲನೇಕರು ಅವಿವಾಹಿತರಾಗಿ ಉಳಿದು ಅನೇಕ ತರದ ಕಾಯಕಗಳನ್ನು ಮಾಡುತ್ತ ಆತ್ಮೋದ್ಧಾರವನ್ನು ಮಾಡಿಕೊಂಡಿದ್ದಾರೆ. ಇಷ್ಟೇ ಅಲ್ಲ, ಅವರು ಪುರುಷರೊಡನೆ ಮನೆತನದ ಆಸ್ತಿಯಲ್ಲಿಯೂ ಧಾರ್ಮಿಕ ಕೃತ್ಯಗಳಲ್ಲಿಯೂ ಸಮಾನ ಹಕ್ಕುಗಳನ್ನು ಸಹ ಪಡೆದುಕೊಂಡಿದ್ದಾರೆ. ಆದ್ದರಿಂದ ಶಿವಶರಣೆಯರಲ್ಲನೇಕರು ತಮ್ಮ ಪತಿಗಳು ತಪ್ಪು ಮಾಡಿದಾಗ ಅವರಿಗೆ ಅವುಗಳನ್ನು ತಿಳಿಸಿಕೊಟ್ಟು ಅವರನ್ನು ಯೋಗ್ಯ ದಾರಿಗೆ ಹಚ್ಚಿದ್ದಾರೆ. ಈ ರೀತಿಯಾಗಿ ಲಕ್ಕಮ್ಮನು ಆಚರಿಸಿದ್ದು ಅವಳ ಚರಿತ್ರೆಯಿಂದ ತಿಳಿದು ಬರುತ್ತದೆ.

ಲಕ್ಕಮ್ಮನು ಅತ್ಯಂತ ಧೈರ್ಯಸ್ತಳೂ ಕಟ್ಟಾಭಿಮಾನಿಯೂ, ಸ್ವತಂತ್ರಜೀವಿಯೂ, ಉದಾತ್ತ ವಿಚಾರವುಳ್ಳವಳೂ, ಆಗಿದ್ದಳೆಂದು ಅವಳ ವಚನಗಳ ಮೇಲಿಂದಲೂ ಆಯದಕ್ಕಿ ಮಾರಯ್ಯನ ಚರಿತ್ರೆಯಿಂದಲೂ ಕಂಡುಬರುತ್ತದೆ.

**BOOK-POST.**

R. N. B. 2554

ಶ್ರೀ. ರಾ|| ರಾ||

ಚನಮಲ್ಲಪ್ಪ ಸಿದ್ದಪ್ಪ ಬಡೇವಿ
ಪೋ. ಬನಹಟ್ಟಿ
ಸ್ಟೇ. ಕುಡಚಿ
(M. S. M. Ry.)

*From,*
**Shivanubhava**
**Office**
**Bijapur.**


ಈ ಪತ್ರಿಕೆಯನ್ನು ಇದರ ಸಂಪಾದಕರಾದ, ರಾ|| ಬ|| ಬಿ. ಹಳಕಟ್ಟಿ ಬಿ. ಎ. ಎಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂತಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ ೧೬೨೦ (ಅ) ನೇ ಮನೆಯಲ್ಲಿ ಪ್ರಸಿದ್ಧಿಸಿದರು.



ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ ೩-೧೦-೦

ಸಂಪುಟ ೧೮] ಆಗಸ್ಟ ೧೯೪೪. [ಸಂಚಿಕೆ ೧೧

## ವಿಷಯಾನುಕ್ರಮಣಿಕೆ.





ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ ೩-೧೦-೦

ಸಂಪುಟ ೧೮] ಅಗಸ್ಟ ೧೯೪೪. [ಸಂಚಿಕೆ ೧೧


## ವಿಷಯಾನುಕ್ರಮಣಿಕೆ.

## ಶಿವಾನುಭವಕ್ಕೆ ಸಹಾಯ

ಈಗಿನ ಬಿಕ್ಕಟ್ಟಿನ ಕಾಲದಲ್ಲಿ ಪತ್ರಿಕೆಗಳನ್ನು ನಡಿಸುವದು ಬಹಳ ದುಸ್ತರವಾದ ಕಾರ್ಯವಾಗಿದೆ. ವಾಚಕ ವರ್ಗದವರ ವಿಶೇಷ ಸಹಾಯವಿಲ್ಲದ ಹೊರತು ಈ ಕಾರ್ಯದಲ್ಲಿ ಹಾಸಿಯಾಗದೆ ಇರದು. ಹೋದ ವರುಷ ಅನೇಕ ಮಹನೀಯರು ನಮಗೆ ಸಹಾಯ ಮಾಡಿದ್ದರಿಂದ ಇದನ್ನು ನಡಿಸಲು ಶಕ್ಯವಾಯಿತು. ಇದಕ್ಕೋಸ್ಕರ ಅವರೆಲ್ಲರ ಉಪಕಾರವನ್ನು ನಾವು ವಿಶೇಷವಾಗಿ ಸ್ಮರಿಸುತ್ತೇವೆ. ಈ ವರುಷವಾದರೂ ಪತ್ರಿಕೆಗೆ ಸಹಾಯವು ಅತ್ಯವಶ್ಯಕವಾಗಿ ಬೇಕಾಗಿರುತ್ತದೆ. ಮುಂದಿನ ಸಂಚಿಕೆಗೆ ಆದರ ವರ್ಷವು ಮುಗಿಯುವದರಿಂದ ಈ ಸಮಯದಲ್ಲಿ ನಮ್ಮ ವಾಚಕರು ನಮಗೆ ಮೊದಲಿನಂತೆಯೇ ಸಹಾಯವನ್ನು ನೀಡಿ ಪತ್ರಿಕೆಯು ನಡೆದು ಹೋಗುವಂತೆ ಮಾಡಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

ಮಹಾಲಿಂಗಪುರದ ಶ್ರೀಮಂತ ಬಸಲಿಂಗಪ್ಪ ಅಣ್ಣಾ ಘಟನಟ್ಟಿಯವರು ಶಿವಾನುಭವಕ್ಕೋಸ್ಕರ ಯಾವಾಗಲೂ ಅತ್ಯಂತ ಪ್ರೇಮವನ್ನು ವಹಿಸಿ ಅದಕ್ಕೆ ವಿಶೇಷ ಸಹಾಯನ್ನು ಮಾಡುತ್ತ ಬಂದಿರುತ್ತಾರೆ. ಅವರು ಈ ವರುಷವಾದರೂ ಶಿವಾನುಭವಕ್ಕೆ ಧನ ಸಹಾಯವೆಂದು ಒಂದು ನೂರು ರೂಪಾಯಿ.ಗಳನ್ನು ಕಳಿಸಿಕೊಟ್ಟಿದ್ದಾರೆ. ಇದಕ್ಕೋಸ್ಕರ ನಾವು ಅವರಿಗೆ ಅತ್ಯಂತ ಆಭಾರಿಯಾಗಿದ್ದೇವೆ.

ಕೆಳಗೆ ಕಾಣಿಸಿದ ಕಾರ್ಯಗಳಲ್ಲಿಯೂ ನಮಗೆ ಸಹಾಯ ಧನವು ಬಂದಿರುತ್ತದೆ. ಇದರಲ್ಲಿ ನಮಗೆ ಸಹಾಯ ಮಾಡಿದವರಿಗೆಲ್ಲ ನಾವು ಅತ್ಯಂತ ಋಣಿಯಾಗಿದ್ದೇವೆ.

(೧) ಶ್ರೀ ರುದ್ರವ್ವಾ ನರಗುಂದ ಹುಬ್ಬಳ್ಳಿ ಇವರು ಶಿವಾಧೀನರಾದ ಕಾಲಕ್ಕೆ ಭಕ್ತರಿಂದ ಅಂತ್ಯ ಕ್ರಿಯ ಜರಗಿಸಿ ಶಿವಾನುಭವಕ್ಕೆ ಕಾಣಿಕೆ ಸಲ್ಲಿಸಿದ್ದು ಈರಪ್ಪ ಕರವೀರಶೆಟ್ಟಿ ಹುಬ್ಬಳ್ಳಿ ಇವರ ಮುಖಾಂತರ ಬಂದದ್ದು. ೧ ರೂಪಾಯಿ.

(೨) ಶ್ರೀ ರಾಮಚಂದ್ರಪ್ಪ ಚನ್ನಪ್ಪ ಯಂಕಂಚಿ. ಚಡಚಣ ಇವರ ಮಾತೋಶ್ರೀ ಸುಂದರವ್ವಾ ಇವರು ಶಿವಾಧೀನರಾದ ಕಾಲಕ್ಕೆ ಅವರ ಸ್ಮರಣಾರ್ಥವೆಂದು ಶಿವಾನುಭವ ಸಹಾಯ ನಿಧಿ ಸಲ್ಲಿಸಿದ್ದು ಶ್ರೀ. ಎಮ್. ಎಸ್. ಎಳವೇಲಿ ಚಡಚಣ ಇವರ ಮುಖಾಂತರ ಬಂದಿದ್ದು. ೧೧ ರೂಪಾಯಿ.

(೩) ಕೈ. ವಾ. ರೇವಣಸಿದ್ದಪ್ಪ ಹರಿಹರ, ಇಲಕಲ್ಲ ಇವರು ಶಿವಾಧೀನರಾದ ಕಾಲಕ್ಕೆ ಶ್ರೀ ಚನಬಸಪ್ಪನವರು ಹರಿಹರ ಇಲಕಲ್ಲ ಇವರು ಅರ್ಪಿಸಿದ್ದು. ೫ ರೂಪಾಯಿ.

ಈ ಯಾವತ್ತರಿಗೂ ನಾವು ನಮ್ಮ ಕೃತಜ್ಞತೆಯನ್ನು ಅರ್ಪಿಸುತ್ತೇವೆ.

**ಫ ಗು. ಹಳಕಟ್ಟಿ**
**ಸಂಪಾದಕ ಶಿವಾನುಭವ.**

# ಶಿವಾನುಭವ

| ವರ್ಷ ೧೮ | ಅಗಸ್ಟ ೧೯೪೪. | ಸಂಚಿಕೆ ೧೧ |
|---|---|---|


## ಕನ್ನಡ ಭಕ್ತಿ-ದೀಪಕ ಬಸವಣ್ಣ

### (೩) ನ್ಯಾಯನಿಷ್ಠುರಿ--ಲೋಕವಿರೋಧಿ.

(ಲೇ:- ಸಿಂಪಿ ಲಿಂಗಣ್ಣ ಮು. ಹಲಸಂಗಿ)

---

### ಕರ್ತಾರನ ಕಮ್ಮಟ

ಜಗತ್ತು ದುಃಖಮೂಲ; ತಾನು ದುಃಖಕ್ಕೆ ಕಾರಣ; ದುಃಖಭೋಗವೇ ಜನ್ಮೋದ್ದೇಶ; ನೋವು-ನರಳು, ದುಃಖದುಮ್ಮಾನ, ಕ್ಲೇಶ-ಕಳವಳ ಇವುಗಳ ಆಗರವೇ ಈ ಸಂಸಾರವಾಗಿದೆ; ಒಬ್ಬನು ನೋವಿನಿಂದ ನರಳುತ್ತಿದ್ದರೆ, ಇನ್ನೊಬ್ಬನು ದುಃಖದಿಂದ ಕಕ್ಕಸಬಡುತ್ತಿದ್ದಾನೆ; ಒಂದು ಕಡೆ ಕ್ಲೇಶದಿಂದ ಕಳವಳಿಸುತ್ತಿದ್ದರೆ, ಇನ್ನೊಂದು ಕಡೆ ನಾಶದಿಂದ ತಳಮಳಿಸುತ್ತಿದ್ದಾನೆ. ಮನುಷ್ಯನನ್ನು ನೋಡಿದರೆ ಅದೊಂದು ಯಂತ್ರ ಮಾತ್ರ. ಅವನ ಕಾರ್ಯ-ಕಲಾಪಗಳೇ ಕಾರಖಾನೆಯ ಕಾರ್ಯವಿಭಾಗ; ಜಗತ್ತಿನ ಕಡೆಗೆ ನೋಡಿದರೂ ಅದೇ ದೃಶ್ಯ. ಅಂದಮೇಲೆ ಇದೆಲ್ಲ ಏನಿದು? 'ಕರ್ತಾರನ ಕಮ್ಮಟ'ವೇ? ಇಲ್ಲಿ ಸಿದ್ಧವಾದ ಒಡವೆಗಳೆಲ್ಲ ರಹಸ್ಯಲೋಕಕ್ಕೆ ಹೋಗುವವೇ? ಅಹುದು. " ಇಲ್ಲಿ ಸಲ್ಲುವವನು ಅಲ್ಲಿಯೂ ಸಲ್ಲುವನು." ಮರಣಾನಂತರದ ರಾಜ್ಯವು ಸ್ವರ್ಗವೋ-ಸ್ವರ್ಲೋಕವೋ? ವೈಕುಂಠವೋ-ಅಮರಲೋಕವೋ? ಏನೊ ಇರಬೇಕು. ಒಟ್ಟಿನ ಮೇಲೆ ಇಹಕ್ಕಿಂತ ಮೇಲಾದ ಜೀವನವು ಅಲ್ಲಿರಬೇಕೆಂದೇ ತೋರುತ್ತದೆ. ಆದ್ದರಿಂದ ಮೊದಲು ಇಲ್ಲಿ ಒಪ್ಪವಾಗಿ ದುಡಿದು ತೇರ್ಗಡೆಹೊಂ

ಬಿದರೆ, ಮುಂದಿನ ಲೋಕದಲ್ಲಿ ಮೇಲ್ತರದ ಕೆಲಸ. ಒಳ್ಳೆಯ ಕೆಲಸ ಮಾಡಿದವನಿಗೆ ಇಹದಲ್ಲಿಯೇ ಮೇಲ್ತರದ ಸ್ಥಾನಮಾನಗಳು ಸಿಗುತ್ತಿತ್ತಿರುವಾಗ ಪರದಲ್ಲಿ ಸಿಗಬೇಡವೇ? ಕೃತಿಗಳು ಸುಂದರವಾಗುವಂತೆ ಶರೀರ-ಪ್ರಾಣ- ಮನಸುಗಳು ನೋಡಿಕೊಳ್ಳಬೇಕಷ್ಟೆ? ಅವು ತಂತಮ್ಮ ಕಾರ್ಯವಿಭಾಗಗಳನ್ನಷ್ಟೇ ಮಾಡಿಕೊಂಡರೆ ಆದ ಕೆಲಸವು ಸರ್ವಾಂಗ ಸುಂದರವಾಗುವದು. ಮನಸ್ಸು "ಓತಿ ಬೇಲಿವರಿದಂತೆ; ಹೊತ್ತಿಗೊಂದು ಪರಿಯುಪ್ಪ ಗೋಸುಂಬೆಯಂತೆ; ಅದರ ರೀತಿ ಬಾನಲಬಾಳುವೆಯಂತೆ." ಅದರ ಈ ಬಣ್ಣಗಳೆಲ್ಲ ಬಯಲಾಗುವಂತೆ 'ಕರ್ತಾರನ ಕಮ್ಮಟ'ದಲ್ಲಿ ಕಾರ್ಯ ನಡೆಯುತ್ತಲಿದೆ. "ಮಾನಿಸಗಳ್ಳಿಯ ವಚನ ಬೆಲ್ಲವಾದರೂ ಹೃದಯದಲ್ಲಿಪ್ಪದು ನಂಜು. ಕಂಗಳಲೊಬ್ಬನ ಕರೆವಳು; ಮನದಲೊಬ್ಬನ ನೆನೆವಳು-" ಈ ಲೆಕ್ಕನೆಲ್ಲ ಒಂದು ಕಡೆಯಲ್ಲಿ ಸಿಕ್ಕುತ್ತದೆ. ಅದನ್ನೆಲ್ಲ ಬಸವಣ್ಣನ ಮಾತಿನಲ್ಲಿಯೇ ವಿವರಿಸಬೇಕು.—

"ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಟ್ಟು ಹರದ ಕುಳ್ಳಿರ್ದ ನಮ್ಮ ಮಹಾದೇವಶೆಟ್ಟಿ. ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು. ಕಾಣಿಯ ಸೋಲ; ಅರ್ಧಗಾಣಿಯ ಗೆಲ್ಲ. ಜಾಣ ನೋಡವ್ವಾ."

ಕಮ್ಮಟದಲ್ಲಿ ಶುದ್ಧಿ-ಸಿದ್ಧಿ ಹೊಂದಿದ ಜೀವವು ನ್ಯಾಯನಿಷ್ಠುರವಾಗಿಯೂ, ಲೋಕವಿರೋಧಿಯಾಗಿಯೂ ಕಂಡುಬಂದರೆ ಆಶ್ಚರ್ಯವೇನು? ಆ ಜೀವದ ರೀತಿ ನಡೆವಳಿಕೆಗಳೇ ಬೇರೆ.

"ಬಂದುದ ಕೈಕೊಳ್ಳಬಲ್ಲರೆ ನೇಮ. ಇದ್ದುದ ವಂಚನೆಯ ಮಾಡದಿದ್ದರೆ ಅದು ನೇಮ. ನಡೆದು ತಪ್ಪದಿದ್ದರೆ ನೇಮ. ನುಡಿದು ಹುಸಿಯದಿದ್ದರೆ ಅದು ನೇಮ. ನಮ್ಮ ಕೂಡಲಸಂಗನ ಶರಣರು ಬಂದರೆ ಒಡೆಯರಿಗೊಡವೆಯನರ್ಪಿಸುವುದೇ ನೇಮ."

ಆ ಜೀವವು ಕಾಯದ ಕಳವಳಕ್ಕಂಜಿ ಕಾಯಯ್ಯ ಅನ್ನದು; ಜೀವನೋಪಾಯಕ್ಕೆ ಈಯಯ್ಯ ಅನ್ನದು. "ಯದ್ಭಾವಂ ತದ್ಭವತಿ. ಉರಿ ಬರಲಿ, ಸಿರಿ ಬರಲಿ, ಬೇಕು ಬೇಡೆನ್ನೆನು. ಆನು ನಿಮ್ಮ ಹಾರೆನು, ಮಾನವರ ಬೇಡೆನು. ಆಣೆ ನಿಮ್ಮಾಣೆಯೆನ್ನುವದು. ಅವನು ಏತದಂತೆ ತಲೆವಾಗುವ ಗುರುಭಕ್ತನಲ್ಲ; ಇಕ್ಕುಳದಂತೆ ಕೈಮುಗಿವ ಭೃತ್ಯಾಚಾರಿ ಅಲ್ಲ. ಗಿಳಿ

ಯೋದಿನ ಲಿಂಗವೇದಿ ಅಲ್ಲ. ಸಗಣಕ್ಕೆ ಹುಟ್ಟಿದ ಸಾಸಿರ ಹುಳುವಿನಂತಲ್ಲ. ಅವನು ನಿಚ್ಚ ನೆನೆವ ಅಚ್ಚ ಶರಣ. ಆವನಿಗೆ ನಿಚ್ಚ ಶಿವರಾತ್ರಿ; ಮರಣವೂ ಮಹಾನವಮಿ.

ಕರ್ತಾರನು ಕೈಹಿಡಿಯುದ ಕಬ್ಬಿನಕೋಡಗನನ್ನು ಪರುಷ ಮುಟ್ಟಿದರೆ ಹೊನ್ನಾದೀತು. ಆದರೆ ಫಲವೇನು? ಅದರ ಮುನ್ನಿನ ರೂಹು ಬಿಡಲಾರದು. "ಕುಂಬಳದ ಕಾಯಿಗೆ ಕಬ್ಬಿನದ ಕಟ್ಟು ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲದೇ? ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಹುದಲ್ಲದೆ ಅದರ ಗಂಜಳ ಬಿಡದು; ಮಣ್ಣಾಪುತ್ಥಳಿಯ ಜಲದಲ್ಲಿ ತೊಳೆದರೆ ನಿಚ್ಚನಿಚ್ಚ ಕೆಸರಹುದಲ್ಲದೆ ಅದರಚ್ಚುಗ ಬಿಡದು." ಆದ್ದರಿಂದ ಕರ್ತಾರನಿಗೆ ಅನುಕೂಲರಾಗಿ ಮೊದಲು ತನ್ನ ಉದ್ಧಾರವನ್ನು ಮಾಡಿಕೊಳ್ಳಲು ಅಣಿಯಾಗಬೇಕು.

## ಸ್ವೋದ್ಧಾರ

ಜಗತ್ತಿನಲ್ಲಿ ಪ್ರತಿಯೊಬ್ಬನೂ ಸ್ವಕಲ್ಯಾಣವನ್ನು ಸಾಧಿಸುವ ಹೋರಾಟದಲ್ಲಿಯೇ ತೊಡಗಿರುವನು. ಆಶೆ-ಆಮಿಷಗಳ ಬೆಂಬತ್ತಿ ಸಾಗಿದವನ ಹೋರಾಟವು ಸ್ವಾರ್ಥವೆಂದೂ, ಆತ್ಮವನ್ನು ಅನುಸರಿಸಿದವನ ಪ್ರಯತ್ನವು ಆತ್ಮೋದ್ಧಾರವೆಂದೂ ಅನ್ನಿಸುವದು. ಆತ್ಮೋದ್ಧಾರ ಉಂದರೆ ಸ್ವೋದ್ಧಾರಕ್ಕೆ ತೊಡಗಿದ ಮನುಷ್ಯನು ಮೊದಮೊದಲು ಸ್ವಶಕ್ತಿಯಲ್ಲಿ ಭರವಸೆ ಇಟ್ಟುಕೊಂಡಿರುತ್ತಾನೆ. ಶರೀರದ ಬಲವಾಗಲಿ, ಪ್ರಾಣದ ಆಶೆ ಮನಸ್ಸಿನ ಜ್ಞಾನವಾಗಲಿ, ಆತ್ಮೋದ್ಧಾರಕ್ಕೆ ಸಹಾಯವನ್ನಿತ್ತರೂ ಆ ಸಹಾಯವು ಸಾಕಾಗದು. ಆತ್ಮೋದ್ಧಾರಕ್ಕೆ ಪರಮ ಆತ್ಮಸಹಾಯವು ಬೇಕು; ಅದೇ ದೈವಕೃಪೆ; ಅದು ಆತ್ಮಸಮರ್ಪಣದಿಂದ ಸಾಧ್ಯ. ಆತ್ಮನ ಸಹಜಗುಣವೇ ಸಮರ್ಪಣವಾಗಿರಲು ಅನ್ಯ ಉಪಾಯವು ಅಡ್ಡಹಾದಿಯೇ ಅನಿಸುವದು. ಬಸವಣ್ಣನು ಕೂಡಲಸಂಗನಲ್ಲಿ ಆತ್ಮಸಮರ್ಪಣ ಮಾಡಿದ್ದು ಏತಕ್ಕಾಗಿ ಎನ್ನುವುದರ ರಹಸ್ಯವು ಈಗ ತಾನಾಗಿಯೇ ಸ್ಪಷ್ಟವಾದಂತಾಯ್ತು. "ಮೇಲಾಗಲೊಲ್ಲೆ, ಕೀಳಾಗಲೊಲ್ಲದೆ. ಕೀಳಿಂಗಲ್ಲದೆ ಹಯನು ಕರೆವುದೇ? ಮೇಲಾಗಿ ನರಕದಲೋಲಾಡಲಾರೆನೆಂ"ದು ಅವನು ಕೂಡಲಸಂಗನ ಅಡಿಯ ಹುಡಿಯಂತೆ ಕೀಳಾದನು. ಬಾಹ್ಯ ಸಲಕರಣೆಗಳು ಏನಿದ್ದರೂ ಅವುಗಳಿಂದ ಆತ್ಮರಕ್ಷಣೆಯ ಭರವಸೆ ಕಡಿಮೆ. "ವನದೊಳಗಣ ಮಾಯಾಮಂಜರವೇ ಕೊಲ್ಲನಿಂತಾಗ ಗಿಳಿಯನ್ನು

ಹಂಜರ ಕಾಯ್ದುವದೇ?" ಒಳಕೋಟೆಯಲ್ಲಿ ಘಾತುಕರಾದ ಶತ್ರುಗಳನ್ನು ಸೈತಿಟ್ಟು, ಹೊರಕೋಟೆಯನ್ನು ಬಿಚ್ಚುಗತ್ತಿಯ ಭಂಟರು ಅಚ್ಚಗಾವಲಾಗಿ ನಿಂತು ಫಲವೇನು? ತನ್ನ ವ್ಯೆಲಾರನ ಒಳಗೆ ಸಣಬು ತುಂಬಿಟ್ಟುಕೊಂಡು, ಲೋಕದ ಡೊಂಕು ತಿದ್ದಲು ಹೊರಡುವವರು ಇನ್ನು ಬೇರೇ ಇದ್ದಾರೆ. ನಿಮ್ಮ ನಿಮ್ಮ ತನುವ ಸಂತಯಿಸಿಕೊಳ್ಳಿ; ಮನವ ಸಂತಯಿಸಿಕೊಳ್ಳಿ; ನೆರೆಮನೆಯ ದುಃಖಕ್ಕೆ ಅಳುವರ ಮೆಚ್ಚ ಕೂಡಲಸಂಗಮದೇವ" ಎಂದು ಬಸವಣ್ಣನು ಹೇಳುತ್ತಾನೆ.

"ಪರಚಿಂತೆ ನಮಗೇಕಯ್ಯ? ನಮ್ಮ ಚಿಂತೆ ನಮಗೆ ಸಾಲದೇ? ಕೂಡಲಸಂಗಯ್ಯ ಒಲಿದಾನೋ–ಒಲ್ಲನೋ–ಎಂಬ ಚಿಂತೆ ಹಾಸಲುಂಟು ಹೊದೆಯಲುಂಟು."

ಮನಸ್ಸಿನ ಉದ್ವೇಗವು ಬೆಂಕಿಯಂತೆ ಎಲ್ಲಿಗೋಡಿದರೂ ಅದು ತಣಿಯದು. ಹೋದಲ್ಲೆಲ್ಲ ಕುದಿ; ನಿಂತಲ್ಲೆಲ್ಲ ತಳಮಳ; ಅನಿಸುವಂಥವನಿಗೆ ಸ್ವೋದ್ಧಾರವೇ ಮೊದಲ ಕೆಲಸವಾಗಿ ಬಿಡುವದು. ಯಾಕೆಂದರೆ—

"ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ, ಧರೆ ಹತ್ತಿ ಉರಿದಡೆ ನಿಲಬಹುದೇ? ಏರಿ ನೀರುಂಬಡೆ, ಬೇಲಿ ಕೆಯಿ ಮೇವಡೆ, ನಾರಿ ತನ್ನ ಮನೆಯಲ್ಲಿ ಕಳುವಡೆ, ತಾಯ ಮೊಲೆವಾಲು ನಂಜಾಗಿ ಕೊಲುವಡೆ ಇನ್ನಾರಿಗೆ ದೂರುವೆ?"

ಎನಗಾಗಿ ಮತ್ತೊಂದು ತರುಮರಾದಿಗಳಿಲ್ಲವೇ?— ನನ್ನಂಥವ ನನ್ನು ಏಕೆ ಹುಟ್ಟಿಸಿದೆ? ಎಂದು ಗೋಳಿಟ್ಟರೂ ಪರುಷ ಮುಟ್ಟಿದ ಬಳಿಕ ಲೋಹವೇ? 'ನೆರೆ ನಂಬಿದನಾದಡೆ ಕಡೆಗೆ ತನ್ನಂತೆ ಮಾಡುವನೆಂ'ಬ ನಂಬಿಗೆಯುಳ್ಳವನು "ವೀರನಾದರೆ ವೈರಿಗಳು ಮೆಚ್ಚಬೇಕು; ವ್ರತಿಯಾದರೆ ಅಂಗನೆಯರು ಮೆಚ್ಚಬೇಕು." ಸ್ವೋದ್ಧಾರಕ್ಕೆ ನಡುಗಟ್ಟಿದವನ ನುಡಿ ಮುತ್ತಿನ ಹಾರ; ಅದು ಸ್ಫಟಿಕದ ಶಲಾಕೆ; ಅದರಲ್ಲಿ ಮಾಣಿಕ್ಯದ ದೀಪ್ತಿ; ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು.

## ಜೀವಿತದಲ್ಲಿ ಮರಣ.

ಸ್ವೋದ್ಧಾರದಿಂದ ಮೊದಲಿನ ಮನಸ್ಸು ಮಾಯವಾಗುತ್ತದೆ; ಪ್ರಾಣವು ಕಾಣದಾಗುತ್ತದೆ; ಶರೀರದ ರೂಪೂ ಬದಲಿಸುತ್ತದೆ. ಬಸ

ವಣ್ಣನು ಬಾಗೇವಾಡಿಯಿಂದ ಕಪ್ಪಡಿಗೆ ಹೊರಡುವ ನಿಶ್ಚಯವಾದಾಗಲೇ ಮೊದಲನೇ ಬದಲಾವಣೆ ಆಯಿತು; ಕಪ್ಪಡಿಯಿಂದ ಕಲ್ಯಾಣಕ್ಕೆ ಹೋದ ಮೇಲೆ ಇನ್ನೊಮ್ಮೆ; ಅಲ್ಲಿ ಧರ್ಮೋದ್ಧಾರಣ— ರಾಜಕಾರಣಗಳ ಘರ್ಷಣದಿಂದ ಮಗುದೊಮ್ಮೆ ಬದಲಾವಣೆ ಆಯಿತೆನ್ನಬಹುದು. ಈ ಮೂರು ಬದಲಾವಣೆಗಳು ಮೂರು ಮರಣಗಳೇ ಸರಿ. ಅವಕ್ಕೆ ಜೀವಿತದಲ್ಲಿ ಮರಣವೆನ್ನಬೇಕು. ಈ ಮರಣವೊಂದೊಂದರಿಂದ ಮೊದಲಿನ ಮನಪ್ರಾಣಶರೀರಗಳ ಅಡ್ಡಗುಣಗಳು ತುಸುತುಸು ಹಾದಿಗೆ ಬರುತ್ತ ಹೋಗುತ್ತವೆ. ಅದರಿಂದ ಆತ್ಮನ ಯಾವುದೇ ಒಂದು ಮುಸುಕು ಹರಿದಂತಾಗುತ್ತದೆ. ಜೀವನ ನಿರ್ಮಾಪಕನಾದವನು, ದಿನವು ಸಂಕ್ಷಿಪ್ತಾಯುಷ್ಯವೆಂದೂ, ನಿದ್ದೆಯು ದೈನಿಕ ಮರಣವೆಂದೂ ಭಾವಿಸಿ ತನ್ನ ಜೀವನವನ್ನು ಸೂಕ್ಷ್ಮಾತಿಸೂಕ್ಷ್ಮವಾಗಿ ನಿರ್ಮಿಸುತ್ತಲೇ ಇರುತ್ತಾನೆ. ಬಸವಣ್ಣನೂ ಒಬ್ಬ ಮಹಾ ಜೀವನನಿರ್ಮಾಪಕನು; ಆತನಿಗೆ ತನ್ನ ಕಲೆಯಲ್ಲಿ ಶ್ರದ್ಧೆ ಬಹಳ. ಕರಣೋಪಕರಣಗಳನ್ನು ಬಳಸುವುದರಲ್ಲಿ ಅವನಿಗೆ ಎಚ್ಚರಿಕೆ ಹೆಚ್ಚು. ಸಂಗನ ನೆರವಿನಿಂದ ಅದಕ್ಕೆ ವೇಗವೂ ಮಿಗಿಲು. ತಪ್ಪು ಹುಡುಕುವುದರಲ್ಲಂತೂ ಅವನವು ಕಾಗೆಯ ಕಣ್ಣು. ಅಂತೆಯೇ—

"ಎನ್ನ ಮನದಲೊಂದು, ಹೃದಯದಲೊಂದು, ವಚನದಲೊಂದು ನೋಡಾ! ಕೂಡಲಸಂಗಮದೇವಾ, ಆನು ಭಕ್ತನೆಂಬ ಹುಸಿಯ ಮಸಕವನೇನು ಬಣ್ಣಿಸುವೆನಯ್ಯ" ಎಂದಿದ್ದಾನೆ. ತಾಯ್ತಂದೆಗಳನ್ನೂ ಬಾಗೇವಾಡಿಯನ್ನೂ ಅಗಲಿ ಬಂದಾಗ ಆತನು ಪರದೇಶಿ, ದಿಕ್ಕುಗೇಡಿ. ಅವನ ಪಾಲಿಗೆ ತಾಯ್ತಂದೆ-ಬಂಧುಬಳಗವೆಲ್ಲ ಸತ್ತಹಾಗೆ; ಇತ್ತ ಸಂಗನ ಸ್ಪರ್ಶವೂ ಇನ್ನೂ ಆಗಿಲ್ಲ. ಆಗ ಆತನಿಗೆ ತನ್ನವರಾರೂ ಇಲ್ಲದ ಒಂಟಿಗನಂತೆ ಅನಿಸಿತೋ ಇಲ್ಲವೋ ತಿಳಿಯದು. ಆದರೆ ಜನರಿಗೆ ಮಾತ್ರ ಹಾಗೆ ಅನಿಸಿತ್ತು. ಇಷ್ಟೇ ಅಲ್ಲ, ಜನರು ಹಾಗೆ ಆಡಿಕೊಳ್ಳುತ್ತಿರಲೂ ಬಹುದು. ಆ ಮಾತು ಬಸವಣ್ಣನ ಕಿವಿಗೆ ಬಿದ್ದ ಸಂದರ್ಭದಲ್ಲಿ ಆಡಿದ ಮಾತು—

"ಎನಗಾರು ಇಲ್ಲವೆಂಬರು; ಎನಗಾರು ಇಲ್ಲವೆಂಬರು. ಬಾಣನವ ನಾನು, ಮಯೂರನವ ನಾನು. ಕಾಳಿದಾಸನವ ನಾನು. ಕಕ್ಕಯ್ಯ ಹಿರಿಯಯ್ಯ. ಚಿಕ್ಕಯ್ಯ ಚೆನ್ನಯ್ಯ ಎತ್ತಿ ಮುದ್ದಾಡಿಸಿದರೆನ್ನ."

ಇಂಥವರು ಜಗತ್ತಿನ ದುಃಖಸಂಕಟಗಳನ್ನು ನಗೆಮುಖದಿಂದ ಬರಮಾಡಿಕೊಳ್ಳುವರಲ್ಲದೆ, ಆ ಪ್ರಸಂಗವು ಆತ್ಮಕಲ್ಯಾಣಕ್ಕಾಗಿಯೇ ಪ್ರಾಪ್ತವಾದುದೆಂದು ಭಾವಿಸುವರು. "ಎಡದ ಕೆಯ್ಯಲು ಹಾಲು ಬಟ್ಟಲು, ಬಲದ ಕೆಯ್ಯಲು ಓಜುಗಟ್ಟಿಗೆ, ಆವಾಗ ಬಂದಾನೆಮ್ಮಯ್ಯ ಹಾಲ ಕುಡಿಸುವ ತಂದೆ." ಎನ್ನುವಲ್ಲಿ, ಬಸವಣ್ಣನು, ಬಡಿದರೂ ಬಡಿಯಲಿ, ಹಾಲು ಕುಡಿವೆನಲ್ಲಾ ಎಂಬ ಸಮಾಧಾನದ ಮನಸ್ಸಿನವನಾಗಿದ್ದನು. "ಹಾಳುಗೆಟ್ಟೋಡುವ ಆಳಲ್ಲ; ಅಂಜಿದಡೆ ಅಳುಕಿದಡೆ ಲಲಾಟ ಲಿಖಿತ ತಪ್ಪದು; ಬಪ್ಪುದು ತಪ್ಪದು. ಆಯುಷ್ಯ ತೀರಿದಲ್ಲದೆ ಮರಣವಿಲ್ಲ. ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ." ಇಂಥ ಕೆಚ್ಚು ಮನದಲ್ಲಿ ಮೂಡಬೇಕಾದರೆ ಆತನು--"ಧೃತಿಗೆಟ್ಟು ಅನ್ಯರ ಬೇಡದಂತೆ, ಮತಿಗೆಟ್ಟು ಪರರ ಹೊಗಳದಂತೆ ಪ್ರತಿಪಾಲಿಸು ಕೂಡಲಸಂಗಮದೇವಾ" ಎಂದು ಕೇಳಿ ಪಡಕೊಂಡಿದ್ದಾನೆ.

"ಅರ್ಥವನರ್ಥವ ಮಾಡಿ ಕೋಳಾಹಳಂಗೆಯ್ಯುತ್ತಿರಲಿ; ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿಯುತ್ತಿರಲಿ; ಮುಟ್ಟಿದ ಸ್ತ್ರೀಯ ಕಣ್ಣ ಮುಂದೆ ಅಭಿಮಾನಂಗೊಂಡು...ತ್ತಿರಲಿ; ಇಂತೀ ತ್ರಿವಿಧವು ಹೊರಗಣವು. ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡವ ಕೊಯ್ಯಲಿ; ಇಕ್ಕುವ ಶೂಲ ಪ್ರಾಪ್ತಿಸಲಿ, ಹಾಕೊಂದೆಸೆ ಹನ್ನೊಂದೆಸೆಯಾಗಿ ಮಾಡುತ್ತಿರಲಿ, ಮತ್ತೆಯೂ ಲಿಂಗಾರಾಧನೆ ಮಾಡುವೆ" ಎಂಬ ಮನೋನಿಶ್ಚಯವನ್ನೂ ಮಾಡಿದ್ದಾನೆ. ಆವನಲ್ಲಿ ಪ್ರಸಂಗವನ್ನು ಎದುರಿಸುವ ಎದೆಗಾರಿಕೆ ಇತ್ತಲ್ಲದೆ, ಪ್ರಸಂಗವೇ ಬರದಿರಲೆಂದು ಕೈತಿಕ್ಕುವ ಅಳಿಮನವು ಅವನದಲ್ಲ. ಪ್ರಸಂಗಗಳೆಲ್ಲ ದೇವನು ಹೂಡಿದ ಬಲೆಯೆಂದೂ, ಜೀವನೋದ್ಧಾರದ ದೃಷ್ಟಿಯಿಂದ ಅವಕ್ಕೆ ಬಹಳ ಬೆಲೆಯೆಂದೂ ಅವನಿಗೆ ತಿಳಿದಿತ್ತು.

"ತನುವನಲ್ಲಾಡಿಸಿ ನೋಡುವೆ ನೀನು, ಮನವನಲ್ಲಾಡಿಸಿ ನೋಡುವೆ ನೀನು, ಧನವನಲ್ಲಾಡಿಸಿ ನೋಡುವೆ ನೀನು; ಇವಕ್ಕೆಲ್ಲಕಂಜದಿದ್ದರೆ ಭಕ್ತಿಕಂಪಿತ ನಮ್ಮ ಕೂಡಲಸಂಗಮದೇವ."

ಅಲ್ಲಾಡಿಸಿ ನೋಡಿದಷ್ಟಕ್ಕೆ ತೀರಲಿಲ್ಲ. ದೇವದೇವನು ಅರೆದು ನೋಡುವನು; ಒರೆದು ನೋಡುವನು. "ಅರೆದರೆ ಸಣ್ಣನಾಗಿ ಒರೆದರೆ ಬಣ್ಣವಾದರೆ ಒಲಿದು ಸಲಹುವನೆಂ"ಬ ಶ್ರದ್ಧೆ ತುಂಬ ಇತ್ತು.

ಆದ್ದರಿಂದಲೇ "ನಾಳೆ ಬಪ್ಪುದು ನಮಗಿಂದೇ ಬರಲೆಂ"ದೂ, "ಇಂದು ಬಪ್ಪುದು ಈಗಲೇ ಬರಲೆಂ"ದೂ ಅವಸರ ಪಡುತ್ತಿದ್ದನು. "ಎಲುದೋರಿದರೆ, ನರ ಹರಿದರೆ, ಕರುಳು ಕುಪ್ಪಳಿಸಿದರೆ ನಾ ಧೃತಿಗೆಡೆನಯ್ಯ" ಎಂದು ಧೈರ್ಯತಾಳುತ್ತಿದ್ದನು. ಆತನು ಇಂಥ ಸಮಯಗಳಲ್ಲಿ ಪ್ರಾರ್ಥಿಸುತ್ತಿದ್ದುದೇನಂದರೆ—

"ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ; ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ. ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಣೆಯಾಣಿಯ ಮಾಡಿ, ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹು ಕೂಡಲಸಂಗಮದೇವಾ."

ಬಸವಣ್ಣನು ಮರಣಕ್ಕಂಜಲಿಲ್ಲ; ಅಂಜಲಿಲ್ಲವೆಂದರೆ ಬೇಕೆಂದು ಆತ್ಮಹತ್ಯಕ್ಕೆ ನಿಲ್ಲಲಿಲ್ಲ; ಮರಣವು ಸಾರ್ಥಕವಾಗುವಂತಿದ್ದರೆ ಇಂದೇ ಸೈಯೆಂದೆನ್ನುವಂಥವನು. ಅವನ ಪಾಲಿಗೆ "ಕಂಗಳು ತಪ್ಪಿ ನೋಡಿದರೆ ಮಾರಿ; ನಾಲಿಗೆ ತಪ್ಪಿ ನುಡಿದರೆ ಮಾರಿ; ನಮ್ಮ ಕೂಡಲಸಂಗಯ್ಯನ ನೆನಹು ಮರೆದರೆ ಮಾರಿ" ಆಗಿತ್ತು. ಅಂಥ ಮರಣವು ಅವನಿಗೆ ಎಂದೂ ಬೇಡ. ಆತನ ಮನಸ್ಸು ಸಂಗಯ್ಯನನ್ನು ನೆನೆದು ಕರಗಿತು. ಪ್ರಾಣವು ಆತನನ್ನು ಪ್ರೇಮಿಸಿ ಬೇರ್ಪಟ್ಟಿತು; ಶರೀರವು ಪೂಜಿಸಿ ತೇಜವಡೆಯಿತು. ಕರಗಿದ ಮನವೂ, ಬೇರ್ಪಟ್ಟ ಪ್ರಾಣವೂ, ತೇಜವಡೆದ ಶರೀರವೂ ಎಲ್ಲಿಂದಲೋ ಜಿಗಿದು ಬಂದುವಲ್ಲ; ರೂಪಾಂತರ ಹೊಂದಿದವು; ಕಳೆಗೊಂಡವು; ಅಂದರೆ ಮೊದಲಿನವು ಹಾಳಾದವು. ಈ ಮಾತನ್ನು ಬಸವಣ್ಣನು ತಾನೇ ಹೇಳಿದ್ದು ಹೇಗೆಂದರೆ—

"ಅಯ್ಯ! ನಿಮ್ಮ ಅನುಭಾವದಿಂದ ಎನ್ನ ತನುವು ಹಾಳಾಯಿತ್ತಯ್ಯ! ಅಯ್ಯ! ನಿಮ್ಮ ಅನುಭಾವದಿಂದ ಎನ್ನ ಮನವು ಹಾಳಾಯಿತ್ತಯ್ಯ! ನಿಮ್ಮ ಅನುಭಾವದಿಂದ ಎನ್ನ ಕರ್ಮ ಛೇದನವಾಯಿತ್ತಯ್ಯ."

ಇದೇ ಜೀವಿತ ಮರಣ! ಇಂಥ ಮರಣ ಯಾರಿಗೆ ಬೇಡ? ಎಲ್ಲರಿಗೂ ಬೇಕು. ಆದರೆ ಸಾಯಲು ಯಾರಿಗೆ ಧೈರ್ಯ?

## ಮನೆ-ಮನೆವಾರ್ತೆ

ಆತ್ಮನ ಮೇಲಿನ ಅಶುದ್ಧ ಕವಚಗಳು ಜೀವಿತಮರಣದಿಂದ ಕಳಚಿ ಕಳಚಿ ಹೋದಂತೆ, ವ್ಯಕ್ತಿಯು ದೇವದೇವನಿಗೊಪ್ಪುವ ವಸ್ತುವಾ

ಗುತ್ತ ಬರುತ್ತದೆ; ಆ ವ್ಯಕ್ತಿಯು ದಿವ್ಯಸಂತಾನವಾಗುತ್ತ ಬಂದಂತೆ ಆತನ ಒಡವೆ-ವಸ್ತುಗಳಲ್ಲಿ ಸೌಂದರ್ಯವೂ, ಆತನ ಕೃತಿಗಳಲ್ಲಿ ಅಚ್ಚು ಕಟ್ಟುತನವೂ ಉಂಟಾಗುತ್ತವೆ; ಮನೆಯು ಮುರುಕಗುಡಿಸಲಿದ್ದರೂ ಪಾವಿತ್ರ್ಯದಿಂದ ಭವ್ಯಮಂದಿರವಾಗುತ್ತದೆ. "ಮನೆ ನೋಡಾ ಬಡವರದು; ಮನ ನೋಡಾ ದಿವ್ಯ" ಎನ್ನುವಂತೆ ಹಿರಿಯ ಮನಸ್ಸು ಅದರ ಹಿಂದಿರುತ್ತದೆ. ನುಡಿ, ನಡೆ, ನಡಿಗೆ, ಉಡಿಗೆ, ತೊಡಿಗೆ, ನಿದ್ರೆ ಇವೆಲ್ಲವೂ ದೇವನಿಗೆ ಪ್ರಿಯವಾಗುವಂತೆ, ದೇವಪುತ್ರನಿಗೊಪ್ಪುವಂತೆ ಕಂಗೊಳಿಸುತ್ತವೆ. ಅಂಥವರ ಪಾಲಿಗೆ "ದೇವಲೋಕ ಮರ್ತ್ಯಲೋಕವೆಂಬುದು ಬೇರೆ ಮತ್ತುಂಟೇ?" ಶಿವಾಚಾರವೇ ಶಿವಲೋಕ; ಶಿವಭಕ್ತನಿದ್ದಠಾವೇ ದೇವ-ಲೋಕ; ಭಕ್ತನಂಗಣವೇ ವಾರಣಾಸಿ; ಕಾಯವೇ ಕೈಲಾಸ" ಆಗದೆ ಮತ್ತೇನು? ಆತನಲ್ಲಿ ಮನೆಮಾಡಿದ ಶುದ್ಧ ಪಾವಿತ್ರ್ಯವನ್ನು ನೋಡಿಯೇ ಈಶ್ವರನು ಅಲ್ಲಿ ಬೀಡುಬಿಟ್ಟಿರುತ್ತಾನೆ.

"ಮನೆಯೊಳಗೆ ಮನೆಯೊಡೆಯನಿದ್ದಾನೋ- ಇಲ್ಲವೋ? ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ, ಮನೆಯೊಳಗೆ ಮನೆಯೊಡೆಯನಿದ್ದಾನೋ-ಇಲ್ಲವೋ? ತನುವಿನಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ ಮನೆಯೊಳಗೆ ಮನೆಯೊಡೆಯನಿಲ್ಲ."

ಒಡೆಯನಿಲ್ಲದ ಮನೆಯನ್ನು ಮಾಡಿಕೊಳ್ಳದೆ, ದಿವ್ಯ ಮಂದಿರವನ್ನು ನಿರ್ಮಿಸಿಕೊಂಡ ಬಸವಣ್ಣನು, ಶಿವನ ಹೆಸರುಗೊಳ್ಳುತ್ತ ಶರಣರು ಬರುವ ದಾರಿಯನ್ನೇ ಕಾಯುವನು. ಹೇಗೆಂದರೆ--

"ಗಿಳಿಯ ಹಂಜರವಿಕ್ಕಿ, ಸೊಡರಿಂಗೆಣ್ಣೆಯನೆರೆದು, ಬತ್ತಿಯನಿಕ್ಕಿ ಬರವ ಹಾರುತ್ತಿರ್ದೆನೆಲಗವ್ವಾ! ತೆರೆಗೆಲೆ ಗಿರಕೆಂದಡೆ, ಹೊರಗನಾಲಿಸುವೆ. ಅಗಲಿದೆನೆಂದೆನ್ನ ಮನ ಧಿಗಿಲೆಂದಿತ್ತೆಲೆಗವ್ವ! ಕೂಡಲಸಂಗನ ಶರಣರು ಬಂದು ಬಾಗಿಲ ಮುಂದೆ ನಿಂದು ಶಿವಾ ಎಂದೊಡೆ ಸಂತೋಷಬಟ್ಟೆನೆಲೆಗವ್ವಾ!"

ಮನದೊಡೆಯನು ಶಿವನಾದರೆ, ಮನೆಯೊಡೆಯರು ಶರಣರು. 'ಅನ್ಯವಧುವೆಂಬುದು ದೇವನ ರಾಣಿವಾಸ'ವೆಂಬ ದಿವ್ಯವನ್ನು ಸ್ವೀಕರಿಸಿದ ಬಸವಣ್ಣನಿಗೆ ಪರಧನವನೊಲ್ಲೆನೆಂಬ ಛಲ, ಪರಸತಿಯನೊಲ್ಲೆನೆಂಬ ಛಲ ಇದ್ದವು. ಶುದ್ಧ ಕಾಯಕಕ್ಕೆ ದೇವನಿತ್ತಷ್ಟೇ ಧನವು ಪ್ರಸಾದವೆಂದು

ಅದನ್ನು ದಾಸೋಹಕ್ಕೆ ವಿನಿಯೋಗಿಸುವನು; ಶುದ್ಧಭಕ್ತಿಯನ್ನು ನೀಡೆಂದು ಸಮರ್ಪಿಸಿದ ಮನವು ಎಂತು ಕುಣಿದರೂ ಅದನ್ನು ಅಲಕ್ಷಿಸುವನು. ಕಾಯಕವೇ ಕೈಲಾಸವೆನ್ನುವುದರಿಂದ ತನುವಿನ ರಕ್ಷಣೆಯು ಅನ್ವರ್ಥ ವೆನ್ನುವನು. ಹೀಗೆ ತ್ರಿಕರಣಗಳನ್ನೂ ದೇವನಿಗೆ ನೀಡಿ, ನಿಶ್ಚಿಂತನಾದ ಬಸವಣ್ಣನು ಇಂತು ಆಡಿಕೊಂಡಿದ್ದರೆ ಆಶ್ಚರ್ಯವೇನು ?

"ನೀನಿರಿಸಿದ ಮನದಲ್ಲಿ ನಾನಂಜೆನಯ್ಯ ; ಮನವು ಮಹಾಘನಕ್ಕೆ ಶರಣುವೊಕ್ಕುದಾಗಿ. ನೀನಿರಿಸಿದ ಧನದಲ್ಲಿ ನಾನಂಜೆನಯ್ಯ; ಧನವು ಸತಿಸುತಮಾತಾಪಿತರಿಗೆ ಹೋಗದಾಗಿ. ನೀನಿರಿಸಿದ ತನುವಿನಲ್ಲಿ ನಾನಂಜೆ ನಯ್ಯ; ತನುವು ಸರ್ವಾರ್ಪಿತದಲ್ಲಿ ನಿಯತಪ್ರಸಾದಭೋಗಿಯಾಗಿ. ಇದುಕಾರಣ; ವೀರಧೀರಸಮಗ್ರನಾಗಿ ನಿಮಗಾನಂಜೆ ಕೂಡಲಸಂಗಮ ದೇವ."

ಮನೆ–ಮನೆವಾರ್ತೆಗಳಾದ ಮೇಲೆ ಮನೆಯವಳ ಮಾತು. "ಪತಿಯ ನಿಂದಿಸುತಿರ್ಪ ಸತಿಯಿದ್ದು ಫಲವೇನು?"–"ಪತಿಯೇ ಪರದೈವವೆ ನ್ನುವ ಸತಿ" "ನಂಬಿದ ಹೆಂಡತಿಗೆ ಗಂಡನೊಬ್ಬ ಕಾಣಿರೋ." "ಬೆಚ್ಚನ್ನ ಮನೆ, ವೆಚ್ಚಕ್ಕೆ ಹೊನ್ನು, ಇಚ್ಛೆಯ ಹೆಂಡತಿ ಇದ್ದರೆ ಸ್ವರ್ಗಕ್ಕೆ ಕಿಚ್ಚು ಹಾಕು" ಈ ಮೊದಲಾದ ವ್ಯವಹಾರ ಸತ್ಯಗಳನ್ನು ದಾಟಿ, "ಪ್ರೇಮ ವನ್ನು ವಿಕಾಸಗೊಳಿಸುವ ಮದುವೆಯ ಉದ್ದೇಶ," "ತನ್ನಂತೆ ಪರ ರನ್ನು ನೋಡ ಕಲಿಸುವ ಮಕ್ಕಳ" ಗುಟ್ಟು ಇಂಥ ವಿಶಾಲ ಪ್ರಪಂ ಚವನ್ನೂ ಮಿಕ್ಕಿ ಶರಣರು–"ಎರಡು ಕಣ್ಣು ಒಂದಾಗಿ ನೋಡುವ" ರಹಸ್ಯವನ್ನು ಲಕ್ಷಿಸಿ ಹೆಂಡತಿಯ ಸಂಬಂಧವನ್ನು ಸಾರಿದ್ದಾರೆ. "ದೇವ ನಲ್ಲಿ ನಿಜವಾದ ಭಕ್ತಿಯಿದ್ದರೆ ಹೆಂಡತಿ ಮಕ್ಕಳೆಲ್ಲ ತಾವಾಗಿಯೇ ನಿಮ್ಮ ದಾರಿಗೆ ಬರುವರೆಂ"ಬ ರಾಮಕೃಷ್ಣರ ಅತುಲವಾಣಿಯ ಸ್ವಾರ್ಥಕತೆ ಯನ್ನು ಬಸವಣ್ಣನ ಬಾಳಿನಲ್ಲಿ ಕಾಣಬಹುದು. ಕಾಯ ಕೈಲಾಸ; ಕಾಯಕ ಕೈಲಾಸ; ಮನವು ಮಂದಿರ, ಮನೆಯು ದಿವ್ಯ; ಸತಿಯು ಘನ; ಮಕ್ಕಳು ಆತ್ಮಪ್ರತಿಬಿಂಬ ಇವುಳ್ಳ ಬಸವಣ್ಣನೊಬ್ಬನಿಗೆ ಶಾಪ ಗ್ರಸ್ತನಂದಿಯೇಕೆನ್ನಬೇಕು? ಶಿವನ ಸಭೆಯೇ ಶಾಪಗ್ರಸ್ತವಾಗಿ ಭೂಮಿ ಗಿಳಿದಿದೆಯೆಂದರೆ ಸರಿಹೋಗುವದಿಲ್ಲವೇ?

## ಭವ್ಯಜನ್ಮ

ಜೀವಿತದಲ್ಲಿ ಮರಣವೆಂದರೇನೆಂಬುದು ತಿಳಿದಮೇಲೆ, ಅಲ್ಲೀ ಅದರೊಡನೆಯೇ ಭವ್ಯಜನ್ಮವೂ ಒಂದು ಸಪ್ಪಳಿಲ್ಲದೆ ವೈದಾಳುತ್ತದೆ. ಜೀವಿತಮರಣಗಳ ಸಂಖ್ಯೆ ಹೆಚ್ಚಾದಂತೆ ಭವ್ಯಜನ್ಮದ ಭವ್ಯತೆಯು ಮತ್ತಿಷ್ಟು ಒಡೆದು ಕಾಣಿಸುತ್ತದೆ,: ಭವ್ಯಜನ್ಮವಾದವನಿಗೆ ಬದುಕು ಬೇಸರವಲ್ಲ; ಸಾವು ಭಯಂಕರವಲ್ಲ; ಜೀವನ ಕಲಹವು ಜಂಜಡವಲ್ಲ; ರೋಗ–ರುಜಿನಗಳು ಸಾರಣೆ-ಕಾರಣೆ ಇದ್ದ ಹಾಗೆ. ಇದೇ ಲೋಕವಿರೋಧವೆಂಬುದು. "ಸಂಗಮದೇವರರಿವು ಅನುಪಮವಾಗಲೊಡನೆ ಬೆವಹಾರದೊಳಗಿರಲೀಯುದಯ್ಯ." ಅವರು ನಿಶ್ಶಂಕಿತರು. "ಶಂಕಿತರಾದದರು ಹುತ್ತದ ಮೇಲಣ ರಜ್ಜು ಮುಟ್ಟಿದರೆ ಸಾವರು; ಆದರೆ ನಿಶ್ಶಂಕಿತರು ಸರ್ಪದಷ್ಟವಾದರೆಯೂ ಸಾಯರು." ಇದೆಲ್ಲಕ್ಕೂ ಕಾರಣವು ಆ ದಿವ್ಯಸ್ಪರ್ಶ; ಪರುಷದ ಸ್ಪರ್ಶ; ಪರುಷದ ಸ್ಪರ್ಶದಿಂದ ಸೊನೆಗಾರನ ಕೆಯ್ಯ ಕತ್ತಿಯೂ ಹೊನ್ನಾಗದೇ? ಭವ್ಯಜೀವನದಲ್ಲಿ ಕಾಲಿಟ್ಟಮೇಲೆ ಬಸವಣ್ಣನು "ಸೂಳೆಗೆ ಹುಟ್ಟಿದ ಕೂಸಿನಂತೆ ಆರನಾದಡೆಯೂ ಅಯ್ಯ ಅಯ್ಯ ಅನ್ನಲಾರೆನೆಂದೂ, ತಾನು ಕೂಡಲಸಂಗನ ಮಹಾಮನೆಯಲ್ಲಿ ಧರ್ಮದ ಸಂತಾನ ಭಂಡಾರಿಬಸವಣ್ಣನೆಂದೂ ಹೇಳಿಕೊಳ್ಳತೊಡಗುತ್ತಾನೆ. "ವೇದಕ್ಕೆ ಒರೆಕಟ್ಟುವ ಕೆಚ್ಚು, ಶಾಸ್ತ್ರಕ್ಕೆ ನಿಗಳವನಿಕ್ಕುವ ಉಕ್ಕು, ತರ್ಕದ ಬೆನ್ನಬಾರನೆತ್ತುವ ಸತ್ತ್ವ, ಆಗಮದ ಮೂಗುಕೊಯ್ಯುವ ಪೆಡಸು" ಬರುವುದು ಅಂಥವನಲ್ಲಿ. ಆತನಿರವೇ ಅವಿಮುಕ್ತಕ್ಷೇತ್ರ. ಯಾಕಂದರೆ, ಕೂಡಲಸಂಗನ ರಾಜತೇಜದಲ್ಲಿಪ್ಪನಾಗಿ. ನಿಷ್ಠುರವಾದ ಸೃಷ್ಟಿಯು ನಿರಂತರ ಕರ್ಮಗಳನ್ನೆಸಗುತ್ತಿರುವಂತೆ, ನ್ಯಾಯನಿಷ್ಠುರವಾದ ವ್ಯಷ್ಟಿಯು ಭವ್ಯಜನ್ಮವನ್ನು ಧಾರಣಮಾಡಿ ಮಹಾಕರ್ಮಗಳನ್ನು ಕೈಕೊಂಡರೆ ಆಶ್ಚರ್ಯವೇನು ?

# ನಿರ್ಲಜ್ಜಶಾಂತಯ್ಯ.

ನಿರ್ಲಜ್ಜಶಾಂತಯ್ಯನು ತನ್ನ ಪೂರ್ವಾಶ್ರಯದಲ್ಲಿ ಭಕ್ತಾಚಾರದಲ್ಲಿದ್ದು ಮುಂದೆ ಜಂಗಮಸ್ಥಲವನ್ನು ಹೊಂದಿ ಅದರಂತೆ ಆಚರಿಸುವವನಾಗಿದ್ದನು. ಆದರೆ ಅವನು ಬಲು ಬಡವನು. ತಿನ್ನಲಿಕ್ಕೆ ಅನ್ನವಿಲ್ಲ, ಹೊದೆಯಲಿಕ್ಕೆ ಬಟ್ಟೆ ಇಲ್ಲ. ಆದರೂ ಅವನು ಯಾರನ್ನೂ ತಲೆವಾಗಿ ಬೇಡನು. ಹೀಗಿರಲು ಅವನ ತಂದೆಯು ತೀರಲಾಗಿ ದೇಶಾಂತರಕ್ಕೆ ಹೊರಟನು. ಅವನು ಎಲ್ಲಿ ಹೋದರೂ ಯಾರಿಗೂ ಕಾಡನು, ಬೇಡನು. ಭಕ್ತರು ಕರೆದರೆ ಅವರಲ್ಲಿ ಭೋಜನಕ್ಕೆ ಹೋಗುವನು. ಕರೆಯದಿದ್ದರೆ ಉಪವಾಸವಿರುವನು. ಅವನ ಈ ವೃತ್ತಿಯನ್ನು ಭಕ್ತರು ನೋಡಿ ಅವನನ್ನು ಯಾವಾಗಲೂ ತಮ್ಮಲ್ಲಿ ಭೋಜನಕ್ಕೋಸ್ಕರ ಕರೆಯುವರು.

ಹೀಗಿರುವಲ್ಲಿ ಅವನು 'ಕೊರದಾರ' ಎಂಬ ಪುರದಲ್ಲಿ ಇರುತ್ತಿರಲು, ಅಲ್ಲಿ ಒಬ್ಬ ಜಂಗಮನು ಕೋರಾನ್ನವನ್ನು ತಂದು ಜಂಗಮದಾಸೋಹವನ್ನು ನಡಿಸುತ್ತಿದ್ದನು. ಅವನು ಶಾಂತಯ್ಯನ ನಿರಿಚ್ಛಾವೃತ್ತಿಯನ್ನು ನೋಡಿ ಸಂತೋಷಪಟ್ಟು ಅವನನ್ನು ತನ್ನ ದಾಸೋಹಮಠಕ್ಕೆ ಅಧಿಕಾರಿಯನ್ನಾಗಿ ಮಾಡಬೇಕೆಂದು ಬಯಸಿದನು.

ಆಗ ಅವನು ಶಾಂತಯ್ಯನನ್ನು ತನ್ನ ಮಠಕ್ಕೆ ಕರೆದುಕೊಂಡು ಬಂದು, ಅವನಿಗೆ— ನೀನು ನನ್ನ ಮಗಳನ್ನು ಮದುವೆಯಾದರೆ ಈ ಮಠದೊಂದಿಗೆ ನನ್ನ ಭಾಗ್ಯವನ್ನೆಲ್ಲ ನಿನಗೆ ಕೊಡುವೆನು, ಎಂದು ಹೇಳಿ ಅವನನ್ನು ಲಗ್ನಕ್ಕೆ ಒಡಂಬಡಿಸಿದನು ಮತ್ತು ಲಗ್ನಕಾರ್ಯವನ್ನೂ ಮುಗಿಸಿದನು. ಲಗ್ನವು ಮುಗಿದ ಬಳಿಕ ಅವನು ಭಕ್ತರನ್ನೆಲ್ಲ ಮಠದಲ್ಲಿ ನೆರಿಸಿ ಅವರಿಗೆ— ನನ್ನ ಅಳಿಯನಿಗೆ ನಾನು ಮುನ್ನಾಡಿದಂತೆ ನನ್ನ ಭಾಗ್ಯವನ್ನೆಲ್ಲ ಕೊಡುವೆನು ಎಂದು ನುಡಿದು, ತನ್ನ ದಂಡಕೋಲು ಜೋಳಿಗೆಯನ್ನು ತಂದು ಅಳಿಯನ ಮುಂದಿಟ್ಟು ಅಡ್ಡಬಿದ್ದು ಇವುಗಳನ್ನು ನೀನು ಕೈಕೊಳ್ಳು ಎಂದು ಅವನಿಗೆ ನುಡಿದು ತನ್ನ ಬದುಕಿನ ವಿವರವನ್ನು ಹೇಳಿದನು. ಅದು ಏನೆಂದರೆ—

ಹೊರಸು ಒಂದು, ಹರಿವಾಣಗಳೆರಡು, ಜೋಳ ಒಂದು ಮಣವು, ಕಡಲೆ ಕಾಲುಮಣ, ಹರಿಕು ಚಾಪೆ ಒಂದು, ಅಳೆಯುವ ಬಳ್ಳ ಒಂದು, ಮೊರ ಒಂದು, ಗಡಿಗೆಗಳು ಮೂರು, ಹುಟ್ಟು ಒಂದು, ಹುಲ್ಲೊಂದು

ಹೊರೆ, ಕಟ್ಟಿಗೆ ಎರಡು ಮಣ, ಉಪ್ಪು ಐದು ಸೇರು, ಒಂದು ಕುಂಟು ಗೋವು, ಇವೇ ನನ್ನ ಭಾಗ್ಯ, ನಿನಗೆ ಸಲ್ಲಲಿ, ಎಂದು ಶಾಂತಯ್ಯನಿಗೆ ಹೇಳಿ ಶರಣು ಮಾಡಿದನು.

ಶಾಂತಯ್ಯನಾದರೂ ಈ ಭಾಗ್ಯವು ತನಗೆ ಗುರುನಿರೂಪದಿಂದ ಬಂದುದು, ಇದು ಗುರುಕೊಟ್ಟ ಕಾಯಕವು, ಎಂದು ಭಾವಿಸಿ ಎಷ್ಟು ಮಾತ್ರವೂ ಅಸಮಾಧಾನಪಡಲಿಲ್ಲ. ಶ್ರೀಮಂತಿಕೆಯು ಮತ್ತು ವೈಭವದ ಮಠವು ತನಗೆ ದೊರಕಲಿಲ್ಲವಲ್ಲಾ ಎಂದು ಅವನು ದುಃಖಿಸಲಿಲ್ಲ. ಇಲ್ಲವೆ ಅವನು ಲಗ್ನವಾಗುವ ಮೊದಲು ತನಗೆ ಇಂತಿಷ್ಟು ವರದಕ್ಷಿಣೆ ಬರ ಬೇಕೆಂದು ಯಾರ ಕೂಡವೂ ಮಾತನಾಡಿರಲಿಲ್ಲ. ಅವನು ಕೇವಲ ಶಿವಾನುಭವಿಯು, ನಿರಿಚ್ಛೆಯುಳ್ಳವನು. ಆದ್ದರಿಂದ ಹೆಚ್ಚಿನ ಭಾಗ್ಯವು ತನಗೆ ಬರಲಿಲ್ಲವೆಂದು ಅವನು ಎಷ್ಟು ಮಾತ್ರವೂ ವ್ಯಸನಪಡಲಿಲ್ಲ.

ಶಾಂತಯ್ಯನು ಈಪ್ರಕಾರ ಒಂದು ಮಠದ ಅಧಿಕಾರಿಯಾಗಿ ನಿತ್ಯವೂ ಕೋರಾನ್ನವನ್ನು ತಂದು ತನ್ನ ದಾಸೋಹ ಕಾರ್ಯಗಳಲ್ಲಿ ನಿರತನಾ ದನು. ಮಠಕ್ಕೆ ಬಂದವರಲ್ಲಿ ಶಿವಾನುಭವಗೋಷ್ಠಿಗಳನ್ನು ಹೇಳುವನು ಮತ್ತು ಅವರನ್ನು ಉಪಚರಿಸುವನು. ಅವನು ಅತ್ಯಂತ ಆಶಾರಹಿತನು. ಆದ್ದರಿಂದ ಅವನು ತನಗೆ ದಿನಾಲು ಸಾಕಾಗುವಷ್ಟೇ ಧಾನ್ಯ ತರುತ್ತಿದ್ದನೇ ಹೊರ್ತು ಹೆಚ್ಚಿಗೆ ಸಂಗ್ರಹಿಸಲು ಎಂದೂ ಬಯಸಲಿಲ್ಲ. ಹೀಗೆ ಅನೇಕ ವರ್ಷ ಅವನು ತನ್ನ ದಾಸೋಹಕಾರ್ಯವನ್ನು ನಡಿಸುತ್ತ ಬಂದನು.

ಶಿವನು ಅವನ ಶ್ರೇಷ್ಠವೃತ್ತಿಯನ್ನು ತಿಳಿದವನಾಗಿ ಅವನಿಗೆ ಮೆಚ್ಚಿ, ಅವನ ಗುಣಗಳು ಜನರಲ್ಲಿ ಹೆಚ್ಚಿಗೆ ಪ್ರಕಾಶಹೊಂದಬೇಕೆಂದು ಬಯಸಿ ಒಂದು ಉಪಾಯವನ್ನು ಯೋಚಿಸಿ ಜಂಗಮರೂಪ ಧಾರಣಮಾಡಿ ಶಾಂತಯ್ಯನಿದ್ದ ಗ್ರಾಮಕ್ಕೆ ಬಂದು ಅವನ ಮಠದ ಬಾಗಿಲಲ್ಲಿ ಬಂದು ನಿಂತನು.

ಆ ದಿವಸ ಉಗ್ರವಾದ ಚಳಿಯು ಬಿದ್ದಿತ್ತು. ಶಾಂತಯ್ಯನು ಕೋರಾ ನ್ನವನ್ನು ತರಲು ಹೊರಗೆ ಹೋಗಿದ್ದನು. ಒಳಗೆ ಅವನ ಹೆಂಡತಿ ಯೊಬ್ಬಳು ಮಾತ್ರ ಇದ್ದಳು. ಜಂಗಮನು ಅವಳನ್ನು ಹೊರಕ್ಕೆ ಕರೆದು ಅವಳಿಗೆ-- ನನ್ನ ಸೀತಕ್ಕೆ ವಸನ ಬೇಕಾಗಿದೆ. ಚಳಿಯಿಂದ ನಡಗುತ್ತಿ ದ್ದೇನೆ. ಒಂದನ್ನು ಕೊಡು ಎಂದು ಕೇಳಿದನು. ಆದರೆ ಮಠದಲ್ಲಿ

ಆರಿವೆಯು ಚಿಂದಿಯು ಸಹ ಇರಲಿಲ್ಲ. ಅವಳು ಉಟ್ಟ ಸೀರೆ ಮತ್ತು ಶಾಂತಯ್ಯನು ಉಟ್ಟ ಧೋತ್ರ ಇವುಗಳ ಹೊರ್ತು ಯಾವ ವಸನವೂ ಅವರಲ್ಲಿರಲಿಲ್ಲ. ಆದರೆ ಸತಿಪತಿಗಳು ದಾಸೋಹ ನಡಿಸಲೇಬೇಕೆಂಬ ಕಾಯಕವನ್ನು ಇಟ್ಟುಕೊಂಡದ್ದರಿಂದ, ಆ ಸತಿಯು ತಾನು ಉಟ್ಟಿದ್ದ ಆರು ಮೊಳದ ಸೀರೆಯೊಳಗೆ ಅರ್ಧವನ್ನು ಹರಿದು ಆ ಜಂಗಮನ ಕಯ್ಯಲ್ಲಿ ಕೊಟ್ಟಳು. ಆದರೆ ಅವನು--ಇಷ್ಟು ನನಗೆ ಸಾಕಾಗುವದಿಲ್ಲೆಂದು ನುಡಿದನು. ಆಗ ಅವಳು ತನ್ನ ಮೈಮೇಲೆ ಉಳಿದ ಮೂರು ಮೊಳದ ಸೀರೆಯಲ್ಲಿ ಪುನಃ ಅರ್ಧವನ್ನು ಹರಿದು ಆ ಜಂಗಮನಿದಿರಿಗೆ ಇಟ್ಟಳು. ಆದರೂ ಅವನು ಇಷ್ಟು ಸಹ ತನಗೆ ಸಾಲದೆಂದು ಆದನ್ನೂ ತನಗೆ ಮೊದಲು ಕೊಟ್ಟ ಅರಿವೆಯ ತುಣುಕನ್ನೂ ಮನೆಯಲ್ಲಿಯೇ ಇಟ್ಟು ಬೀದಿಗೆ ಬಂದು ಹೊರಟು ಹೋಗಹತ್ತಿದನು.

ಆಗ ಆ ಸತಿಯು ಸೀಳಿದ ಬಟ್ಟೆಯ ಆ ಎರಡೂ ತುಣುಕುಗಳನ್ನು ಎಡದ ಕಯ್ಯಲ್ಲಿ ಹಿಡಿದುಕೊಂಡು ಮನೆಯ ಹೊರಗೆ ಬಂದು-- ಇವುಗಳನ್ನು ದಯವಿಟ್ಟು ತೆಗೆದುಕೊಳ್ಳಿ, ಎಂದೆನ್ನುತ್ತ ಆ ಜಂಗಮನ ಹಿಂದೆ ಚಳಿಯಲ್ಲಿ ಬರಹತ್ತಿದಳು. ಅದನ್ನು ನೋಡಿ ಪುರಜನರು ಅವಳ ದಾನಗುಣವನ್ನು ಕಂಡು ಬೆರಗಾದರು.

ಅಷ್ಟರಲ್ಲಿ ಶಾಂತಯ್ಯನು ಕೋರಾನ್ನವನ್ನು ತೆಗೆದುಕೊಂಡು ಮನೆಯ ಹಾದೀ ಹಿಡಿದು ಬರುತ್ತಿರಲು, ಅವನು ಇದಿರಿಗೆ ಬರುತ್ತಿರುವ ತನ್ನ ಸತಿಯನ್ನು ಕಂಡು, ಇದೇನೆಂದು ಅವಳಿಗೆ ಕೇಳಿದನು. ಅವಳು ನಡೆದ ಎಲ್ಲ ಸಂಗತಿಗಳನ್ನು ಅವನಿಗೆ ತಿಳಿಸಲು ಅವನು ಅವಳಿಗೆ-- ಹೌದು, ನೀನು ಕೊಟ್ಟ ಉಡಿಗೆಯು ಈ ಜಂಗಮನಿಗೆ ಸಾಲದು. ಆದ್ದರಿಂದ ನನ್ನುಡಿಗೆಯನ್ನೂ ಅವನಿಗೆ ಕೊಟ್ಟು ಅವನ ಸೀತದ ಬಾಧೆಯನ್ನು ದೂರ ಮಾಡುವೆನೆಂದು ತಾನುಟ್ಟ ಮೂರು ಮೊಳದ ಇಡೀ ಧೋತ್ರವನ್ನೇ ಕಳೆದು ಜಂಗಮನ ಕಯ್ಯಲ್ಲಿ ಕೊಟ್ಟು, ತಾನು ದಿಗಂಬರಿಯಾದನು! ಪುರಜನರು ಸತಿಪತಿಗಳೀರ್ವರ ಈ ಅಲೌಕಿಕ ನಿರಿಚ್ಛಾವೃತ್ತಿಯನ್ನು ಕಂಡು ಬೆರಗಾದರು. ಆಗ ಆ ಜಂಗಮನು ಅಲ್ಲಿಯೇ ಅಂತರ್ಧಾನನಾದನು. ಅಂದಿನಿಂದ ಶಾಂತಯ್ಯನು ದಿಗಂಬರಿಯಾಗಿಯೇ ಜನರಲ್ಲಿರಹತ್ತಿದನು.

ಈ ಕಾಲದಲ್ಲಿ ದೇಶದಲ್ಲಿ ಜೈನ ಸಂಸ್ಕೃತಿಯು ಇನ್ನೂ ಪ್ರಬಲ ವಾಗಿದ್ದರಿಂದ ಅನೇಕ ದಿಗಂಬರಿಗಳು ಜನರ ದೃಷ್ಟಿಗೆ ಬೀಳುತ್ತಿರಬೇಕು. ಆದ್ದರಿಂದ ಶಾಂತಯ್ಯನ ಈ ವೃತ್ತಿಯು ಜನರಿಗೆ ಅಷ್ಟು ವಿರೋಧವೆ ನಿಸಿರಲಿಕ್ಕಿಲ್ಲ. ಆದರೆ ಅವನು ಇದರಲ್ಲಿ ಲಜ್ಜೆಯನ್ನು ಬಿಡಬೇಕಾಗಿ ಬಂದದರಿಂದ ಜನರು ಅವನನ್ನು 'ನಿರ್ಲಜ್ಜ ಶಾಂತಯ್ಯ'ನೆಂಬ ಹೆಸ ರಿನಿಂದ ಕರೆಯುಹತ್ತಿದರು.

ನಿರ್ಲಜ್ಜ ಶಾಂತಯ್ಯನು ಶಿವಾನುಭವ ಶಾಸ್ತ್ರದಲ್ಲಿ ಪಾರಂಗತನು, ಅಲ್ಲದೆ ಅದರಂತೆ ಆಚರಿಸುವವನು. ಆದ್ದರಿಂದ ಅವನು ಬಸವಾದಿ ಪ್ರಮಥರಿದ್ದ ಕಲ್ಯಾಣ ಪಟ್ಟಣಕ್ಕೆ ಬರುವವನಾದನು. ಅಲ್ಲಿ ಅವನು ಶಿವಾನುಭವಗೋಷ್ಠಿಯಲ್ಲಿದ್ದುಕೊಂಡು ವಚನಶಾಸ್ತ್ರದ ತತ್ವಗಳನ್ನು ಪ್ರಸಾರಮಾಡುವ ಅವರ ಕಾರ್ಯದಲ್ಲಿ ಅವರಿಗೆ ಸಹಾಯಕನಾದನು. ಈ ಸಂಗತಿಯು 'ಸಂಗನಬಸವೇಶ್ವರ ವಚನಗಳು' ಎಂಬ ಗ್ರಂಥದ ಲ್ಲಿಯ ಕೆಳಗಿನ ಅವತರಣದಿಂದ ಗೊತ್ತಾಗುವದು. ಅದು ಆವುದೆಂದರೆ:--

"......ಮಹಾಪ್ರಭುವು ಲಿಂಗಾಂಗಕ್ಕೆ ಭಿನ್ನವಿಲ್ಲದೆ ಹಸ್ತಮಸ್ತಕ ಸಂಯೋಗವಮಾಡಿ ವೇಧಾ, ಮಂತ್ರ, ಕ್ರಿಯಾದೀಕ್ಷೆಯನಿತ್ತು ಇಪ್ಪ ತ್ತೊಂದ ತೆರದ ವಿಚಾರವನರುಪಿ, ನೂರೊಂದುಸ್ಥಲದಾಚರಣೆ, ಇನ್ನೂರು ಹದಿನಾರು ಸ್ಥಲದ ಸಂಬಂಧವ ತೋರಿ, ಸರ್ವಾಚಾರ ಸಂಪತ್ತಿನ ಸ್ವರೂಪು ನಿಲುಕಡೆಯ ತೋರಿಸಿ ಸಾಕಾರ ನಿರಾಕಾರದ ನಿಜದ ನಿಲು ಕಡೆಯನರುಹಿ ನಿಜಶಿವಯೋಗದ ನಿರ್ವಯಲವ ಕರುಣಿಸಿ, ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಸ್ವರೂಪ ತಾನೆಂ ದರುಪಿದರು ನೋಡಾ. ಇಂತು ಚನ್ನಬಸವೇಶ್ವರ ಸ್ವಾಮಿಗಳು ಬೆಸ ಗೊಂಡು ತಮ್ಮ ಚಿದಂಗ ಸ್ವರೂಪರಾದ ಚಿದ್ಘನ. ಶರಣ ನಿರ್ಲಜ್ಜ ಶಾಂತಯ್ಯನೆಂಬ ಶಿವಶರಣನ ಮುಖದಲ್ಲಿ ಮೋಳಿಗಯ್ಯ ಮೊದಲಾದ ಸಕಲಪ್ರಮಥರ್ಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ನಿರ್ಲಜ್ಜ ಶಾಂತಯ್ಯನೆಂಬ ದೇಶಿಕೇಂದ್ರನು ಚಂಗಣಗಿಲ ಮಂಟಪದ ರೇವಣಸಿದ್ಧೇಶ್ವರಂಗೆ ಬೋಧಿಸಿದರು ನೋಡಾ. ಅದೇ ಪ್ರಸಾದವನ್ನೇ ರೇವಣಸಿದ್ಧೇಶ್ವರನೆಂಬ ದೇಶಿಕೇಂದ್ರನು ಜ್ಞಾನೋದಯವಾಗಿ ತಮ್ಮಡಿ ಗೆರಗಿ ಬಂದ ಶಿಷ್ಯೋತ್ತಮ ಶಿವಶರಣರ್ಗೆ ಸ್ವಾನುಭವಸೂತ್ರವ ಬೋಧಿ ಸುತಿರ್ದರು ನೋಡಾ. ಅದೇ ಮಹಾಪ್ರಸಾದವ ನಿನ್ನ ಶ್ರೋತ್ರ ಮುಖ

ದಲ್ಲಿ ಮಹಾಮಂತ್ರ ಮೂರ್ತಿಯಾಗಿ ನೆಲೆಗೊಂಡಿರ್ಪ ಪ್ರಸಾದಲಿಂಗ ಮುಖದಲ್ಲಿ ಅರುಹಿಸಿ ಕೊಟ್ಟೆವು. ಕೇಳಿ ಮಹಾಲಿಂಗಮುಖದಲ್ಲಿ ಸಂತೃಪ್ತನಾಗಿ ಪರಿಣಾಮಪ್ರಸಾದದಲ್ಲಿ ಲೋಲುಪ್ತನಾಗಾ ಎನ್ನಾಜ್ಞಾ ಮಂಟಪದಲ್ಲಿ ಮೂರ್ತಿಗೊಂಡಿರುವ ಸಂಗನಬಸವೇಶ್ವರಾ."

ಇದರಮೇಲಿಂದ ನಿರ್ಲಜ್ಜಶಾಂತಯ್ಯನು ಶಿವಾನುಭವಮಂಟಪದಲ್ಲಿ ಪ್ರಭುದೇವ, ಚನ್ನಬಸವೇಶ್ವರ, ಇವರೊಡನೆ ಇದ್ದು ಉಚ್ಚಸ್ಥಾನವನ್ನು ಹೊಂದಿದವನಾಗಿದ್ದನೆಂಬುದು ವ್ಯಕ್ತವಾಗುತ್ತದೆ. ಅವನು ಅತ್ಯಂತ ಬಡತನಸ್ಥಿತಿಯಲ್ಲಿದ್ದ ಮಠಾಧಿಪತಿಯು. ಆದರೆ ಶ್ರೇಷ್ಠತರ ಗತಿಯ ಶಿವಾನುಭವಿಯಾಗಿ ಶಿವಾನುಭವದ ಜ್ಞಾನವನ್ನು ಪ್ರಸಾರ ಮಾಡಿದ್ದಾನೆ. ಅವನು ಅತ್ಯಂತ ನಿರಾಶಿಕನು. ಆದ್ದರಿಂದ ತನ್ನ ದಾಸೋಹವನ್ನು ನಡಿಸುವಲ್ಲಿ ದಿಗಂಬರತ್ವವನ್ನು ಸಹ ಹೊಂದಲು ಹೆದರಲಿಲ್ಲ. ಇವನು ವಚನಗಳನ್ನು ರಚಿಸಿರಬಹುದೆಂದು ನಮಗೆ ತೋರುತ್ತದೆ. ಆದರೆ ಅವು ನಮಗೆ ಉಪಲಬ್ಧವಾಗಿಲ್ಲ. ಅವನ ಹೆಸರು ಗಣಸಹಸ್ರದಲ್ಲಿ ಬಂದಿರುತ್ತದೆ.

ಅವನು ಕಲ್ಯಾಣಪಟ್ಟಣದಲ್ಲಿಯೇ ಸಮಾಧಿಸ್ತನಾದನು. ಅವನ ಸಮಾಧಿಗೆ 'ನಿರ್ಲಜ್ಜೇಶ್ವರಲಿಂಗ' ಎಂಬ ಹೆಸರು ಪ್ರಾಪ್ತವಾಗಿತ್ತು.

---

## ಕೊಟ್ಟಣದ ಸೋಮಮ್ವೆ.

ನಿರ್ಲಜ್ಜ ಶಾಂತಯ್ಯನ ನಿರಾಶಾವೃತ್ತಿಯು ಬಸವೇಶ್ವರನ ಕಾಲದಲ್ಲಿ ಬಹು ಜನರ ಮನಸ್ಸನ್ನು ಸೆಳೆದಿರುತ್ತದೆ. ಅವನು ಮಠಾಧಿಕಾರಿಯು. ಆದರೂ ಅವನು ವೈಭವವನ್ನು ಅಪೇಕ್ಷಿಸದೆ ದಿಗಂಬರಿಯಾಗಿ ಶಿವಾನುಭವ ಮಂಟಪದಲ್ಲಿ ಶಿವಶರಣರಿಂದ ಮನ್ನಣೆಯನ್ನು ಹೊಂದಿ ವಚನಶಾಸ್ತ್ರವನ್ನು ಪ್ರಚಾರ ಮಾಡಿದನು. ಅದರಿಂದ ಅವನಿಗೆ ಬಹು ಜನರು ಶಿಷ್ಯರಾದರು. ಇಂಥವರಲ್ಲಿ ಕೊಟ್ಟಣದ ಸೋಮಮ್ವೆಯು ಒಬ್ಬಳಾಗಿದ್ದಾಳೆ.

ಸೋಮಮ್ವೆಯು ಕಲ್ಯಾಣ ಪಟ್ಟಣದಲ್ಲಿ ಕೊಟ್ಟಣದ ಕಾಯಕವನ್ನು ಮಾಡುತ್ತ ಇದ್ದಳು. ಅವಳು ಬತ್ತವನ್ನು ಕುಟ್ಟಿ ಅಕ್ಕೀ ಮಾಡಿ ಕೂಲಿಯನ್ನು ಸಂಪಾದಿಸಿ ಅದರ ಮೇಲೆ ಉಪಜೀವಿಸುತ್ತ ದಾಸೋಹ

ಕಾರ್ಯಗಳಲ್ಲಿ ನಿರತಳಾಗಿದ್ದಳು. ಅವಳು ವಚನಕಾರಳಿದ್ದಾಳೆ. ಅವಳು ನಿರ್ಲಜ್ಜ ಶಾಂತಯ್ಯನ ಮೇಲೆ ಭಕ್ತಿಯುಳ್ಳವಳಾದ್ದರಿಂದ "ನಿರ್ಲಜ್ಜೇಶ್ವರಾ" ಎಂಬ ಮುದ್ರಿಕೆಯನ್ನಿಟ್ಟುಕೊಂಡು ವಚನಗಳನ್ನು ರಚಿಸಿದ್ದಾಳೆ. ಅವಳ ಒಂದೇ ವಚನವು ನಮಗೆ ದೊರೆತಿದೆ. ಅದರಲ್ಲಿ ಅವಳು ತನ್ನ ಕಾಯಕದ ರೀತಿಯನ್ನು ಹೇಳಿಕೊಂಡಿದ್ದಾಳೆ.

**ವಚನ**

(೧) ಹದತಪ್ಪಿ ಕುಟ್ಟಿಲು ನುಚ್ಚಲ್ಲದೆ ಅಕ್ಕಿ ಎಲ್ಲಿ? ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿ ಇಲ್ಲ. ಅರಿಯದಾದರೂ ಹೋಗಲಿ. ಅರಿದು ಬೆರೆದೆನಾದರೆ ಕನ್ನಗತ್ತಿಯಲ್ಲಿ ಕಿವಿಯ ಕೊಯ್ವಿರಯ್ಯ. ಬಲ್ಲೆನಾಗಿ ಒಲ್ಲೆ ನಿಮ್ಮಾಣೆ ನಿರ್ಲಜ್ಜೇಶ್ವರಾ.

ಈ ಪ್ರಕಾರ ಅವಳುಕೊಟ್ಟಣದ ಕಾಯಕವನ್ನು ಮಾಡುತ್ತ ಮೋಕ್ಷವನ್ನು ಹೊಂದಿದಳು.

---

## ಕೋಲಂಬೆ

ಜಾತಿಗೊಳಪುರವೆಂಬ ಪಟ್ಟಣವು ನಿಜಾಮು ಇಲಾಖೆಯಲ್ಲಿರುವ ನಾಂದೇಡ ಜಿಲ್ಲೆಯಲ್ಲಿದ್ದು ಅಲ್ಲಿ ಒಬ್ಬ ಶಿವಭಕ್ತನು ವಾಸ ಮಾಡುತ್ತಿದ್ದನು. ಅವನಿಗೆ ಕೋಲಂಬೆ ಎಂಬ ಹೆಸರಿನ ಮಗಳಿದ್ದಳು. ಆಕೆಯ ತಂದೆ ತಾಯಿಗಳು ಕೇವಲ ಶಿವಭಕ್ತಿಯುಳ್ಳವರಾಗಿ ಅವರು ದಿನಾಲು ಶಿವಾಲಯಕ್ಕೆ ಹೋಗಿ ತಪ್ಪದೆ ಶಿವಾರ್ಚನೆ ಮಾಡಿ ಬರುತ್ತಿದ್ದರು. ಅವರ ಮಗಳಾದರೂ ಅವರೊಡನೆ ಶಿವಾಲಯಕ್ಕೆ ಹೋಗಿ ತಪ್ಪದೆ ದೇವದರ್ಶನವನ್ನು ಮಾಡಿ ಬರುವಳು.

ಕೆಲವು ದಿವಸಗಳಾದ ಮೇಲೆ ಕೋಲಂಬೆಯು ತನ್ನದೇ ಆದ ಒಂದು ಶಿವಾಲಯುವನ್ನು ಮಾಡಿ ದೇವಪೂಜೆ ಮಾಡಲೆಣಿಸಿ ಅವಳು ಒಂದು ಹುಲ್ಲುಗುಡಿಸಲನ್ನು ಕಟ್ಟಿ ಅಲ್ಲಿ ದೇವರೆಂದು ಒಂದು ಶಿಲೆಯನ್ನು ಪ್ರತಿಷ್ಠಿಸಿ ಮನೆಯಿಂದ ತೈಲತುಪ್ಪವನ್ನು ತೆಗೆದುಕೊಂಡು ಹೋಗಿ ನೈವೇದ್ಯವನ್ನರ್ಪಿಸಿ ಬರಹತ್ತಿದಳು. ಆಗ ಅವಳೊಡನಾಡುವ ಚಿಕ್ಕ ಮಕ್ಕಳೂ ಕೂಡ ಅದನ್ನು ನೋಡಿ ತಮ್ಮ ಮನೆಗಳಿಂದ ಅಕ್ಕಿ ಬೇಳೆ ತುಪ್ಪ ತೈಲವನ್ನು ತಂದು ಎಲ್ಲರೂ ನೆರೆದು ಅಟ್ಟುಗೂಳನಾಡುವೆವೆಂದು

ಅಡಿಗೆಯು ಮಾಡಿ ನೈವೇದ್ಯವನ್ನರ್ಪಿಸಿ ದೇವರ ಮುಂದೆ ದೀವಿಗೆಯು ನ್ನಿಟ್ಟು ಬರಹತ್ತಿದರು. ಹೀಗೆ ಕೋಲಂಬೆಯೂ ಉಳಿದ ಚಿಕ್ಕಮಕ್ಕಳೂ ಬಾಲಲೀಲೆಯಿಂದ ಆ ಗುಡಿಸಲಲ್ಲಿ ಆಟವಾಡಹತ್ತಿದರು.

ಅದರೆ ಒಂದು ದಿವಸ ಆ ಮಕ್ಕಳ ತಾಯಿತಂದೆಗಳು ನೀವು ಮನೆಯಲ್ಲಿಯು ತೈಲ ತುಪ್ಪ ಅಕ್ಕಿ ಬೇಳೆ ಹಾಳು ಮಾಡುತ್ತಾ ಇದ್ದೀರಿ, ಇಂಥ ಆಟವು ನಿಮಗೇಕೆ, ಗುಡಿಸಲಿಗೆ ಹೋಗಬೇಡಿರಿ, ಎಂದು ನಿರ್ಬಂಧಿಸಿದರು. ಆಗ ಕೋಲಂಬೆಯೊಬ್ಬಳೇ ಎಂದಿನಂತೆ ಗುಡಿಸಲಕ್ಕೆ ಹೋಗಿ ದೀಪವನ್ನು ಹತ್ತಿಸಿ ತಾಯಿತಂದೆಗಳು ಕೊಟ್ಟ ಹಣ್ಣು ಕಾಯಿ ಗಳನ್ನು ನೈವೇದ್ಯಮಾಡಿ ತನ್ನ ಮನೆಗೆ ಬಂದಳು. ಆಗ ಗ್ರಾಮದಲ್ಲಿ ಒಂದು ಚಮತ್ಕಾರವು ಸಂಭವಿಸಿತು. ಆ ದಿನ ಗ್ರಾಮದಲ್ಲಿರುವ ಯಾವ ಆಕಳೂ ಹಾಲು ಕರೆಯಲಿಲ್ಲ. ಮನೆಯ ಜನರು ಎಷ್ಟು ಪ್ರಯತ್ನಿಸಿ ದರೂ ಅವುಗಳಲ್ಲಿ ಒಂದೂ ಕೂಡ ಹಾಲನ್ನು ಕೊಡಲಿಲ್ಲ. ಆಗ ಜನರೆಲ್ಲ ವಿಸ್ಮಯಬಟ್ಟು ವಿಘ್ನೇಶ್ವರನ ದೇವಾಲಯದಲ್ಲಿ ನೆರೆದು ಹೀಗೇಕಾಯಿ ತೆಂದು ಪ್ರಶ್ನೆಮಾಡಲು ಒಬ್ಬ ಭಕ್ತರ ಮಯ್ಯಲ್ಲಿ ಅವನು ಬಂದು, ನೀವು ಕೋಲಂಬೆಯು ಕೂಡ ಆಡುವ ಮಕ್ಕಳಿಗೆ ತುಪ್ಪ ಎಣ್ಣೆ ನೈವೇ ದ್ಯವನ್ನು ಕೊಡದೆ ಅವರು ಗುಡಿಗೆ ಹೋಗುವದನ್ನು ನಿಲ್ಲಿಸಿದ್ದೀರಿ. ಆದರೆ ಅವರಿಗೆ ಅವುಗಳನ್ನು ಕೊಟ್ಟು ಹೋಗಗೊಟ್ಟರೆ, ಗೋವುಗಳು ಹಾಲು ಕರೆಯುವವು ಎಂದು ವಾಕ್ಯವಾಯಿತು. ಆಗ ಅವರೆಲ್ಲರೂ ಕೋಲಂಬೆಯ ಮತ್ತು ಅವಳ ಗೆಳತಿಯರ ತಾಯಿತಂದೆಗಳ ಮನೆಗೆ ಬಂದು ಅವರಿಗೆ ಹೇಳಿ ಮಕ್ಕಳೆಲ್ಲರಿಗೂ ತೈಲ ತುಪ್ಪವನ್ನ- ಕೊಟ್ಟು ಗುಡಿಸಲಿಗೆ ಕಳಿಸಿ ಅವರು ದೇವರಿಗೆ ಅರ್ಪಿಸುವಂತೆ ಮಾಡಲು ಗ್ರಾಮದಲ್ಲಿಯ ಪಶುಗಳೆಲ್ಲ ಹಾಲ ಕರೆದವು. ಗ್ರಾಮದ ಜನರು ಕೋಲಂಬೆಯ ಭಕ್ತಿಭಾವವು ಎಂಥ ಘನತರವಾದದ್ದೆಂಬದನ್ನು ಕಂಡು ಬಹಳ ಆಶ್ಚರ್ಯ ಹೊಂದಿದರು. ಅಂದಿನಿಂದ ಕೋಲಂಬೆಯು ತನ್ನ ಕೆಳದಿಯರೊಡನೆ ಕೂಡಿಕೊಂಡು ತಾನು ನಿರ್ಮಿಸಿದ ಗುಡಿಸಲಿಗೆ ದಿನಾಲು ಹೋಗಿ ದೇವರ ಪೂಜೆಯ ಆಟವನ್ನಾಡಿ ಬರುವಳು.

ಆದರೆ ಅವಳಿಗೆ ಈ ಆಟವು ಕೇವಲ ವಿನೋದವಾಗಿರಲಿಲ್ಲ. ಆ ಗುಡಿ ಸಲು, ಆ ಲಿಂಗದ ಕಲ್ಲು, ಆ ದೀಪ, ಆ ನೈವೇದ್ಯ, ಇವೆಲ್ಲವೂ ತನ್ನನ್ನು ನಿಶ್ಚಯವಾಗಿ ಪರಮಾತ್ಮನಲ್ಲಿಗೆ ಒಯ್ಯುವವೆಂಬ ದೃಢಭಾವವು ಅವ

ಳಲ್ಲಿ ಬೇರೂರಿದ್ದಿತು. ಹೀಗಿರುವಲ್ಲಿ ದೀಪಾವಳಿಯ ಪಾಡ್ಯದ ದಿವಸ ಕೋಲಂಬೆಯೂ ಅವಳ ಒಡನಾಡಿಗಳೂ ದೇವಪೂಜೆ ಮಾಡುತ್ತಿರುವಾಗ ಒಬ್ಬ ದುರ್ಜನನಾದ ವಿಷ್ಣುಪೂಜಕನು ತನ್ನ ಗೋವುಗಳನ್ನು ಹೊಡೆದುಕೊಂಡು ಬರುವಾಗ ಆ ಹುಲ್ಲುಗುಡಿಸಲಿನ ಸಮೀಪದಲ್ಲಿಯೇ ಅವುಗಳನ್ನು ತರುಬಿದನು. ಅವನು ಅಲ್ಲಿ ಆಡುವ ಆ ಮಕ್ಕಳನ್ನು ನೋಡಿ, ಇಂಥ ಬಾಲಿಕೆಯರ ಕಯ್ಯಿಂದ ಶಿವನು ಎಂದಾದರೂ ಪೂಜೆಗೊಂಬುವನೇ? ಈ ಗುಡಿಸಲಿಗೆ ಬೆಂಕಿ ಹಚ್ಚಿದರೆ ಅದು ಸುಟ್ಟು ಹೋಗದೇ? ಇದನ್ನು ನೋಡುವೆನೆಂದು ಅವನು ಗುಡಿಸಲಿಗೆ ಕಿಚ್ಚನಿಕ್ಕಿದನು. ಕೂಡಲೆ ಆ ಹುಲ್ಲಿನ ಗುಡಿಸಲಿಗೆ ಭಗ್ಗನೆ ಬೆಂಕಿಹತ್ತಿ ಜ್ವಾಲೆಯು ಸುತ್ತಲೂ ಪಸರಿಸಹತ್ತಿತು. ನೆರೆದ ಮಕ್ಕಳು ಓಡಿ ಮನೆಗೆ ಹೋದವು. ವೈಷ್ಣವನ ಗೋವುಗಳು ಬೆದರಿ ಅಡವಿಗೆ ಹೋದವು. ಆದರೆ ಕೋಲಂಬೆಯು ಗುಡಿಸಲಿನಿಂದ ಅಲುಗಾಡಲಿಲ್ಲ. ಅವಳು ಹೊರಬಿದ್ದು ಓಡಿ ಹೋಗಲಿಲ್ಲ. ಪರಮಾತ್ಮನೆದುರಿಗೆ ಕೈಮುಗಿದುಕೊಂಡು ನಿಂತುಬಿಟ್ಟಳು. ಆಗ ಆ ಕಿಚ್ಚು ಅವಳನ್ನು ಸಮೀಪಿಸಲಿಲ್ಲ. ಅಲ್ಲಿಯೇ ನಂದಿಹೋಯಿತು! ಆದರೆ ಅಷ್ಟರಲ್ಲಿ ಆ ವೈಷ್ಣವನ ಗೃಹಕ್ಕೆ ಕಿಚ್ಚುಬಿದ್ದು ಅದು ಪಟ್ಟಣದಲ್ಲಿ ಬೆಂದುಹೋಯಿತು. ಆಗ ಪರಮಾತ್ಮನು ಕೋಲಂಬೆಗೆ ಪ್ರತ್ಯಕ್ಷನಾಗಿ ನಿನಗೇನು ಬೇಕು ಎಂದು ಕೇಳಲು ಅವಳು ತನ್ನೊಡನಾಡುವ ಮಕ್ಕಳಿಗೆ ಜಯವಾಗಬೇಕು, ವೈಷ್ಣವನ ಗೋವುಗಳಿಗೆ ಮತ್ತು ಮನೆಗೆ ಕ್ಷೇಮವಾಗಬೇಕು, ಎಂದು ಹೇಳಲು ಹಾಗೆಯೇ ಆಗಲೆಂದು ಶಿವನು ಒಲಿದು ವರವನ್ನಿತ್ತನು. ಆ ಕ್ಷಣವೇ ಆ ಹುಲ್ಲುಗುಡಿಸಲು ಕಲ್ಲುಗುಡಿಯಾಯಿತು. ಅವಳು ಪೂಜಿಸುತ್ತಿದ್ದ ಶಿಲೆ ಲಿಂಗಾಕೃತಿಯಾಯಿತು. ವೈಷ್ಣವನ ಮನೆಯು ಮೊದಲಿನಂತಾಯಿತು. ತನ್ನ ಸುತ್ತಲೂ ಸುಡುತ್ತಿದ್ದ ಆ ಜ್ವಾಲೆಯು ಬೆಳಗು ಶಿವನಿಗೆ ಆರತಿಯಾಯಿತು. ಕೋಲಂಬೆಯು ಶಿವನಿಗೆ ಆ ಆರತಿಯನ್ನು ಬೆಳಗುತ್ತ ಎಲ್ಲರಿಗೂ ಕ್ಷೇಮವನ್ನು ಕೋರಿ, ಶಿವನನ್ನು ಪಾಡುತ್ತ ಅವನೊಡನೆ ಕೈಲಾಸಕ್ಕೆ ಹೋದಳು.

ಪುರಜನರು ಕೋಲಂಬೆಯ ನೆನಪಿಗಾಗಿ ವರ್ಷಕ್ಕೊಂದು ವೇಳೆ 'ಕೋಲಂಬೆಯ ಹಬ್ಬ'ವನ್ನು ಆಚರಿಸಹತ್ತಿದರು. ಮುಂದೆ ಅವಳಿದ್ದ ಜಾತಿಗೊಳಪುರಕ್ಕೆ 'ಕೋಲಂಬೆ' ಎಂಬ ಹೆಸರು ಪ್ರಾಪ್ತವಾಗಿ ಆ ಹೆಸರು ಅದಕ್ಕೆ ಈಗಲೂ ಇದೆ.

೧೩೭

## ಶಂಕಿತೊಂಡಿ

ಶಂಕಿತೊಂಡಿಯು ದನಗಳನ್ನು ಕಾಯುವ ಕಾಯಕವನ್ನು ಮಾಡು ತ್ತಿದ್ದನು. ಅವನು ಪಟ್ಟಣದಲ್ಲಿಯ ದನಗಳನ್ನು ಕೂಲಿಗೆ ತೆಗೆದುಕೊಂಡು ಅಡವಿಗೆ ಹೋಗುವನು. ಇದರಿಂದ ಬಂದ ಕೂಲಿಯ ಮೇಲೆ ಅವನು ತನ್ನ ಉಪಜೀವನವನ್ನು ಸಾಗಿಸುತ್ತಿದ್ದನು. ಅವನು ಇನ್ನೂ ಬಾಲಕನು. ಅವನು ಅಡವಿಯಲ್ಲಿದ್ದಾಗ್ಗೆ ಅವನೂ ದನ ಕಾಯುವ ಬೇರೆ ಬಾಲಕರೂ ಗುಂಪಾಗಿ ಕೂಡಿಕೊಂಡು ಚಂಡು ಫಣಿ ಮೊದಲಾದ ಆಟಗಳನ್ನು ಆಡುತ್ತ ವೇಳೆಗಳೆಯುವರು. ಹೀಗಿರಲು ಒಂದು ದಿನ ಅವರೆಲ್ಲರು 'ಶಂಕರಲಿಂಗನ ಆಟ'ವನ್ನಾಡಬೇಕೆಂದು ಗೊತ್ತುಪಡಿಸಿಕೊಂಡು ಒಂದು ಗುಡಿಯನ್ನು ಕಟ್ಟಲುದ್ಯೋಗಿಸಿದರು. ಅವರು ಅಲ್ಲಲ್ಲಿ ಬಿದ್ದಿದ್ದ ಕಾಡುಗಲ್ಲುಗಳನ್ನು ಕೂಡಿಸಿ ಅವುಗಳಿಂದ ಒಂದು ಚಿಕ್ಕ ಗುಡಿಯನ್ನು ಕಟ್ಟಿದರು. ಒಂದು ಮಾಟಾದ ಕಲ್ಲನ್ನು ತಂದು ಅದು 'ಶಂಕರಲಿಂಗ'ನೆಂದು ಗುಡಿಯಲ್ಲಿ ಪ್ರತಿಷ್ಠಾಪಿಸಿದರು. ಆ ಮೇಲೆ ಅವರು ಅದಕ್ಕೆ ಮಜ್ಜನಕ್ಕೆರೆದರು. ಸೇಡಿಗಲ್ಲನ್ನು ತಂದು ಅದನ್ನು ಪುಡಿಮಾಡಿ ಸೋಸಿ ಅದು ಭಸಿತ ವೆಂದು ದೇವರಿಗೆ ಹೂಸಿದರು. ತಾವೂ ಹೂಸಿಕೊಂಡರು. ಕಾಡ ಪತ್ರೆ ಗಳನ್ನೂ ಹೂವುಗಳನ್ನೂ ತಂದು ದೇವರಿಗೆ ಏರಿಸಿದರು. ತಾವು ಮನೆ ಯಿಂದ ತಂದಿದ್ದ ಕಜ್ಜಾಯಗಳನ್ನು ಲಿಂಗಕ್ಕೆ ಅರ್ಪಿಸಿ ಅವುಗಳನ್ನು ಪ್ರಸಾದವೆಂದು ಭುಂಜಿಸಿದರು. ಹೀಗೆ ಅವರು ಅತ್ಯಂತ ಭಕ್ತಿಭಾವ ವುಳ್ಳವರಾಗಿ ತಮ್ಮ ಪೂಜೆಯನ್ನು ಮುಗಿಸುವಷ್ಟರಲ್ಲಿ ಅವರು ಕಾಯು ತ್ತಿದ್ದ ದನಗಳಾವವೂ ಅಡವಿಯಲ್ಲಿ ಕಾಣದಾದವು. ಅವು ಎಲ್ಲಿಯೋ ಹೋಗಿಬಿಟ್ಟಿದ್ದವು. ಆಗ ಅವರು ಬಹಳ ಗಾಬರಿಯಾದರು. ನಾಲ್ಕೂ ದಿಕ್ಕಿಗೆ ಹೋಗಿ ಅವುಗಳನ್ನು ಹುಡುಕಾಡಹತ್ತಿದರು. ಆದರೆ ಅವು ಎಲ್ಲಿಯೂ ಹೋಗಿಬಿಟ್ಟಿದ್ದವು. ಹೀಗೆ ಬಾಲಕರೆಲ್ಲ ಹತ್ತು ತಾಸುಗಳ ವರೆಗೆ ಅಡವಿ ಯಲ್ಲೆಲ್ಲ ಅವುಗಳನ್ನು ಹುಡಿಕಿ ಹುಡಿಕಿ ದಣಿದರು. ಆಗ ಅವರು ದನ ಗಳನ್ನು ಯಾರೋ ಚೋರರು ಒಯ್ದರೆಂದು ತಿಳಿದು ಅತ್ಯಂತ ದುಃಖ ದಲ್ಲಿ ಮುಳುಗಿ ರೋದನ ಮಾಡಹತ್ತಿದರು. ತಮ್ಮ ತಾಯಿತಂದೆಗಳೂ ದನಗಳ ಒಡೆಯರೂ ಬಹಳ ರೋಷವುಳ್ಳವರಾಗುವರೆಂದು ಭಯಭೀತ ರಾದರು. ಆಗ ಅವರೆಲ್ಲರೂ ಆಲೋಚಿಸಿ ತಮ್ಮನ್ನು ಕಾಯಬೇಕೆಂದು ದೇವರಿಗೆ ಮೊರೆಹೋಗಬೇಕೆಂದು ಗೊತ್ತುಪಡಿಸಿಕೊಂಡರು. ಆಗ ಅವರು

ತಾವು ಪ್ರತಿಷ್ಠಿಸಿದ ಶಂಕರಲಿಂಗನ ಮುಂದೆ ಬಂದು ನಿಂತು ದೇವರಿಗೆ ಅಡ್ಡಬಿದ್ದು—ದೇವರೇ, ಪಶುಗಳು ನಮಗೆ ದೊರೆತರೆ ನಾವು ನಿನಗೆ ಹಾಲು, ಮೊಸರು, ಬೆಣ್ಣೆಗಳನ್ನು ಅರ್ಪಿಸುವೆವು, ಎಂದು ಬೇಡಿಕೊಂಡರು. ಆದರೆ ತೊಂಡಿಯು ದೇವರಿಗೆ—ನಾನು ಬಡವನು. ನಾನೇನು ನಿನಗೆ ಕೊಡಲಿ? ನನಗೆ ಗೋವುಗಳಿಲ್ಲ. ಗೋವುಗಳಿದ್ದವರು ಬೆಣ್ಣೆಯನ್ನು ಅರ್ಪಿಸುವೆವೆಂದು ಹೇಳಿದರು. ಹೀಗೆ ಅನ್ನುವಷ್ಟರಲ್ಲಿ ಅವನಿಗೆ ಒಂದು ಯೋಚನೆಯು ಬಂದು—ದೇವರೇ, ನಾನು ನಿನ್ನ ಗುಡಿಯು ಸಲುವಾಗಿ ದಿನಾಲು ಮೂರು ಕಲ್ಲುಗಳನ್ನು ತಂದು ನಿನಗರ್ಪಿಸುವೆನು. ಇದೇ ನನ್ನ ವ್ರತವು ಎಂದು ಹೇಳಿಕೊಂಡನು. ಆ ಮೇಲೆ ಬಾಲಕರೆಲ್ಲರೂ ತಮ್ಮ ತಮ್ಮ ಮನೆಗಳಿಗೆ ಹೋದರು. ಬಾಲಕರ ಈ ಮೊರೆಯು ಪರಮಾತ್ಮನಿಗೆ ಕೇಳಿಸಿತೆಂದು ತೋರುತ್ತದೆ. ಯಾಕಂದರೆ ಅವರು ಮನೆ ಮುಟ್ಟುವಷ್ಟರಲ್ಲಿಯೇ ಕಳೆದುಹೋಗಿದ್ದ ದನಕರುಗಳೆಲ್ಲವು ತಮ್ಮ ತಮ್ಮ ಮನೆಗಳಿಗೆ ಬಂದು ಮುಟ್ಟಿದ್ದವು. ಆಗ ಅವರು ಹರುಷಪಟ್ಟದ್ದಕ್ಕೆ ಎಣೆ ಇಲ್ಲ. ಅವರು ಮರುದಿನ ತಾವು ದೇವರಿಗೆ ಬೇಡಿಕೊಂಡಂತೆ ಶಂಕರಲಿಂಗನ ಗುಡಿಗೆ ಬಂದು ತುಪ್ಪ, ಬೆಣ್ಣೆ, ಹಾಲನ್ನು ಅರ್ಪಿಸಿ ನೈವೇದ್ಯವನ್ನು ಮಾಡಿದರು.

ಆದರೆ ಆ ದಿನ ಶಂಕಿತೊಂಡಿಗೆ ಅವರೊಂದಿಗೆ ಗುಡಿಗೆ ಹೋಗುವದು ಆಗಲಿಲ್ಲ. ಅವನಿಗೆ ಜ್ವರಗಳು ಬಂದಿದ್ದರಿಂದ ಅವನು ಹೋಗಲಿಲ್ಲ. ಅವು ಚಳಿಜ್ವರಗಳಿದ್ದದರಿಂದ ಎರಡು ತಿಂಗಳ ವರೆಗೆ ಹಾಗೆಯೇ ತನ್ನ ಮನೆಯಲ್ಲಿ ಮಲಗಿಬಿಟ್ಟನು. ಮುಂದೆ ಜ್ವರಗಳು ನಿಂತಬಳಿಕ ಅವನು ತನ್ನ ದನಕರುಗಳನ್ನು ಹೊಡೆದುಕೊಂಡು ಅಡವಿಯಲ್ಲಿ ಬರುವಾಗ—ನಾನು ಎಂಥ ಪಾಪಿಷ್ಠನು. ನಾನು ಬೇಡಿಕೊಂಡಂತೆ ದೇವರಿಗೆ ಕಲ್ಲುಗಳನ್ನು ಅರ್ಪಿಸುವದು ನನ್ನಿಂದ ಆಗಲಿಲ್ಲ. ನನ್ನ ವ್ರತವು ತಪ್ಪಿತು, ಎಂದು ದುಃಖಿಸಹತ್ತಿದನು. ಆಗ ಅವನಲ್ಲಿ ಒಂದು ಯೋಚನೆಯು ಬಂದು—ನಾನು ದಿನಾಲು ಮೂರು ಕಲ್ಲುಗಳನ್ನು ಆಯುಬೇಕಾಗಿದ್ದದರಿಂದ ಎರಡು ತಿಂಗಳ ವರೆಗೆ ಕೂಡಿಸಬೇಕಾದವುಗಳನ್ನೆಲ್ಲ ಈ ದಿನವೇ ನಾನು ಒಟ್ಟಾಗಿ ಸೇರಿಸಿ ಅವುಗಳನ್ನು ದೇವರಿಗೆ ಅರ್ಪಿಸುವೆನು, ಎಂದು ನಿಶ್ಚಯಿಸಿ ಪರಮಾತ್ಮನಿಗೆ ಅರ್ಪಣವೆಂಬ ಭಾವವು ತನ್ನಲ್ಲಿ ಬಲಿದಿರಲಾಗಿ ಒಂದೊಂದು ಕಲ್ಲನ್ನು ಅವನು ಆಯುತ್ತ ಮೂರು-ಆರ

ವತ್ತು ಅಂದರೆ ೧೮೦ ಕಲ್ಲುಗಳನ್ನು ಕೂಡಿಸಿದನು. ಆ ಮೇಲೆ ಅವನು ಅವುಗಳನ್ನು ಒಂದು ಬಂಡಿಯಲ್ಲಿ ಹೇರಿಕೊಂಡು ಅದನ್ನು ಶಂಕರಲಿಂಗನ ಗುಡಿಯ ಮುಂದೆ ತಂದು ನಿಲ್ಲಿಸಿದನು. ಆ ಮೇಲೆ ಅವನು ಒಂದೊಂದು ಕಲ್ಲನ್ನು ಎಣಿಸುತ್ತ ಅವುಗಳನ್ನು ಗುಡಿಯ ಬದಿಯಲ್ಲಿ ಒಟ್ಟಹತ್ತಿದನು. ಆದರೆ ಅವುಗಳನ್ನು ಎಣಿಸುವಲ್ಲಿ ಒಂದು ಕಲ್ಲು ಕಡಿಮೆಯಾಗಿದ್ದು ತೋರಿಬಂದಿತು. ಆಗ ಶಂಕಿತೊಂಡಿಯು ಮನದಲ್ಲಿ–ನಾನು ಏನು ಮಾಡಲಿ! ಪರಮಾತ್ಮನಿಗೋಸ್ಕರ ಕಾಯ್ದಿಟ್ಟ ಒಂದು ಕಲ್ಲು ಕಳೆದುಹೋಯಿತು. ನಾನು ಮಾಡಬೇಕಾಗಿದ್ದ ದೇವರ ವ್ರತವು ತಪ್ಪಿತಲ್ಲಾ ಎಂದು ಅನ್ನುತ್ತಿರಲು ಕಡಿಮೆಬಿದ್ದ ಈ ಕಲ್ಲಿನ ಬದಲು ನನ್ನ ಶಿರಸ್ಸನ್ನೇ ಕತ್ತರಿಸಿ ಪರಮಾತ್ಮನಿಗೆ ಅರ್ಪಣಮಾಡಬೇಕೆಂಬ ಯೋಚನೆಯು ಬಂದು ತನ್ನ ಕತ್ತನ್ನು ಕತ್ತರಿಸಲು ಸಿದ್ಧನಾದನು! ಕತ್ತರಿಸುವಷ್ಟರಲ್ಲಿಯೇ ಪರಮಾತ್ಮನು ಅವನ ನಿಚ್ಚಟವಾದ ಭಕ್ತಿಭಾವಕ್ಕೆ ಮೆಚ್ಚಿ ಅವನಿಗೆ ಪ್ರತ್ಯಕ್ಷನಾದನು. ಮತ್ತು ಶಂಕಿತೊಂಡಿಗೆ—ಎಲೋ ನಿಲ್ಲು, ನಿಲ್ಲು, ನಿನ್ನ ಕತ್ತನ್ನು ಕತ್ತರಿಸಬೇಡ. ನಿನ್ನ ಕಲ್ಲು ದಾರಿಯಲ್ಲಿಯೇ ಮಲೆಯೊಳಗೆ ಬಿದ್ದಿದೆ. ಅದು ಕಳೆದಿಲ್ಲ. ನಿನ್ನ ಭಕ್ತಿಗೆ ಮೆಚ್ಚಿದೆನು ಎಂದು ಹೇಳಿದನು. ಹೀಗೆ ಹೇಳ ಹೇಳುತ್ತಿರುವಷ್ಟರಲ್ಲಿ ಶಂಕಿತೊಂಡಿಯು ತನ್ನೆದುರಿಗೆ ನಿಂತ ಪರಮಾತ್ಮನಲ್ಲಿಯೇ ಲಯವಾಗಿ ಹೋದನು.

ಪರಮಾತ್ಮನು ಜಗತ್ತಿನಲ್ಲೆಲ್ಲ ವ್ಯಾಪಿಸಿರುತ್ತಾನೆಂದು ಶಿವಾನುಭವವು ಹೇಳುತ್ತದೆ. ಆದ್ದರಿಂದ ಅವನನ್ನು ನಂಬಿ ಜನರು ಎಲ್ಲಿ ಪೂಜಿಸುತ್ತಾರೋ ಅಲ್ಲಿಯೇ ಅವನು ತಲೆದೋರುತ್ತಾನೆ. ಚಿಕ್ಕಮಕ್ಕಳಲ್ಲಿ ವಿಶ್ವಾಸವಿರುತ್ತದೆ. ಅವು ತಮ್ಮ ಆಟಿಕೆಯ ಬೊಂಬೆಗಳು ನಿಜವಾದವುಗಳೆಂತಲೇ ಭಾವಿಸಿ ಅವುಗಳೊಡನೆ ವರ್ತಿಸುತ್ತವೆ. ಆದ್ದರಿಂದ ಕೋಲಂಬೆಯ ಹುಲ್ಲು ಗುಡಿಸಲು ಅವಳಿಗೆ ನಿಜವಾದ ದೇವಾಲಯವಾಯಿತು. ದನಕಾಯುವ ಹುಡುಗರು ಸ್ಥಾಪಿಸಿದ ಲಿಂಗವು ಅವರಿಗೆ ಅದೇ ನಿಜವಾದ ಲಿಂಗವಾಯಿತು. ಇಂಥ ದೇವಾಲಯಕ್ಕೋಸ್ಕರ ಕೂಡಿಸಿದ ಕಲ್ಲುಗಳು ಶಂಕಿತೊಂಡಿಗೆ ಪವಿತ್ರವೆನಿಸಿದವು. ಅದರಲ್ಲೊಂದು ಕಳೆದುಹೋಗಲು ಅವರ ಸ್ಥಳದಲ್ಲಿ ಅಲ್ಲಿಯೇ ಬಿದ್ದ ಇನ್ನೊಂದು ಕಲ್ಲನ್ನು ಆರಿಸಿ ಅವನು ತೆಗೆದುಕೊಳ್ಳಲಿಲ್ಲ. ಅವನು ತನ್ನ ಕತ್ತನ್ನು ಕೊಡಲು ಸಿದ್ಧನಾದನು. ಈ ಚಿಕ್ಕ ಮಕ್ಕಳು ಹೀಗೆ ವಿಶ್ವಾಸ ಬಲಿದವರಾಗಿ ವರ್ತಿಸಿದ್ದರಿಂದ ಪರಮಾತ್ಮನು

ಅವರ ಮನದಂತೆ ಅವರಿಗೆ ತಲೆದೋರಿದನು. ಮಕ್ಕಳಲ್ಲಿರುವ ಇಂಥ ವಿಶ್ವಾಸವು ಬಹು ಅಗಾಧವಾದದ್ದು. ದೊಡ್ಡವರಾದರೂ ಕೂಡ ಮಕ್ಕಳಂತೆಯೇ ಪರಮಾತ್ಮನಿಗೋಸ್ಕರ ಪೂರ್ಣ ವಿಶ್ವಾಸವನ್ನು ತಾಳಿದಲ್ಲಿ ಅದು ಉಚ್ಚತರದ ಭಕ್ತಿ ಎನಿಸುತ್ತದೆ. ಇದು ಕೋಲಂಬೆಯು ಮತ್ತು ಶಂಕಿತೊಂಡಿಯು ಕಥೆಗಳಿಂದ ಚನ್ನಾಗಿ ವ್ಯಕ್ತವಾಗುತ್ತದೆ.

---

## ಕುಂಬಾರಗುಂಡಯ್ಯ.

ಕಾಯಕ ಮಾಡುವವನ ಸ್ಥಲದ ಪ್ರಕಾರ ಕಾಯಕಗಳಲ್ಲಿ ಐದು ಬಗೆಯ ವಿಭಾಗಗಳನ್ನು ಮಾಡಬಹುದು. ಅವು ಭಕ್ತಸ್ಥಲದ ಕಾಯಕಗಳು, ಮಹೇಶ್ವರಸ್ಥಲದ ಕಾಯಕಗಳು, ಪ್ರಸಾದಿಸ್ಥಲದ ಕಾಯಕಗಳು, ಪ್ರಾಣಲಿಂಗಿಸ್ಥಲದ ಕಾಯಕಗಳು ಮತ್ತು ಶರಣಸ್ಥಲದ ಕಾಯಕಗಳು ಎಂದಿರುತ್ತವೆ. ಭಕ್ತಸ್ಥಲದ ಕಾಯಕಗಳಲ್ಲಿ ಶ್ರದ್ಧೆ, ವಿಶ್ವಾಸ ಇವುಗಳು ಮುಖ್ಯವಾಗಿರುತ್ತವೆ. ಮಹೇಶ್ವರನ ಕಾಯಕಗಳಲ್ಲಿ ದೃಢಭಕ್ತಿ, ನಿಷ್ಠೆ, ಶೌರ್ಯ, ಸಾಹಸಗಳು ಮುಖ್ಯವಾಗಿರುತ್ತವೆ. ಪ್ರಸಾದಿಯಾದವನ ಕಾಯಕಗಳಲ್ಲಿ ನಿಃಸ್ವಾರ್ಥತೆ ಮತ್ತು ಆತ್ಮಾರ್ಪಣಗಳಿರುತ್ತವೆ. ಪ್ರಾಣಲಿಂಗಿಸ್ಥಲದಲ್ಲಿಯುವನ ಕಾಯಕಗಳಲ್ಲಿ ಪ್ರಾಣಲಿಂಗದ ವಿಕಾಸವಿರುತ್ತದೆ. ಇದರಲ್ಲಿ ಅಂತಃಶಕ್ತಿಯು ಹೆಚ್ಚುಗೆಯೂ ಅಂತರಿಂದ್ರಿಯಗಳ ಜಾಗ್ರತಿಯೂ ಇರುತ್ತವೆ. ಶರಣಸ್ಥಲದವನ ಕಾಯಕಗಳಲ್ಲಿ ಸಮತ್ವ, ವಿಶ್ವಬಂಧುತ್ವ, ಸುಜ್ಞಾನ ಇವುಗಳಿರುತ್ತವೆ. ಹೀಗೆ ಎಲ್ಲ ಸ್ಥಲಗಳಲ್ಲಿಯುವರೂ ತಮ್ಮ ತಮ್ಮ ವಿಶಿಷ್ಟಗುಣಗಳನ್ನು ತಮ್ಮ ಕಾಯಕದ ಮೂಲಕ ಹೆಚ್ಚಿಸುತ್ತ ಹೋದಲ್ಲಿ ಅವರು ಕಡೆಗೆ ಆರನೆಯ ಸ್ಥಲವಾದ ಐಕ್ಯ ಅಥವಾ ಸಾಮರಸ್ಯವನ್ನು ಹೊಂದುತ್ತಾರೆ. ಹೀಗೆ ಶಿವಾನುಭವದ ಪ್ರಕಾರ ಎಲ್ಲ ತರದ ಜನರು ತಮಗೆ ಉಚಿತವಾದ ಒಂದು ಕಾಯಕವನ್ನು ಕೈಕೊಂಡು ಅದರ ಮೂಲಕ ಆತ್ಮವಿಕಾಸವನ್ನುಂಟುಮಾಡಿಕೊಳ್ಳಬಹುದಾಗಿದೆ.

ಕಾಯಕಗಳು ಉಪಜೀವನದ ಹೊರೆಗಳಿರುತ್ತವೆಂಬುದೇನೋ ನಿಜವು. ಆದರೆ ಅವುಗಳ ಮೂಲಕ ಮನುಷ್ಯನು ತನ್ನ ಲಿಂಗ, ಮನ, ಪ್ರಾಣಗಳಲ್ಲಿ ಹುದುಗಿದ ಲಿಂಗಕಳೆಯನ್ನು ಪ್ರಕಟಮಾಡುತ್ತ ತ್ರಿಲಿಂಗಗ

ಳನ್ನು ತನ್ನಲ್ಲಿ ವಿಕಾಸಗೊಳಿಸತಕ್ಕದ್ದು ಇದೆ. ಆದ್ದರಿಂದ ಅವುಗಳು ಒಂದು ಬಗೆಯ ಲಿಂಗಪೂಜೆಯ ಕ್ರಿಯೆಗಳೆಂದೇ ಹೇಳಬಹುದು. ಲಿಂಗ ಪೂಜೆ ಎಂದರೆ ತ್ರಿಕಾಲದಲ್ಲಿ ಕೆಲವೊಂದು ವಿಧವಾಗಿ ಮಾಡುವ ಪೂಜೆ ಮಾತ್ರ ವಲ್ಲ. ಮನುಷ್ಯನು ಅದರ ಪರಿಣಾಮವಾಗಿ ತನ್ನ ನಿತ್ಯಕಾಯಕದಲ್ಲಿ ಪ್ರತಿಕ್ಷಣ ಲಿಂಗದಲ್ಲಿರಬೇಕು. ಆದ್ದರಿಂದ ಕಾಯಕವು ಶಿವಾನುಭವಿಯ ಶಿವಯೋಗ ಸಾಧನವೆಂತಲೇ ಹೇಳಬಹುದು.

ಕುಂಬಾರ ಗುಂಡಯ್ಯನು ಕರ್ನಾಟಕದ ಉತ್ತರಭಾಗದಲ್ಲಿರುವ ಬಲಿಕೆ ಅಥವಾ ಬಲ್ಲಾಕೆ ಎಂಬ ಗ್ರಾಮದಲ್ಲಿ ವಾಸಿಸುತ್ತಿದ್ದು ಅಲ್ಲಿ ಕುಂಬಾರನ ಕಾಯಕವನ್ನು ಮಾಡುತ್ತಾ ಇದ್ದನು. ಅವನ ಸತಿಯ ಹೆಸರು ಕೇತಲ್ಲದೇವಿ. ಅವರಿಬ್ಬರೂ ಗಡಿಗೆಗಳನ್ನು ಮಾಡಿ ಅವುಗಳನ್ನು ಮಾರಿ ಅದರಿಂದ ಬಂದ ಹಣದಲ್ಲಿ ಉಪಜೀವಿಸುತ್ತಿದ್ದರು. ಗುಂಡಯ್ಯನು ಪ್ರಾಣಲಿಂಗಿಸ್ಥಲದವನಾಗಿದ್ದನು. ಆದ್ದರಿಂದ ಅವನಲ್ಲಿಯ ಅಂತರಿಂದ್ರಿಯ ಗಳು ಅತ್ಯಂತ ವಿಕಾಸವನ್ನು ಹೊಂದಿದವುಗಳಾದದ್ದರಿಂದ ಅವನ ಷಟ್ ಚಕ್ರಗಳೂ ಅವುಗಳಲ್ಲಿರುವ ಲಿಂಗದ ಕಳೆಗಳೂ ಶಕ್ತಿಗಳೂ ಅತ್ಯಂತ ಜಾಗ್ರತಿಯನ್ನು ಹೊಂದಿದ್ದವು. ಆದ್ದರಿಂದ ಅವನ ಬಾಹ್ಯ ಕಾಯಕವು ಅವನ ಅಂತರ್ಯದಲ್ಲಿ ಚೈತನ್ಯವನ್ನುಂಟು ಮಾಡಲು ಕಾರಣವಾಗು ತ್ತಿತ್ತು. ಅಂದರೆ ಅವನು ತನ್ನ ಬಾಹ್ಯ ತಿಗರಿಯನ್ನು ತಿರುಗಿಸಿದ ಕೂಡಲೆ ಅವನ ಷಟ್‌ಚಕ್ರಗಳಲ್ಲಿ ಲಿಂಗಕಳೆಯು ಪ್ರಸ್ಫುರಿಸಹತ್ತುವದು. ಆಗ ಈ ಚಕ್ರಗಳೇ ಅವನಿಗೆ ತಿಗರಿಯಂತಾಗುವವು. ಆ ತಿಗರಿಗೆ ಅವನು ಸುತ್ತುವ ದಾರವೆಂದರೆ ಅವನಲ್ಲಿಯ ಜ್ಞಾನವು. ಅಂದರೆ ಈ ಜ್ಞಾನದ ಮೂಲಕ ಅವನು ಷಟ್‌ಚಕ್ರಗಳ ಪರಸ್ಪರ ಸಂಬಂಧವನ್ನು ತನ್ನಲ್ಲುಂಟು ಮಾಡುವನು. ಈ ಪ್ರಪಂಚವೆಂದರೆ ಅದೊಂದು ಸ್ವಪ್ನದ ತೋರಿಕೆ ಎಂಬ ಅವನ ಭಾವನೆಯೇ ಅವನಿಗೆ ಗಡಿಗೆಗಳನ್ನು ಮಾಡುವ ಕೆಸರಿನ ಮುದ್ದೆಯಾಯಿತು. ಅವನಲ್ಲಿ ನೆಲೆಗೊಂಡ ದೃಢವಾದ ನಿಷ್ಠೆಯು ಅವನ ತಿಗರಿಯನ್ನು ತಿರುಗಿಸುವ ಕೋಲಾಯಿತು. ಹೀಗೆ ಗುಂಡಯ್ಯನು ತನ್ನ ಬಾಹ್ಯ ಮತ್ತು ಅಂತರಂಗಿಕ ತಿಗರಿಯನ್ನು ತಿರುಗಿಸುತ್ತ ಭಕ್ತಿ ಎಂಬ ಮಡಿಕೆಗಳನ್ನು ಮಾಡುವನು. ಅವು ಸಿದ್ಧವಾದ ಬಳಿಕ ತನ್ನ ಸುಜ್ಞಾನ ವೆಂಬ ಕೊಡತಿಯಿಂದ ಅವುಗಳನ್ನು ಬಾರಿಸಿ ಧ್ವನಿಮಾಡಿ ನೋಡುವನು. ಆಗ ಆ ಧ್ವನಿಯು ಜನರು ಬಾರಿಸುವ ಕರಡಿ, ಕಂಸಾಳ, ಕಹಳೆ,

ಡಮರುಗ, ಮುರುಜ, ಮೃದಂಗ ಧ್ವನಿಗಳಂತೆ ಅವನಿಗೆ ಕೇಳಿಸು ವದು. ಹೀಗೆ ಅವನಿಗೆ ಕೇಳಿಸಹತ್ತಲು ಅವನ ಮನಸ್ಸು ಪರಮಾತ್ಮ ನಲ್ಲಿ ಪರವಶವಾಗುವದು. ಈ ಸ್ಥಿತಿಯು ಬಂದೊಡನೆಯೇ ಅವನು ಬಂದವರನರಿಯನು, ಹೋದವರನರಿಯನು. ಇದು ಅವನ ಲಿಂಗದ ವಿಕಳಾವಸ್ಥೆ. ಈ ಅವಸ್ಥೆಯಲ್ಲಿ ತಾನು ಸಿದ್ಧಪಡಿಸಿದ ಮಡಿಕೆಗಳನ್ನು ತಟ್ಟುತ್ತ ಅವುಗಳ ಧ್ವನಿಗೆ ಸರಿಯಾಗಿ ನಾಟ್ಯವನಾಡುವನು. ಆಗ ಅವನ ಹೃದಯದಲ್ಲಿದ್ದ ಪ್ರಾಣಲಿಂಗವೂ ಪರಶಿವನೂ ಜಗತ್ತೂ ಏಕ ತಾನದಿಂದ ನೃತ್ಯಮಾಡಹತ್ತುವವು. ಪ್ರಾಣಲಿಂಗಿಯಾದ ಗುಂಡಯ್ಯನ ಕಾಯಕವು ಈ ರೀತಿಯದಾಯಿತು.

ಒಂದು ದಿನ ಗುಂಡಯ್ಯನು ತನ್ನ ಮಡಿಕೆಗಳನ್ನು ಬಾರಿಸುತ್ತ ಕುಣಿಯುತ್ತಿರಲು ಕೈಲಾಸದಲ್ಲಿದ್ದ ಶಿವನು ತಲೆದೂಗಹತ್ತಿದನು. ಆಗ ಪಾರ್ವತಿಯು ಅದನ್ನು ನೋಡಿ ಶಿವನಿಗೆ--ನೀವು ಹೀಗೇಕೆ ತಲೆದೂ ಗುತ್ತೀರಿ, ಎಂದು ಕೇಳಲು ಭೂಲೋಕದಲ್ಲಿ ಗುಂಡಯ್ಯನೆಂಬ ಭಕ್ತನು ಮಡಿಕೆಗಳನ್ನು ಬಾರಿಸುತ್ತಲಿದ್ದಾನೆ. ಅವುಗಳ ದನಿಗೆ ನಾನು ಅವನ ಹೃದಯದಲ್ಲಿ ನಾಟ್ಯವನ್ನಾಡುತ್ತಿದ್ದೇನೆ, ಎಂದು ಹೇಳಿದನು. ಆಗ ಪಾರ್ವತಿಯು ಆ ನಿಮ್ಮ ನಾಟ್ಯವನ್ನು ನಾನು ನೋಡಬೇಕೆಂದು ಅಪೇ ಕ್ಷಿಸುತ್ತೇನೆ ಎಂದು ಹೇಳಲು, ಶಿವನು–ಭೂಲೋಕಕ್ಕೆ ನಡೆ. ಆದರೆ ನೀನು ಮಾತ್ರ ಆಕಾಶದಲ್ಲಿದ್ದುಕೊಂಡು ಆ ನಾಟ್ಯವನ್ನು ನೋಡಬೇಕು ಎಂದು ಹೇಳಿದನು.

ಆಗ ಪಾರ್ವತಿಯೂ ಶಿವನೂ ಭೂಲೋಕಕ್ಕಿಳಿದು ಪಾರ್ವತಿಯು ಬಾಂದಳದಲ್ಲಿ ನಿಂತಳು, ಮತ್ತು ಶಿವನು ಗುಂಡನ ಮನೆಯ ಮುಂದೆ ಬಂದು ನಿಂತನು. ಆದರೆ ಶಿವನು ತನ್ನ ಮನೆಯ ಹೊರಗೆ ನಿಂತಿ ದ್ದಾನೆಂಬುದರ ಅರಿವು ಅವನಿಗಿರಲಿಲ್ಲ. ಅವನು ತನ್ನ ಮಡಿಕೆಗಳನ್ನು ಬಾರಿಸುತ್ತ ತನ್ನ ನಾಟ್ಯದಲ್ಲಿಯೇ ತೊಡಗಿದ್ದನು. ಶಿವನು ಅವನ ನಿಷ್ಠೆಗೆ ಮೆಚ್ಚಿ ಅವನನ್ನು ಎಚ್ಚರಿಸಬೇಕೆಂದು ಬಗೆದು ಅವನು ಯಾವ ಲಿಂಗ ವನ್ನು ಏಕಾಗ್ರಚಿತ್ತನಾಗಿ ಒಳನೋಟದಿಂದ ನೋಡುತ್ತಲಿದ್ದನೋ ಆ ಲಿಂಗವನ್ನು ಹೊರಗೆ ಆಕರ್ಷಿಸಿ ಅದನ್ನು ತನ್ನಲ್ಲಿ ಮೇಳವಿಸಲು, ಕೂಡಲೆ ಗುಂಡನಿಗೆ ಎಚ್ಚರಿಕೆಯಾಯಿತು. ಅವನು ಕಣ್ಣು ತೆರೆದನು ಮತ್ತು ಇದಿರಿಗೆ ಶಿವನನ್ನು ಕಂಡನು. ಆಗ ಗುಂಡಯ್ಯನು ಉಬ್ಬಿ ಸರ್ವ

ಸುಖದಿಂದ ಮಡಿಕೆಗಳನ್ನು ಬಾರಿಸುತ್ತ ಕುಣಿದಾಡಹತ್ತಿದನು. ಅವುಗಳನ್ನು ಅವನು ಬಾರಿಸುತ್ತ ಬಾರಿಸುತ್ತ ಶಿವನನ್ನು ಸುತ್ತುವನು. ಸುತ್ತುತ್ತ ನಾನಾ ವಿಧವಾಗಿ ಕುಣಿಯುವನು. ಈ ಕುಣಿತದಲ್ಲಿ ಪರಮಸುಖವು ಅವನಲ್ಲಿ ತಲೆದೋರಲು, ಆ ಸುಖವು ಶಿವನನ್ನು ತಾಕಿತು. ಅದು ತಾಕಿದ ಕೂಡಲೆ ಶಿವನೂ ಗುಂಡಯ್ಯನಂತೆಯೇ ಕುಣಿಯತೊಡಗಿದನು. ಆಗ ಅವನು ತನ್ನ ದಶಭುಜಗಳನ್ನು ಬ್ರಹ್ಮಾಂಡದಲ್ಲೆಲ್ಲ ಪಸರಿಸಿದನು. ಪಸರಿಸಿ ತನ್ನ ನೃತ್ಯವನ್ನಾರಂಭಿಸಿದನು. ಆಗ ಅವನ ಜಡೆಗಳು ದಿಕ್ಕುದಿಕ್ಕುಗಳಲ್ಲಿ ಹರಿದಾಡಹತ್ತಿದವು. ಅವನ ಹೆಜ್ಜೆಗಳು ಲೋಕಗಳಲ್ಲೆಲ್ಲ ಬೀಳಹತ್ತಿದವು. ಅವನ ಮುಡಿಯಲ್ಲಿಯ ಸುರನದಿಯು ತುಳುಕಾಡಹತ್ತಿತು. ಶಶಿಕಳೆಯು ಆಲ್ಹಾಡಹತ್ತಿತು. ಡಮರುಗವು ಢಂ ಢಂ ಢಣಲ್ ಎಂದು ಶಬ್ದ ಮಾಡಹತ್ತಿತು. ಪೊಂಗೆಜ್ಜೆಗಳು ಘುಲುಘುಲು ಸಪ್ಪಳ ಮಾಡಹತ್ತಿದವು. ಈ ಪ್ರಕಾರ ಗುಂಡನ ಮುಂದೆ ಶಿವನು ಕುಣಿಯಹತ್ತಲು ಗುಂಡನೂ ಅವನೊಡನೆ ಕುಣಿಯಹತ್ತಿದನು. ಅವರಿಬ್ಬರ ಕುಣಿತವನ್ನು ನೋಡಿ ನೋಡಬಂದ ಶಿವನ ಗಣಸಮುದಾಯವೂ ಕುಣಿಯಹತ್ತಿತು. ಸ್ಥಾವರ ಜಂಗಮಾತ್ಮಕವಾದ ವಿಶ್ವವೂ ಕೂಡ ಗುಂಡಯ್ಯನ ಮಡಕೆಯ ಶಬ್ದದಲ್ಲಿ ಬೆರಿಸಿ ಆಡಹತ್ತಿತು. ಹೀಗೆ ಸುಖರಸವು ಎಲ್ಲೆಡೆಯಲ್ಲಿಯೂ ಪಸರಿಸಿತು.

ಆಕಾಶದಲ್ಲಿ ನಿಂತಿದ್ದ ಪಾರ್ವತಿಯು ಈ ದೃಶ್ಯವನ್ನು ನೋಡಿ ಇದು ಚೋದ್ಯವೆಂದೆನ್ನುತ್ತ ಈ ಸ್ಥಿತಿಯು ಹೀಗೆಯೇ ಉಳಿದರೆ ವಿಶ್ವವು ನಾಶವಾಗುವದು. ಇದನ್ನು ಕೂಡಲೆ ನಿಲ್ಲಿಸಬೇಕೆಂದು ಬಯಸಿ ಶಿವನನ್ನು ಕುರಿತು ಪ್ರಾರ್ಥಿಸಲು ಅವನು ತನ್ನ ನಾಟ್ಯವನ್ನು ಕಡಿಮೆ ಮಾಡಹತ್ತಲು ವಿಶ್ವದಲ್ಲಿ ತಲೆದೋರಿದ ಆಲುಗಾಟವೂ ಕಡಿಮೆಯಾಗುತ್ತ ಮುಂದೆ ಎಲ್ಲೆಲ್ಲಿಯೂ ಮೊದಲಿನಂತೆ ಶಾಂತಸ್ಥಿತಿಯು ಉಂಟಾಯಿತು.

ಆಗ ಶಿವನು ಗುಂಡಯ್ಯನಿಗೆ--ನಾನು ನಿನ್ನ ಭಕ್ತಿಗೆ ಮೆಚ್ಚಿದೆನು. ನಿನಗೇನು ಬೇಕು ಅದನ್ನು ಬೇಡು ಎನಲು, ಗುಂಡಯ್ಯನು--ಮಡಿಕೆಯ ಧ್ವನಿಯೊಂದಿಗೆ ನಾನು ಕೈಲಾಸಕ್ಕೆ ಬಂದು ನಿನ್ನಲ್ಲಿರುವಂತೆ ಕರುಣಿಸು ಎಂದು ಹೇಳಲು ಶಿವನು--ಹಾಗೆಯೇ ಆಗಲಿ ಎಂದು ವರವನ್ನು ಕೊಟ್ಟನು. ಆಗ ಗುಂಡಯ್ಯನು ತನ್ನ ಮಡಿಕೆಯ

ಧ್ವನಿಯನ್ನು ಮಾಡುತ್ತ ಆ ಧ್ವನಿಯಲ್ಲಿಯೇ ಕೈಲಾಸಕ್ಕೆ ಹೋಗಿ, ನಾದ ಮೂರ್ತಿಯಾದ ಶಿವನಲ್ಲಿ ಬೆರೆದನು.

ಕುಂಬಾರ ಗುಂಡಯ್ಯನ ಹೆಸರು ಗಣಸಹಸ್ರದಲ್ಲಿ ಬಂದಿದೆ. ವೀರಶೈವರಿಗೆ ಅವನು ಅತ್ಯಂತ ಪೂಜ್ಯನು. ಉತ್ತರ ಕರ್ನಾಟಕದಲ್ಲಿ ಲಗ್ನಕಾರ್ಯದಲ್ಲಿ ಉಪಯೋಗಿಸುವ ಮಣ್ಣಿನ ಐರಣಿ (ಕಲಶ)ಗಳನ್ನು ತರುವ ಕಾಲದಲ್ಲಿ ಮೊದಲು ಅವುಗಳನ್ನು 'ಕುಂಬಾರ ಗುಂಡಯ್ಯ' ನೆಂಬ ಹೆಸರಿನಿಂದ ಒಬ್ಬನನ್ನು ಒಂದೆಡೆಗೆ ಮೊದಲು ಕುಳ್ಳಿರಿಸಿ ಅವನಲ್ಲಿ ಅವುಗಳನ್ನಿಟ್ಟು ಊದುತ್ತ ಬಾರಿಸುತ್ತ ಅವನ ಕಡೆಯಿಂದ ಆಶೀರ್ವಾದವನ್ನು ಹೊಂದಿ ಅವುಗಳನ್ನು ತಂದು ಲಗ್ನಕಾರ್ಯದಲ್ಲಿ ಅವುಗಳನ್ನು ಉಪಯೋಗಿಸುವ ಪದ್ಧತಿ ಇದೆ. ಇಲ್ಲವೆ ಒಬ್ಬ ಕುಂಬಾರ ನನ್ನು ಮೊದಲು ಗೊತ್ತುಪಡಿಸಿ, 'ಕುಂಬಾರಗುಂಡಯ್ಯ'ನ ಹೆಸರಿನಿಂದ ಅವನಿಂದ ಆ ಕಲಶಗಳನ್ನು ತರುವದೂ ಉಂಟು. ಇದರಿಂದ ಕುಂಬಾರ ಗುಂಡಯ್ಯನು ವೀರಶೈವರಿಗೆ ಎಷ್ಟು ಪೂಜ್ಯನಾಗಿರುತ್ತಾನೆಂಬುದು ತಿಳಿ ಯುತ್ತಿದೆ.

ಕುಂಬಾರಗುಂಡಯ್ಯನ ಕಾಯಕದಲ್ಲಿ ತಾತ್ವಿಕ ಅರ್ಥವು ಬಹಳ ಇದೆ. ಇದರಲ್ಲಿ ಗಾಯನವೂ ನಾಟ್ಯಕಲೆಯೂ ಮನುಷ್ಯನ ಪ್ರಗ ತಿಗೆ ಹೇಗೆ ಸಾಧನಗಳು, ಕಾಯಕವು ಯೋಗಾಭ್ಯಾಸದ ಒಂದು ಸಾಧ ನವು ಎಂಬ ಅಂಶಗಳು ಇವನ ಚರಿತ್ರೆಯಿಂದ ತಿಳಿದುಬರುತ್ತವೆ.

---

## ರಾಗದ ಸಂಕಣ್ಣ.

ಕರ್ನಾಟಕ ದೇಶದಲ್ಲಿ ವಿಕ್ರಮಾದಿತ್ಯನೆಂಬ ರಾಜನು ರಾಜ್ಯವಾಳು ತ್ತಿದ್ದನು. ಅವನ ರಾಜಧಾನಿಯಲ್ಲಿ ಸಂಕಣ್ಣನೆಂಬ ಶಿವಶರಣನು ವಾಸ ಮಾಡಿಕೊಂಡಿದ್ದನು. ಅವನು ಹಾಡುಗಾರಿಕೆಯನ್ನು ತಾನೇ ಕಲಿತು ಕೊಂಡು ಅತ್ಯಂತ ಭಕ್ತಿಯುಳ್ಳವನಾಗಿ ಪದಪದ್ಯಗಳನ್ನು ಶಿವಾಲಯ ದಲ್ಲಿ ಹೋಗಿ ತನ್ನ ಮನಸ್ಸಿಗೆ ಬಂದಂತೆ ಅಂದು ಬರುವನು. ದೇವಾ ಲಯಕ್ಕೆ ಹೋಗಲು ಅವನು ಎಂದೂ ತಪ್ಪುತ್ತಿದ್ದಿಲ್ಲ. ಜನರು ಅವ ನಲ್ಲಿದ್ದ ಭಕ್ತಿಭಾವವುಳ್ಳ ಹಾಡುಗಾರಿಕೆಗೆ ಮೆಚ್ಚಿದವರಾಗಿ ಅವನನ್ನು ರಾಗದ ಸಂಕಣ್ಣನೆಂದು ಕರೆಯಹತ್ತಿದರು. ಒಂದುದಿನ ವಿಕ್ರಮಾದಿ

ತ್ಯನು ರಾಗದ ಸಂಕಣ್ಣನ ಈ ವಾರ್ತೆಯನ್ನು ಕೇಳಿ ಅವನನ್ನು ತನ್ನ ಲ್ಲಿಗೆ ಬರಮಾಡಿಕೊಂಡು ಅವನ ಸ್ತೋತ್ರ ಪದ್ಯಗಳನ್ನು ಕೇಳಿ ಅವನಿಗೆ—ಇನ್ನುಮೇಲೆ ನೀನು ದಿನಾಲು ನನ್ನ ಓಲಗಕ್ಕೆ ಬಂದು ನಿನ್ನ ಹಾಡುಗಳನ್ನು ಅನ್ನುತ್ತಿರು ಎಂದು ತಿಳಿಸಿದನು. ಅದೇಮೇರೆಗೆ ಸಂಕಣ್ಣನು ರಾಜನ ಆಜ್ಞೆಯಂತೆ ಅವನಲ್ಲಿಗೆ ಹೋಗಿ ದಿನಾಲು ಅವನ ಮುಂದೆ ಶಿವಸ್ತೋತ್ರಗಳನ್ನು ಅಂದುಬರುವನು. ಸಂಕಣ್ಣನ ಭಕ್ತಿಯನ್ನು ರಾಜನು ನೋಡಿ ಅತ್ಯಂತ ಪ್ರೀತನಾಗಿ ಅವನಿಗೆ ದಿನಾಲು ೧೨ ವರಾಹಗಳನ್ನು ಕಾಣಿಕೆಯಾಗಿ ಕೊಡುವನು. ಇವುಗಳನ್ನು ಸಂಕಣ್ಣನು ತನ್ನ ದಾಸೋಹಕ್ಕೆ ಉಪಯೋಗಿಸುತ್ತ ರಾಜನಲ್ಲಿ ಮನ್ನಣೆಯನ್ನು ಹೊಂದಿ ತನ್ನ ಕಾಯಕವನ್ನು ಮಾಡುತ್ತ ಬಂದನು.

ಅರಸನಲ್ಲಿ ಬಹುಜನ ನಿಷ್ಣಾತರಾದ ಗಾಯಕರಿದ್ದರು. ಅವರು ಅರಸನು ಸಂಕಣ್ಣನನ್ನು ಈ ರೀತಿ ಮನ್ನಿಸುವದನ್ನು ನೋಡಿ ಸಂಕಣ್ಣನ ಸಲುವಾಗಿ ಅತ್ಯಂತ ಅಸೂಯಾಭಾವವನ್ನು ತಾಳಿದವರಾದರು. ಅವರು ಒಂದು ದಿವಸ ರಾಯನ ಎದುರಿಗೆ ಬಂದು—ನಾವು ನಿನ್ನ ಮುಂದೆ ಸಂಕಣ್ಣನೊಡನೆ ಸ್ಪರ್ಧೆಯಿಟ್ಟು ಹಾಡುವೆವು, ಕೇಳಬೇಕೆಂದು ಹೇಳಿಕೊಳ್ಳಲು, ರಾಯನು ಅದಕ್ಕೆ ಸಮ್ಮತಿಸಿದನು. ಆಗ ಅವರು ಅವನಲ್ಲಿ ಒಟ್ಟಾಗಿ ಸೇರಿ ಅವನ ಮುಂದೆ ಅನೇಕ ರಾಗಗಳನ್ನು ಸಂಗೀತ ಶಾಸ್ತ್ರಕ್ಕೆ ಅನುಗುಣವಾಗಿ ನಾನಾ ವಿಧವಾಗಿ ಹಾಡಿತೋರಿಸಿದರು. ಆಮೇಲೆ ಸಂಕಣ್ಣನಿಗೂ ಹಾಡಲಿಕ್ಕೆ ಅವರು ಹಚ್ಚಲು, ಅವನು ತನ್ನ ಮನಸ್ಸಿಗೆ ಬಂದಂತೆ ರಾಗಮಾಡಿ ತೋರಿಸಿದನು. ಆಗ ಈ ವಿದ್ವಾಂಸರು, ಇವನಿಗೆ ರಾಗದ ಪರೀಕ್ಷೆ ಏನೂ ಇಲ್ಲ ಎಂದು ಅವನನ್ನು ಹೀಯಾಳಿಸಹತ್ತಿದರು. ಆದರೆ ವಿಕ್ರಮಾದಿತ್ಯನು ಸದ್ಭಕ್ತನಾಗಿದ್ದನು. ಅವನು ಅವರಿಗೆ—ಸಂಕಣ್ಣನು ಒಬ್ಬ ಶಿವಶರಣನಿದ್ದಾನೆ, ಅವನು ಸತ್ಯನು, ಎಂದು ನುಡಿದು ಅವನನ್ನು ಉಳಿದ ಗಾಯಕರಿಗಿಂತಲೂ ಹೆಚ್ಚಾಗಿ ಮನ್ನಿಸಿ ದಿನಕ್ಕಿಂತಲೂ ಅವನಿಗೆ ಹೆಚ್ಚು ಪಡಿಯನ್ನು ಕೊಟ್ಟು ಕಳಿಸಿದನು. ಇಷ್ಟೇಅಲ್ಲ ಅವನಿಗೆ 'ರಾಗ ರಸಾಂಕ' ಎಂಬ ಬಿರುದನ್ನೂ ಕೊಟ್ಟನು. ಅದಕ್ಕೆ ಆ ಗಾಯಕರು—ರಾಜನು ಬುದ್ಧಿವಂತನಲ್ಲ. ಅವನಿಗೆ ಗಾಯನವಿದ್ಯೆಯು ಏನೂ ತಿಳಿಯುವದಿಲ್ಲ. ವಿದ್ಯೆ ಇಲ್ಲದವನನ್ನು

ಅವನು ಹೆಚ್ಚಾಗಿ ಮನ್ನಿಸುತ್ತಾನೆ, ಎಂದು ಮನಸ್ಸು ನೊಂದವರಾಗಿ ಓಲಗದಿಂದ ಹೊರಟುಹೋದರು.

ಆದರೆ ಸಂಕಣ್ಣನು ಯಾರ ಮೇಲೆಯೂ ಕೋಪವನ್ನು ತಾಳ ಲಿಲ್ಲ. ಅರಸನು ತನ್ನನ್ನು ಬಹಳವಾಗಿ ಮನ್ನಿಸಿದನೆಂದು ಉಬ್ಬಲಿಲ್ಲ. ಅವನು ಎಂದಿನಂತೆ ಶಿವಾಲಯದಲ್ಲಿ ಹೋಗಿ ಪರಮಾತ್ಮನನ್ನು ಬಹಳ ಭಕ್ತಿಯಿಂದ ಭಜಿಸಿ ಬರುವನು.

ಹೀಗಿರಲು ಒಂದು ದಿನ ಗೌಳದೇಶದ ಒಬ್ಬ ಗಾಯಕನು ವಿಕ್ರ ಮಾದಿತ್ಯನ ಕೀರ್ತಿಯನ್ನು ಕೇಳಿ ಅವನ ರಾಜಧಾನಿಗೆ ಬಂದನು. ಅವನು ಅರಸನ ಓಲಗದಲ್ಲಿ ರಾಗರಸಾಂಕನು ಎಲ್ಲರಿಗಿಂತಲೂ ಮಿಗಿಲಾಗಿ ಮನ್ನಣೆ ಹೊಂದಿದವನಿದ್ದಾನೆಂಬುದನ್ನು ತಿಳಿದು ಅರಸನಲ್ಲಿಗೆ ಬಂದು—ನಾನು ನಾಳಿನ ದಿವಸ ನಿಮ್ಮ ಸಭೆಯಲ್ಲಿ ನನ್ನ ಕೌಶಲ್ಯವನ್ನು ತೋರಿಸು ತ್ತೇನೆ ಮತ್ತು ಇದರಲ್ಲಿ ರಾಗರಸಾಂಕನು ನನ್ನೊಡನೆ ಸ್ಪರ್ಧೆಗೆ ನಿಲ್ಲ ಬೇಕು ಎಂದು ಕೇಳಿಕೊಳ್ಳಲು ಅರಸನು ಹಾಗೆಯೇ ಆಗಲಿ ಎಂದು ಉತ್ತರ ಕೊಟ್ಟನು.

ಈ ಸಂಗತಿಯು ಸಂಕಣ್ಣನಿಗೆ ತಿಳಿಯಿತು. ಆಗ ಅವನು ಬಹಳ ಗಾಬರಿಯಾದನು. ಮುಂದೇನು ಮಾಡಬೇಕೆಂಬುದು ಅವನಿಗೆ ತಿಳಿ ಯದಾಯಿತು. ಅವನು ಕಡೆಗೆ ಪರಮಾತ್ಮನನ್ನೇ ಮೊರೆಹೊಗಬೇ ಕೆಂಬ ಇಚ್ಛೆಯುಳ್ಳವನಾಗಿ, ರಾತ್ರಿಯಾದ ಕೂಡಲೆ ಅವನು ಶಿವಾ ಲಯಕ್ಕೆ ಬಂದು ಪರಮಾತ್ಮನೆದುರಿಗೆ ನಿಂತು—ಪರಮಾತ್ಮನೇ ನನಗೆ ಈಗ ಎಂಥ ಸಂಕಟ ಬಂದಿತು! ಇದರಲ್ಲಿ ನೀನೇ ನನ್ನನ್ನು ಕಾಯ ಬೇಕೆಂದು ಪ್ರಾರ್ಥಿಸಿಕೊಂಡನು. ಆಗ ಲಿಂಗದೊಳಗಿಂದ ಒಂದು ಶಬ್ದವು ಉತ್ಪನ್ನವಾಗಿ ಅದು—ಸಂಕಣ್ಣನೇ ಅಂಜಬೇಡ. ನಾಳೆ ಓಲಗದಲ್ಲಿ ನೀನು ಬಲ್ಲಂತೆ ಹಾಡು. ನಿನ್ನನ್ನು ನಾನು ಕಾಯುತ್ತೇನೆ, ಎಂದು ಹೇಳಿತು.

ಗೌಳ ದೇಶದ ಗಾಯಕನು ರಾಜಧಾನಿಯಲ್ಲಿ ಬಂದು ಒಂದು ಗೃಹದಲ್ಲಿ ತನ್ನ ಮೇಳದವರೊಂದಿಗೆ ಇಳಿದುಕೊಂಡಿದ್ದನು. ಆ ದಿನ ರಾತ್ರಿ ಬಹಳ ಘೋರವಾದ ಮಳೆಯು ಬೀಳಹತ್ತಿತ್ತು. ಕಾರ್ಗತ್ತಲೆಯು ಎತ್ತಲೂ ಮುಸುಕಿತ್ತು. ಅಂಥ ಸಮಯದಲ್ಲಿ ಪರಮಾತ್ಮನು ಕಟ್ಟಿಗೆಯ ಹೊರೆ ಯನ್ನು ಹೊತ್ತ ಬಾಲಕನ ರೂಪವನ್ನು ಧಾರಣ ಮಾಡಿ ಗಾಯಕನು

ಇಳಿದಂಥ ಗೃಹದ ಮೊಗಸಾಲೆಯ ಮುಂದೆ ಬಂದು ಅಲ್ಲಿದ್ದ ಮರ
ದಡಿಗೆ ಕಟ್ಟಿಗೆಯ ಹೊರೆಯನ್ನು ನಿಲ್ಲಿಸಿ ಹೆಬ್ಬಾಗಿಲಿನಲ್ಲಿ ಬಂದು ನಿಂತನು.
ಆಗ ಮಳೆಯು ಒಂದೇಸವನೇ ಸುರಿಯುತ್ತಿತ್ತು. ಅವನ ಮೈಯ್ಯೆಲ್ಲ
ತೊಯ್ದು ಹೋಗಿತ್ತು. ಅಂಥ ಸಮಯದಲ್ಲಿ ಆ ತರಳನು ತನ್ನ
ಗಾಯನವನ್ನು ಆರಂಭಿಸಿದನು. ಕಷ್ಟಸಮಯದಲ್ಲಿ ಗಾಯನವೇ
ಸಮಾಧಾನವನ್ನುಂಟು ಮಾಡುವಂತಹದೆಂಬುದನ್ನು ತಿಳಿಸುವ ಬಗೆ
ಯಿಂದಲೋ ಏನೋ ಎಂದೆನ್ನುವಂತೆ ಅವನು ದಿವ್ಯವಾದ ಇಂಪಾದ
ಸ್ವರದಿಂದ ಪರಮಾತ್ಮನನ್ನು ಪ್ರಾರ್ಥಿಸತೊಡಗಿದನು. ಅವನು ಇಪ್ಪ
ತ್ತೊಂದು ಶ್ರುತಿಯಲ್ಲಿ ವಿವಿಧ ರಾಗಗಳಿಂದ ಬಹು ಮಂಜುಳವಾಗಿ
ಪದಗಳನ್ನು ಅನ್ನಹತ್ತಿದನು. ಆಗ ಒಳಗಿದ್ದ ಗೌಳಗಾಯಕನು ಅದನ್ನು
ಕೇಳಿ--ಇದು ಎಂಥ ಚೋದ್ಯವು! ಈ ತೆರನಾಗಿ ಹಾಡುವಂಥವನನ್ನು
ನಾನು ಎಲ್ಲಿಯೂ ಕಂಡಿಲ್ಲ. ಈ ಗಾಯಕನು ಮಹಾತ್ಮನಿರಬೇಕು.
ಅವನು ಮನುಜನಲ್ಲ, ಎಂದು ಮನಸ್ಸಿನಲ್ಲಿ ನುಡಿಯುತ್ತ ಬಾಲಕ
ನಿದ್ದಲ್ಲಿಗೆ ಬಂದು, ಅವನನ್ನು ಒಳಗೆ ಕರೆತಂದು--ಭಲರೆ! ಭಲರೆ!
ನೀನೆಂಥ ಗಾಯಕನು!! ಎಂದು ಅವನನ್ನು ಕೀರ್ತಿಸಹತ್ತಿದನು. ಇಷ್ಟೇ
ಅಲ್ಲ, ತಾನು ಧಾರಣ ಮಾಡಿದ್ದ ಕಡಗ, ಪದಕ, ಪೆಂಡೆ ಇವುಗಳನ್ನು
ಅವನ ಮುಂದಿಟ್ಟು ಇವುಗಳನ್ನು ತೆಗೆದುಕೋ, ಎಂದು ಹೇಳಿ ಅವ
ನೆದುರಿಗೆ ಕರಗಳನ್ನು ಮುಗಿದುಕೊಂಡು ನಿಂತನು. ಆದರೆ ಆ ಬಾಲ
ಕನು ಉತ್ತರವನ್ನೀಯದೆ, ಪರಮಾತ್ಮನಲ್ಲಿ ತಲ್ಲೀನನಾಗಿ ಪದ ಪದ್ಯಂಗ
ಳನ್ನು ಹಾಡುತ್ತ ನಿಂತನು. ಅವು ಮುಗಿದ ಬಳಿಕ ಗಾಯಕನು--
ಬಾಲಕನೇ, ನಿನಗೆ ಇಂಥ ಗಾಯನವನ್ನು ಕಲಿಸಿದವರಾರು, ಎಂದು
ಕೇಳಲು--ನಾನು ರಾಗರಸಾಂಕನ ಊಳಿಗದವನು. ನನಗೆ ಯಾರು
ಹಾಡು ಕಲಿಸಿದರೆಂಬುದು ನನಗೆ ಗೊತ್ತಿಲ್ಲ. ಆದರೆ ನನ್ನ ಯಜಮಾ
ನನು ಹಾಡುತ್ತಿರುವಾಗ ಅವನನ್ನು ಕೇಳಿಯೇ ನಾನು ಈ ಹಾಡುಗ
ಳನ್ನು ಕಲಿತಿದ್ದೇನೆ. ಇದಕ್ಕೂ ಹೆಚ್ಚಿಗೆ ನನಗೆ ತಿಳಿಯದು ಎಂದನು.
ಆಗ ಗೌಳಗಾಯಕನು ಈ ನುಡಿಯನ್ನು ಕೇಳಿದ ಕೂಡಲೆ ಬೆಬ್ಬಳಿ
ಬಿದ್ದನು, ಗಾಬರಿಗೊಂಡನು. ಹೀಗಿದ್ದರೆ, ನಾಳೆ ರಾಗರಸಾಂಕನ
ಮುಂದೆ ನಾನೇನು ಹಾಡಲಿ, ಎಂಬ ವಿಚಾರವು ತಲೆದೋರಿ, ಇನ್ನು
ಮೇಲೆ ಈ ಪಟ್ಟಣದಲ್ಲಿರುವದು ಒಳಿತಲ್ಲ. ದೇಶದ ಜನರಲ್ಲಿ ಬಹಿ

ರಂಗವಾಗಿ ನನಗೆ ಅಪಯಶಸ್ಸು ಬರುವದು ಎಂದು ತಿಳಿದು, ಅದೇ ಕ್ಷಣವೇ ರಾತ್ರಿಯಲ್ಲಿ ತನ್ನ ಮೇಳದವರನ್ನು ಕರೆದುಕೊಂಡು ರಾಜಧಾನಿಯನ್ನು ಬಿಟ್ಟು ತೆರಳಿದನು.

ಆಗ ಪರಮಾತ್ಮನು ರಾಗರಸಾಂಕನಿದ್ದಲ್ಲಿಗೆ ಬಂದು—ರಸಾಂಕನೇ, ಸಾವಧಾನದಲ್ಲಿರು. ನಿನ್ನ ಕೂಡ ಸ್ಪರ್ಧಿಸಲು ಬಂದಿದ್ದ ಗಾಯಕನನ್ನು ಓಡಿಸಿ ಬಿಟ್ಟಿದ್ದೇನೆ. ಅಂಜದಿರು, ಎಂದು ಹೇಳಲು, ರಾಗರಸಾಂಕನು ಅವನ ಪಾದಕ್ಕೆ ಬಿದ್ದನು. ಆಗ ಪರಮಾತ್ಮನು ಅವನಿಗೆ—ನಿನ್ನ ಭಕ್ತಿ ಪೂರ್ಣವಾದ ಹಾಡುಗಳಿಗೆ ನಾನು ಮೆಚ್ಚಿದ್ದೇನೆ. ನನ್ನೊಡನೆ ಕೈಲಾಸಕ್ಕೆ ನಡೆ ಎಂದು ಹೇಳಿ ಪುಷ್ಪಕ ವಿಮಾನದಲ್ಲಿ ಅವನನ್ನು ಕುಳ್ಳಿರಿಸಿಕೊಂಡು ತನ್ನೆಡೆಗೆ ಕರೆದೊಯ್ದು ಅವನನ್ನು ಗಣಪದವಿಯಲ್ಲಿರಿಸಿದನು.

ಶಿವಾನುಭವದ ಪ್ರಕಾರ ಗಾಯನವು ಭಕ್ತಿಯ ಫಲವಾಗಿ ಇರುತ್ತದೆ. ಅದು ಮನುಷ್ಯನಲ್ಲಿ ಭಕ್ತಿಯನ್ನು ಹೆಚ್ಚಿಸುತ್ತದೆ. ಆದ್ದರಿಂದ ಪರಮಾತ್ಮನು ಇದಕ್ಕೆ ಪ್ರೀತನಾಗುತ್ತಾನೆ. ಶಿವಶರಣರಲ್ಲಿ ಗಾಯನದ ಕಾಯಕವನ್ನು ಕೈಕೊಂಡು ಪರಮಾತ್ಮನಲ್ಲಿ ಸಾಮರಸ್ಯವನ್ನು ಹೊಂದಿದವರು ಅನೇಕರಿದ್ದಾರೆ. ಅವರಲ್ಲಿ ರಾಗರಸಾಂಕನು ಒಬ್ಬನಿದ್ದಾನೆ. ಅವನು ಶಾಸ್ತ್ರೋಕ್ತ ರೀತಿಯಿಂದ ಗಾಯನವನ್ನು ಕಲಿತವನಲ್ಲ. ಅವನು ತನಗೆ ಬಂದಂತೆ ಹಾಡುವನು. ಆದರೂ ಪರಮಾತ್ಮನು ಅವನಿಗೆ ಮೆಚ್ಚಿದನು. ಭಕ್ತಿಯುಕ್ತ ಗಾಯನದ ವಿಷಯವಾಗಿ ಬಸವೇಶ್ವರನು ತನ್ನ ಒಂದು ಉಕ್ತಿಯಲ್ಲಿ ಹೇಳಿರುವದೇನೆಂದರೆ—

"ತಾಳ ಮಾನ ಸರಿಸವನರಿಯೆ. ಓಜೆಬಜಾವಣೆಯ ಲೆಕ್ಕವನರಿಯೆ. ಅಮೃತಗಣ ದೇವಗಣವನರಿಯೆ. ಕೂಡಲಸಂಗಮದೇವ ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ"

**ಕಥಾಂತರಗಳು.**

ರಾಗರಸಾಂಕನ ವೃತ್ತಾಂತದಲ್ಲಿ ಕೆಲವು ಗ್ರಂಥಗಳಲ್ಲಿ ಭಿನ್ನತೆಗಳಿವೆ. ಒಂದು ಗ್ರಂಥದಲ್ಲಿ ರಾಗರಸಾಂಕನು ಶಿವಾಲಯದಲ್ಲಿ ಗಾಯನ ಮಾಡಿದ ಬಳಿಕ, ಶಿವನು ಅವನಿಗೆ ಮೆಚ್ಚಿ ಪ್ರತ್ಯಕ್ಷನಾಗಿ ದಿನಾಲು ೧೨ ವರಾಹಗಳನ್ನು ಕೊಡುತ್ತಿದ್ದು ಅವುಗಳಿಂದ ರಾಗದ ಸಂಕಣ್ಣನು ಜಂಗಮದಾಸೋಹ ಮಾಡುತ್ತಿದ್ದನೆಂತಲೂ ರಾಗರಸಾಂಕನು ಮದು

ರಿಯಲ್ಲಿ ಪಾಂಡ್ಯನ ಸಭೆಯಲ್ಲಿದ್ದನೆಂತಲೂ ಪರಮಾತ್ಮನು ಬಾಲಕನ ರೂಪವನ್ನು ಧಾರಣಮಾಡಿ ಗಾಯನ ಮಾಡುವ ಕಾಲದಲ್ಲಿ ಗೌಳ ಗಾಯಕನಿಗೆ–ನನ್ನ ತಾಯಿಯು ರಾಗರಸಾಂಕನ ದಾಸಿಯು. ಅವಳು ರಸಾಂಕನು ಹಾಡುವದನ್ನು ಕೇಳಿಕೊಂಡು ಹಾಡುತ್ತಾ ಇದ್ದಳು. ಆಕೆಯು ಹಾಡುತ್ತಿದ್ದದ್ದನ್ನು ನಾನು ಕೇಳಿ ಗಾಯನ ಕಲಿತೆನೆಂದು ಹೇಳಿದನೆಂತಲೂ ಕಥಾಂತರಗಳಿವೆ. ಆದರೆ ರಾಗರಸಾಂಕನ ರಗಳೆ ಯಲ್ಲಿ ಈವನು ಉತ್ತರದೇಶದಲ್ಲಿ ಆಳುತ್ತಿದ್ದ ವಿಕ್ರಮಾದಿತ್ಯನ ಓಲ ಗದಲ್ಲಿದ್ದನೆಂದು ಹೇಳಿದ್ದು ಇದನ್ನೇ ನಾವು ಇಲ್ಲಿ ಅನುಸರಿಸಿದ್ದೇವೆ. ಇದರಲ್ಲಿ ಉಲ್ಲೇಖವಾದ ವಿಕ್ರಮಾದಿತ್ಯನು ಕಲ್ಯಾಣದ ಸುಪ್ರಸಿದ್ಧ ಚಾಲುಕ್ಯರಾಜನಾಗಿರಬೇಕೆಂದು ತೋರುತ್ತದೆ.

---

## ಹೇಡದ ಮಾರಯ್ಯ

ಶಿವಾನುಭವಿಗಳು ಸದಾಚಾರಿಗಳೂ ಸತ್ಶೀಲರೂ ವ್ಯಸನರಹಿತರೂ ಆಗಿ ತಮ್ಮಲ್ಲಿ ಲಿಂಗಕಳೆಯನ್ನು ಹೆಚ್ಚಿಸಲಿಕ್ಕೆ ಯಾವಾಗಲೂ ಪ್ರಯತ್ನಿಸುತ್ತಾರೆ. ಅವರಲ್ಲಿ ಸದಾಚಾರವು ನೆಲೆಗೊಳ್ಳದೆ ಹೋದರೆ ಅವರ ಈ ಪ್ರಯತ್ನಗಳು ಸಫಲವಾಗಲಾರವು. ಆದುದರಿಂದ ವಚನಕಾರರು ಸದಾಚಾರಕ್ಕೆ ಬಹಳ ಮಹತ್ವ ಕೊಟ್ಟಿರುತ್ತಾರೆ. ಅವರು ತಮ್ಮ ವಚನಗಳಲ್ಲಿ ಸುರಾಪಾನ, ಜಾರತನ, ಅಸತ್ಯ, ಹಿಂಸಾದಿ ಕರ್ಮಗಳನ್ನು ಅತ್ಯಂತವಾಗಿ ನಿಷೇಧಿಸಿದ್ದಾರೆ. ಈ ಪ್ರಕಾರ ಅವರು ಆಚರಿಸುತ್ತ ತಮ್ಮಲ್ಲಿ ತ್ರಿಲಿಂಗಗಳನ್ನು ಜಾಗ್ರತೆಗೊಳಿಸುತ್ತ ಲಿಂಗಾಂಗ ಸಾಮರಸ್ಯವನ್ನು ಹೊಂದುವದೇ ಅವರ ಧ್ಯೇಯವಾಗಿರುತ್ತದೆ. ಇಂಥ ಶಿವಾನುಭವಿಗಳ ಸಾನ್ನಿಧ್ಯವು ಯಾವಾಗಲೂ ಪವಿತ್ರವಾದುದು. ಅವರಿದ್ದ ಸ್ಥಾನವು ಅವಿಮುಕ್ತ ಕ್ಷೇತ್ರ, ವಾರಣಾಸಿ ಎಂದು ವಚನಕಾರರು ಹೇಳುತ್ತಾರೆ. ಇಂಥವರ ಸುತ್ತಲೂ ಲಿಂಗಕಳೆಯು ಯಾವಾಗಲೂ ಪಸರಿಸಿರುತ್ತದೆ. ಅವರ ನೆರೆಯಲ್ಲಿದ್ದವರಲ್ಲಿ ಧಾರ್ಮಿಕ ಉಚ್ಚ ಭಾವನೆಗಳು ತಾವಾಗಿಯೇ ತಲೆದೋರುತ್ತವೆ. ಆದ್ದರಿಂದ ಶಿವಾನುಭವಿಗಳ ಸಹವಾಸಕ್ಕೆ ವಚನಕಾರರು ಬಹಳ ಮಹತ್ವ ಕೊಟ್ಟಿದ್ದಾರೆ.

ಶಿವಾನುಭವಿಗಳು ಪ್ರಪಂಚದಲ್ಲಿದ್ದರೂ ಅವರು ಅದರಲ್ಲಿ ನೀರು ತಾವರೆಯಂತಿರುತ್ತಾರೆಂಬ ವಚನಗಳುಂಟು. ಅಂದರೆ ಪ್ರಪಂಚದ ಪರಿ

ಣಾಮಗಳು ತಮ್ಮ ಮೇಲೆ ಆಗದಂತೆ ಅವರು ವರ್ತಿಸುತ್ತಾರೆ. ಅವರ ಸುತ್ತಲೂ ಭವಿಗಳೂ ದುರಾಚಾರಿಗಳೂ ಇದ್ದರೂ ಇಂಥವರು ಅವರ ಮೇಲೆ ಯಾವ ದುಷ್ಪರಿಣಾಮಗಳನ್ನು ಮಾಡಲಾರರು. ಇಷ್ಟೇಅಲ್ಲ, ಇಂಥ ಶಿವಾನುಭವಿಗಳ ಸಾನ್ನಿಧ್ಯದ ಮೂಲಕ ಕೆಡುಕರು ಸನ್ಮಾರ್ಗ ವನ್ನು ಹಿಡಿದಿದ್ದು ಕಂಡುಬಂದಿರುತ್ತದೆ.

ಶಿವಾನುಭವಿಗಳು ತಮ್ಮ ನೆರೆಯಲ್ಲಿದ್ದವರು ಭವಿಗಳಿರಲಿ ಅಥವಾ ಭಕ್ತರಿರಲಿ, ಸದಾಚಾರಿಗಳಿರಲಿ ಅಥವಾ ದುರಾಚಾರಿಗಳಿರಲಿ, ವ್ಯಸನಿ ಗಳಿರಲಿ ಅಥವಾ ನಿರ್ವ್ಯಸನಿಗಳಿರಲಿ ಯಾರಿದ್ದರೂ ಅವರೊಡನೆ ಅವರು ಸ್ನೇಹದಿಂದಿರುತ್ತಾರೆ. ಅವರು ಯಾರನ್ನೂ ದ್ವೇಷಮಾಡುವದಿಲ್ಲ. ಅವರ ಈ ವೃತ್ತಿಯಿಂದ ಕೆಡಕು ಜನರ ಮನೋವೃತ್ತಿಯಲ್ಲಿ ಬದಲಾವಣೆ ಆಗು ತ್ತದೆ. ಈ ತತ್ವಗಳನ್ನು ನಾವು ಹೆಂಡದ ಮಾರಯ್ಯನ ಚರಿತ್ರೆಯಲ್ಲಿ ಕಾಣಬಹುದು.

ಹೆಂಡದ ಮಾರಯ್ಯನು ಕಲ್ಯಾಣ ಪಟ್ಟಣದಲ್ಲಿ ವಾಸಮಾಡುತ್ತಿ ದ್ದನು. ಅವನು ಕೇವಲ ಶಿವಾನುಭವಿಯು ಮತ್ತು ಅತ್ಯಂತ ಸದಾ ಚಾರಿಯು. ಅವನಲ್ಲಿ ವ್ಯಸನಗಳೆಂಬುವು ಯಾವವೂ ಇರಲಿಲ್ಲ. ಅವನು ತನಗೆ ಭಕ್ತರು ಕೊಟ್ಟ ಹಣದಿಂದ ಒಂದು ಅರವಟಿಗೆಯನ್ನಿಟ್ಟು ದಾರಿ ಕಾರರಿಗೆ ನೀರನ್ನೆರೆಯುವ ಕಾಯಕವನ್ನು ಮಾಡುತ್ತಿದ್ದನು. ಇದ ರಿಂದ ತನಗೆ ಬಂದ ಹಣದಿಂದ ಅವನು ತನ್ನ ದಾಸೋಹಕಾರ್ಯ ಗಳನ್ನು ನಡಿಸುವನು. ಹೀಗಿರುವಲ್ಲಿ ಅನೇಕರು ಅವನಿಗೆ— ನೀನು ಅರವಟಿಗೆಯಲ್ಲಿ ತಣ್ಣನ್ನ ನೀರು ಇಟ್ಟಂತೆಯೇ ಎಲ್ಲರಿಗೂ ಪ್ರಿಯಕರ ವಾದ ಬೆಲ್ಲದ ಹಾಲು, ಕಬ್ಬಿನ ಹಾಲು, ಅಂಬಿಲಿ, ಮಜ್ಜಿಗೆ ಇವು ಗಳನ್ನು ಸಹ ಇಟ್ಟು ಅವುಗಳಿಂದ ಬೇಸಗೆಯ ತಾಪದಿಂದ ಬಳಲಿ ಬಂದವರನ್ನು ಶಾಂತಗೊಳಿಸಬೇಕೆಂದು ಸೂಚಿಸಿದರು. ಅದಕ್ಕೆ ಮಾರ ಯ್ಯನು ಒಪ್ಪಿ ಈ ಜೀನಸುಗಳನ್ನೂ ತನ್ನ ಅರವಟಿಗೆಯಲ್ಲಿಟ್ಟು ದಾರಿ ನಡೆದು ಬಂದವರನ್ನು ಶಾಂತಗೊಳಿಸುವನು. ಅವರು ಶಾಂತರಾಗಿ ಅರವಟಿಗೆಯಲ್ಲಿ ಮಾರಯ್ಯನ ಸನ್ನಿಧಿಯಲ್ಲಿ ಕೆಲವು ವೇಳೆ ಕುಳಿತು ಅವನ ಶಿವಾನುಭವ ಸದ್ಗೋಷ್ಠಿಗಳನ್ನು ಕೇಳುವರು. ಇಂಥ ಸದ್ಗೋ ಷ್ಠಿಗಳು ಕಲ್ಯಾಣಪಟ್ಟಣದಲ್ಲಿ ಆಗ ಎಲ್ಲ ಕಡೆಗೂ ಯಾವಾಗಲೂ ನಡೆ ಯುತ್ತಾ ಇದ್ದವು.

ಹೀಗಿರಲು ಮಾರಯ್ಯನ ಅರವಟಿಗೆಗೆ ಭವಿಜನರೂ ಕೂಡ ಬರ ಹತ್ತಿದರು.. ಅವರು ಬಂದ ಬಳಿಕ ಮಾರಯ್ಯನು ಅವರನ್ನು ತಾತ್ಸಾರ ಮಾಡುತ್ತಿದ್ದಿಲ್ಲ. ಅವರಿಗೂ ಕೂಡ ಅರವಟಿಗೆಯಲ್ಲಿರುವ ನೀರನ್ನೂ ಇತರ ತಂಪಾದ ಪಾನಕಗಳನ್ನೂ ಕೊಡುವನು. ಅವರು ಅವುಗಳನ್ನು ಸೇವಿಸಿ ತೃಪ್ತರಾಗಿ ಹೋಗುವರು. ಹೀಗಿರುವಲ್ಲಿ ಅವರಲ್ಲಿ ಕೆಲವರು ಹೆಂಡ ಮತ್ತು ಸರಾಯಿಯನ್ನು ಕುಡಿಯುವ ಚಟವುಳ್ಳವರಾಗಿದ್ದರು. ಇವರು ಮಾರಯ್ಯನಿಗೆ— ನೀನು ಹೇಗೆ ಇತರರಿಗೆ ತಂಪಾದ ಮತ್ತು ಪ್ರಿಯ ಕರವಾದ ಪಾನಕಗಳನ್ನು ಇಟ್ಟಿರುವಿಯೋ ಹಾಗೆಯೇ ನಮ್ಮ ಪಾನಕ ಗಳನ್ನೂ ಇಡಬೇಕೆಂದು ಸೂಚಿಸಿದರು. ಅದಕ್ಕೆ ಮಾರಯ್ಯನು ಒಪ್ಪಿ ಅರವಟಿಗೆಯಲ್ಲಿ ಈಚಲ, ತೆಂಗು, ತಾಡವಾಲಿ, ಭಗಿನಿ ಇಂಥ ಗಿಡ ಗಳಿಂದಾದ ಮಾದಕ ಪದಾರ್ಥಗಳನ್ನಿಟ್ಟು ಅವುಗಳನ್ನು ಸೇವಿಸಲಿಕ್ಕೆ ಇವರಿಗೆ ಕೊಡುವನು. ಅವರು ಅವುಗಳನ್ನು ಕುಡಿದು ತೃಪ್ತರಾಗಿ ಅಲ್ಲಿ ನಡೆಯುತ್ತಿದ್ದ ಶಿವಾನುಭವಗೋಷ್ಠಿಗಳನ್ನು ಕೇಳುತ್ತ ಕೆಲ ಹೊತ್ತು ಕುಳಿತು ಮಾರಯ್ಯನನ್ನು ಸ್ತುತಿಸುತ್ತ ಹೋಗುವರು.

ಈ ಗೋಷ್ಠಿಗಳ ಕಾಲದಲ್ಲಿ ಮಾರಯ್ಯನು ಈ ಹೆಂಡ ಗುಡುಕರಿಗೆ ಮಾದಕ ಪದಾರ್ಥಗಳನ್ನು ಸೇವಿಸದಿರಲು ಬೋಧಿಸುವನು ಮತ್ತು ಶಿವಾನುಭವದ ಉಚ್ಚ ವಿಚಾರಗಳನ್ನು ಅವರಿಗೆ ತಿಳಿಸಿ ಹೇಳುವನು. ಇದು ಅವನ ವಚನಗಳಿಂದ ತಿಳಿದುಬರುತ್ತದೆ.

ಹೀಗಿರಲು ಮಾರಯ್ಯನು ತನ್ನ ಅರವಟಿಗೆಯಲ್ಲಿ ಹೆಂಡವನ್ನಿಟ್ಟು ಜನರಿಗೆ ಮಾರುತ್ತಾನೆಂದು ಕೊಂಡೆಯರು ಬಿಜ್ಜಳನಿಗೆ ತಿಳಿಸಿದರು. ಆಗ ಅವನು ಬಸವೇಶ್ವರನನ್ನು ಕರಿಸಿ— ಶಿವಭಕ್ತರೆನ್ನಿಸಿಕೊಳ್ಳುವವರು ಕಲ್ಯಾಣನಗರದಲ್ಲಿದ್ದುಕೊಂಡು, ಮೊಚ್ಚೆಯ ಜೋಡುಗಳನ್ನು ಮಾಡುತ್ತಾರೆ ಅವರು ಚರ್ಮವನ್ನು ಹದ ಮಾಡುತ್ತಾರೆ. ಕೆರಹು, ಮಿಣೆ, ಹೆಂಡಗ ಳನ್ನಿಟ್ಟು ಮಾರುತ್ತಾರೆ. ಅವರಿಗೆ ಇವೆಂತಹ ಕಾಯಕಗಳು? ಹೀಗೆ ಮಾಡುವದು ಶಿವಭಕ್ತರಿಗೆ ನೀತಿಯೇ? ಎಂದು ಕೇಳಿದನು. ಅದಕ್ಕೆ ಬಸವೇಶ್ವರನು— ಕಾಯಕದ ರೀತಿಯು ಬೇರೆ ಇದೆ. ಅದರಲ್ಲಿ ಆತ್ಮೋ ನ್ನತಿಯು ಇರುವದರಿಂದ ಅದರಲ್ಲಿ ದೋಷವಿಲ್ಲ. ಕುಲವಂತನಾದ ಭಕ್ತನು ಹೊಲೆಯರ ಮನೆಯಲ್ಲಿ ಹೊಕ್ಕು ಅವರಲ್ಲಿ ಕೈಕೂಲಿ ಮಾಡಿದರೂ ಕೂಡ ಅವರು ಪರಮಾತ್ಮನ ನಿಲವನ್ನು ಹೊಂದಲು ತಮ್ಮ ಕಾಯಕ ಮಾಡುತ್ತಾ

ರೆಯೇ ಹೊರ್ತು ಅವರು ತಮ್ಮ ಹೊಟ್ಟೆಯ ಪಾಡಿಗಾಗಿ ಮಾಡು ವದಿಲ್ಲ. ಈ ರೀತಿ ಕಾಯಕ ಮಾಡುವದು ಶಾಸ್ತ್ರಸಮ್ಮತವು. ಇದಕ್ಕೆ ಆಗಮವಾಕ್ಯವಿದೆ. ಅದು ಯಾವದೆಂದರೆ:— "ಸತ್ಯಂ ಜನವಿರುದ್ಧಂ ಚ। ಅಸತ್ಯಂ ಜನ ರಂಜನಂ॥ ಯಾಸನಂ ಸುರಾವಿಕ್ರೇಣ। ದಧಿಕ್ಷೀರ ಗೃಹೇ॥ [೧] ಆದ್ದರಿಂದ ಉತ್ತಮವಾದ ಆಹಾರದ ಜೀನಸುಗಳನ್ನು ಬಿಟ್ಟು ನಿಷೇಧ ರಸವನ್ನು ಉಂಟುವ ಮಾನವರಿಗೆ ಅದನ್ನು ಕೊಟ್ಟು ಅವರ ಉದ್ಧಾರಕ್ಕೋಸ್ಕರ ಅವರಿಗೆ ಉಪದೇಶ ಮಾಡುತ್ತ ಕಾಯಕ ನಡಿ ಸಿದಲ್ಲಿ ಅದು ದೋಷವಲ್ಲೆಂದು ಹೇಳಿದನು.

ಆದರೆ ಬಿಜ್ಜಳನಿಗೆ ಕಾಯಕದ ಈ ರೀತಿಯು ತಿಳಿಯದೆ ಹೋಯಿತು. ಆದ್ದರಿಂದ ಅವನು ಈ ಮಾತಿಗೆ ಒಪ್ಪದೆ ಬಸವೇಶ್ವರನಿಗೆ—ಇದು ಕಾಯಕವಲ್ಲ, ಅಧರ್ಮವು. ಮಾರಯ್ಯನು ಶಿವಶರಣನೆಂದು ನೀನು ಹೇಳುತ್ತೀ.—ಆದರೆ ಅವನು ಶಿವಶರಣನಾದರೆ, ಜನರಿಗೆ ಹೆಂಡವನ್ನು ಕುಡಿಸುವ ಅವನ ಕೈಗಳನ್ನು ನಾನು ಕಡಿದು ಹಾಕಿಸುತ್ತೇನೆ. ಅವು ಒಂದು ವೇಳೆ ಪುನ: ಚಿಗಿತು ಬಂದರೆ ಮಾತ್ರ ಅವನು ಶರಣನೆಂದೆನ್ನುತ್ತೇನೆ ಎಂದು ನುಡಿದನು. ಅದಕ್ಕೆ ಬಸವೇಶ್ವರನು—ಹಾಗೆಯೇ ಆಗಲಿ, ಅವನ ಕೈಗಳನ್ನು ಕಡಿಯಿಸಿನೋಡು ಎಂದು ಹೇಳಿದನು. ಆಗ ಬಿಜ್ಜ ಳನು ಕೂಡಲೆ ಮಾರಯ್ಯನಿದ್ದ ಅರವಟಿಗೆಗೆ ಬಂದು ಅವನ ಕೈಗ ಳನ್ನು ಕಡಿಸಿಹಾಕಿಸಿದನು. ಆದರೆ ಭಕ್ತಶಿರೋಮಣಿಯಾದ ಮಾರಯ್ಯ ನಿಗೆ ಇದರಿಂದೇನೂ ಅಪಾಯವಾಗಲಿಲ್ಲ. ಅವನು ಸನ್ಮಾರ್ಗಿಯು. ಆದ್ದರಿಂದ ಅವನ ಕೈಗಳು ಪುನಃ ಚಿಗಿತು ಬಂದವು ಮತ್ತು ಅವು ಮೊದಲಿನಂತೆಯೇ ಆದವು! ಆಗ ಬಿಜ್ಜಳನು ಆಶ್ಚರ್ಯಪಟ್ಟು ಮಾರ ಯ್ಯನ ಕಾಯಕವು ಆಗಾಧವಾದದ್ದು ಎಂದು ಅವನನ್ನು ಕೊಂಡಾ ಡುತ್ತ ತನ್ನ ಅರಮನೆಗೆ ಹೋದನು. ಅಂದಿನಿಂದ ಮಾರಯ್ಯನು — 'ಹೆಂಡ ದಮಾರಯ್ಯ'ನೆಂದು ಲೋಕದಲ್ಲಿ ಪ್ರಸಿದ್ಧನಾದನು.

---

೧ ಶ್ಲೋಕವು ಅಶುದ್ಧವಿದೆ.

# ಹೆಂಡದ ಮಾರಯ್ಯನ ಕಾಯಕದ ರೀತಿ.

ಹೆಂಡದ ಮಾರಯ್ಯನ ಚರಿತ್ರೆಯಲ್ಲಿ ವಿಚಾರ ಮಾಡತಕ್ಕ ಅನೇಕ ಮಹತ್ವದ ವಿಷಯಗಳಿರುತ್ತವೆ. ಅವುಗಳನ್ನು ನಾವು ಇಲ್ಲಿ ಚರ್ಚಿಸುತ್ತೇವೆ.

## (೧) ಭವಿಜನಗಳ ಸಂಬಂಧ.

ಭಕ್ತರಾದವರು ಭವಿಜನರೊಡನೆ ಸಂಬಂಧವಿಟ್ಟು ಅವರಿಗೆ ಸಹಾಯ ಮಾಡಬೇಕೋ ಹೇಗೆ ಎಂಬುದು ಮೊದಲನೆಯ ವಿಷಯವಾಗಿದೆ. ಮಾರಯ್ಯನ ಚರಿತ್ರೆಯನ್ನು ನಾವು ನಿರೀಕ್ಷಿಸಿದಲ್ಲಿ ಅವನು ಭಕ್ತಜನರಿಗೆ ಹೇಗೋ ಹಾಗೆಯೇ ಭವಿಜನರಿಗೂ ಸಹಾಯವನ್ನು ನೀಡಿದಂತೆ ಕಂಡುಬರುತ್ತದೆ. ಅನೇಕರು ಭಕ್ತರು ಭಕ್ತರಿಗೇ ಸಹಾಯಮಾಡಬೇಕು, ಹಿಂದಿನ ಕಾಲದ ಶಿವಶರಣರು ಭವಿಜನರ ಕೂಡ ಯಾವ ಸಂಬಂಧವನ್ನು ಇಡುತ್ತಿದ್ದಿಲ್ಲ ಮತ್ತು ಅವರು ತಮ್ಮ ವ್ಯವಹಾರವನ್ನು ಭಕ್ತರೊಡನೆ ಮಾತ್ರ ನಡಿಸುತ್ತಿದ್ದರು ಎಂದು ಅಭಿಪ್ರಾಯವುಳ್ಳವರಿದ್ದಾರೆ. ವೀರಶೈವರಲ್ಲಿ ೬೪ ಶೀಲಗಳಿದ್ದು ಅವುಗಳನ್ನು ಪಾಲಿಸುವದು ಶರಣರ ಧರ್ಮವೆಂತಲೂ ಅವರು ತಿಳಿದಿದ್ದಾರೆ. ಕೆಲವು ಶೀಲಗಳಲ್ಲಿ ಭಕ್ತರು ಭವಿಜನರ ಸಂಪರ್ಕವನ್ನು ಪೂರ್ಣವಾಗಿ ಬಿಡಬೇಕೆಂಬ ಅಭಿಪ್ರಾಯವಿದೆ. ಆದರೆ ನಿಜಸ್ಥಿತಿಯು ಹೀಗಿರುವದಿಲ್ಲ. ಈ ತರದ ಶೀಲಗಳು ಅವ್ಯವಹಾರ್ಯವಾಗಿದ್ದು ಅವುಗಳನ್ನು ವಚನಕಾರರು ಅಲ್ಲಗಳೆದಿದ್ದು ಕಂಡುಬರುತ್ತದೆ. ಉದಾಹರಣಾರ್ಥವಾಗಿ ಚನ್ನಬಸವೇಶ್ವರನು ತನ್ನ ವಚನದಲ್ಲಿ ಹೇಳಿರುವದೇನಂದರೆ--

"ಸುಖವನರಿಯದೆ ಹೆಂಗಸು ಸೂಳೆಯಾದಳು. ಶಿವಲಿಂಗವನ್ನರಿಯದ ಕಾರಣ ಭಕ್ತ ಶೀಲವಂತನಾದನು. ಈ ಉಭಯ ಕುಲಸ್ಥಲದಿರವು ನಿಷ್ಪತ್ತಿಯಾಗದನ್ನಕ್ಕರ ಕೂಡಲಚನ್ನಸಂಗಮದೇವನೆಂತೊಲಿವನು ?"

ಇದರಲ್ಲಿ ಚನ್ನಬಸವೇಶ್ವರನು ಶೀಲಗಳನ್ನು ಬಹು ಕಟುವಾಗಿ ಹಳಿದಿದ್ದು ಕಂಡುಬರುತ್ತದೆ.

ಶಿವಶರಣರಲ್ಲಿ ಅತ್ಯಂತ ಶ್ರೇಷ್ಠ ಸ್ಥಾನವನ್ನು ಹೊಂದಿದ್ದ ಮೋಳಿಗೆಯ ಮಾರಯ್ಯನು ಹೇಳಿರುವದೇನಂದರೆ--

"ಶೀಲಶೀಲವೆಂತೆಂದಿರಯ್ಯ! ಶೀಲದ ನೆಲೆಯ ಬಲ್ಲರೆ ಹೇಳಿರೋ, ಅರಿಯದಿರ್ದಡೆ ಕೇಳಿರೋ. ಕಾಮ ಒಂದನೇ ಭವಿ, ಕ್ರೋಧ ಎರಡನೇ ಭವಿ, ಲೋಭ ಮೂರನೇ ಭವಿ, ಮೋಹ ನಾಲ್ಕನೇ ಭವಿ, ಮದ ಐದನೇ ಭವಿ, ಮತ್ಸರ ಆರನೇ ಭವಿ, ಆಮಿಷ ಏಳನೇ ಭವಿ, ಇಂತೀ ಏಳು ಭವಿಗಳ ತನ್ನೊಳಗಿಟ್ಟುಕೊಂಡು ಲಿಂಗವಿಲ್ಲದವರ ಭವಿ ಎಂಬರು. ತನ್ನಂತರಂಗದಲ್ಲಿರ್ದ ಲಿಂಗಾಂಗದ ಸುದ್ದಿಯನರಿಯದೆ ಅಚ್ಚಪ್ರಸಾದಿ, ನಿಚ್ಚಪ್ರಸಾದಿ, ಸಮಯಪ್ರಸಾದಿಗಳೆಂದು ಜಲಕ್ಕೆ ಕನ್ನವನಿಕ್ಕಿ ಉದಕವ ತಂದು ಲಿಂಗಕ್ಕೆ ಮಜ್ಜನಕ್ಕೆರೆವ ಪಗಲುಗಳ್ಳರಿಗೆ ಮೆಚ್ಚುವನೇ ನಿಃಕಳಂಕ ಚನ್ನಮಲ್ಲಿಕಾರ್ಜುನಾ?"

ಇದೇ ಅಭಿಪ್ರಾಯವನ್ನು ಬಸವೇಶ್ವರನಾದರೂ ಕೆಳಗೆ ಕಾಣಿಸಿದ ವಚನದಲ್ಲಿ ಪ್ರಕಟಮಾಡಿದ್ದಾನೆ. ಅವನು ಅಂದಿರುವದೇನೆಂದರೆ—

"ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ, ಎನ್ನ ಒಡವೆಗೆ ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದಡೆ, ಎನ್ನ ಮನಕ್ಕೆ ಮನವೇ ಸಾಕ್ಷಿ. "ಆಸನೇ ಶಯನೇ ಯಾನೇ ಸಂಪರ್ಕೇ ಸಹ ಭೋಜನೇ। ಸಂಚರಂತಿ ಮಹಾಘೋರೇ ನರಕೇ ಕಾಲಮಕ್ಷಯಂ॥ ಎಂಬ ಶ್ರುತಿಯ ಬಸವಣ್ಣನೋದುವನು. ಭವಿಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸಿಹನೆಂದು ನುಡಿವರಯ್ಯ ಪ್ರಮಥರು. ಕೊಡುವೆನುತ್ತರವನವರಿಗೆ, ಕೊಡಲಮ್ಮೆನು. ಹೊಲೆಯರ ಮನೆಯ ಹೊಕ್ಕಾದಡೆಯೂ ಸಲೆ ಕೈಕೂಲಿಯ ಮಾಡಿಯಾದಡೆಯೂ ನಿಮ್ಮ ಶಿಲವಿಂಗೆ ಕುದಿವೆನಲ್ಲದೆ ಎನ್ನೊಡಲವಸರಕ್ಕೆ ಕುದಿದೆನಾದಡೆ ತಲೆದಂಡ ತಲೆದಂಡ ಕೂಡಲಸಂಗಮದೇವಾ"

ಇವರಲ್ಲಿ ಬಸವೇಶ್ವರನು ಭವಿಜನರೊಡನೆ ಹೇಗೆ ಇರಬೇಕೆಂಬುದನ್ನು ಬಹು ಚನ್ನಾಗಿ ನಿರೂಪಿಸಿದ್ದಾನೆ. ಅವನು ಹೇಳಿದಂತೆ ಭವಿಗಳ ಸೇವೆಯನ್ನು ಭಕ್ತರು ಮಾಡಿದಲ್ಲಿ ಆವ ದೋಷವಿರುವದಿಲ್ಲ. ಆದರೆ ಅದನ್ನು ಪರಮಾತ್ಮನ ಸಲುವಾಗಿ ಮಾಡಬೇಕೆಂದು ಇದರಲ್ಲಿ ಅಭಿಪ್ರಾಯವಿದೆ. ಆದ್ದರಿಂದ ಹೆಂಡದ ಮಾರಯ್ಯನು ಭವಿಗಳನ್ನು ತನ್ನ ಅರವಟಿಗೆಯಲ್ಲಿ ಬರಮಾಡಿಕೊಂಡಮಾತ್ರದಲ್ಲಿ ಆವ ದೋಷವೂ ಇರುವದಿಲ್ಲ.

## (೨) ದುರಾಚಾರಿಗಳ ಸಂಬಂಧ.

ಮಾರಯ್ಯನು ಕಾಯಕವನ್ನು ಮಾಡುವಲ್ಲಿ ದುರಾಚಾರಿಗಳ ಕೂಡ ಸಂಬಂಧವಿಟ್ಟದ್ದು ತಪ್ಪೆಂದು ಕೆಲವರು ಇನ್ನೊಂದು ಆಕ್ಷೇಪಣೆಯನ್ನು ಮುಂದು ಮಾಡಬಹುದು. ಆದರೆ ಈ ಆಕ್ಷೇಪಣೆಯು ಸರಿಯಾದದ್ದೆಂದು ಹೇಳಲಿಕ್ಕೆ ಬರಲಾರದು. ಯಾಕಂದರೆ ಲೋಕೋದ್ಧಾರಕ್ಕೋಸ್ಕರ ಪ್ರಯತ್ನಪಡುವದು ಶಿವಾನುಭವಿಯ ಕರ್ತವ್ಯವಾಗಿದೆ. ಆದ್ದರಿಂದ ಅವನು ದುಷ್ಟರೊಡನೆಯೂ ಇದ್ದುಕೊಂಡು ಅವರನ್ನು ಸನ್ಮಾರ್ಗಕ್ಕೆ ಹಚ್ಚುವದು ಅವನ ಕಾಯಕವಾಗಿದೆ. ಒಂದು ವೇಳೆ ಇಂಥವರೊಡನೆ ಸಂಬಂಧವಿಡದೆ ಹೋದರೆ, ಅವನು ಅವರನ್ನು ಸುಧಾರಿಸುವ ಬಗೆ ಹೇಗೆ? ಆದ್ದರಿಂದ ಜನರ ಸಂಬಂಧವನ್ನು ಬಿಟ್ಟುಕೊಟ್ಟು ಅರಣ್ಯಗಳಲ್ಲಿ ವಾಸಿಸುವದೂ ಅಲ್ಲಿ ಯಾರನ್ನೂ ಕಾಣದೆ ಏಕಾಂತದಲ್ಲಿರುವದೂ ಯಾವಾಗಲೂ ಧ್ಯಾನಸ್ಥನಾಗಿರುವದೂ ಜನರ ಸುಧಾರಣೆಗೆ ಕಾರಣವಾಗಲಾರದು. ಹಿಂದಿನ ಕಾಲದಲ್ಲಿ ಬೌದ್ಧ ಮತ್ತು ಜೈನ ಸನ್ಯಾಸಿಗಳೂ ಯೋಗಾಭ್ಯಾಸಿಗಳೂ ಈ ರೀತಿ ಆಚರಿಸಿದ್ದಾರೆ. ಆದರೆ ವಚನಕಾರರು ಈ ಮಾರ್ಗವನ್ನು ಹಳಿದಿದ್ದಾರೆ. ಶಿವಶರಣರು ನಿರ್ಜನ ಪ್ರದೇಶಗಳಲ್ಲಿರುವದಿಲ್ಲ. ಅವರು ಕೊರೆದ ಗುಹೆಗಳಲ್ಲಿ ವಾಸಿಸುವದಿಲ್ಲ. ಅವರು ಗ್ರಾಮುಗಳಲ್ಲಿ ಮಠಗಳನ್ನು ಕಟ್ಟಿಕೊಂಡು ಜನರಲ್ಲಿಯೇ ಇದ್ದುಕೊಂಡು ಅವರ ಸುಧಾರಣೆಗೋಸ್ಕರ ಪ್ರಯತ್ನ ಮಾಡುತ್ತಾರೆ. ಆದ್ದರಿಂದ ಅವರು ದುರಾಚಾರಿಗಳನ್ನೂ ದುಷ್ಟರನ್ನೂ ನೀತಿ ಇಲ್ಲದವರನ್ನೂ ಉಪೇಕ್ಷಿಸುವದಿಲ್ಲ. ಅವರು ಅವರಲ್ಲಿಯೇ ಇದ್ದು ಅವರ ಉದ್ಧಾರಕ್ಕೋಸ್ಕರ ಪ್ರಯತ್ನ ಮಾಡುತ್ತಾರೆ. ಆದ್ದರಿಂದ ಅವರು ತಮ್ಮ ವಚನಗಳಲ್ಲಿ ದುರಾಚಾರಿಗಳನ್ನು ಉದ್ದೇಶಿಸಿ ಅನೇಕ ರೀತಿಯಿಂದ ಬೋಧೆ ಮಾಡಿದ್ದಾರೆ. ಅವರ ಉಕ್ತಿಗಳಲ್ಲಿ ನೀತಿಯ ವಾಕ್ಯಗಳು ತುಂಬಿಹೋಗಿರುತ್ತವೆ. ಆದ್ದರಿಂದ ಹೆಂಡದ ಮಾರಯ್ಯನು ತನ್ನ ಕಾಯಕವನ್ನು ಮಾಡುವಲ್ಲಿ ಹೆಂಡಗುಡಿಕರನ್ನೂ ದುರಾಚಾರಿಗಳನ್ನೂ ದುರ್ವ್ಯಸನಿಗಳನ್ನೂ ತನ್ನಲ್ಲಿ ಬರಮಾಡಿಕೊಂಡು ಅವರಿಗೂ ತನ್ನ ಶಿವಾನುಭವದ ರೀತಿಯನ್ನು ತಿಳಿಸಿಕೊಟ್ಟು ಅವರನ್ನು ಸನ್ಮಾರ್ಗಕ್ಕೆ ಹಚ್ಚಿದಲ್ಲಿ, ಅದು ದೋಷಯುಕ್ತ ವರ್ತನೆಯೆಂದು ಹೇಳಲು ಎಂದೂ ಬರಲಾರದು. ಅದು ಉಚ್ಚತನು ನಡೆಯಾಗಿರುತ್ತದೆ.

ಆದರೆ ಶಿವಾನುಭವಿಗಳಾದವರು ಇಂಥ ಕೆಡಕು ಪ್ರವೃತ್ತಿಯ ಜನರಲ್ಲಿ ಹೇಗೆ ಸಂಬಂಧವನ್ನಿಡಬೇಕೆಂಬುದನ್ನು ವಚನಕಾರರು ತಮ್ಮ ವಚನಗಳಲ್ಲಿ ಹೇಳಿದ್ದಾರೆ. ಅವರು ಅವರಲ್ಲಿ ಇದ್ದೂ ಇಲ್ಲದಂತಿರಬೇಕು. ಕಮಲವು ನೀರಿನಲ್ಲಿದ್ದರೂ ಹೇಗೆ ಅದಕ್ಕೆ ಆ ನೀರು ಹತ್ತುವದಿಲ್ಲವೋ ಹಾಗೆ ಅವರು ಇರಬೇಕು. ಹೀಗಿದ್ದರೆ ದುರಾಚಾರಿಗಳ ಪರಿಣಾಮವು ಅವರ ಮೇಲೆ ಏನೂ ಆಗದು. ಈ ವಿಷಯವಾಗಿ ಒಬ್ಬ ವಚನಕಾರನು ಅನ್ನುವದೇನಂದರೆ--

"ಇಹಪರವೆಂಬ ಈ ದೆಸೆ ಆ ದೆಸೆಯಾದವರ ಪರಿ ಹೊಸತು. ನೆಯಿ ಹತ್ತದ ನಾಲಿಗೆಯಂತೆ ಹುಡಿ ಹತ್ತದ ಗಾಳಿಯಂತೆ ಕಾಡಿಗೆ ಹತ್ತದ ಆಲಿಯಂತಿರ್ದೆನಯ್ಯಾ. ಸಿಮ್ಮಲಿಗೆಯ ಚನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸದಂತಿರ್ದೆನಯ್ಯಾ.

ಈ ಪ್ರಕಾರ ಶಿವಾನುಭವಿಗಳು ಜಗತ್ತಿನಲ್ಲಿದ್ದುಕೊಂಡು ಜಗತ್ತಿನ ಉದ್ಧಾರವನ್ನು ಮಾಡುತ್ತಾರೆ. ಪೃಥ್ವಿಯಲ್ಲಿ ಆಗಿಹೋದ ಧರ್ಮ ಸ್ಥಾಪಕರೂ, ಧರ್ಮೋದ್ಧಾರಕರೂ, ಮಹಾತ್ಮರೂ ಸಾಧುಗಳೂ, ಶರಣರೂ ಹೀಗೆಯೇ ವರ್ತಿಸಿದ್ದಾರೆ.

## (೩) ಸುರಾಪಾನಿಗಳ ಸಂಬಂಧ

ಹೆಂಡದ ಮಾರಯ್ಯನು ತನ್ನ ಕಾಯಕವನ್ನು ಮಾಡುವಲ್ಲಿ ಸಿಂದಿ. ಸರಾಯಿಗಳನ್ನು ಅರವಟಿಗೆಯಲ್ಲಿಟ್ಟು ಅವುಗಳ ಚಟವಿದ್ದವರಿಗೆ ಅವುಗಳನ್ನು ಸೇವಿಸಲಿಕ್ಕೆ ಕೊಡುತ್ತಿದ್ದನೆಂದು ಅವನ ಚರಿತ್ರೆಯಲ್ಲಿ ಹೇಳಿದೆ. ಇದು ಯೋಗ್ಯವೋ ಹೇಗೆ, ಎಂಬುದೊಂದು ಬಿಕ್ಕಟ್ಟಿನ ಪ್ರಶ್ನೆಯು ಇಲ್ಲಿ ಉಂಟಾಗುತ್ತದೆ. ಈ ವಿಷಯದಲ್ಲಿ ಮತಭೇದವಾಗುವಂತಿದೆ. ಆದರೆ ಇದು ದೋಷಯುಕ್ತವಲ್ಲವೆಂದು ನಮಗೆ ತೋರುತ್ತದೆ. ವ್ಯಸನಾಧೀನರನ್ನು ಸುಧಾರಿಸುವ ಉದ್ದಿಶ್ಯವಾಗಿ ಹೀಗೆ ಮಾರಯ್ಯನು ಆಚರಿಸಿದ್ದಾದರೆ ಅದು ದೋಷವಾಗಲಾರದು. ಇಷ್ಟೇ ಅಲ್ಲ, ಅದು ಹೆಚ್ಚಿನ ತರದ ವರ್ತನೆ ಎಂದು ನಾವು ಭಾವಿಸಬೇಕು. ಮಾರಯ್ಯನು ಸ್ವತಃ ಹೆಂಡಗುಡಿಕನಿದ್ದಿಲ್ಲ. ಅವನ ೧೪ ವಚನಗಳು ನಮ್ಮಲ್ಲಿವೆ. ಅವುಗಳಿಂದ ಅವನು ಉಳಿದ ಶಿವಶರಣರಂತೆಯೇ ಅತ್ಯಂತ ಶುದ್ಧ ವರ್ತನೆಯುಳ್ಳವನಾಗಿದ್ದನೆಂದು ಸ್ಪಷ್ಟವಾಗುತ್ತದೆ. ಅವುಗಳಲ್ಲಿ ಕೆಲವು ಮದ್ಯ

ಷಾನಕ್ಕೆ ಸಂಬಂಧಿಸಿವೆ. ಅವುಗಳನ್ನು ನಾವು ಕೆಳಗೆ ಉದಹರಿಸುತ್ತೇವೆ. ಅವುಗಳನ್ನು ನಾವು ವಿಚಾರಮಾಡಿದಲ್ಲಿ ಹೆಂಡದ ಮಾರಯ್ಯನು ಸರಾಯಿಯನ್ನು ಕುಡಿಯುವಂಥವರನ್ನು ತನ್ನಲ್ಲಿ ಬರಮಾಡಿಕೊಂಡರೂ ಅವರಿಗೆ ಧರ್ಮದ ಉಚ್ಚವಿಚಾರಗಳನ್ನು ಬೋಧಿಸುತ್ತ ಅವರು ತಮ್ಮ ವ್ಯಸನಗಳನ್ನು ಬಿಡಲು ಪ್ರಯತ್ನಿಸುತ್ತಿದ್ದನೆಂದು ಕಂಡುಬರುತ್ತದೆ.

ವ್ಯಸನಗಳು ತೀವ್ರವಾಗಿ ದೂರಾಗುವದಿಲ್ಲ. ಅವುಗಳನ್ನು ಬಿಡಲಿಕ್ಕೆ ಕೆಲವು ಕಾಲ ಹತ್ತುತ್ತದೆ. ಆದ್ದರಿಂದ ಅವುಗಳ ಸೇವನೆಗಾಗಿ ಕೆಲವು ಕಾಲ ಅವುಗಳನ್ನು ಕುಡಿಯುವವರಿಗೆ ಆಸ್ಪದಕೊಡಬೇಕಾಗುತ್ತದೆ. ಹೆಂಡದಮಾರಯ್ಯನು ಈ ದೃಷ್ಟಿಯನ್ನಿಟ್ಟುಕೊಂಡು ವರ್ತಿಸಿದ್ದರಿಂದ ಅದರಲ್ಲಿ ಅವನದು ಆವ ದೋಷವೂ ಇರಲಾರದು. ಮಾರಯ್ಯನು ರಚಿಸಿದ ವಚನಗಳ ಮುದ್ರಿಕೆಯು 'ಧರ್ಮೇಶ್ವರಾ' ಎಂದಿದೆ. ಅವನ ಕೆಲವು ವಚನಗಳನ್ನು ನಾವು ಇಲ್ಲಿ ಉದಹರಿಸುತ್ತೇವೆ.

## ವಚನಗಳು

(೧) ಭಕ್ತಂಗೆ ಮಹಿಮೆ, ಮಹೇಶ್ವರಂಗೆ ನಿಷ್ಠೆ, ಪ್ರಸಾದಿಗೆ ದೃಷ್ಟ, ಪ್ರಾಣಲಿಂಗಿಗೆ ವ್ಯವಧಾನ, ಶರಣಂಗೆ ಸರ್ವಗುಣ ಸಂತೋಷ, ಐಕ್ಯಂಗೆ ಪರಿಪೂರ್ಣತ್ವ ಇಂತೀ ಷಟ್‌ಸ್ಥಲವನಾಚರಿಸಿ ನಡೆವಲ್ಲಿ ಹುಸಿ, ಕೊಲೆ, ಕ್ಷುದ್ರ, ಕುಹಕ, ವಿಶ್ವಾಸಘಾತಕ, ಪರವಧು, ಪರಾಪೇಕ್ಷೆ, ನಿಂದೆ, ಇಂತಿವರೊಳಗಾದ ಬಂಧಮಂ ಬಿಟ್ಟು, ನಿಂದ ಸ್ಥಲಕ್ಕೆ ಸಂಶಯವಿಲ್ಲದೆ, ಆತ್ಮಂಗೆ ಅರಿಕೆಯಲ್ಲಿ ಮತ್ತೊಂದುವ ಹಿಡಿಯದೆ, ಲೆತ್ತ, ಚದುರಂಗ, ಪಗಡೆ, ಪರಿಹಾಸಕ, ಚರ್ಚೆಗೋಷ್ಠಿಯಲ್ಲಿ ನಿಲ್ಲದೆ ನಿತ್ಯ ನೇಮಂಗಳಲ್ಲಿ ಸತ್ತುಚಿತ್ತಾನಂದ ಇಂತೀ ತ್ರಿವಿಧವನತಿಗಳೆದು ನಿಂದ ನಿಶ್ಯಂಕದಲ್ಲಿ ಸರ್ವಸಂಗವ ಪರಿತ್ಯಾಗವ ಮಾಡಿ, ನಿಂದ ನಿಃಕಲದಲ್ಲಿ ಲಿಂಗಾರ್ಚನೆ, ಪೂಜೆ, ಕೃತ್ಯ ತಪ್ಪದೆ, ಮಾಡುವ ನಿಶ್ಯಂಕದಲ್ಲಿ ಜಪ ತಪ ನಿತ್ಯ ನೇಮ ತತ್ಕಾಲವನರಿವ ಸಾವಧಾನ ಸಂಬಂಧಿಗಳಲ್ಲಿ ಎರಡಿಲ್ಲದೆ ಮಾಡುವುದು ಸಾವಧಾನವಂತನ ಸಂಬಂಧ, ಆತ ಕೂಗಿಂಗೆ ಹೊರಗು, ಮಹಾಮಹಿಮ ಧರ್ಮೇಶ್ವರಾ.

ಭಾವಃ-- ಈ ವಚನದಲ್ಲಿ ವೀರಶೈವ ಮತ ತತ್ವದ ಸಾರವು ಅಡಕವಾಗಿದೆ. ಷಟ್‌ಸ್ಥಲವನ್ನು ಹಿಡಿದುಕೊಂಡು ನೈತಿಕಾಚಾರವನ್ನು

ಅವಲಂಬಿಸಿ ಉಚ್ಚ ಅನುಭವವನ್ನು ಹೊಂದಿ ಲಿಂಗಾಂಗ ಸಾಮರಸ್ಯ ವನ್ನು ಹೇಗೆ ಹೊಂದಬೇಕೆಂಬುದನ್ನು ಹೆಂಡದ ಮಾರಯ್ಯನು ಇಲ್ಲಿ ಹೇಳಿದ್ದಾನೆ. ಇದರಲ್ಲಿ ಅವನು ನೈತಿಕಾಚಾರಕ್ಕೆ ಶ್ರೇಷ್ಠ ಸ್ಥಾನವನ್ನು ಕೊಟ್ಟಿದ್ದು ಕಂಡುಬರುತ್ತದೆ.

೨ ವಚನಃ--ನಾ ಮಾರಬಂದ ಸುಧೆಯ ಕೊಂಬವರಾರೂ ಇಲ್ಲ. ಒಳಗಣ ಇಂದ್ರಿಯಕ್ಕೆ ಹೊರಗಣ ಭಾಜನಕ್ಕೆ ಉಂಡು ದಣಿದು, ಕಂಡು ದಣಿದು, ಸಂದೇಹವ ಬಿಟ್ಟು ದಣಿದು, ಕಂಡುದ ಕಾಣದೆ, ಸಂದೇ ಹದಲ್ಲಿ ಮರೆಯದೆ, ಆನಂದವೆಂಬುದ ಆಲಿಂಗನವ ಮಾಡಿ, ಆ ಕಣ್ಣಂ ಮುಚ್ಚಿ, ಮತ್ತಮಾ ಕಣ್ಣಂ ತೆರೆದು ನೋಡಲಾಗಿ ಧರ್ಮೇಶ್ವರಲಿಂಗವು ಕಾಣಬಂದಿತ್ತು.

ಭಾವಃ-- ಇದರಲ್ಲಿ ಹೆಂಡದ ಮಾರಯ್ಯನು ಸುರೆಯನ್ನು ಕುಡಿದು ಮತ್ತರಾದವರ ಸ್ಥಿತಿಯನ್ನು ಮನಸ್ಸಿನಲ್ಲಿ ತಂದು ಅವರಿಗೆ ಯಾವ ರೀತಿಯ ಆನಂದವಾಗುತ್ತದೋ, ಅದರಂತೆಯೇ ತಾನು ಕುಡಿ ಯಲಿಕ್ಕೆ ಕೊಡುವ ಸುಧೆಯು, ಅಂದರೆ ಶಿವಾನುಭವವು, ಪರಿಣಾಮ ಮಾಡುತ್ತದೆಂದು ಹೇಳಿ ಈ ಸುಧೆಯನ್ನು (ಅಂದರೆ ಅಮೃತವನ್ನು) ಕುಡಿಯುವವರಾರೂ ಇಲ್ಲವಲ್ಲಾ ಎಂದು ಅವನು ದುಃಖಿಸುತ್ತಾನೆ.

ಈ ವಚನವ ಮೇಲಿಂದ ಹೆಂಡದ ಮಾರಯ್ಯನು ತನ್ನ ಅರವ ಟಿಗೆಯಲ್ಲಿ ಹೆಂಡವನ್ನು ಕುಡಿಯಲಿಕ್ಕಿಟ್ಟ ಹೆಂಡಗುಡಿಕರಿಗೆ ಶಿವಾನು ಭವವನ್ನು ಬೋಧಿಸಿ, ಈ ಅನುಭವವೆಂಬ ಅಮೃತವನ್ನು ಸುರೆಯ ಬದಲು ಕುಡಿಯಿರೆಂದು ಹೇಳುತ್ತಿದ್ದನೆಂದು ತೋರಿಬರುತ್ತದೆ. ಈ ಅನುಭವ ವನ್ನು ಹೊಂದಿದರೆ ಅಂತರ್ಯದಲ್ಲಿ ಪಾರಮಾರ್ಥಿಕ ಬದಲಾವಣೆಯಾ ಗುವದು. ಇದರಿಂದ ಬಾಹ್ಯ ಶರೀರವನ್ನು ಮದೋನ್ಮತ್ತತೆಯಲ್ಲಿ ಕೆಡ ಹುವ ಸುರೆಯನ್ನು ನೀವು ಬಿಡುವಿರಿ ಎಂದು ಅವನು ಹೇಳುತ್ತಾನೆ. ಪಾರ ಮಾರ್ಥಿಕ ಸಾಧನೆಯಿಂದ ಮನುಷ್ಯನ ಚಟಗಳು ದೂರಾಗುವವೆಂದು ಹೆಂಡದ ಮಾರಯ್ಯನು ಹೆಂಡಗುಡಿಕರಿಗೆ ಇಲ್ಲಿ ಹೇಳುತ್ತಿದ್ದಾನೆ.

ಅವನು ಇಲ್ಲಿ ಹೇಳುವದೇನೆಂದರೆ--ನಾನು ಕುಡಿಯಲು ಕೊಡುವ ಸುಧೆಯನ್ನು ಸೇವಿಸುವವರಾರೂ ಇಲ್ಲ, ಎಂದು ಮೊದಲು ದುಃಖಿಸು ತ್ತಾನೆ. ನಿಮ್ಮ ಹೆಂಡದಿಂದ ಒಳಗಣ ಇಂದ್ರಿಯ ಮತ್ತು ಹೊರಗಣ

ಶರೀರ ಇವುಗಳು ತೃಪ್ತವಾದಂತೆ ತೋರುವದೇನೋ ನಿಜವು. ಆಗ ನಿಮ್ಮ ಕಣ್ಣುಗಳು ದಣಿಯುತ್ತವೆ. ನಿಮ್ಮಲ್ಲಿ ಯಾವ ತರದ ಸಂದೇಹ ಗಳು ಉಳಿಯುವದಿಲ್ಲ. ಸುತ್ತಲಿನ ಪದಾರ್ಥಗಳು ನಿಮಗೆ ಕಾಣದಂತಾ ಗುತ್ತವೆ. ಸಂದೇಹವೆಂಬುದು ಏನೂ ತೋರುವದಿಲ್ಲ. ಎಲ್ಲದರ ಸ್ಮರ ಣೆಯು ನಿಮ್ಮಲ್ಲಿ ಇದೆ ಎಂತಲೂ ನಿಮಗೆ ಆಗ ಭಾಸವಾಗುತ್ತದೆ. ಈ ಸುರೆಯು ಚರ್ಮ ಚಕ್ಷುವನ್ನು ಮುಚ್ಚಿ ಜ್ಞಾನ ಚಕ್ಷುವನ್ನು ತೆರೆ ಯಿಸಿದಂತಾಗುತ್ತದೆ. ಆದರೆ ಹಾಗೆಯೇ ನನ್ನ ಸುಧೆಯೂ ನಿಮ್ಮ ಮೇಲೆ ಪರಿಣಾಮಮಾಡುತ್ತದೆಂದು ಹೇಳಿ, ಇದನ್ನು ಅಂದರೆ ಜ್ಞಾನಾ ಮೃತವನ್ನು ಕುಡಿಯಿರೆಂದು ಹೇಳುತ್ತಾನೆ. ಆದರೆ ಇದಕ್ಕೆ ಸಿದ್ಧರಾರೂ ಇಲ್ಲವಲ್ಲಾ ಎಂದು ಮಾರಯ್ಯನು ದುಃಖಿಸುತ್ತಾನೆ.

ಇಲ್ಲಿ ಹೆಂಡಗುಡಿಕರಿಗೆ ಮಾತ್ರವಲ್ಲ, ಇತರ ಭಕ್ತಾದಿಗಳಿಗೂ ಕೂಡ ಉಚ್ಚ ಪಾರಮಾರ್ಥಿಕ ಬೋಧೆಯನ್ನು ಹೆಂಡದಮಾರಯ್ಯನು ಮಾಡಿ ದ್ದಾನೆ.

(೩) ವಚನಃ— ಕರಣನಾಲ್ಕು, ಮದವೆಂಟು, ವ್ಯಸನ ಏಳು, ಅರಿ ಷಡ್ವರ್ಗಗಳಲ್ಲಿ ಇಂತೀ ಉರವಣೆಗೊಳಗಾಗುತ್ತ ಆಣವ, ಮಾಯಿಕ, ಕಾರ್ಮಿಕ, ಮೂರು ಸುರೆಯಲ್ಲಿ ಮುದುಡುತ್ತ ನಾ ತಂದ ಸುಧೆ ನಿಮ ಗಿಲ್ಲ ಎಂದೆ. ಅದು ಧರ್ಮೇಶ್ವರಲಿಂಗದ ಅಪ್ಪಣೆ.

ಭಾವಃ— ಇಲ್ಲಿ ಸುರಾಪಾನಿಗಳಿಗೆ ಸಿಟ್ಟಿನಿಂದ ಬೋಧಿಸುತ್ತಾನೆ. ಎಲೋ ಸುರಾಪಾನಿಗಳೇ, ನಾನು ನಿಮಗೆ ಒಂದು ಸುರೆಯನ್ನು ತಂದಿ ದ್ದೇನೆ. ನಾನೇನು ಮಾಡಲಿ? ಅದು ನಿಮಗೆ ದೊರಕಲಾರದು. ಇದು ಪರಮಾತ್ಮನ ಅಪ್ಪಣೆ ಎಂದು ಹೇಳುತ್ತಾನೆ. ಅದು ನಿಮಗೆ ಯಾಕೆ ದೊರೆಯುವದಿಲ್ಲೆಂದರೆ, ನೀವು ನಾಲ್ಕು ಕರಣಗಳು, ಎಂಟು ಮದ ಗಳು, ಏಳು ವ್ಯಸನಗಳು, ಆರು ವಿಧದ ವೈರಿಗಳು, ಇವುಗಳ ಉರವಣೆ ಯಲ್ಲಿದ್ದೀರಿ. ನೀವು ಮೂರು ತೆರದ ಸುರಾಪಾನಗಳನ್ನು ಮಾಡುತ್ತಾ ಇದ್ದೀರಿ. ಅವು ಆಣವ ಮಲ, ಮಾಯಿಕಮಲ, ಮತ್ತು ಕಾರ್ಮಿಕ ಮಲ ಇವುಗಳೇ ಇವೆ. ಅವುಗಳಲ್ಲಿ ನೀವು ಮುದ್ದೆಯಾಗಿ ಬಿದ್ದಿದ್ದೀರಿ. ಆದರೆ ಅವುಗಳ ಬದಲು ನಿಮಗೆ ನಾನು ಕುಡಿಯಲು 'ಸುಧೆ' ಎಂದರೆ ಅಮೃತವನ್ನು ಕೊಡಲಪೇಕ್ಷಿಸುತ್ತೇನೆ. ಆದರೆ ಅದು ನಿಮಗೆ ದೊರಕ ಲಾರದು. ಯಾಕಂದರೆ ಪರಮಾತ್ಮನ ಅಪ್ಪಣೆ ಹಾಗಿದೆ. ಅಂದರೆ ಶಿವಾ

ನುಭವವೆಂಬುದು ನಿಮ್ಮಂಥ ಸುರಾಪಾನಿಗಳಿಗಿಲ್ಲ, ಎಂದು ಹೇಳುವದೇ ವಚನಕಾರನ ಮುಖ್ಯ ಭಾವವು.

(೪) ವಚನಃ-- ಮಣ್ಣೆಂಬ ಘಟದ ಮಧ್ಯದಲ್ಲಿ ಹೊನ್ನೆಂಬ ಸುರೆ ಹುಟ್ಟಿತ್ತು. ಹೆಣ್ಣೆಂಬ ಬಟ್ಟಲಲ್ಲಿ ಅಂತು ಈಂಟಲಾಗಿ ಲಹರಿ ತಲೆಗೇರಿತ್ತು. ಈ ಉನ್ಮತ್ತದಲ್ಲಿ ಮಗ್ನರಾದವರೆಲ್ಲರೂ ಅರುಹಿರಿಯ ರೆಂತಪ್ಪರೋ? ಭಕ್ತಿ ವಿರಕ್ತಿ ಎಂಬುದತ್ತಲೆ ಉಳಿಯಿತ್ತು. ಧರ್ಮೇಶ್ವರ ಲಿಂಗದತ್ತ ಮುಂತಿಲ್ಲ.

ಭಾವಃ— ಸುರಾಪಾನಿಗಳು ಮಣ್ಣಿನಿಂದಾದ ತಮ್ಮ ದೇಹದಲ್ಲಿ ಹೊನ್ನು ಎಂಬ ಸುರೆಯನ್ನು ಉಂಟುಮಾಡಿಕೊಂಡು, ಹೆಣ್ಣೆಂಬ ಬಟ್ಟಲಲ್ಲಿ ಅದನ್ನು ಕುಡಿಯುತ್ತಾರೆ. ಇದರಿಂದ ಇವರು ಉನ್ಮತ್ತರಾಗಿ ಜ್ಞಾನದಿಂದ ಹೊರಗಾಗುತ್ತಾರೆ. ಇವರಿಗೆ ಭಕ್ತಿ, ವಿರಕ್ತಿ ಎಂಬುವು ಇಲ್ಲ. ಅಂದ ಬಳಿಕ ಇವರು ಪರಮಾತ್ಮನ ಸಾಮರಸ್ಯವನ್ನು ಹೊಂದುವದು ದೂರವೇ ಸರಿ ಎಂದು ಹೇಳುತ್ತಾನೆ.

(೫) ವಚನಃ-- ಘಟಕುಂಭದಲ್ಲಿ ಜೀವನೆಂಬ ಜೆಗಟ ಬಂದಿತ್ತು. ದೃಷ್ಟದ ಇಷ್ಟದಲ್ಲಿ ಕಟ್ಟಲಾಗಿ ಮೂಳೆ ಮುರಿದು ಒಡಲೊಡೆಯಿತ್ತು. ಅಂಗದ ಅಗ್ನಿಯಲ್ಲಿ ಬೇಯಿಸಿ ಮೂರು ಸಂಗ ಒಡೆದ ಮಡಕೆಯ ಓಡಿನಲ್ಲಿ ಶ್ರುತ, ದೃಷ್ಟ, ಅನುಮಾನವೆಂಬ ಕೋಲಿನಲ್ಲಿ ಕಡೆಯಲಾಗಿ ರಸ ಒಳಗಾಗಿ ಹೆಪ್ಪ ಹೊರಗಾಯಿತ್ತು. ಆ ಸುಧೆಯ ತುಂಬಿ ತಂದೆ. ಒಮ್ಮೆಗೆ ಕೊಂಡಲ್ಲಿ ಬ್ರಹ್ಮನ ಕಲ್ಪವ ಕೆಡಿಸಿತ್ತು. ಮತ್ತೊಮ್ಮೆಗೆ ಕೊಂಡಲ್ಲಿ ವಿಷ್ಣುವಿನ ಗೊತ್ತಕಿತ್ತಿತ್ತು. ಮೂರೆಂದು ಮೊದಲಾಹಾಗ ಮೀರಿದ ರುದ್ರನ ಅಗಡವ ಕಿತ್ತಿತ್ತು. ಅರಿವು ಕೊಂಡಲ್ಲಿ ಸುಧೆ, ಮರೆದು ಕೊಂಡಲ್ಲಿ ಸುರೆಯಾಗಿ ಅದು ಹಿರಿಯರ ಮರವೆಯ ಮಾಡಿತ್ತು. ನಾ ತಂದ ಬೇಹಾರವ ಆಹವರೆಲ್ಲರು ಕೊಳ್ಳಿ ಧರ್ಮೇಶ್ವರ ಲಿಂಗವನರಿಯಬಲ್ಲಡೆ.

ಭಾವಃ-- ಇದು ಬೆಡಗಿನ ವಚನವಿದೆ. ಸುರಾಪಾನಿಗಳಿಗೆ ಉದ್ದೇಶಿಸಿಯೇ ಇದೆ. ಹಾಗೆಯೇ ಸುರೆಯನ್ನು ಮಾಡುವವರಿಗೂ ಇದು ಸಂಬಂಧಪಟ್ಟಿದೆ. ಸುರೆಯನ್ನು ಸೇವಿಸಬಾರದೆಂದು ಬೋಧ ಮಾಡುವದೇ ವಚನಕಾರನ ಮುಖ್ಯ ಉದ್ದೇಶವಿರುವದು ಸ್ಪಷ್ಟವದೆ.

(೬) ವಚನಃ-- ಮಣ್ಣು ಹೊನ್ನು ಹೆಣ್ಣೆಂಬ ತ್ರಿಭಂಗಿಯಲ್ಲಿ ಭಂಗಿತರಾಗಿ ಆಸೆಯೆಂಬ ಮಧುಪಾನದಿಂದ ಉಕ್ಕಲಿತವಿಲ್ಲದೆ ವಸ್ತುವ

ಮುಟ್ಟುವದಕ್ಕೆ ದೃಷ್ಟವಿಲ್ಲದೆ ಇಂತೀ ಕಷ್ಟದ ಮರೆಯಲ್ಲಿ ದೃಷ್ಟದ ಸುರಾಪಾನವ ಕೊಂಡು ಮತ್ತರಾಗುತ್ತ ಇಷ್ಟದ ದೃಷ್ಟದ ಚಿತ್ತ ಮತ್ತುಂಟೇ? ಧರ್ಮೇಶ್ವರ ಲಿಂಗವ ಮುಟ್ಟದೆ ಇತ್ತಲೆ ಉಳಿಯಿತ್ತು.

(೭) ವಚನ:--- ಬಲ್ಲೆವೆಂಬ ಮದದಲ್ಲಿ ಅರಿದೆನೆಂಬ ಮಹಾ ಮದವಂ ಕೊಂಡು ಅಹಂಕಾರವೆಂಬ ಮದ ಸರ್ವಾಂಗವ ವೇಧಿಸಿ ತಲೆಗೇರಿದಲ್ಲಿ ಸತ್ತೆಂಬುದನರಿಯದೆ ಚಿತ್ತೆಂಬುದ ತಿಳಿಯದೆ ಆನಂದವೆಂಬ ಆಶ್ರಯುವ ಭಾವಿಸಿ ನೋಡದೆ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯದ ಭೇದವ ಕಾಣಲರಿಯದೆ ಅಂಡ ಪಿಂಡವೆಂಬ ಖಂಡಿತವ ತಿಳಿಯಲರಿಯದೆ ದಿಂಡೆಯತನದಿಂದ ಕಂಡೆನೆಂದರೆ ಅದು ತಾ ಕೊಂಡ ಮೂರು ಹೆಂಡದ ಗುಣವೆಂಬೆ.

ಮೇಲಿನ ೬ ನೇ ಮತ್ತು ೭ ನೇ ವಚನಗಳು ಭಂಗೀ ಸೊಪ್ಪು, ಮದ್ಯಪಾನ ಮಾಡುವವರನ್ನೂ ಹೆಂಡಗುಡಿಕರನ್ನೂ ಉದ್ದೇಶಿಸಿ ಇದ್ದು ಅವುಗಳಲ್ಲಿ ಹೆಂಡದ ಮಾರಯ್ಯನು ಉಚ್ಚತರದ ಪಾರಮಾರ್ಥಿಕ ಬೋಧೆಯನ್ನು ಮಾಡುತ್ತ ಈ ವ್ಯಸನಕ್ಕೆ ಒಳಗಾಗಬೇಡಿರೆಂದು ಹೇಳಿದ್ದಾನೆ. ಈ ಎರಡೂ ವಚನಗಳಲ್ಲಿ ಶಿವಾನುಭವದ ವಿಚಾರಗಳು ತುಂಬಿವೆ.

ಬಸವೇಶ್ವರನು ಕಲ್ಯಾಣಪಟ್ಟಣದಲ್ಲಿ ಕೀಳ ಜನರನ್ನೂ ವ್ಯಸನಾಧೀನರನ್ನೂ, ದುಷ್ಟರನ್ನೂ ಕೂಡಿಸಿಕೊಂಡು ವೀರಶೈವ ಧರ್ಮದ ಪ್ರಸಾರ ಮಾಡಿದನೆಂದು ಅವನ ಮೇಲೆ ಬಹುಜನರ ಆರೋಪವಿರುತ್ತದೆ. ಇದಕ್ಕೆ ಅವರು ಹೆಂಡದ ಮಾರಯ್ಯನ ಉದಾಹರಣೆಯನ್ನು ಆಗಿಂದಾಗ್ಗೆ ಕೊಡುತ್ತಾರೆ. ಆದರೆ ಹೆಂಡದ ಮಾರಯ್ಯನ ವಚನಗಳಿಂದ ಅವನು ಹೆಂಡಗುಡಿಕರನ್ನೂ ಮದ್ಯಸೇವನೆ ಮಾಡುವವರನ್ನೂ ತನ್ನಲ್ಲಿ ಬರಮಾಡಿಕೊಳ್ಳುತ್ತಿದ್ದರೂ ಅವನು ಅವರಿಗೆ ಶಿವಾನುಭವದ ಉಚ್ಚ ವಿಚಾರಗಳನ್ನು ಬೋಧಿಸಿ ಇಂಥವರು ತಮ್ಮ ವ್ಯಸನಗಳನ್ನು ಬಿಡಲಿಕ್ಕೆ ಅವನು ಪ್ರಯತ್ನ ಮಾಡುತ್ತಿದ್ದನೆಂಬುದು ನಾವು ಮೇಲೆ ಉದಹರಿಸಿದ ವಚನಗಳಿಂದ ಕಂಡುಬರುತ್ತದೆ.

## ಶಿವಶರಣರ ಚರಿತ್ರೆಗಳು.

### ಭಾಗ ೧.

ಈ ಚರಿತ್ರೆಯು ಈ ತಿಂಗಳಿನ ಸಂಚಿಕೆಯಲ್ಲಿ ಮುಗಿದಿರುತ್ತದೆ. ಈ ಗ್ರಂಥವು ಸ್ವತಂತ್ರವಾಗಿಯೂ ಮುದ್ರಣವಾಗಿರುತ್ತದೆ. ಇದಕ್ಕೆ ಉತ್ತಮ ತರದ ನುಣುಪು ಕಾಗದಗಳನ್ನು ಉಪಯೋಗಿಸಿರುತ್ತದೆ. ಇದು ಹೊಸ ಪದ್ಧತಿಯ ಗ್ರಂಥವಿರುತ್ತದೆ. ಪ್ರತಿಗಳ ಸಂಖ್ಯೆ ಬಹಳ ಕಡಿಮೆ ಇದ್ದು ಗ್ರಾಹಕರು ಪುಸ್ತಕವನ್ನು ಸಂಗ್ರಹಿಸಲು ತ್ವರೆಮಾಡಬೇಕೆಂದು ವಿನಂತಿ ಇದೆ. ಇದರ ಬೆಲೆ ೧ ರೂ. ೧೨ ಆಣೆ.

ಮ್ಯಾನೇಜರ
ಹಿ. ಪ್ರೆ. ವಿಜಾಪುರ.

ಮುಂಬಯಿ ಸರಕಾರದವರು

ಪಾಸ ಮಾಡಿದ "ಲ್ರೋಣಿ" ಇವರ ಗ್ಯಾಸ ಪ್ಲಾಂಟಗಳನ್ನ

ನಿಮ್ಮ ಮೋಟಾರ ಲಾರಿಗಳಿಗೆ ಉಪಯೋಗಿಸಿರಿ. ಇದ್ದಲಿಯ ಖರ್ಚ ಬಹಳೇ ಕಡಿಮೆ ಇದ್ದು, ಬೇಗನೆ ಸ್ಟಾರ್ಟವಾಗಿ ಭರಪೂರ ವಜ್ಜೆಯನ್ನು ಹೊತ್ತುಕೊಂಡು ತೀವ್ರ ವೇಗದಿಂದ ನಡೆಯುತ್ತವೆ. ಕೆಲಸಕ್ಕೆ ಬಹಳೇ ಸುಲಭ. ಮಶಿನರಿಗಳಿಗೆ ಬಿಲಕೂಲ ಅಪಾಯವಿಲ್ಲ. ದೃಷ್ಟಿಗೆ ಶುಭ್ರ. ಇದಲ್ಲದೆ ಟಾಯರಿಂಗ ಕಾರ್ಸ ಮತ್ತು ಆಯಿಲ್ ಇಂಜನಗಳ ಸಲುವಾಗಿ ಸಹ ತಯಾರಿಸಲ್ಪಟ್ಟವೆ. ವಿಶೇಷ ಮಾಹಿತಿ ಸಲುವಾಗಿ ಬರೆಯಿರಿ.

ದಿ ಲ್ರೋಣಿ ಇಂಜನಿಯರಿಂಗ ವರ್ಕ್ಸ ಸೋಲಾಪೂರ.

R. N. B. 2554

**BOOK-POST.**

ಶ್ರೀ. ರಾ॥ ರಾ॥

ಹಟ್ಟಿ

ಸ್ಟೇ. ಕಾರಟಗಿ

(M. S. M. R.)

*From,*
**Shivanubhava**
**Office**
**Bijapur.**

ಈ ಗ[illegible]ಯನ್ನು ಇದರ ಸಂಪಾದಕರಾದ, ರಾ॥ ಬ॥ ಪಿ. ಜಿ. ಬಿ[illegible]ಲ್. ಎಲ್. ಬಿ. ವಿಜಾಪುರ ಇವರು ವಿಜಾಪುರದಲ್ಲಿ ತಮ್ಮ ಹಿತಚಿಂ[illegible]ಕ ಪ್ರಿಂ. ಪ್ರೆಸ್ಸಿನಲ್ಲಿ ಮುದ್ರಿಸಿ ವಿಜಾಪುರದಲ್ಲಿ ತಮ್ಮ [illegible] (ಪ್ರ) ಮನೆಯಲ್ಲಿ ಪ್ರಸಿದ್ಧಿಸಿದರು.




ಪ್ರತಿ ತಿಂಗಳ ೧೫ನೇ ತಾರೀಖಿಗೆ ಪ್ರಕಟವಾಗುವದು.

ವಾರ್ಷಿಕ ಚಂದಾ ಅಂಚೆವೆಚ್ಚಸಹಿತ ರೂ ೩—೧೦—೦

ಸಂಪುಟ ೧೮]　　ಸಪ್ಟಂಬರ ೧೯೪೪.　　[ಸಂಚಿಕೆ ೧೨

## ವಿಷಯಾನುಕ್ರಮಣಿಕೆ.

## ಶಿವಾನುಭವಕ್ಕೆ ಸಹಾಯ

ಈಗಿನ ಬಿಕ್ಕಟಿನ ಕಾಲದಲ್ಲಿ ಪತ್ರಿಕೆಗಳನ್ನು ನಡಿಸುವದು ಬಹಳ ದುಸ್ತರವಾದ ಕಾರ್ಯವಾಗಿದೆ. ವಾಚಕ ವರ್ಗದವರ ವಿಶೇಷ ಸಹಾಯ ವಿಲ್ಲದ ಹೊರತು ಈ ಕಾರ್ಯದಲ್ಲಿ ಯಶಸ್ವಿಯಾಗದೆ ಇರದು. ಹೋದ ವರುಷ ಅನೇಕ ಮಹನೀಯರು ನಮಗೆ ಸಹಾಯ ಮಾಡಿದ್ದರಿಂದ ಇದನ್ನು ನಡಿಸಲು ಶಕ್ಯವಾಯಿತು. ಇದಕ್ಕೋಸ್ಕರ ಅವರೆಲ್ಲರ ಉಪ ಕಾರವನ್ನು ನಾವು ವಿಶೇಷವಾಗಿ ಸ್ಮರಿಸುತ್ತೇವೆ. ಈ ವರುಷವಾದರೂ ಪತ್ರಿಕೆಗೆ ಸಹಾಯವು ಅತ್ಯವಶ್ಯಕವಾಗಿ ಬೇಕಾಗಿರುತ್ತದೆ. ಇದೇ ಸಂಚಿ ಕೆಗೆ ಅದರ ವರ್ಷವು ಮುಗಿಯುವದರಿಂದ ಈ ಸಮಯದಲ್ಲಿ ನಮ್ಮ ವಾಚಕರು ನಮಗೆ ಮೊದಲಿನಂತೆಯೇ ಸಹಾಯವನ್ನು ನೀಡಿ ಪತ್ರಿಕೆಯು ನಡೆದು ಹೋಗುವಂತೆ ಮಾಡಬೇಕೆಂದು ನಮ್ಮ ಸವಿನಯ ವಿನಂತಿ ಇದೆ.

ಶ್ರೀ. ಗುರುಸಿದ್ದಪ್ಪ ಎಮ್. ಲೋಣಿ ದಿ. ಲೋಣಿ ಇಂಜನಿಯರಿಂಗ ವರ್ಕ್ಸ ಸೊಲ್ಲಾಪುರ ಇವರು ಶಿವಾನುಭವ ಪತ್ರಿಕೆಗೆ ೨೫ ರೂ. ಗಳನ್ನು ಸಹಾಯ ನಿಧಿಯಾಗಿ ಕಳಿಸಿದ್ದಾರೆ. ಇದಕ್ಕಾಗಿ ಇವರಿಗೆ ನಾವು ಅತ್ಯಂತ ಆಭಾರಿಯಾಗಿದ್ದೇವೆ..

ಫ. ಗು. ಹಳಕಟ್ಟಿ<br>
ಸಂಪಾದಕ ಶಿವಾನುಭವ.

# ಶಿವಾನುಭವ

| ವರ್ಷ ೧೮ | ಸಪ್ಟಂಬರ ೧೯೪೪. | ಸಂಚಿಕೆ ೧೨ |
|---|---|---|

## ಕನ್ನಡ ಭಕ್ತಿದೀಪಕ—ಬಸವಣ್ಣ.

### (೪) 'ಸಂಗನಿಗೆ ವೀರ, ಶರಣರಿಗೆ ವಧು.'

( ಲೇಖಕ:— ಸಿಂಪಿ ಲಿಂಗಣ್ಣ )

---

**ಶರಣರು ದೇವಪ್ರತಿನಿಧಿ.**

ಕಪ್ಪಡಿಸಂಗಮದಲ್ಲಿ ಬಸವಣ್ಣನು ತನ್ನ ಅತುಲಭಕ್ತಿಸಾಧನೆಯಿಂದ ಸಂಗಮದೇವನನ್ನು ಒಲಿಸಿಕೊಂಡನಷ್ಟೇ? ಅದರ ಫಲವಾಗಿ ತನ್ನನ್ನು ತಾನು ಅರಿತನು. ಆ ಕಾಲಾವಧಿಯಲ್ಲಿ ಬಸವಣ್ಣನು ಸಂಗನನ್ನು ಕಾಡಿದನು, ಬೇಡಿದನು; ಅವನಿಗಾಗಿ ಅತ್ತನು, ಕರೆದನು; ಬಸವಳಿದನು, ಬಿಸುಸುಯ್ದನು; ನೊಂದನು, ಬೆಂದನು; ತಣಿದನು, ಕುಣಿದನು: ಆಂತರ್ಯದಲ್ಲಿ ಅತಿ ವಿನಯವುಳ್ಳಾತನಾಗಿಯೂ, ಬಾಹ್ಯದಲ್ಲಿ ವೀರ ಭಕ್ತನಾಗಿಯೂ ಸಂಗನ ಕೃಪೆಯನ್ನು ಪಡೆದನು. ಕಪ್ಪಡಿಯಲ್ಲಿ ಬಸವಣ್ಣನದು ಒಂಟಿಗಜೀವನ; ಸಾಧನೆಯೂ ಅಂಥದೇ; ಪಡೆದುದೂ ಅದೇ ತನ್ನನ್ನೇ ತಾನು. ಅದು ವೀರಪಥವಾಯ್ತು. ತನ್ನ ತಾನರಿತ ಮೇಲೆಯೂ ಆತ್ಮಪಥವು ಮುಗಿಯದು. ತಾನು ಎಲ್ಲರಲ್ಲಿಯೂ, ಎಲ್ಲವೂ ತನ್ನಲ್ಲಿಯೂ ಎಂಬ ತಿಳಿವು ಮುಂದಿನ ಮೆಟ್ಟಿಲಲ್ಲಿ ಬರಬೇಕಾಗಿರುತ್ತದಂತೆ. ಸಂಸಾರದ ಸರ್ವದುಃಖಗಳನ್ನೂ ಮೋಹಗಳನ್ನೂ ದಾಟಬೇಕಾದರೆ, ಸರ್ವತವನ್ನು ತನ್ನಲ್ಲಿಯೂ ತನ್ನನ್ನ ಸರ್ವತ್ರದಲ್ಲಿಯೂ ಕಾಣುವ ಕಾಣ್ಕೆಯು ಕುಡಿವರಿಯಬೇಕಷ್ಟೇ? "ತತ್ರ ಕೋ ಮೋಹಃ ಕಶ್ಶೋಕ ಏಕತ್ವಮನು

ಪತ್ಯತೀ” ಈ ಸಾಧನೆಯಲ್ಲಿ ಸಹ ಸಾಧಕನು ಒಬ್ಬನಾದರೂ ,ಅವನ ಕ್ಷೇತ್ರವು ವಿಸ್ತಾರವಾದುದು; ಸಂಬಂಧವು ವಿಶಾಲವಾದುದು. ಸರ್ವ ಸಂಪನ್ನನಿಗೆ ಮಾತ್ರ ಮಣಿದ ಶಿರವು ವಿವಿಧ ರೂಪದ ಸೃಷ್ಟಿಗೆ ತಲೆವಾಗ ಬೇಕಾಗುವದು. ದೇವದೇವನನ್ನು ಎರಗಲು ಜೀವವು ಹಿಂಜರಿಯದು: ಆದರೆ ಸಮಷ್ಟಿಗೆ ಬಾಗುವುದಕ್ಕೆ ಜೀವ ಒಮ್ಮೆಲೆ ಒಪ್ಪುವದಿಲ್ಲ. ಮಾನವಕೋಟಿಯನ್ನು ಮನ್ನಿಸುವದೆಂದರೆ ಜೀವದ ಸುತ್ತೇ ಬರುತ್ತದೆ. ಅಂಥಲ್ಲಿಯೂ ದೇವದೇವನ ಕಿರಣಸ್ವರೂಪರಾದ ಸತ್ಪುರುಷರನ್ನೂ ಶರಣರನ್ನೂ ಮನ್ನಿಸಲಿಕ್ಕೆ ಅಡ್ಡಿಯಿಲ್ಲವೆನಿಸುತ್ತದೆ. ಶರಣರು ದೇವಾಂಶರಾಗಿದ್ದಂತೆ, ಮರೆತ ಮಾನವರೂ ಆಗಿರುವದರಿಂದ ಸಾಧಕನು ಅವರ ಸಂಬಂಧವನ್ನು ತೂಗಿಸಿಕೊಂಡು ಹೋಗುವುದು ಬಲು ಬಿಗಿ; ಬಿಗಿಯಾದರೂ ಸಾಧಿಸದೆ ಗತ್ಯಂತರವಿಲ್ಲ. ಅಂತೆಯೇ ಸಂಗನ ಮುಂದೆ ವೀರನಾದ ಬಸವಣ್ಣನು ಶರಣರಿಗೆ ವಧುಪಸಂತಾಗಬೇಕಾಯ್ತು; ಅವರನ್ನು ದೇವ ಪ್ರತಿನಿಧಿಗಳೆಂದು ಭಾವಿಸಬೇಕಾಯ್ತು; ಹಾಗೆ ಭಾವಿಸಲು ತನ್ನ ಹೃದಯವನ್ನು ಅಣಿಗೊಳಿಸಬೇಕಾಯ್ತು. ಹೃದಯವು ಸುಮ್ಮನೆ ಒಪ್ಪುವುದೇ? ಶರಣರಲ್ಲಿಯ ಅವಗುಣಗಳನ್ನು ಬದಿಗಿರಿಸಿ ಅಥವಾ ಮರೆತು, ಶಿವ ಗುಣಗಳನ್ನಷ್ಟೇ ನೆನೆಯುವ ಹಂಸಕ್ಷೀರನ್ಯಾಯದಲ್ಲಿಯ ಹಂಸನಾಗಬೇಕಾಗುವದು; ದಿವ್ಯರನ್ನೂ ದಿವ್ಯರೆಂದು ಕಾಣದ ತುಂಟ ಮನಸ್ಸಿಗೆ ದಿವ್ಯ ದೃಷ್ಟಿಯುಂಟಾಗದೆ ಈ ಸಾಧನೆಯು ಮುಂದುವರಿಯದು. ಬಸವಣ್ಣನು ಶರಣರನ್ನು ದೇವಪ್ರತಿನಿಧಿಗಳೆಂದು ಸ್ವೀಕರಿಸಲು ಮನಸ್ಸನ್ನು ಹೇಗೆ ತರಬೇತುಗೊಳಿಸಿದನೆಂಬುದು ಅರಿಯತಕ್ಕ ಸಂಗತಿಯೇ. “ಲಿಂಗದಲ್ಲಿ ದಿಟವನರಸುವರೆ ಜಂಗಮವ ನೆರನಂಬ”ಬೇಕಾಗಿರುವುದರಿಂದ “ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಕುಲಜ”ನಾದವನು ಮಾತ್ರ ನಂಬುಗೆಗೆ ಅರುಹನು. ಅಂಥ “ಜಂಗಮಕೆ ನೀಡಿ ಜಂಗಮ ಪ್ರಸಾದ ಕೊಂಡೊಡೆ” ಸಂಗನಿಗೆ ಅದು ಅರ್ಪಿತ. ಜಂಗಮವೆಂದರೆ ಲಿಂಗದ ಬಾಯಿ. “ಮರಕ್ಕೆ ಬಾಯಿ ಬೇರು ಎಂದು ತಳಕ್ಕೆ ನೀರನೆರೆದಡೆ ಮೇಲೆ ಪಲ್ಲವಿಸಿತ್ತು ನೋಡಾ.” ಅಂಥ ಮಹಾನುಭಾವರಾದ “ಶರಣರ ಚರಣದ ಚಮ್ಮಾವುಗೆಗೆ ಪೃಥ್ವಿ ಸಮಬಾರದು.” ಅವರ ಮನೆಯಲ್ಲಿ “ಅವರೊಕ್ಕುದನುಂಡು, ಮಿಕ್ಕುದ ಕಾಯ್ದುಕೊಂಡಿಪ್ಪ ಕಾರಣ; ಕಾಲಮುಟ್ಟಲಮ್ಮದು; ಕಲ್ಪಿತ ತೊಡೆಯಿತು; ಭವಬಂಧನ ಹಿಂಗಿತ್ತು; ಕರ್ಮನಿರ್ಮಾಳ

ವಾಯಿತು. ಅಂಥವರನ್ನು ತೊತ್ತಿನ ತೊತ್ತಿನ ಮರುದೊತ್ತಿನ ಮಗ ನೆಂದು ಕೂಡಲಸಂಗಮ ದೇವನು ಇತ್ತ ಬಾ" ಎಂದು ಎತ್ತಿಕೊಳ್ಳದಿರು ವನೇ? ಭಕ್ತನ ಈ ವಿನಯ ಶೀಲತೆಯು ಹೊರಗಿನವರಿಗೆ ಹೇಡಿತನವೆಂದು ತೋರುವದು. ಅವನು ಮರುಳನೆನಿಸಿಕೊಳ್ಳುವನು. "ಬಂಜೆ ಬೇನೆಯ ನರಿಯದಂತೆ ಒಬ್ಬೊಬ್ಬರೊಂದು ನುಡಿವರು." ಆದರೆ "ಸಂಗನ ಶರಣರು ಲಿಂಗಮುಖಿಗಳೆ"ಂಬುದು ಅವರಿಗೇನು ಗೊತ್ತು ? ಅವರು ಅಂಜಬೇಡೆಂದು ಅಭಯಕೊಟ್ಟರೆ, ಭಕ್ತನಿಗೆ ಆನೆಯ ಶಕ್ತಿ ಬರದಿದ್ದರೂ-ಬದುಕಿಯಾದರೂ ಉಳಿಯುವನು.

"ಆಸತ್ತೆನಲಸಿದೆನೆಂದಡೆ ಮಾಣದು; ಬೇಸತ್ತೆ ಬೆಂಬಿದ್ದೆನೆಂದಡೆ ಮಾಣದು; ಏವೆನೇವೆನೆಂದರೆ ಮಾಣದು; ಕಾಯದ ಕರ್ಮದ ಫಲ ಭೋಗ. ಕೂಡಲಸಂಗನ ಶರಣರು ಬಂದು ಹೋ-ಹೋ ಅಂಜದಿ ರೆಂದಡಾನು ಬದುಕುವೆನು."

ದೇವಪ್ರತಿನಿಧಿಗಳನ್ನು ಪ್ರತ್ಯಕ್ಷದೇವರೇ ಎಂದು ಭಾವಿಸುವಂಥ ಬೇರೆ ಉದಾಹರಣೆಗಳು ವ್ಯವಹಾರದಲ್ಲಿವೆ. ಹಾಗೆ ನಾವು ಆಚರಿಸು ತ್ತಲೂ ಇದ್ದೇವೆ. ಮೂರ್ತಿಯನ್ನೋ ಭಾವಚಿತ್ರವನ್ನೋ ಪೂಜಿಸು ತ್ತಿರುವ ಮಾನವನಿಗೆ, ಶರಣರನ್ನು ದೇವಪ್ರತಿನಿಧಿಯೆಂದು ಒಪ್ಪಿಕೊ ಳ್ಳುವುದು ಹೊಸಮಾತಲ್ಲ. "ನಿಮ್ಮವರ ಸುಳಹು ನೀವೆಂದೇ ಭಾವಿಸಿ ತೊತ್ತುಭೃತ್ಯ" ನಾದ ಬಸವಣ್ಣನ ಭಕ್ತಿಯೆಂಬ ಭಂಡಕ್ಕೆ ಜಂಗಮವೇ ಸುಂಕಿಗ; ಯಾಕಂದರೆ "ಕಳ್ಳ ನಾಣ್ಯ ಸಲುಗೆಗೆ ಸಲ್ಲದು; ಕಳ್ಳ ನಾಣ್ಯವ ಸಲ್ಲಲೀಯರಯ್ಯ."

## ಶರಣರ ಬಾಹ್ಯಚಿಹ್ನ

ಅಂಜುವವರ ಮೇಲೆ ಕಪ್ಪೆ ಒಗೆಯುವ ಬಂ[illegible]ಸಂಸಾರದಲ್ಲಿ ಶರಣರನ್ನು ಗುರುತಿಸುವ ಬಗೆ ಹೇಗೆ? ಬಸವಣ್ಣನು ಲಕ್ಷದಮೇಲೆ ತೊಂಬತ್ತಾರುಸಾವಿರ ಜನರನ್ನು ಗುರುತಿಸಿದನಲ್ಲ! ಅದೆಲ್ಲವೂ ಅಚ್ಚ ಪರೀಕ್ಷೆಯೋ ಆಯಿತೇ? ಬಾಹ್ಯಲಾಂಛನವು ಅವನ[illegible]ಹೊರಗಣ್ಣಿಗೆ ಮಂಕುಬೂದಿ ಎರಚಿದರೂ ಅವನ ಅಂತರಂಗವು ಅದನ್ನು ಗುರುತಿ ಸದೆ ಬಿಡಲಿಲ್ಲ. ಆಗ ತೊತ್ತಿಗೇಕೆ ತುಪ್ಪಿನ ವ್ಯಾಪಾರ? "ತೊತ್ತಿಂಗೆ ಲಕ್ಷಣವೇಕೆ?--ಸರಿ ಹೊರಸೇಕೆ? ಇದಿರುತ್ತರವೇಕೆ ಸಿಂಬಕಂಗೆ?"

ಎಂದುಕೊಂಡನು. ಇಂದು ಶರಣನ ವೇಷ ಬಂತು; ನಾಳೆ ಶರಣತ ನವೂ ಬಂದೀತೆಂದು ಯೋಚಿಸಿದನು; "ಕಾಯಗುಣಂಗಳ ಕಳೆದವಗೆ ಶರಣೆ"ನ್ನುವುದು ಬಸವಣ್ಣನ ವಾಡಿಕೆ. ಆದರೆ "ಹಾವು ನೇಣೆಂಬ ಭ್ರಾಂತು ಳ್ಳನ್ನಕ್ಕ ನಾನು ಭಕ್ತನಂತಪ್ಪೆನೆಂ"ದು ಕೇಳುವನು.

"ಎಡದ ಕೈಯುಲಿ ಕತ್ತಿ, ಬಲದ ಕೈಯುಲಿ ಮಾಂಸ, ಬಾಯುಲ್ಲಿ ಸುರೆ ಯುಗಡಿಗೆ, ಕೊರ್ಳಲ್ಲಿ ದೇವರಿರಲು ಅವರ ಲಿಂಗವೆಂಬೆ; ಸಂಗನೆಂಬೆ. ಕೂಡಲಸಂಗಮದೇವಾ, ಅವರ ಮುಖಲಿಂಗಿಗಳೆಂಬೆ. ?

ಯಾಕಂದರೆ, "ಜಂಗಮದೊಳಗೆ ಲಿಂಗಯ್ಯನಿದ್ದಾನೆಂಬ ನಂಬಿಗೆ ಯುಳ್ಳಡೆ ತನ್ನ ತೋರುವ ಕೂಡಲಸಂಗಮದೇವಯ್ಯ." ನಿಜವಾಗಿ ಶರಣರೆಂದರೆ "ಹೆಪ್ಪನೆರೆದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು." ಅವರು "ಧನದಲ್ಲಿ ಶುಚಿ; ಪ್ರಾಣದಲ್ಲಿ ನಿರ್ಭಯು"ರು. "ನಿಧಾನ ತಪ್ಪಿ ಬಂದರೆ ಒಲ್ಲೆನೆಂಬುವರಿಲ್ಲ; ಪ್ರಮಾದ ವಶದಿಂ ಬಂದರೆ ಒಲ್ಲೆನೆಂಬುವ ರಿಲ್ಲ; ನಿರಾಶೆ, ನಿರ್ಭಯು ಕೂಡಲಸಂಗಮದೇವ ನೀನೊಲಿದ ಶರಣಂಗ ಲ್ಲದಿಲ್ಲ." ಯೋಗಿಗೆ ಹಗಲೇ ರಾತ್ರಿಯೂ, ರಾತ್ರಿಯೇ ಹಗಲೂ ಆಗು ತ್ತಿರುವಂತೆ--

"ಶರಣ ನಿದ್ರೆಗೈದರೆ ಜಪ ಕಾಣಿರೋ-ಶರಣನೆದ್ದು ಕುಳಿತರೆ ಶಿವ ರಾತ್ರಿ ಕಾಣಿರೋ. ಶರಣ ನಡೆದುದೇ ಪಾವನ ಕಾಣಿರೋ. ಶರಣ ನುಡಿದುದೇ ಶಿವತತ್ವ ಕಾಣಿರೋ. ಕೂಡಲಸಂಗನ ಶರಣನ ಕಾಯುವೇ ಕೈಲಾಸ ಕಾಣಿರೋ."

## ಕಾಟ-ಬೇಟ.

ಲಕ್ಷದ ಮೇಲೆ ತೊಂಬತ್ತಾರುಸಾವಿರ ಗಣಂಗಳ ಸಂಖ್ಯೆಯುಷ್ಟೇ ಗುಣಗಳು-ಅಭಿರುಚಿಗಳು. ಅವರವರ ವ್ರತಗಳು ಬೇರೆ, ನಿಯುಮಗಳು ಬೇರೆ. ಸೂರ್ಯಕಿರಣಗಳು ಒಳಸೇರದ ಮಲ್ಲಿಗೆ ಬೇಕು-ಪೂಜೆಗೆ ಎಂದು ಒಬ್ಬನೆಂದರೆ, ಇನ್ನೊಬ್ಬನು "ಅನಿಲನು ಅಲುಗದ ಪತ್ರಿ ಬೇಕೆ ನ್ನುವನು; ಮತ್ತೊಬ್ಬನು ಜಲಚರಗಳು ಸೋಂಕದ ಅಗ್ಗವಣಿಬೇಡಿದರೆ, ಮಗುದೊಬ್ಬನು ರಂಗವಲ್ಲಿಗೆ ಗಜಮಸ್ತಕದ ಮುತ್ತು ಬೇಡುವನು. ಇಂಥ ವಿವಿಧ ಸ್ವಭಾವಗಳನ್ನು ಸಹಿಸಿ, ತೂಗಿಸಿಕೊಂಡು ಹೋಗು ವುದು ಹಗುರೇ? ಹೊಟ್ಟೆಯು ಹಸುಳೆ ಹಟಮಾಡಿದರೆ ರೋಸಿಹೋ

ಗುವುದು ಮಾನವನಿಗೆ ಸ್ವಾಭಾವಿಕವಾಗಿರುವಾಗ ಶಾರೀರಿಕ ಮಾನಸಿಕ ತಪಸ್ಸುಗಳಿಲ್ಲದಿದ್ದರೆ ಸಾಮರಸ್ಯಗುಣವು ಸಾಧಿಸಬಲ್ಲದೇ? ತನ್ನ ಸ್ವಭಾವ, ತನ್ನ ಅಭಿರುಚಿ, ಕೊನೆಗೆ ತನ್ನತನವನ್ನು ಸಹ ಕೊಂದುಕೊಳ್ಳಬೇಕಾಗುತ್ತದೆ. ಇದೂ ಒಂದು ಜೀವಿತಮರಣವೇ. ನವಜನ್ಮವನ್ನಾಶಿಸುವ ವೀರಶಿಶುವು ತನ್ನ ಸ್ವಭಾವಾಭಿರುಚಿಗಳನ್ನು ಲಯಗೊಳಿಸಲು ಹಿಂದುಮುಂದು ನೋಡಲಾರದು; ಬಸವಣ್ಣನು ಹಾಗೆ ಲಯಗೊಳಿಸಿದನೆಂದೇ ಹತ್ತೂ ದಿಕ್ಕಿನಿಂದ ಶರಣರು ಬಂದು ನೆರೆದಂತೆ, ಅವನಲ್ಲಿ ಅಷ್ಟು ದಿವ್ಯಕಿರಣಗಳೇ ಒಂದುಗೂಡಿದವೆನ್ನಬೇಕು. ಇಂಥ ಘಟನೆಗಳಿಂದ ಆತ್ಮಕಲ್ಯಾಣವಾಗುತ್ತಿದ್ದುದರ ಪ್ರತ್ಯಕ್ಷ ಅನುಭವವು ಆತನಿಗಾಗುತ್ತಿದ್ದುದರಿಂದ "ಕಾಡುವ-ಬೇಡುವ ಭಕ್ತರನ್ನು ತೋರಿಸೆಂ"ದೂ, "ಬೇಡಲಾರದ ಹಂದೆ ಬೇಡು-ಬೇಡು" ಎಂದೂ ಆಹ್ವಾನವಿತ್ತಿದ್ದಾನೆ. ಕೂಡಲಸಂಗನನ್ನು ಒಲಿಸುವುದು ಹಗುರು; ಆದರೆ ಶರಣರನ್ನು ಮೆಚ್ಚಿಸುವುದು ಬಿಗಿಯಾದ ಮಾತು. "ಶರಣರ ಭಕ್ತಿ ಬಾಳಬಾಯಿಧಾರೆ." ಆ ಹಾದಿ ಹಾವಸೆಗಲ್ಲಿನದು. "ಹಾವಸೆಗಲ್ಲ ಮೆಟ್ಟಿ ಹರಿದು ಗೊತ್ತುಮುಟ್ಟಬಾರದಯ್ಯ." ಅಚ್ಚಶರಣನು ಬೇಡಲಾರನು. ಬೇಡುವವ ಜಂಗಮನಲ್ಲ. ಬೇಡಿಸಿಕೊಳ್ಳದ ಭಕ್ತನು ತಾನಾಗಿಯೇ ಕೊಡಹೋದರೂ ಒಲ್ಲೆವೆಂಬರು ಶರಣರು. ಅವರೇ ಕೂಡಲಸಂಗನ ಸ್ವರೂಪರು. ಹೇಗೆಂದರೆ— "ಅನ್ಯರ ಮನೆಗೆ ಹೋಗಿ ತನ್ನುದರವ ಹೊರಿಯದ ಅಚ್ಚ ಶರಣರ ಕಂಡರೆ ನಿಶ್ಚಯವಾಗಿ ಕೂಡಲಸಂಗಯ್ಯನೆಂಬೆ." ಅವರು ಬೇಡು-ಭಿಕ್ಷುಕರಲ್ಲ; ಮಾಡಿ ಉಣ್ಣುವವರು; ಅವರಿಗೆ ಕಾಯಕವೇ ಕೈಲಾಸ. ಆದರೆ ನೀಡುವ ಬುದ್ಧಿಯನ್ನು ಭಕ್ತನಲ್ಲಿ ಮೊಳೆಯಿಸುವುದು ನಿಯತಿಯ ಉದ್ದೇಶವಾಗಿರುತ್ತದೆ. ಅದಕ್ಕಾಗಿ ಶರಣರ ಕಾಟ-ಬೇಟ; ಅದಕ್ಕಾಗಿಯೇ ಹಟವು—ಛಲವು. ಕಾಡಿ ಬೇಡದಿದ್ದರೂ ಕೆಲಕೆಲವು ಶರಣಶ್ರೇಷ್ಠರಿಗೆ ಬಸವಣ್ಣನು ತನ್ನ ಸರ್ವಸ್ವವನ್ನು ನೀಡಿಬಿಟ್ಟಿದ್ದನು; ಆದ್ದರಿಂದ ಕೂಡಲಸಂಗಯ್ಯನನ್ನು ಇನ್ನೇತರಿಂದ ನೆನೆಯಲೆಂದು ದಿಕ್ಕುಗಾಣದೆ ಕುಳಿತಿದ್ದನು. "ತನು ಅಲ್ಲಮನಲ್ಲಿ ಸಿಲುಕಿತ್ತು; ಮನ ಚೆನ್ನಬಸವಣ್ಣನಲ್ಲಿ ಸಿಲುಕಿತ್ತು; ನಾನೇತರಲ್ಲಿ ನೆನೆವೆನಯ್ಯ ಕೂಡಲಸಂಗಮದೇವಾ."

ಈ ತ್ಯಾಗವು ಬಸವಣ್ಣನಿಗೆ ಸುಲಭವೆಂದು ಸರ್ವರಿಗೂ ಸುಲಭವೇ? "ಮಾಗಿಯ ಬಿಸಿಲಿನಂತೆ ಮೊದಲಲ್ಲಿ ಲಿಂಗಭಕ್ತಿ ಹಿತವಾ

ಯಿತ್ತು; ಮಧ್ಯಾಹ್ನದ ಬಿಸಿಲಿನಂತೆ ಕಡೆಯಲ್ಲಿ ಜಂಗಮಭಕ್ತಿ ಕಠಿನವಾಯಿತ್ತು.'' ತ್ಯಾಗವು ಶ್ರೇಷ್ಠೋಪಾಯವೆನಿಸಿದರೂ ಅದು ಅವ್ಯರ್ಥವಾಗದಂತೆ ಬಳಸುತ್ತಿರಬೇಕು. ದುರ್ಬಲಯು ತನ ಸ್ಥೈರಣೆಯಂತೆ ಜೀವಹೀನವಾಗಿರಬಾರದು. ಶರಣರಿಗೆ ಇಚ್ಛಾಭೋಜನವಿಕ್ಕುವುದು ಅನಿವಾರ್ಯ ಹಾಗೂ ಸ್ವಪರಕಲ್ಯಾಣಕರವಾಗಿರುತ್ತದೆ; ಅಪಾತ್ರರಿಗೆ ಅದನ್ನಿಕ್ಕಿದರೆ ''ಕಿಚ್ಚಿನೊಳಗೆ.. ಹೊಯ್ದ ಹವಿಯು ಬೆಳೆದಂತಾಗುವದು." ಆ ವಿಷಯವಾಗಿ ಬಸವಣ್ಣನು ಡಂಗುರಿಸುವುದು ಹೇಗೆಂದರೆ--

"ಹೊನ್ನ ನೇಗಿಲಲುತ್ತು ಎಕ್ಕೆಯ ಬೀಜವ ಬಿತ್ತುವರೇ? ಕರ್ಪೂರದ ಮರನ ಕಡಿದು ಕಳ್ಳಿಗೆ ಬೇಲಿಯನಿಕ್ಕುವರೇ? ಶ್ರೀಗಂಧದ ಮರನ ಕಡಿದು ಬೇವಿಂಗಡೆಯನಿಕ್ಕುವರೇ?"

## ಕೊಡುಗೈ ವಿಪುಲತೆ.

ಕಲ್ಲಕ್ಕ ಕಡಬು ಕೊಟ್ಟರೆ, ದ್ಯಾವಕ್ಕ ದೋಸೆ ಕೊಡ.ವಳು; ಉತ್ತಮನಾದವಂಗೆ ಕೊಡಬೇಕು; ಸತ್ಪಾತ್ರದಲ್ಲಿ ಕೊಡಬೇಕು; ಕೊಟ್ಟಿದ್ದು ತನಗೆ, ಬಚ್ಚಿಟ್ಟಿದ್ದು ಪರರಿಂಗೆ; ಕೊಟ್ಟು ಕೆಟ್ಟೆನೆನಬೇಡ, ಅದು ಕಟ್ಟದ ಬುತ್ತಿ, ಮೊದಲಾದವುಗಳು ಹಳ್ಳಿಗರಲ್ಲಿಯೂ ಬೆಳ್ಳಿಗರಲ್ಲಿಯೂ ರೂಢವಾದ ಕೊಡುಗೆಯ ನೀತಿಗಳು. ಮನುಷ್ಯರು ತಮ್ಮ ತಮ್ಮ ಯೋಗ್ಯತೆಯನ್ನನುಸರಿಸಿ, ಇವುಗಳಲ್ಲಿಯ ಯಾವುದಾದರೊಂದು ನಿಯಮವನ್ನು ಆಯ್ದುಕೊಳ್ಳುವರು. ಆದರೆ ಇವೆಲ್ಲವನ್ನೂ ಮೀರಿದ ಸ್ವಭಾವದವರ ನಿಲವುಗಳೂ ಇಲ್ಲದಿಲ್ಲ. ಅವುಗಳಲ್ಲಿ ಒಂದು ಆಚೆಯ ದಂಡೆಯದು; ಇನ್ನೊಂದು ಈಚೆಯ ದಂಡೆಯದು. ಮಹಾನುಭಾವರಿಗೆ ಸರ್ವಸ್ವವನ್ನು ಒಪ್ಪಿಸಿದರೆ ಮಹಾನುಭಾವನನ್ನಾಗಿಯೇ ಮಾಡಿಬಿಡುವ ಕೊಡುಗೆ ಆಚೆಯ ದಂಡೆಯದು. ಅದು 'ಗುರಿ ತಾಗಿದ ಮೃಗದಂತೆ. "ಶರಣರ ಅನುಭಾವವರಿದವರ ಮರಳಿ ಮರ್ತ್ಯರೆಂದೆನಬಹುದೇ?" ಈಚೆಯ ದಂಡೆಯ ಕೊಡುಗೆಯ ಒಂದು ಉದಾಹರಣೆ-- ''ಕಲ್ಲನಾಗರ ಕಂಡರೆ ಹಾಲನೆರೆ ಎಂಬರು; ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬ ಜಂಗಮ ಬಂದರೆ ನಡೆ ಎಂಬರು; ಉಣ್ಣದ ಲಿಂಗಕ್ಕೆ ಬೋನವ ಹಿಡಿ ಎಂಬರಯ್ಯ.'' ಆದರೆ ಇಂಥವರ ಸ್ಥಿತಿ ಕಲ್ಲು ತಾಗಿದ ಮಿಟ್ಟೆಯಂತೆ. ತನುಮನಧನಗಳನ್ನಾಗಲೀ, ಕಾಯಾ ವಾಚಾ ಮನಗಳನ್ನಾಗಲೀ ಒಪ್ಪಿಸಿ ಕೊಟ್ಟ ಭಕ್ತನು ಸತಿಶಿರೋಮಣಿಯಂತೆ. ಆಕೆ ಗಂಡನ ಅಡಿಯಲ್ಲಿ

ಅಡಿಇಡುವಳು; ತಾನು ಆತನ ಹಿನ್ನೆಳಲು; ತನ್ನ ಪ್ರಾಣವಲ್ಲ, ಆತನ ಪ್ರಾಣ; ಆಯುಷ್ಯವೂ ಆತನದೇ. ಅಂದಮೇಲೆ ಸುಖದುಃಖ, ಮಾನಾಪಮಾನಗಳ ಬೆಲೆಯೇನು?

"ಕಳಹೋದರೆ ಕನ್ನದುಳಿಯು ಹಿಡಿವೆ. ಬಂದಿವಿಡಿದರೆ ನಿಮ್ಮಿಂದ ಮುಂದೆ ನಡೆವೆ. ಮನಭೀತಿ ಮನಶಂಕೆಗೊಂಡೆನಾದರೆ ನಿಮ್ಮಾಣೆ, ನಿಮ್ಮ ಪುರಾತನರಾಣೆ. ಆಚಾರ ನಡೆ ಸದಾಚಾರವೆನ್ನದಿದ್ದರೆ ಕಟ್ಟಾಳು ಶಿಷ್ಯತನಕ್ಕೆ ಹೋಹ ಕಷ್ಟವ ನೋಡಾ."

"ಹೊತ್ತಾರೆ ಎದ್ದು ಕಣ್ಣ ಹೊಸೆಯುತ್ತ ಎನ್ನ ಒಡಲಿಂಗೆ, ಎನ್ನ ಒಡವೆಗೆ, ಎನ್ನ ಮಡದಿಮಕ್ಕಳಿಗೆಂದು ಕುದಿದೆನಾದಡೆ ತಲೆದಂಡ ತಲೆದಂಡ ಕೂಡಲಸಂಗಮದೇವಾ."

"ತನು ನಿಮ್ಮದೆಂಬೆ, ಮನ ನಿಮ್ಮದೆಂಬೆ, ಧನ ನಿಮ್ಮದೆಂಬೆ.

ಬಸವಣ್ಣನು ಈ ನಿಲವಿಗೆ ಬರಬೇಕಾದರೆ ಅದೆಷ್ಟೋ ಸಾರೆ ಆತನ ತನುವು ಮುಗ್ಗರಿಸಿದೆ; ಅದೆಷ್ಟೋ ಸಾರೆ ಆತನ ಮನವು ಹಿಂದೆಳೆದಿದೆ; ಅದೆಷ್ಟೋ ಸಾರೆ ಆತನ ಪ್ರಾಣವು ವಂಚಿಸಿದೆ. ಆಗಾಗ ಆವನು ಹತಾಶನಾಗಿದ್ದಾನೆ; ಹಣೆಹಣೆ ಗಟ್ಟಿಸಿಕೊಂಡಿದ್ದಾನೆ; ಮುಂದಿನ ಹಾದಿ ಏನೆಂದು ಯೋಚಿಸಿದ್ದಾನೆ; ಕಡೆಗೆ ಸಂಗನ ಸಹಾಯಕ್ಕೆ ಬೊಗಸೆಯೊಡ್ಡಿದ್ದಾನೆ; ಸಹಾಯಶಕ್ತಿ ಬಂದಾಗ ಇಮ್ಮಡಿ-ನಾಲ್ಮಡಿ ಹುರುಪಿನಿಂದ ಮತ್ತೆ ಮುಂದುವರಿದಿದ್ದಾನೆ.

## ಆತ್ಮವತ್ ಸರ್ವಭೂತಾನಿ.

ಸಂಗನು ತನ್ನ ಕೈಯಾಯುಧವಾದ ಬಸವಣ್ಣನನ್ನು ಹದಗೊಳಿಸಿದನು; ಹದನಗೊಳಿದನು; ಆ ಆಯುಧಕ್ಕೆ ಮೆರುಗನ್ನಿಟ್ಟನು; ವಜ್ರದ ಹಿಡಿಕೆಯನ್ನು ಹಚ್ಚಿದನು; ಅದನ್ನು ಚೆಲುವಾದ ಒರೆಯಲ್ಲಿಟ್ಟನು. ಇದೀಗ ಬಸವಣ್ಣನು ದೇವನಾಯುಧ. ಅವನು ಆತ್ಮವತ್-ಸರ್ವಭೂತಾನಿ ಎಂಬ ಪಾಠವನ್ನು ಕಲಿಯಲು ಕಲ್ಯಾಣದಲ್ಲಿ ಅಂಥಾದ್ದೊಂದು ಸಲಕರಣೆಯನ್ನೇ ನೆರೆಯಿಸಬೇಕಾಯ್ತು; ಅಷ್ಟೊಂದು ಕಾಲ ಹಣ ಮಾಡಬೇಕಾಯ್ತು; ಕೋಲಾಹಲವನ್ನೆಸಗಬೇಕಾಯ್ತು. ಆ ವಿಶ್ವವಿದ್ಯಾಲಯದಲ್ಲಿ, ಅದಕ್ಕೆ ಸಂಬಂಧಪಟ್ಟವರೆಲ್ಲರೂ ವಿದ್ಯೆಕಲಿತರು; ಬುದ್ಧಿ ಕಲಿತರು; ಆತ್ಮೋದ್ಧಾರ ಮಾಡಿಕೊಂಡರು; ಬಸವಣ್ಣನ ಸಂಕಲ್ಪವು ಕಿಡಿಹೋಗಿ ಕೆಂಡವಾಯ್ತು; ಹತ್ತುಗಡೆಯ ಗಿಡಮರಗಳಲ್ಲಿ ಅಗ್ನಿಯನ್ನೆಬ್ಬಿಸುವ ಜ್ವಾಲೆಯಾಯ್ತು. ಆ ಜ್ವಾಲೆಯಲ್ಲಿ ಕುಲಹೀನನು ಕುಲ

ವಂತನಾದನು; ಹೇಡಿಯು ವೀರನಾದನು; ಕೀಳು ಮೇಲಾಯ್ತು; ಮಾನವನು ಶರಣನಾದನು; ಭೂಲೋಕವು ಭುವರ್ಲೋಕವಾಯ್ತು; ಕಲ್ಯಾಣದ ಅಂಕಿತವು ಅನರ್ಥಕವಾಯ್ತು; ಕಲ್ಲು ಕುಣಿದವು; ಹುಲ್ಲು ಚಿಗಿದವು; ಮುಗಿಲು ಅಗಲಾಯಿತು; ಚಿಕ್ಕೆ ನಕ್ಕವು; ಕಡಲು ಉಕ್ಕಿದವು; ಕತ್ತಲೆ ಅಡಗಿತು; ಬೆಳಕು ಬೆಳಗಿತು; ನಿಚ್ಚ ಶಿವರಾತ್ರಿಯಾಯ್ತು.

ವ್ಯಾವಹಾರಿಕವಾಗಿ ಬಿಜ್ಜಳನು ರಾಜ; ಬಸವಣ್ಣ ಮಂತ್ರಿ, ಮಂತ್ರಿಯು ರಾಜನಿಗೆ ಬಾಗಿ ನಡೆಯಬೇಕು—ಇದು ವ್ಯವಹಾರ ಧರ್ಮ. ಆದರೆ ಭಕ್ತಿಭಂಡಾರಿಯಾದ ಬಸವಣ್ಣನು ಬಾಗಿದ್ದು ಸಂಗನಿಗೆ—ಸಂಗನ ಶರಣರಿಗೆ; ಹೀಗೆಂದ ಮಾತ್ರಕ್ಕೆ ಬಿಜ್ಜಳರಾಯನೊಡನೆ ವಿನಯದಿಂದ ವರ್ತಿಸದೆ ಬಸವಣ್ಣನು ಬಂಡನಂತೆ ವರ್ತಿಸಿದನೆಂದು ಭಾವಿಸಲಾಗದು. ಅಲ್ಲಿಯೂ ನಮ್ರತೆಯಿಂದ ನಡಕೊಂಡನು. ಅದು ಜನರಿಗೆ ಅಂಜುಬುರುಕತನವೆಂದು ಕಂಡುಬಂತು. ಅಂಥ 'ನಿರ್ಭಯಚಿತ್ತ'ರಿಗೆ "ಆನು ಬಿಜ್ಜಳಂಗಂಜುವೆನೆ ಅಯ್ಯ; ಕೂಡಲಸಂಗಮದೇವಾ, ನೀನು ಸರ್ವ ಜೀವದಯಾಪರನಾದ ಕಾರಣ ನಿಮಗಂಜುವೆನಲ್ಲದೆ" ಎನ್ನುವುದರ ಅರ್ಥವೂ ಚೆನ್ನಾಗಿ ಆಗಿರಬೇಕು!

"ದೇವ ದೇವ! ಎನ್ನ ಬಿನ್ನಪವ ಅವಧಾರು. ವಿಪ್ರಮೊದಲು ಅಂತ್ಯಜಕಡೆಯಾಗಿ ಶಿವಭಕ್ತರಾದವರನೆಲ್ಲ ಒಂದೇ ಎಂಬೆ. ಹಾರುವ ಮೊದಲು ಅಂತ್ಯಜಕಡೆಯಾಗಿ ಭವಿಯಾದವರನು ಒಂದೇ ಎಂಬೆ. ಹೀಗೆಂದು ನಂಬುವುದೆನ್ನ ಮನವು. ಈ ನುಡಿದ ನುಡಿಯೊಳಗೆ ಎಳ್ಳ ಮೊನೆಯನಿತು ಸಂದೇಹವುಳ್ಳರೆ ಹಲುದೋರ ಮೂಗ ಕೊಯ್ವ ಕೂಡಲ ಸಂಗಮದೇವ."

ಇದರಲ್ಲಿ ಎಲ್ಲರೂ ಒಂದೇ ಎಂಬ ಧ್ವನಿಯು ನಿನದಿಸುತ್ತಿದ್ದರೆ, ಕೆಳಗಿನ ನುಡಿಯಲ್ಲಿಯ ಬಸವಣ್ಣನ ವಿಶಾಲಮನವನ್ನು ಯಾರು ಅಳೆಯಬೇಕು?

"ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯ. ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯ. ಜಗಕೆ ಬಲ್ಲಿದ ನೀನು. ಆನು ನಿನಗೆ ಬಲ್ಲಿದನು ಕಂಡಯ್ಯ. ಕರಿಯು ಕನ್ನಡಿಯೊಳಗಡಗಿದಂತಯ್ಯ. ಎನ್ನೊಳಗೆ ನೀನಡಗಿದೆ ಕೂಡಲಸಂಗಮದೇವಯ್ಯ."

ಈ ನುಡಿಯು ಶರಣರಿಗೆ ಮಧುವಾದರೂ, ಸಂಗನಿಗೆ ವೀರನಾದ ಬಸವಣ್ಣನ ವೀರಭಕ್ತಿಗೆ ಒಪ್ಪುವಂಥದು.

## ಶ್ರೀಮನ್ನಿರಂಜನ ಜಗದ್ಗುರು ಶ್ರೀಗುರುಸಿದ್ಧ ಪ್ರಭುದೇವರು ನವಕಲ್ಯಾಣಮಠ ಧಾರವಾಡ ಇವರ

# ರನ್ನ ಮಹೋತ್ಸವವು.

ಈ ಉತ್ಸವವು ಧಾರವಾಡದಲ್ಲಿ ಅಗಸ್ಟ ೧೨ ನೇ ತಾರೀಖಿನಿಂದ ೧೫ ನೆಯ ತಾರೀಖಿನ ವರೆಗೆಯೂ ಬಹು ವಿಜೃಂಭಣೆಯಿಂದ ನಡೆಯಿತು. ಇದರ ಪ್ರಾರಂಭ ಭಾಷಣವನ್ನು ನ್ಯಾಯಮೂರ್ತಿಗಳಾದ ಮಾನ್ಯ ಜಿ. ಪರಮಶಿವಯ್ಯನವರು, ಬಿ, ಎ, ಎಲ್, ಎಲ್, ಬಿ. ಮೈಸೂರು ಹೈಕೋರ್ಟು ಜಜ್ಜ ಇವರು ನೆರವೇರಿಸಿದರು. ಅವರು ತಮ್ಮ ಭಾಷಣದಲ್ಲಿ ಬಸವೇಶ್ವರನ ಕಾಲದಲ್ಲಿ ಅಸಂಖ್ಯಾತ ಶಿವಶರಣರು ಅನುಭವ ಮಂಟಪದ ಮುಖದಿಂದ ಧರ್ಮೋದ್ಧಾರ ಕಾರ್ಯಗಳನ್ನು ಮಾಡಿದರೆಂತಲೂ ಅದರ ಫಲವಾಗಿ ವೀರಶೈವ ಧರ್ಮವು ಅತ್ಯೂರ್ಜಿತ ಸ್ಥಿತಿಯನ್ನು ಹೊಂದಿತೆಂತಲೂ ವಿವರಿಸುತ್ತ ಅದರ ಉದಾರ ತತ್ವಗಳನ್ನು ಶ್ರೀ ಕುಮಾರ ಸ್ವಾಮಿಗಳು ತಮ್ಮ ಗುರುಗಳ ಸಂಕಲ್ಪಕ್ಕನುಸರಿಸಿ ನೆರವೇರಿಸಲು ತಮ್ಮ ಜೀವಿತವನ್ನೇ ಮುಡುಪಾಗಿಟ್ಟಿರುವರೆಂದು ಅವರನ್ನು ಶ್ಲಾಘಿಸಿ ಉತ್ಸವವು ಯಶಸ್ವಿಯಾಗಿ ಜರಗಲೆಂದು ಕೋರಿದರು.

ಈ ಕಾಲದಲ್ಲಿ ಮಠದ ಮೂಲಕ ನಡೆದಿರುವ ಅನೇಕ ಕಾರ್ಯ ಕಲಾಪಗಳ ವರದಿಯು ಸಭೆಯಲ್ಲಿ ಓದಲ್ಪಟ್ಟಿತು. ಈ ಉತ್ಸವದ ಅಧ್ಯಕ್ಷ ಸ್ಥಾನವನ್ನು ಹೊಂದಿದ ಶ್ರೀಯುತ ರಾಜಗುರುಗಳು ತಮ್ಮ ಭಾಷಣವನ್ನು ಇಂಗ್ಲಿಷಿನಲ್ಲಿ ಓದಿ ಹೇಳಿದರು. ಈ ಭಾಷಣಗಳ ಅಚ್ಚು ಹಾಕಿದ ಪ್ರತಿಯು ನಮ್ಮ ಕಡೆಗೆ ಬಂದಿದ್ದು ಅವುಗಳಲ್ಲಿಯ ವಿಷಯ ಗಳನ್ನು ಶಿವಾನುಭವ ಪತ್ರಿಕೆಯಲ್ಲಿ ಸ್ಥಳ ಸಂಕೋಚದ ಮೂಲಕ ಪ್ರಸಿದ್ಧಿಸುವದು ಆಗಿರುವದಿಲ್ಲ. ಅಧ್ಯಕ್ಷರ ಭಾಷಣದಲ್ಲಿ ವೀರಶೈವ ಮತ ತತ್ವಗಳ ಸವಿಸ್ತಾರ ವಿವೇಚನೆ ಇದ್ದು ಅದು ಮನನೀಯವಾಗಿರುತ್ತದೆ. ಅದನ್ನು ಯಥಾವಕಾಶವಾಗಿ ಮುಂದೆ ಪತ್ರಿಕೆಯಲ್ಲಿ ಪ್ರಕಟಿಸುವೆವು.

ಶಿವಾನುಭವ ಪತ್ರಿಕೆಯು ಮೂಲಕ ಇಷ್ಟರಲ್ಲಿ ಪ್ರಚಾರ ಹೊಂದಿದ ಶಿವಶರಣರ ಸಾಹಿತ್ಯವು ಅನೇಕ ಮುಖವಾಗಿ ಪ್ರಾಂತದಲ್ಲಿ ಹರಿಯ ಹತ್ತಿರುವದು ಸುಚಿನ್ಹವಾಗಿದೆ. ಆದರೆ ಇದರ ಚಳವಳಿಯಲ್ಲಿ ಅನೇಕ ವಿಧಗಳು ಕಂಡುಬರಹತ್ತಿವೆ. ಆದರೂ ಅವುಗಳ ಅಂತ್ಯಪರಿಣಾಮವು ಕ್ಷೇಮಕರವಾಗಿಯೇ ಆಗುವದೆಂದು ನಾವು ಭಾವಿಸಿದ್ದೇವೆ. ಈಗಿನ ವಿಚಾರ ಸ್ವಾತಂತ್ರ್ಯಯುಗದಲ್ಲಿ ಎಲ್ಲರಿಗೂ ತಮಗೆ ಉಚಿತ ತೋರಿದಂತೆ ಸಮಾಜಸುಧಾರಣೆಗೋಸ್ಕರ ಪ್ರಯತ್ನಗಳನ್ನು ಮಾಡಲು ಬಾಧ್ಯರಿದ್ದಾರೆ. ಇದರಲ್ಲಿ ಮತಭೇದವಾದ ಮಾತ್ರದಲ್ಲಿ ಅದಕ್ಕೋಸ್ಕರ ಕೆಲವೊಂದು ಚಳವಳಿಯನ್ನು ದೂಷಿಸುವದು ಯುಕ್ತವಲ್ಲ. ನವಕಲ್ಯಾಣಮಠದ ಉದ್ದೇಶವು ಶಿವಶರಣರ ಉದಾತ್ತ ವಿಚಾರಗಳನ್ನು ಸಮಾಜದಲ್ಲಿ ರೂಢ ಗೊಳಿಸಬೇಕೆಂದಿದ್ದು, ಇದು ಸಫಲವಾಗಲೆಂದು ನಾವು ಆಶಿಸುತ್ತೇವೆ.

ಆದರೆ ಶಿವಶರಣರ ವಿಚಾರಗಳನ್ನು ಪ್ರಸಾರ ಮಾಡುವ ಕಾರ್ಯ ದಲ್ಲಿ ಶಿವಾನುಭವ ಪತ್ರಿಕೆಯು ಇನ್ನೂ ಯಾವ ಚಳವಳಿಯನ್ನು ಕೈಕೊಂಡಿಲ್ಲ. ಈ ವರೆಗೆ ಅದು ಶಿವಾನುಭವ ಸಂಘಗಳನ್ನು ಎಲ್ಲ ಕಡೆಗೂ ಸ್ಥಾಪಿಸಬೇಕು, ಮತ್ತು ಶಿವಶರಣರ ವಾಙ್ಮಯವನ್ನು ಎಲ್ಲರೂ ಓದಿ ತಿಳಿಯಬೇಕು, ಇಷ್ಟುಮಾತ್ರವೇ ಹೇಳುತ್ತ ಬಂದಿದೆ. ಆದರೆ ಈ ಪ್ರಯತ್ನವನ್ನು ಹೇಗೆ ಸುಸಂಘಟಿತ ಮಾಡಬೇಕೆಂಬುದನ್ನು ಕುರಿತು ಅದು ಚರ್ಚಿಸಿಲ್ಲ. ಆದರೆ ಈ ಚರ್ಚೆಯನ್ನು ಪ್ರಾರಂಭಿಸುವ ಕಾಲವು ಸಮೀಪಿಸಹತ್ತಿದೆ. ಆಗ ಈ ಪತ್ರಿಕೆಯು ತನ್ನ ವಿಚಾರಗಳನ್ನೂ ಈಗ ಮಾಡಬೇಕಾದ ವಿಶೇಷ ಪ್ರಯತ್ನಗಳನ್ನೂ ಸಮಾಜದ ಮುಂದಿಡಲು ಅದು ಹಿಂದೆಗೆಯುವದಿಲ್ಲೆಂದು ಮಾತ್ರ ಇಲ್ಲಿ ಹೇಳುವದು ಅವಶ್ಯ ವಿರುತ್ತದೆ.

ಶಿವಾನುಭವ ಗ್ರಂಥಮಾಲಾ ನಂ. ೬೧

# ಶಿವಶರಣರ ಚರಿತ್ರೆಗಳು.

## ಭಾಗ ೧.

---*---

ಸಂಪಾದಕರು

ರಾ. ಬ. ಫ. ಗು. ಹಳಕಟ್ಟಿ

ಬಿ. ಎ. ಎಲ್. ಎಲ್. ಬಿ. ವಿಜಾಪುರ.

---

ಬೆಲೆ ೧-೧೨-೦



೧೯೪೪.

# ಅನುಕ್ರಮಣಿಕೆ.

( ಅಕ್ಷರಾನುಕ್ರಮವಾಗಿ )

ಪುಟ.

# ಪ್ರಸ್ತಾವನೆ.

ಬಸವಾದಿ ಪ್ರಮಥರ ಕಾಲದಲ್ಲಿ ಶಿವಾನುಭವದಂತೆ ಆಚರಿಸಿದ ಶಿವಶರಣರ ಸಂಖ್ಯೆಯು ಬಹಳ ದೊಡ್ಡದಿದೆ. ಅವರು ಕೇವಲ ಕರ್ನಾಟಕದೇಶ ಮಾತ್ರವಲ್ಲ, ಅದಕ್ಕೆ ನೆರೆಪ್ರಾಂತಗಳಾದ ಮಹಾರಾಷ್ಟ್ರ, ಆಂಧ್ರ, ದ್ರಾವಿಡ, ಮಲಯಾಳ ಪ್ರಾಂತಗಳಲ್ಲಿಯೂ ಉಗಮಿಸಿರುತ್ತಾರೆ. ಅವರೆಲ್ಲರಿಗೆ ಸ್ಫೂರ್ತಿಯನ್ನುಂಟು ಮಾಡಿದ ಮಹಾಪುರುಷರು ಬಸವೇಶ್ವರ ಮತ್ತು ಅವನ ಜೋಡಿಗರಾದ ಶಿವಶರಣರೇ ಇದ್ದಾರೆ. ಇವರು ಗತಿಸಿ ಹೋದ ಬಳಿಕ ಅವರ ಸತ್ಕಾರ್ಯದ ಫಲವು ಬಹುಕಾಲ ನಾಡಿನಲ್ಲಿ ಉಳಿದು ಅದರ ಪರಿಣಾಮವಾಗಿ ಅಸಂಖ್ಯ ಶಿವಶರಣರು ಎಲ್ಲ ಕಡೆಗೂ ಉದ್ಭವಿಸಿದ್ದಾರೆ. ಅವರು ಕರ್ನಾಟಕದಲ್ಲಿ ಮೊದಲನೆಯ ರಾಜ್ಯಗಳು ಅಡಗಿ ಹೋಗಿ ಮುಸಲ್ಮಾನರ ರಾಜ್ಯಗಳು ಪ್ರಾದುರ್ಭವಿಸುವ ವರೆಗೂ ಕಾಲಕಾಲಕ್ಕೆ ಉದಯಿಸಿ ಶಿವಾನುಭವದ ಜ್ಯೋತಿಯನ್ನು ಬೆಳಗುತ್ತ ಬಂದಿದ್ದಾರೆ. ಈ ಶಿವಶರಣರಲ್ಲಿ ೫೧ ಜನರನ್ನು ಮಾತ್ರ ನಾವು ಆಯ್ದು ಅವರ ಚರಿತ್ರೆಗಳನ್ನು ಈ ಗ್ರಂಥದಲ್ಲಿ ನಿರೂಪಿಸಿದ್ದೇವೆ. ಇದು ಮೊದಲನೆಯ ಭಾಗವಿದ್ದು ಉಳಿದ ಶಿವಶರಣರ ಚರಿತ್ರೆಗಳನ್ನು ನಾವು ಕ್ರಮೇಣ ಮುಂದಿನ ಭಾಗಗಳಲ್ಲಿ ಪ್ರಸಿದ್ಧಿಸುತ್ತಾ ಹೋಗುವೆವು.

ಬಸವಾದಿ ಪ್ರಮಥರ ತತ್ವಗಳು ಯಾವಾಗಲೂ ಆಚರಣೆಯಲ್ಲಿ ಬಂದಿರಲಿಲ್ಲ, ಅವು ಕೇವಲ ಗ್ರಂಥಗಳಲ್ಲಿಯೇ ಉಳಿದವು, ಅವುಗಳಂತೆ ನಡೆವಳಿಕೆಯು ಸಮಾಜದಲ್ಲಿ ಬರಲಿಲ್ಲ, ಬಸವೇಶ್ವರನು ತೀರಿಹೋದ ಬಳಿಕ ಶಿವಶರಣರ ತತ್ವಗಳು ಅವನೊಡನೆಯೇ ಲಯವಾದವು, ಎಂಬ ಅಭಿಪ್ರಾಯಗಳು ಈಗಲೂ ಪ್ರಚಲಿತವಿರುತ್ತವೆ. ಹೀಗೆ ಅಭಿಪ್ರಾಯಪಡುವವರು ಈ ಗ್ರಂಥದಲ್ಲಿ ನಾವು ಪ್ರಸಿದ್ಧಿಸಿರುವ ಚರಿತ್ರೆಗಳನ್ನು ಲಕ್ಷ್ಯಪೂರ್ವಕವಾಗಿ ಪರಿಶೀಲಿಸಿದಲ್ಲಿ, ಅವರ ತಿಳುವಳಿಕೆಗಳು ತಪ್ಪಾದವೆಂದು ಅವರಿಗೆ ಮನವರಿಕೆಯಾಗದಿರದೆಂದು ನಾವು ಭಾವಿಸಿದ್ದೇವೆ. ಅವುಗಳಿಂದ ಶಿವಶರಣರ ತತ್ವಗಳು ಒಂದು ಕಾಲದಲ್ಲಿ ಜನರಲ್ಲೆಲ್ಲ ಬಹುಗಾಢವಾಗಿ ಪಸರಿಸಿದ್ದವೆಂಬುದು ತಿಳಿದುಬರದೆ ಇರಲಾರದು. ಅವು

ಎಲ್ಲ ವರ್ಗಗಳ ಜನರಲ್ಲಿ, ಅವರು ಶ್ರೀಮಂತರಿರಲಿ, ಬಡವರಿರಲಿ, ಬ್ರಾಹ್ಮಣರಿರಲಿ, ಅಸ್ಪೃಶ್ಯರಿರಲಿ, ಬಾಲಕರಿರಲಿ, ದೊಡ್ಡವರಿರಲಿ ಎಲ್ಲ ರಲ್ಲಿಯೂ ಒಂದು ಮಹತ್ತರವಾದ ವಿಚಾರಕ್ರಾಂತಿಯನ್ನು ಮಾಡಿದ್ದು ದೃಗ್ಗೋಚರವಾಗದೆ ಇರದು.

ಈ ಗ್ರಂಥದಲ್ಲಿ ನಾವು ೫೧ ಜನ ಶಿವಶರಣರ ಚರಿತ್ರೆಗಳನ್ನು ಪ್ರಕಟಿಸಿರುತ್ತೇವೆ. ಅವರಲ್ಲಿ ೧೭ ಜನರು ಸ್ತ್ರೀಯರಿದ್ದಾರೆ. ೨೧ ಜನರು ವಚನಕಾರರಿದ್ದಾರೆ. ಅವರಲ್ಲಿ ಆರು ಜನರು ಸ್ತ್ರೀಯರು ಇದ್ದಾರೆ. ಇವರ ಚರಿತ್ರೆಗಳನ್ನು ವಿವರಿಸುವಲ್ಲಿ ಅವರಲ್ಲಿ ಯಾರು ವಚನಕಾರರಿರುವರೋ ಅವರ ವಚನಗಳನ್ನು ಮಾದರಿಗಾಗಿ ಅವುಗಳಲ್ಲಿಯೇ ಉದಹರಿಸಿದ್ದೇವೆ. ಇವುಗಳನ್ನು ಉದಹರಿಸುವಲ್ಲಿ ಅವರ ಚರಿತ್ರೆಯ ಮೇಲೆ ಪ್ರಕಾಶವನ್ನು ಕೆಡಹುವಂತಹವುಗಳನ್ನೇ ನಾವು ಆಯ್ದುಕೊಳ್ಳಲು ಪ್ರಯತ್ನಿಸಿದ್ದೇವೆ. ಅಲ್ಲದೆ ಈ ಚರಿತ್ರೆಗಳ ನಿರೂಪಣೆಯಲ್ಲಿ ಬೇರೆ ಬೇರೆ ಶಿವಶರಣರು ಯಾವ ಶಿವಾನುಭವದ ತತ್ವಗಳನ್ನು ಪ್ರಕಾಶಪಡಿಸಿದರೆಂಬುದನ್ನೂ ಸಹ ಸಂಕ್ಷಿಪ್ತವಾಗಿ ವಿವರಿಸಿದ್ದೇವೆ.

ಶಿವಶರಣರ ಚರಿತ್ರೆಗಳು ಅರ್ಥಪೂರ್ಣವಾಗಿವೆ. ಅವರ ಆಚರಣೆಗಳಲ್ಲಿ ಕೆಲವೊಂದು ಶಿವಾನುಭವದ ತತ್ವವು ಅಡಕವಾಗಿರುತ್ತದೆ. ಅದನ್ನು ಕಂಡುಹಿಡಿದು ಅವರ ಚರಿತ್ರೆಗಳನ್ನು ಅಭ್ಯಸಿಸುವದು ಬಹು ಅವಶ್ಯವಾಗಿರುತ್ತದೆ. ಈ ರೀತಿ ಶರಣರ ಚರಿತ್ರೆಗಳನ್ನು ವಿವೇಚಿಸಿದ ಗ್ರಂಥಗಳಲ್ಲಿ ಶೂನ್ಯಸಂಪಾದನೆಯೊಂದೇ ನಮಗೆ ಈಗ ಉಪಲಬ್ಧವಾಗಿದೆ. ಆದರೆ ಅದರಲ್ಲಿ ಗ್ರಂಥಕಾರನ ಉದ್ದೇಶವು ಕೇವಲ ತಾತ್ವಿಕಾರ್ಥವನ್ನು ಪ್ರತಿಪಾದಿಸುವದು ಮುಖ್ಯವಾಗಿದ್ದು ಆ ರೀತಿಗನುಸಾರವಾಗಿ ಅವನು ಕೆಲವು ಶಿವಶರಣರ ಚರಿತ್ರೆಗಳನ್ನು ನಿರೂಪಿಸಿದ್ದಾನೆ. ಅವು ೧೨ ಮಾತ್ರ ಇವೆ. ಅವನು ಶರಣರ ಚರಿತ್ರೆಗಳ ನಿಜಾಂಶವನ್ನು ಕಂಡುಹಿಡಿಯಲು ಉದ್ದೇಶಪಟ್ಟಿಲ್ಲ. ಆದರೆ ಈಗಿನ ಕಾಲದಲ್ಲಿ ಶಿವಶರಣರ ನಿಜವಾದ ಚರಿತ್ರೆಗಳನ್ನು ಕಂಡುಹಿಡಿದು, ಅವರು ಎಲ್ಲಿ ಇದ್ದರು, ಅವರು ಆವ ಆವ ಸಮಾಜಕಾರ್ಯಗಳನ್ನು ಮಾಡಿದರು, ಅವರು ಪ್ರಚಾರಪಡಿಸಿದ ತತ್ವಗಳಾವವು, ಎಂಬ ಸಂಗತಿಗಳನ್ನು ಸಂಶೋಧಿಸುವದು ಬಹಳ ಮಹತ್ವದ್ದಿದೆ. ಇಂಥ ನಿರೂಪಣೆಯಿಂದ ಬಸವೇಶ್ವರಾದಿಗಳು ಯಾವ ತರದ ಸಾಮಾಜಿಕ ಮತ್ತು ಧಾರ್ಮಿಕ ಕ್ರಾಂತಿಯನ್ನೆಸಗಿದರೆಂಬ ವಿಷಯದ ಮೇಲೆ ಸ್ಪುಟವಾದ ಪ್ರಕಾಶವು ಬೀಳದಿರದು.

ಈ ಗ್ರಂಥವನ್ನು ಪರಿಶೀಲಿಸಿದಲ್ಲಿ ಶಿವಶರಣರು ಉಗಮವಾದ ಪ್ರದೇಶವು ಎಷ್ಟು ವಿಸ್ತಾರವಾಗಿತ್ತೆಂಬುದು ವಾಚಕರಿಗೆ ತಿಳಿದುಬರದೆ ಇರಲಾರದು. ಉತ್ತರ ದೇಶದಲ್ಲಿ ಗೋದಾವರೀ ತೀರದಲ್ಲಿ ಅವರ ಸುಳಿವು ಇದ್ದುದು ಕಂಡುಬರುತ್ತಿದೆ. ಅಲ್ಲಿ ನಾಂದೇಡ ಜಿಲ್ಲೆಯಲ್ಲಿ ಉರಿಲಿಂಗದೇವ, ಉರಿಲಿಂಗಪೆದ್ದಿಗಳು, ಕಾಳವ್ವೆ, ಕೋಲಂಬೆಯರೂ ಮೆಡಕ್ಕ ಜಿಲ್ಲೆಯಲ್ಲಿ ತೆಲುಗೇಶ ಮಸಣಯ್ಯನೂ ದೃಗ್ಗೋಚರವಾಗುತ್ತಾರೆ. ಇವರಲ್ಲಿ ಪಶ್ಚಿಮದಲ್ಲಿದ್ದವರು ಮಹಾರಾಷ್ಟ್ರಿಗರೂ, ಪೂರ್ವದಲ್ಲಿದ್ದವರು ಆಂಧ್ರರೂ ಇದ್ದಾರೆ. ಅವರ ಜನ್ಮಭಾಷೆ ಕನ್ನಡವಲ್ಲದಿದ್ದರೂ ಅವರು ಕನ್ನಡದಲ್ಲಿಯೇ ವಚನಗಳನ್ನು ರಚಿಸಿದ್ದಾರೆ. ಮುಂದೆ ಮಧ್ಯದೇಶ ದಲ್ಲಿ ಅಂದರೆ ಈಗಿನ ವಿಜಾಪುರ, ಕಲಬುರ್ಗಿ, ರಾಯಚೂರ ಜಿಲ್ಲೆ ಗಳಲ್ಲಿ ಅಮರೇಶ್ವರದ ಆಯದಕ್ಕಿಮಾರಯ್ಯ ಲಕ್ಕಮ್ಮಗಳು, ಏಲೇರಿಯದ ಏಲೇಶಕೇತಯ್ಯ, ಬಾಹೂರಿನ ಬ್ರಹ್ಮಯ್ಯ, ಕೆಂಭಾವಿಯ ಭೋಗಣ್ಣ, ಚಿಮ್ಮಲಿಗೆಯ ನಿಜಗುಣ ಮತ್ತು ಚಂದಿಮರಸರು, ಪಟ್ಟದಕಲ್ಲಿನ ಗೋರಕ್ಷ, ಇಂಡಿಯ ಶಾಂತಯ್ಯ, ನಿಂಬಾಣದ ಗಣೇಶ್ವರ, ಭಾಲ್ಕಿಯ (ಬಲ್ಲುಕಿ) ಕುಂಬಾರ ಗುಂಡಯ್ಯ, ಹೀಗೆ ಅನೇಕ ಶಿವಶರಣರು ಉದ್ಭವಿಸಿ ಶಿವಾ ನುಭವದ ತತ್ವಗಳನ್ನು ಪ್ರಸಾರಗೊಳಿಸಿದ್ದಾರೆ. ಈ ಮೂರು ಜಿಲ್ಲೆಗಳು ಶಿವಶರಣರ ಗಂಡುಮೆಟ್ಟಿನ ನಾಡಾಗಿವೆ. ಮುಂದೆ ಬಳ್ಳಾರಿ ಜಿಲ್ಲೆ ಯಲ್ಲಿ ಬಳ್ಳೇಶ ಮಲ್ಲಯ್ಯನು ತಲೆದೋರುತ್ತಾನೆ. ಹಾಗೆಯೇ ಮುಂದೆ ದಕ್ಷಿಣದಲ್ಲಿ ಕಾವೇರೀ ತೀರದಲ್ಲಿಯೂ ಅದನ್ನು ದಾಟಿ ದ್ರಾವಿಡದೇಶ ದಲ್ಲಿಯೂ ಅಂದರೆ ಕಾಂಚೀ ಪಟ್ಟಣದಲ್ಲಿ ಎಡೆಮಠದ ನಾಗಿದೇವ, ಮಸಣಮ್ಮಗಳು, ಪೋರಾಂಡಲದ ಸೂರಮ್ಮ, ಚಂದವೂರಿನ ಶಿವಪ್ರಿಯ ನಾಚಿ, ಕೋಟಗಿರಿಯ ಬಹುರೂಪಿಚೌಡಯ್ಯ ಹೀಗೆ ಅನೇಕರು ಪ್ರಾದುರ್ಭವಿಸಿದ್ದು ಕಂಡುಬರುತ್ತದೆ. ಈ ಶಿವಶರಣರಲ್ಲಿ ಕೆಲವರು ಮಹಾ ರಾಷ್ಟ್ರಿಗರೂ, ಕೆಲವರು ಆಂಧ್ರರೂ, ಕೆಲವರು ದ್ರಾವಿಡರೂ ಇದ್ದರೂ ಅವರೆಲ್ಲರು ಬಸವಾದಿಪ್ರಮಥರ ತತ್ವಗಳನ್ನು ಸಾರಿದವರಿದ್ದಾರೆ. ಅವರ ಚರಿತ್ರೆಗಳ ಮರ್ಮವನ್ನು ಪರಿಶೀಲಿಸಿದಲ್ಲಿ ಅವರು ನಡೆದ ನಡೆಯು ವಚನಕಾರರ ಶಿವಾನುಭವವೇ ಇದ್ದುದು ತಿಳಿದು ಬರುವಂತಿದೆ. ಅದು ದ್ರಾವಿಡ ಸಂಸ್ಕೃತಿಯಲ್ಲ. ಅದು ಅಚ್ಚ ಕರ್ನಾಟಕ ಸಂಸ್ಕೃತಿಯು. ಈ ಶಿವಶರಣರಲ್ಲಾರೂ ತಮಿಳು ದೇಶದ ಪುರಾತನರಲ್ಲ. ಇವರನ್ನು ತಮಿ

ಳರು ತಮ್ಮವರೆಂದು ಭಾವಿಸಿಲ್ಲ. ಹೀಗೆ ಕರ್ನಾಟಕದಲ್ಲಿ ಪ್ರಾರಂಭ ವಿಸಿದ ಶಿವಾನುಭವದ ಸಂಸ್ಕೃತಿಯು ಉತ್ತರಕ್ಕೆ ಗೋದಾವರೀ ತೀರದಿಂದ ದಕ್ಷಿಣಕ್ಕೆ ಕಾವೇರೀ ತೀರ ಮತ್ತು ಮದುರೆಯ ವರೆಗೂ ಹಬ್ಬಿ, ಒಂದು ಕ್ರಾಂತಿಯನ್ನುಂಟುಮಾಡಿದ್ದು ಈಗಿನ ಗ್ರಂಥದಿಂದ ವಾಚಕರಿಗೆ ಗೋಚರವಾಗದೆ ಇರದು.

ಬಸವಾದಿ ಪ್ರಮಥರು ಕಲ್ಯಾಣ ಪಟ್ಟಣದಲ್ಲಿ ಶಿವಾನುಭವ ಮಂಟಪವನ್ನು ಸ್ಥಾಪಿಸಿದ ಬಳಿಕ ಅಲ್ಲಿಂದ ಹೊರಟ ಶಿವಾನುಭವದ ಪ್ರಭಾವವು ಯಾವ ಸ್ವರೂಪದ್ದಿತ್ತೆಂಬುದು ಪ್ರಕೃತ ಗ್ರಂಥದಿಂದ ವಾಚಕರು ಅರಿತುಕೊಳ್ಳಬಹುದಾಗಿದೆ. ಇದನ್ನು ನಾವು ಇಲ್ಲಿ ಬಹು ಸಂಕ್ಷಿಪ್ತವಾಗಿ ವಾಚಕರೆದುರಿಗೆ ಇಡಲು ಪ್ರಯತ್ನಿಸುತ್ತೇವೆ.

ವೀರಶೈವವೆಂಬುದು ಕೇವಲ ಕರ್ಮ ಮಾರ್ಗವಲ್ಲ. ಅದು ಕರ್ಮಠತನವನ್ನು ಹಳಿಯುತ್ತಿದೆ. ಹಾಗೆಯೇ ಅದು ಜನರಿಗೆ ವ್ಯವಹಾರವನ್ನು ಬಿಟ್ಟು ಅರಣ್ಯ ಪ್ರವೇಶಿಗಳಾಗಿ ಜಪತಪಗಳನ್ನು ಮಾಡುತ್ತ ದೇಹವನ್ನು ಕಷ್ಟಗೊಳಿಸುತ್ತ ಇರಬೇಕೆಂತಲೂ ಹೇಳುವದಿಲ್ಲ. ಇದು ಸಕಲೇಶ ಮಾದರಸ ಮತ್ತು ಶಿವಯೋಗಿ ಮಲ್ಲರಸ ಇವರ ಚರಿತ್ರೆಗಳಿಂದ ತಿಳಿದು ಬರುತ್ತದೆ. ಶಿವಾನುಭವದ ಪ್ರಕಾರ ನಡೆದು ತ್ರಿಲಿಂಗಗಳನ್ನು ತನ್ನಲ್ಲಿ ಪ್ರಕಟಗೊಳಿಸಿ, ಜಗತ್ತಿನಲ್ಲಿಯೇ ಇದ್ದುಕೊಂಡು ಲಿಂಗಾಂಗ ಸಾಮರಸ್ಯವನ್ನು ಹೊಂದಬೇಕೆಂದು ಶರಣರ ಚರಿತ್ರೆಗಳು ಹೇಳುತ್ತವೆ. ಎಲ್ಲ ಕಡೆಯ ಶಿವಶರಣರು ಇದೇ ಮಾರ್ಗವನ್ನು ಯಾವಾಗಲೂ ಸಾರುತ್ತ ಬಂದಿದ್ದಾರೆ. ಇದಕ್ಕೆ ಷಟ್‌ಸ್ಥಲ ಮಾರ್ಗ, ಷಟ್‌ಸ್ಥಲಾಚರಣೆ, ಶಿವಯೋಗ, ಅಥವಾ ಶಿವಾನುಭವ ಎಂಬ ಹೆಸರುಗಳಿವೆ. ಈ ಮಾರ್ಗವನ್ನು ಶಿವಶರಣರು ತಮ್ಮ ವಚನಗಳಲ್ಲಿ ಬಹು ಸ್ಫುಟವಾಗಿ ಪ್ರತಿಪಾದಿಸಿರುತ್ತಾರೆ.

ಶಿವಾನುಭವವು ಹಠಯೋಗಿಗಳ ಯೋಗಮಾರ್ಗವೂ ಅಲ್ಲ, ಸಿದ್ಧರ ಮಾರ್ಗವೂ ಅಲ್ಲ, ಸಿದ್ಧನಾಥರ ಪಂಥವೂ ಅಲ್ಲ. ಇವರೆಲ್ಲರನ್ನು ಶಿವಶರಣರು ಪದೇ ಪದೇ ಖಂಡಿಸುತ್ತ ಬಂದಿದ್ದಾರೆ. ನಾವು ಈ ಗ್ರಂಥದಲ್ಲಿ ಸಿದ್ಧರ ವೃತ್ತಾಂತವನ್ನು ಸವಿಸ್ತಾರವಾಗಿ ನಿರೂಪಿಸಿದ್ದೇವೆ. ಅವುಗಳಿಂದ ಮೇಲಿನ ಸಂಗತಿಯು ಸ್ಪಷ್ಟವಾಗುತ್ತಿದೆ. ಅಲ್ಲಮಪ್ರಭು, ಗೋರಕ್ಷ, ಅನುಮಿಷ, ಸಿದ್ಧರಾಮೇಶ್ವರ ಇವರು ಒಮ್ಮೆ ಸಿದ್ಧರ ಮಾರ್ಗ

ವನ್ನು ಅನುಸರಿಸಿದ್ದು ಕಂಡು ಬರುತ್ತದೆ. ಆದರೆ ಅವರು ಅದನ್ನು ಮುಂದೆ ತೊರೆದು ಶುದ್ಧವಾದ ಶಿವಾನುಭವ ಮಾರ್ಗದಂತೆ ಆಚರಿಸಿದ್ದಾರೆ.

ಸಿದ್ಧರ ಮತ್ತು ಹಠಯೋಗಿಗಳ ಮಾರ್ಗವನ್ನು ಶಿವಶರಣರು ಪರಿತ್ಯಜಿಸಿದರೂ ಶುದ್ಧವಾದ ಯೋಗಮಾರ್ಗದ ತತ್ವಗಳನ್ನು ಅವರು ಅಂಗೀಕರಿಸಿದ್ದಾರೆ. ಅದಕ್ಕೆ ಅವರು ಲಿಂಗಾನುಸಂಧಾನವೆಂದು ಹೇಳುತ್ತಾರೆ. ಇದರ ಮೂಲಕ ಅವರು ತಮ್ಮ ಅಂತಃಶಕ್ತಿಯನ್ನು ಬೆಳೆಸಿಕೊಂಡಿದ್ದಾರೆ. ಈ ವಿಷಯವಾಗಿ ವಾಚಕರು ಉರಿಲಿಂಗದೇವ, ನಿಜಗುಣ, ಗೋರಕ್ಷ, ಬಾಹೂರು ಬ್ರಹ್ಮಯ್ಯ, ಮೊರನ ಮೇಮಯ್ಯ ಮತ್ತು ಕುಂಬಾರ ಗುಂಡಯ್ಯ ಇವರ ಚರಿತ್ರೆಗಳನ್ನು ಚನ್ನಾಗಿ ಪರಿಶೀಲಿಸಬೇಕು. ತಮ್ಮ ಶಿವಾನುಭವದ ಮೂಲಕ ಅವರಲ್ಲಿ ಒಂದು ಅದ್ಭುತಶಕ್ತಿಯು ಅಂಕುರಿಸಿದ್ದನ್ನು ನಾವು ಕಾಣುತ್ತೇವೆ. ಅವರು ಅಂಥ ಮಹತ್ತಾದ ಶಕ್ತಿಯನ್ನು ತಮ್ಮ ನಿತ್ಯದ ವೃತ್ತಿಯಲ್ಲಿದ್ದುಕೊಂಡೇ ಸಾಧಿಸಿದ್ದಾರೆ. ಇದರ ಮೂಲಕ ಅವರು ತಮ್ಮ ಮನಸ್ಸಿನ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿಕೊಂಡು ಐಹಿಕ ಮತ್ತು ಪಾರಮಾರ್ಥಿಕ ಶ್ರೇಷ್ಠ ಸುಖವನ್ನು ಹೊಂದಿದ್ದಾರೆ.

ಮನುಷ್ಯನು ತನ್ನಲ್ಲಿ ಹುದುಗಿರುವ ಶಕ್ತಿಯನ್ನು ತನ್ನ ನಿತ್ಯದ ಕಾಯಕ ಅಂದರೆ ಉದ್ಯೋಗಗಳನ್ನು ಮಾಡುವದರಿಂದಲೇ ಹೆಚ್ಚಿಸಬೇಕೆಂದು ಶಿವಶರಣರು ಬೋಧೆ ಮಾಡಿರುದು ಒಂದು ಮಹತ್ವದ ತತ್ವವಾಗಿದೆ. ಒಂದು ಉದ್ಯೋಗವು ಯಾವ ತರದ್ದಿದ್ದರೂ ಅದರ ಮೂಲಕ ಮನುಷ್ಯನು ತನ್ನ ಲಿಂಗಸಾಮರ್ಥ್ಯವನ್ನು ಬೆಳೆಸಬಹುದಾಗಿದೆ. ಈ ತತ್ವವು ಹಿಂದೂಧರ್ಮದಲ್ಲಿ ತೀರ ಹೊಸತರದ್ದಾಗಿದೆಂದು ಹೇಳಬಹುದು. ಉದ್ಯೋಗಗಳನ್ನು ಮಾಡುವಲ್ಲಿಯೇ ಮನುಷ್ಯನು ತನ್ನ ಮನಸ್ಸಿನ, ತನ್ನ ನಡತೆಯ, ಮತ್ತು ತನ್ನ ಬುದ್ಧಿಯ ಹೆಚ್ಚಿಗೆಯನ್ನುಂಟುಮಾಡಲು ಶಕ್ತನಾಗುತ್ತಾನೆ. ಆದ್ದರಿಂದ ಕೆಲವೊಂದು ಉದ್ಯೋಗ ಅಥವಾ ಕಾಯಕ ಮಾಡದೆ ಇದ್ದ ಯಾವ ಶಿವಶರಣನೂ ಬಸವಾದಿ ಪ್ರಮಥರ ಕಾಲದಲ್ಲಿದ್ದುದು ಕಂಡುಬರುವದಿಲ್ಲ. ಅವರು ಮಾಡಿದ ಕಾಯಕಗಳು ಎಂಥವಿದ್ದವೆಂಬುದನ್ನು ಈಗಿನ ಗ್ರಂಥದಿಂದ ವಾಚಕರು ಚನ್ನಾಗಿ ಅರಿತುಕೊಳ್ಳಬಹುದು. ಮೇಮಯ್ಯನು ಮೇದರನಾಗಿದ್ದನು. ಮಾರಗೌಡ ಮತ್ತು ಬಡಿಹೋರಿಬ್ರಹ್ಮಯ್ಯರು ಒಕ್ಕಲುತನ ಮಾಡುವವರಾಗಿದ್ದರು. ಧೂಳಯ್ಯನು

ಮೊಚ್ಚೆಯ ಜೋಡನ್ನು ಹೊಲಿಯುವವನಾಗಿದ್ದನು. ಹಾಗೆಯೇ ಬತ್ತಕು
ಟ್ಟುವ ಸೋಮವ್ವೆ, ರಾಟಿಯನ್ನು ತಿರುಗಿಸುವ ರೆಮ್ಮವ್ವೆ, ದನಕಾಯುವ
ತೆಲುಗೇಶ ಮಸಣಯ್ಯ ಶಂಕಿತೊಂಡಿಗಳು, ಕುಂಬರನಾದ ಗುಂಡಯ್ಯ,
ಹೂವಾಡಿಗರಾದ ಚಿಕ್ಕಮಾದಣ್ಣ ಮತ್ತು ಬಾಕೂರು ಬೊಮ್ಮಯ್ಯಗಳು,
ಬಹುರೂಪಿಯಾದ ಬಹುರೂಪಿ ಚೌಡಯ್ಯ. ಕುಳ್ಳುಮಾರುವ ಸಪ್ಪೆಯ
ಲ್ಲಮ,ಅಲ್ಲದೆ ಗಾಯನದ ಕಾಯಕ ಕೈಕೊಂಡ ಅನೇಕ ಗಾಯಕರು ಶಿವ
ಶರಣರಲ್ಲಿದ್ದಾರೆ. ಇವರು ತಮ್ಮ ತಮ್ಮ ಕಾಯಕಗಳ ಮೂಲಕವಾಗಿಯೇ
ಪರಮಾತ್ಮನನ್ನು ಮೆಚ್ಚಿಸಿದರು. ಶಿವಾನುಭವವು ಎಲ್ಲರಿಗೂ ತೆರೆದಿದ್ದದೆ.
ಅದು ಕೆಲವೊಂದು ಸಮಾಜದ ಅಥವಾ ಉದ್ಯೋಗದವರ ಸೊತ್ತಾಗಿರು
ವದಿಲ್ಲ. ಮನುಷ್ಯರೆಂಬುವರೆಲ್ಲರಿಗೂ ಅದಕ್ಕೆ ಪಾತ್ರರಿದ್ದು ಈ ತತ್ವಕ್ಕ
ನುಸರಿಸಿ ಶಿವಶರಣರು ಆಚರಿಸಿದ್ದಾರೆ.

ಶಿವಶರಣರು ಕಾಯಕಕ್ಕೆ ಮಹತ್ವ ಕೊಟ್ಟಿರುವದರಿಂದ ಅವರ
ಲ್ಲಾರೂ ಭಿಕ್ಷುಕರಿರುವದಿಲ್ಲ. ಅವರು ಉಪಾರನ್ನು ಬೇಡರು. ಹಣಕ್ಕೆ
ಆಸೆ ಮಾಡರು. ಸಕಲೇಶ ಮಾದರಸನು ಒಂದು ಕಾಲದಲ್ಲಿ ಹಣಕ್ಕೆ ಆಸೆ
ಮಾಡಿ ತನ್ನ ಧರ್ಮ ಕೃತ್ಯಗಳನ್ನು ನಡಿಸಲು ಯತ್ನಿಸಿದನು. ಆಗ ಅವನು
ಪರಮಾತ್ಮನ ಕೋಪಕ್ಕೆ ಗುರಿಯಾದನು. ನಿರ್ಲಜ್ಜ ಶಾಂತಯ್ಯನು
ಮಠಾಧಿಕಾರಿಯು. ಅತ್ಯಂತ ಬಡವನು. ಆದರೆ ಅವನು ದಾಸೋಹದ
ಕಾಯಕವನ್ನು ಕೈಕೊಂಡು ಎರಡನೆಯವರಿಗೆ ದಾನ ಮಾಡಲು ತತ್ಪರ
ನಾಗಿದ್ದನು. ಆದರಿಂದ ಅವನು ಶಿವಾನುಭವ ಮಂಟಪದಲ್ಲಿ ಶ್ರೇಷ್ಠ
ಸ್ಥಾನವನ್ನು ಪಡೆದನು. ಮೋನ ಮೇಮಯ್ಯನು ತನಗೆ ಬಂದ ಸುವ
ರ್ಣದ ನಿಧಿಯನ್ನು ತಿಪ್ಪೆಗೆ ಹಾಕಿಸಿದನು. ಮಾರ ಗೌಡನು ಪರಮಾ
ತ್ಮನು ತನಗೆ ಪರುಷವನ್ನು ಕೊಡಲು ಬಂದು ಇದಿರಿಗೆ ನಿಂತಿರಲು
ಅದನ್ನು ಅವನು ಸ್ವೀಕರಿಸದೆ ಅವನನ್ನು ಹಿಂದಿರುಗಿಸಿದನು. ಇಷ್ಟೇ ಅಲ್ಲ,
ಅವನೇ ಪರಮಾತ್ಮನಿಗೆ ದಾನ ಕೊಡಲು ಮುಂದಾದನು. ಆಗ ಪರಮಾ
ತ್ಮನು ನಾಚಿ ಹೊರಟು ಹೋದನು. ಹೀಗೆ ಶಿವಾನುಭವವು ಶಿವಶರಣ
ರಲ್ಲಿ ಅತ್ಯಂತ ಶ್ರೇಷ್ಠವಾದ ನಿರಿಚ್ಛಾವೃತ್ತಿಯನ್ನುಂಟುಮಾಡಿದೆ.

ಶಿವಶರಣರೆಲ್ಲರೂ ಪರಮಾತ್ಮನಲ್ಲಿ ನಿಷ್ಕಾಮ ಪ್ರೇಮವನ್ನಿಟ್ಟು ನಡೆ
ದಿದ್ದಾರೆ. ಇಂಥ ಪ್ರೇಮವು ಇದ್ದಲ್ಲಿ ಪರಮಾತ್ಮನು ಅಲ್ಲಿಯೇ ದೃಗ್ಗೋ
ಚರವಾಗುತ್ತಾನೆಂದು ಈ ಗ್ರಂಥದಲ್ಲಿ ಕೊಟ್ಟ ಚರಿತ್ರೆಗಳಿಂದ ಕಂಡು

ಬರುತ್ತದೆ. ಸೋಹಳಿಯ ಸೋಮವ್ವೆಗೆ ಪರಮಾತ್ಮನು ದೀಪದ ಕುಡಿಯಲ್ಲಿ ಪ್ರಕಟವಾದನು. ಮಾದರ ಧೂಳಯ್ಯಗೆ ಮಚ್ಚೆಯನ್ನು ಹೊಲಿಯುವ ಅವನ ಉಳಿಯ ಮೊನೆಯಲ್ಲಿ ಪ್ರಕಟವಾದನು. ಉರಿಲಿಂಗ ಪೆದ್ದಿಗೆ ಅವನ ಗುರುವಾದ ಉರಿಲಿಂಗದೇವನು ಒಂದು ಕಾಡಕಲ್ಲನ್ನು ಒಗೆದು ಕೊಡಲಾಗಿ ಆ ಕಲ್ಲೇ ಒಂದು ಜ್ಯೋತಿರ್ಲಿಂಗವಾಯಿತು. ಬಾಹೂರು ಬ್ರಹ್ಮಯ್ಯಗೆ ಜೋಳದ ರಾಶಿಯಲ್ಲಿ ಪರಮಾತ್ಮನು ಪ್ರಕಟವಾದನು. ಬಳ್ಳೇಶ ಮಲ್ಲಯ್ಯಗೆ ಧಾನ್ಯವನ್ನು ಅಳೆಯುವ ಬಳ್ಳದಲ್ಲಿಯೇ ಪ್ರಕಟವಾದನು. ಶಂಕಿತೊಂಡಿ, ಕೋಲಂಬೆಗಳಿಗೆ ಅವರು ಕಟ್ಟಿದ ಗುಡಿಸಲುಗಳಲ್ಲಿಯೇ ಪ್ರಕಟವಾಗಿದ್ದಾನೆ. ಆದರೆ ಭಕ್ತಿ ಇಲ್ಲದಲ್ಲಿ ಅವನು ಎಂದೂ ಪ್ರಕಟವಾಗಲಾರನು. ಶಿವಶರಣರು ನಿಷ್ಠೆಯುಳ್ಳವರಾದ್ದರಿಂದ ಪರಮಾತ್ಮನು ಅವರ ಇಚ್ಛಾನುವರ್ತಿಯಾಗಿ ನಡೆದಿದ್ದಾನೆ.

ಶಿವಶರಣರಿಗೆ ಶಿವಶರಣರ ಸಾನ್ನಿಧ್ಯವೇ ಕೈಲಾಸವೆನಿಸುತ್ತದೆ. ಅವರು ಸ್ವರ್ಗವನ್ನು ಬಯಸರು. ಅನೇಕ ಶಿವಶರಣರು ತಮಗೆ ಪರಮಾತ್ಮನು ಪ್ರತ್ಯಕ್ಷನಾದರೂ, ಅವರು ಅವನೊಡನೆ ಕೈಲಾಸಕ್ಕೆ ಹೋಗದೆ ತಮ್ಮ ಕಾಯಕದಲ್ಲಿಯೇ ತೊಡಗಿದವರಾದರು. ಮಾದರ ಧೂಳಯ್ಯನು ಕೈಲಾಸಕ್ಕೆ ಹೋಗಲು ಅಲ್ಲಗಳೆದನು. ಚಿಕ್ಕ ಮಾದಣ್ಣನು ತನಗೆ ಕ್ರಿಯಾಸಮಾಧಿಯೇ ಹೆಚ್ಚಿನದೆಂದು ಹೇಳಿ ಭೂಲೋಕವನ್ನು ಬಿಟ್ಟು ಹೋಗಲಿಲ್ಲ. ಬಹುರೂಪಿ ಚೌಡಯ್ಯ ಮೊದಲಾದವರು ಹೀಗೆಯೇ ಆಚರಿಸಿದ್ದಾರೆ. ಆತ್ಮಸಾಮರ್ಥ್ಯವನ್ನು ಹೆಚ್ಚಿಸಿ ತಮ್ಮ ಲಿಂಗದಲ್ಲಿಯೇ ಐಕ್ಯವಾಗಬೇಕೆಂದು ಶಿವಾನುಭವ ಶಾಸ್ತ್ರವು ಹೇಳುತ್ತಿದೆ. ಆದ್ದರಿಂದ, ಶಿವಶರಣರು ಕೈಲಾಸ ಪದ, ಶಿವಸಾನ್ನಿಧ್ಯ, ಅಥವಾ ಸ್ವರ್ಗಸುಖವನ್ನು ಬಯಸುವದಿಲ್ಲ. ಈ ಸಂಗತಿಯು ಈ ಚರಿತ್ರೆಗಳಲ್ಲಿ ಕಂಡು ಬರುತ್ತದೆ.

ಶಿವಾನುಭವವು ದುಷ್ಟರನ್ನೂ ಹೀನರನ್ನೂ ಉತ್ತಮರನ್ನಾಗಿ ಮಾಡಿದೆ. ಇದು ಈ ಚರಿತ್ರೆಗಳಿಂದ ಕಂಡು ಬರುತ್ತದೆ. ಉರಿಲಿಂಗ ಪೆದ್ದಿಯು ಮೊದಲು ಕಳ್ಳತನ ಮಾಡುತ್ತ ಜೀವಿಸುವವನಾಗಿದ್ದನು. ಆದರೆ ಉರಿಲಿಂಗದೇವನ ಲಿಂಗಪೂಜಾಪ್ರಭಾವದಿಂದ ಅವನು ಇದನ್ನು ಬಿಟ್ಟು, ಕಟ್ಟಿಗೆ ಹೊರೆ ಹೊರುವ ಕಾಯಕವನ್ನು ಮೊದಲು ಮಾಡುತ್ತ ತನ್ನ ಗುರುವಿನ ಪ್ರೇಮವನ್ನು ಸಂಪಾದಿಸಿ, ಮುಂದೆ ಅವನು ಅವನಲ್ಲಿ ವಿದ್ವಾಂಸನಾದನು. ಮತ್ತು ಅವನ ಹೆಂಡತಿಯಾದ ಕಾಳವ್ವೆಯೂ ವಿದ್ವಾಂಸ

ಳಾದಳು. ಬಡಿಹೋರಿ ಬ್ರಹ್ಮಯ್ಯನಿಗೆ ಒಂದು ಹಿಂಸಾ ಕಾರ್ಯವು ಘಟಿಸಿತು. ಈ ದೋಷವನ್ನು ಅವನು ದೂರ ಮಾಡಲು ಕಷ್ಟಪಟ್ಟಿದ್ದು ಅಗಾಧವಾದದ್ದು. ಹೀಗೆ ಅವನು ತನ್ನ ನಡೆಯಿಂದ ಅಹಿಂಸೆಯ ಮಹತ್ವವನ್ನು ಜನರ ತಿಳಿವಳಿಕೆಗೆ ತಂದುಕೊಟ್ಟನು. ಹೆಂಡದ ಮಾರಯ್ಯನು ಹೆಂಡಗುಡಿಕರೊಡನೆ ಇದ್ದು ಅವರ ವ್ಯಸನವನ್ನು ದೂರ ಮಾಡಲು ಅವನು ಯತ್ನಿಸಿದ್ದಾನೆ. ಹೀಗೆ ಶಿವಶರಣರು ತಾವು ಸದ್ವರ್ತನೆಯುಳ್ಳವರಾಗಿರುವರಷ್ಟೇ ಅಲ್ಲ, ತಮ್ಮ ಸುತ್ತಲಿನವರೂ ಸದಾಚಾರಿಗಳಾಗಲು ಯತ್ನಿಸಿದ್ದಾರೆ.

ಶಿವಶರಣರು ಗುಪ್ತಭಕ್ತಿಯುಳ್ಳವರು. ಅಂದರೆ ತಮ್ಮನ್ನು ಹೊಗಳಿಸಿಕೊಳ್ಳಲು ಅವರು ಎಂದೂ ಬಯಸರು. ಅವರು ಮುಪ್ಪಾಗುವ ವರೆಗೂ ಹೀಗೆ ತಮ್ಮ ಕಾಯಕದಲ್ಲಿ ಮಗ್ನರಾಗಿದ್ದರು. ಆದರೆ ಪರಮಾತ್ಮನು ಅವರ ಹೆಸರನ್ನು ಪ್ರಕಟಮಾಡಲು ಮುಂದಾಗಲು ಅವರು ಅವನನ್ನು ಸಹ ಲಕ್ಷಿಸಿಲ್ಲ. ಅಹಂಕಾರ ರಹಿತರಾದ ಶಿವಶರಣರು ಕೀರ್ತಿವಾರ್ತೆಗೋಸ್ಕರ ಮಾಡುವವರಲ್ಲವೆಂಬುದು ಅವರ ಚರಿತ್ರೆಗಳಿಂದ ತಿಳಿದು ಬರುತ್ತದೆ.

ಅನೇಕ ಶಿವಶರಣರು ತಮ್ಮ ಸುತ್ತಲಿನ ಜನರಿಗೆ ಸಹಾಯ ಮಾಡುತ್ತ ಸಾಮರಸ್ಯ ಪದವನ್ನು ಹೊಂದಿದ್ದಾರೆ. ಶಿವಕಿಂಕರಯ್ಯನು ಭಕ್ತರ ಮನೆಯಲ್ಲಿ ಕಸಗುಡಿಸುವ ಕಾಯಕವನ್ನು ಕೈಕೊಂಡನು. ಚಾಂಗುಬಲ್ಲಯ್ಯನು ಭಕ್ತರನ್ನು ಬೆಳಗಿನಲ್ಲಿ ಶಿವಪೂಜೆಗೋಸ್ಕರ ಎಬ್ಬಿಸುವದನ್ನೂ, ಲೆಂಕಬೊಮ್ಮಯ್ಯನು ಪ್ರತಿಫಲವನ್ನಪೇಕ್ಷಿಸದೆ ಜನರಿಗೆ ಬೇಕಾದ ಎಲ್ಲ ಸೇವೆ ಮಾಡುವದನ್ನೂ, ಸೇವಿಕೆ ಗೌರವ್ವೆಯು ಜನಸಂದೋಹವು ಕೂಡಿದಾಗ ಜನರಿಗೆ ದಾರಿ ತೋರಿಸಿ ಅವರವರ ಸ್ಥಳಗಳಲ್ಲಿ ಕೂಡಿಸುವವನ್ನೂ, ತೊಂಗಿನ ಮಹಾದೇವಿಯು ಭಕ್ತರು ತಮ್ಮ ತಮ್ಮ ದಿನದ ಕಾಯಕಗಳನ್ನು ಆರಂಭಿಸುವದಕ್ಕೋಸ್ಕರ ಅವರಿಗೆ ದಿನಾಲು ಎಚ್ಚರಿಸುವದನ್ನೂ ಹೀಗೆ ತಮ್ಮ ತಮ್ಮ ಯೋಗ್ಯತೆಗನುಸಾರವಾಗಿ ಜನ ಸಹಾಯ ಮಾಡಲು ಶರಣರು ಮುಂದಾಗಿದ್ದಾರೆ. ಇದರಿಂದಲೇ ಅವರು ಸಾಮರಸ್ಯವನ್ನು ಹೊಂದಿದ್ದಾರೆ. ಈಗಿನ ಕಾಲದಲ್ಲಿ ಜನಸೇವೆ ಮಾಡಬೇಕೆನ್ನುವವರು ಶಿವಶರಣರಿಂದ ಇದರಲ್ಲಿ ಪಾಠಕಲಿಯುವಂತಿದೆ.

ಶಿವಶರಣರು ವಿದ್ವಾಂಸರಾಗಿದ್ದರು. ಅವರು ಅಂಧಭಕ್ತಿಯುವರಲ್ಲ. ತಿಳಿದುಮಾಡಬೇಕೆಂಬುದು ಶಿವಾನುಭವದ ಮುಖ್ಯ ತತ್ವವಿದೆ. ತಾನಾರು, ಪರಮಾತ್ಮನ ಸ್ವರೂಪು ಆವುದು, ಅವನನ್ನು ಬೆರೆಯುಲು ಲಿಂಗದ ನೆಲೆ ಕಲೆಗಳು ಹೇಗೆ ಸಹಾಯುಕಾರಿಗಳು, ಎಂಬುದರ ಮರ್ಮವನ್ನು ಶಿವಶರಣರು ಅರಿತು ಆಚರಿಸಬೇಕು. ಅವರು ಎಂಥ ಜ್ಞಾನಿಗಳೂ ಅನುಭವಿಗಳೂ ಇದ್ದರೆಂಬುದಕ್ಕೆ ಅವರು ರಚಿಸಿದ ವಚನಗಳೇ ಸಾಕ್ಷಿ ಯಾಗಿವೆ. ಸಕಳೇಶ ಮಾದರಸನು ಶಿವಶರಣರಿಂದ ಲಿಂಗಾನುಭವವನ್ನು ಹೊಂದಿ ಅನೇಕರಿಗೆ ಲಿಂಗಜ್ಞಾನವನ್ನು ಮಾಡಿಕೊಡುವವನಾದನು. ಏಲೇಶಕೇತಯ್ಯನು ತನ್ನನ್ನು ಕೊಂದುಹಾಕಲು ತನ್ನ ಮೇಲೇರಿ ಬಂದ ವರಿಗೆ ಶಿವಾನುಭವವನ್ನು ಬೋಧಿಸಿ ಅವರ ಹಿಂಸಾ ಕರ್ಮವನ್ನು ತಡೆದನು. ತೆಲುಗೇಶ ಮಸಣಯ್ಯನು ಲಿಂಗದ ನೆಲೆ ಕಲೆಗಳನ್ನು ಅರಿತು ಕೊಂಡು ತಾನೂ ವಚನಗಳನ್ನು ರಚಿಸುವವನಾದನು. ಶಿವಮಾಯಿ ದೇವಿಯು ಜ್ಞಾನಿಯಾಗಿ ಪುರಾಣ ಹೇಳುವ ಕಾರ್ಯ ಕೈಕೊಂಡಳು. ವೀರದೇವಮ್ಮನು ರಾಜಸಭೆಯಲ್ಲಿಯೂ ಸಾರ್ವಜನಿಕ ಕೂಟಗಳಲ್ಲಿಯೂ ಶಿವಶರಣರ ವಚನಗಳನ್ನು ಉಗ್ಗಡಿಸಿ ಹೇಳುವವಳಾದಳು. ವಿಮಳಾ ದೇವಿಯು ಲಿಂಗಜ್ಞಾನವನ್ನು ಹೊಂದಿ ಅದನ್ನು ಇತರರಿಗೆ ಬೋಧಿಸಿ ಸುಜ್ಞಾನದೀಕ್ಷೆ ಕೊಡುವವಳಾದಳು. ಬಹುಜನ ಶಿವಶರಣರು ತಾವು ನಡೆದು ಆಚರಿಸಿದ್ದನ್ನು ವಚನಗಳ ಮೂಲಕ ಜಗತ್ತಿಗೆ ಬೋಧಿಸುವ ವರಾದರು. ಈ ಗ್ರಂಥದಲ್ಲಿ ೨೨ ಜನ ವಚನಕಾರರ ಚರಿತ್ರೆಗಳಿವೆ.

ಶಿವಶರಣರಲ್ಲಿ ಅನೇಕರು ಸಂಗೀತಕಲಾಭಿಜ್ಞರಿದ್ದಾರೆ. ಅವರು ಅದರ ಮೂಲಕ ಜನರಲ್ಲಿ ಭಕ್ತಿಯ ಪ್ರಸಾರ ಮಾಡಿದ್ದಾರೆ. ಈ ಕಲೆಯು ಭಕ್ತಿ ಯನ್ನು ದೃಢಪಡಿಸಲು ಸಹಾಯವಾಗುತ್ತದೆ. ಇದು ಶಿವಶರಣರ ಚರಿತ್ರೆ ಗಳಿಂದ ತಿಳಿದು ಬರುತ್ತದೆ. ನಿಂಬಾಣದ ಗಣೇಶ್ವರನು ತನ್ನ ಪದ್ಯ ರಚ ನೆಗಳಿಂದ, ಇಂಡಿಯ ಶಾಂತಯ್ಯನು ತನ್ನ ಕೀರ್ತನೆಗಳ ಮೂಲಕ, ಅಲ್ಲ ಯ್ಯನು ತನ್ನ ಭಕ್ತಿಪೂರಿತವಾದ ಹಾಡುಗಳ ಮೂಲಕ, ಬಹುರೂಪಿ ಚೌಡಯ್ಯನು ಶಿವಶರಣರ ಕಥಾನಕಗಳನ್ನು ನಾಟ್ಯ ಮಾಡುವ ಮೂಲಕ, ಸಿದ್ಧ ದೇವಮ್ಮನು ತನ್ನ ಹಾಡುಗಾರಿಕೆಯಿಂದ, ರಾಗದ ಸಂಕಣ್ಣನು ಅಥವಾ ರಾಗದ ಸಾಂಕನು ಪರಮಾತ್ಮನ ಸ್ತೋತ್ರ ಪದ್ಯಗಳಿಂದ, ಕುಂಬಾರ ಗುಂಡಯ್ಯನು ತನ್ನ ನೃತ್ಯದಿಂದ, ಪರಮಾತ್ಮನನ್ನು ಒಲಿಸಿದ್ದಾರೆ.

ಗಾಯನವು ಮನಸ್ಸನ್ನು ಪರಮಾತ್ಮನಲ್ಲಿರಿಸಿ ಅವನಲ್ಲಿ ಅದು ತನ್ಮಯವಾಗುವಂತೆ ಮಾಡುತ್ತದೆ. ಇದರಿಂದ ಮನುಷ್ಯನಲ್ಲಿ ಲಿಂಗ ಶಕ್ತಿಯು ಪ್ರಸ್ಫುರಿಸಹತ್ತುತ್ತದೆ. ಮತ್ತು ಅದು ಕಡೆಗೆ ಮನುಷ್ಯನನ್ನು ಪರಮಾತ್ಮನಲ್ಲಿ ಅಡಗುವಂತೆ ಮಾಡುತ್ತದೆ.

ಶಿವಶರಣರು ತಾವು ಕೈಕೊಂಡ ಕಾಯಕದಲ್ಲಿಯೂ ಆಚರಣೆಯಲ್ಲಿಯೂ ದೃಢಬುದ್ಧಿಯುಳ್ಳವರಾಗಿ ಆಚರಿಸಿದ್ದಾರೆ. ಪ್ರಾಣಹೋಗುವ ಪ್ರಸಂಗ ಒದಗಿದರೂ ಕೂಡ, ಅವರು ತಾವು ಹಿಡಿದ ಕಾರ್ಯಗಳನ್ನು ಬಿಡರು. ಹೀಗೆ ವರ್ತಿಸುವದೇ ಅವರಿಗೆ ವ್ರತವು, ನಿಯಮವು. ಮಹಣಮ್ಮರೆಮ್ಮವ್ವೆಯರು ಈ ವರ್ತನೆಯನ್ನು ತಮ್ಮ ವಚನಗಳಲ್ಲಿ ನಿರೂಪಿಸಿದ್ದಾರೆ. ಸಪ್ಪೆಯಲ್ಲಮದೇವನು, ಏಲೇಶಕೇತಯ್ಯನು, ಇಂಡಿಯ ಶಾಂತಯ್ಯನು, ಬಡಿಹೋರಿ ಬ್ರಹ್ಮಯ್ಯನು ತಾವು ಹಿಡಿದ ಕಾಯಕಗಳಲ್ಲಿ ಎಂಥ ಕಷ್ಟಗಳು ಬಂದರೂ ಅವರು ಅವುಗಳನ್ನು ಬಿಡಲಿಲ್ಲ. ಆದ್ದರಿಂದ ಅವರು ಸಾಮರಸ್ಯ ಪದವಿಯನ್ನು ಹೊಂದಿದರು.

ಹೀಗೆ ಶಿವಶರಣರ ಚರಿತ್ರೆಗಳು ಉಚ್ಚ ವಿಚಾರಗಳಿಂದ ತುಂಬಿ ತುಳುಕುತ್ತವೆ. ಅವು ಬಸವಾದಿ ಪ್ರಮಥರ ಕಾಲದಲ್ಲಿ ಬಹುಜನ ಸಮಾಜವನ್ನು ಎಚ್ಚರಿಸಿರುತ್ತವೆ. ಆದ್ದರಿಂದ ಬಹುಜನರು ಅವರಿದ್ದ ಕಲ್ಯಾಣ ಪಟ್ಟಣಕ್ಕೆ ಹೋಗುವವರಾದರು. ಪುರಾಣಗಳಲ್ಲಿ ಹೇಳುವಂತೆ ಬಸವೇಶ್ವರನ ಅರಮನೆಯಲ್ಲಿ ತಿಂಡಿಯನ್ನು ಅಥವಾ ಸುಗ್ರಾಸ ಭೋಜನವನ್ನು ತಿನ್ನಲಿಕ್ಕೆ ಅವರು ಅವನಲ್ಲಿ ಹೋಗಿಲ್ಲ. ಆದರೆ ಅವನ ಸನ್ನಿಧಿಯಲ್ಲಿ ನಡೆಯುತ್ತಿದ್ದ ಶಿವಾನುಭವ ಗೋಷ್ಠಿಗಳನ್ನು ಕೇಳಲು ಹೋಗಿದ್ದಾರೆ. ರಾಜ್ಯವನ್ನು ಪರಿಪಾಲಿಸುತ್ತಿದ್ದ ಚಂದಿಮರಸನು, ಶಿವಯೋಗಿ ಮಲ್ಲರಸನು ಸಕಲೇಶಮಾದರಸನು, ಇಂಥ ರಾಜರು ತಮ್ಮ ಉಚ್ಚಸ್ಥಾನಗಳನ್ನು ತೊರೆದು ಶಿವಾನುಭವಕ್ಕೆ ಮನಗೊಂಡು ಅದರಂತೆ ಆಚರಿಸಲು ಸನ್ನದ್ಧರಾದರು. ಕೆಂಭಾವಿ ಭೋಗಣ್ಣ, ಬಹುರೂಪಿ ಚೌಡಯ್ಯ, ಏಲೇಶಕೇತಯ್ಯ, ಮಲ್ಲರಸ ಇವರು ಬ್ರಾಹ್ಮಣರು. ಆದರೆ ಅವರು ಶಿವಾನುಭವದ ತತ್ವಗಳಿಗೆ ಆಕರ್ಷಿಸಲ್ಪಟ್ಟು ಅವುಗಳಂತೆ ಆಚರಿಸಿದ್ದಾರೆ. ಬಳ್ಳೇಶ ಮಲ್ಲಯ್ಯನು ಮತ್ತು ಚಂದವೂರಿನ ಅಣ್ಣ ಮಲ್ಲಯ್ಯ ಇವರು ವ್ಯಾಪಾರಸ್ತರು ಮತ್ತು ಧನವಂತರು. ಆದರೆ ಅವರು ಪ್ರಮಥರ ತತ್ವಗಳಂತೆ ನಡೆದಿದ್ದಾರೆ. ಇವ

ರಲ್ಲಿ ಅಣ್ಣಮಲ್ಲಯ್ಯನು ತನ್ನ ತಂಗಿಗೆ ತನ್ನ ಮನೆತನದ ಆಸ್ತಿಯಲ್ಲಿ ಸ್ವತಂತ್ರ ವಿಭಾಗವನ್ನು ಮಾಡಿಕೊಟ್ಟಿದ್ದಾನೆ. ಶಿವಾನುಭವದ ಪ್ರಕಾರ ಸ್ತ್ರೀಪುರುಷರು ಸಮಾನ ಬಾಧ್ಯತೆಯುಳ್ಳವರು. ಇದನ್ನು ಅವನು ಆಚರಣೆಯಲ್ಲಿ ತಂದಿದ್ದಾನೆ. ನಿರ್ಲಜ್ಜಶಾಂತಯ್ಯ, ಉರಿಲಿಂಗದೇವ ಮತ್ತು ಸಕಳೇಶಮಾದರಸರು ಮಠಾಧಿಕಾರಿಗಳು. ಆದರೂ ಅವರು ಪ್ರಮಥರ ಆಚರಣೆಯಂತೆ ನಡೆದಿದ್ದಾರೆ. ಇಷ್ಟೇ ಅಲ್ಲ, ವಿಮಳಾದೇವಿಯು ಮಠಾಧಿಕಾರಿಯಂತೆ ಲಿಂಗದೀಕ್ಷೆಯನ್ನು ಕೊಡಲು ಮುಂದಾಗಿದ್ದಾಳೆ. ಮಾದರ ಧೂಳಯ್ಯನು ಮಾದರನು. ಕೆಂಭಾವಿಭೋಗಣ್ಣ, ಸೂರಂಬೆ, ಇವರು ಅಸ್ಪೃಶ್ಯತ್ವವನ್ನು ಎಣಿಸದೆ, ಜಾತಿಭೇದದ ನಿರ್ಬಂಧಗಳನ್ನು ಹರಿದೊಗೆದಿದ್ದಾರೆ. ಇದರಲ್ಲಿ ಅವರಿಗೆ ಸ್ವಬಾಂಧವರಿಂದ ಹಿಂಸೆಗಳಾದವು. ಆದರೆ ಅವರು ಅವುಗಳನ್ನು ಗಣನೆಗೆ ತಂದಿಲ್ಲ. ಇವರಲ್ಲಿ ಸೂರಂಬೆಯು ಜಗದ್ಗುರು ಸ್ಥಾನವನ್ನು ಹೊಂದಿದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯಳು. ಹೀಗೆ ಶಿವಾನುಭವವು ದೊಡ್ಡವರನ್ನು ಮಾತ್ರವಲ್ಲ, ಚಿಕ್ಕವರನ್ನೂ ಸಹ ಆಕರ್ಷಿಸಿರುತ್ತದೆ. ಬಾಲಲಿಂಗಣ್ಣ, ಕೋಂಬಿ ಮತ್ತು ಶಂಕಿತೊಂಡಿ ಇವರು ತೀರ ಬಾಲಕರು. ಆದರೂ ಅವರಲ್ಲಿದ್ದ ಭಕ್ತಿಭಾವವು ಯಾರ ಮನಸ್ಸನ್ನಾದರೂ ಕರಗಿಸುವಂಥದಿದೆ. ಹೀಗೆ ಶಿವಾನುಭವವು ಇಡೀ ಬಹುಜನ ಸಮಾಜವನ್ನು ಎಚ್ಚರಿಸಿದೆ.

ಶಿವಾನುಭವವು ಸ್ತ್ರೀಯರ ಮೇಲೆಯೂ ಮಹತ್ವದ ಪರಿಣಾಮಗಳನ್ನುಂಟುಮಾಡಿದೆ. ಈ ಗ್ರಂಥದಲ್ಲಿ ನಾವು ೧೭ ಜನ ಸ್ತ್ರೀಯರ ಚರಿಳನ್ನು ಕೊಟ್ಟಿದ್ದೇವೆ. ಅವುಗಳಿಂದ ಅವರು ಎಂಥ ಶ್ರೇಷ್ಠ ತರಗತಿಯನ್ನು ಹೊಂದಿದ್ದರೆಂಬುದು ಗೊತ್ತಾಗುತ್ತದೆ. ಚಿಕ್ಕ ಮಾದಣ್ಣನು ತೀರಿಕೊಂಡ ಬಳಿಕ ಅವನ ಹೆಂಡತಿಯಾದ ಮಹಾದೇವಿಯು ನಡೆದ ರೀತಿಯು ಅತ್ಯಂತ ಹೃದಯಸ್ಪರ್ಶಿಯಾಗಿದೆ. ವೇಮಯ್ಯನ ಹೆಂಡತಿಯಾದ ಗಂಗಾದೇವಿಯು, ಆಯದಕ್ಕಿ ಮಾರಯ್ಯನ ಹೆಂಡತಿಯಾದ ಲಕ್ಕಮ್ಮನು, ಬಡಿಹೋರಿ ಬ್ರಹ್ಮಯ್ಯನ ಹೆಂಡತಿಯಾದ ಕೇತಲೆಯು, ಎಡೆಮಠದ ನಾಗಿದೇವನ ಹೆಂಡತಿಯಾದ ಮಸಣಮ್ಮನು, ಉರಿಲಿಂಗ ಪೆದ್ದಿಯ ಹೆಂಡತಿಯಾದ ಕಾಳವ್ವೆಯು, ನಿರ್ಲಜ್ಜ ಶಾಂತಯ್ಯನ ಹೆಂಡತಿಯು, ಇವರೆಲ್ಲರೂ ತಮ್ಮ ಪತಿಗಳು ಕೈಕೊಂಡ ಕಾಯಕದಲ್ಲಿ ಸಹಾಯಕರಾಗಿ ವರ್ತಿಸಿದ್ದಾರೆ. ಇವರಲ್ಲಿ ಕಾಳವ್ವೆ, ಲಕ್ಕಮ್ಮಗಳು ತಮ್ಮ ಪತಿಗಳಂತೆಯೇ ವಚನ

ಕಾರರಾಗಿದ್ದಾರೆ. ಅವರ ಪತಿಗಳು ಅವರಿಗೆ ಶಿಕ್ಷಣ ಕೊಟ್ಟಿರಬೇಕು. ಶಿವಶರಣರು ಸ್ತ್ರೀಯರಿಗೆ ಯಾವಾಗಲೂ ಉಚ್ಚಸ್ಥಾನವನ್ನು ಕೊಟ್ಟಿದ್ದಾರೆ. ಆದ್ದರಿಂದ ಅವರು ತಮ್ಮ ಪತಿಗಳಂತೆಯೇ ವಿದ್ವಾಂಸರಾಗಿ ವಚನಕಾರರಾಗಿದ್ದಾರೆ. ಹೀಗೆ ಬಸವಾದಿ ಪ್ರಮಥರ ಕಾಲದಲ್ಲಿ ಸ್ತ್ರೀಯರು ಉತ್ತಮ ಗೃಹಿಣಿಯರೂ, ವಿದ್ಯಾವಂತರೂ, ಸತ್ಶೀಲರೂ ಆಗಿ ಆಚರಿಸಿದ್ದಾರೆ.

ಕೆಲವು ಮಹನೀಯರು ಶಿವಶರಣರು ವಚನಗಳನ್ನು ತಾವೇ ರಚಿಸಿಲ್ಲ, ಅವುಗಳನ್ನು ಅವರ ತರುವಾಯ ಯಾರೋ ಕೆಲವರು ರಚಿಸಿ ಇವರ ಹೆಸರಿನಿಂದ ಪ್ರಸಿದ್ಧಿಸಿದ್ದಾರೆಂದು ಈಚೆಗೆ ವಿಧಾನಮಾಡಿದ್ದಾರೆ. ಆದರೆ ಈ ಗ್ರಂಥದಲ್ಲಿಯ ಶಿವಶರಣರ ಚರಿತ್ರೆಗಳನ್ನು ಲಕ್ಷವಿಟ್ಟು ಅಭ್ಯಾಸಿಸಿ, ಅವರು ರಚಿಸಿದ ವಚನಗಳನ್ನು ಮನನ ಮಾಡಿಕೊಂಡಲ್ಲಿ ಅವರ ನಡೆ ಮತ್ತು ಅವರು ನುಡಿದ ವಚನಗಳು ಇವುಗಳಲ್ಲಿ ಮೇಳವು ಎಷ್ಟು ಗಾಢವಾಗಿದೆಂಬುದು ತಿಳಿದು ಬರುತ್ತದೆ. ಇಂಥ ಮೇಳವು ಬೇರೆಯವರ ರಚನೆಯಲ್ಲಿರುವದು ಶಕ್ಯವಿಲ್ಲ. ವಚನಗಳಲ್ಲಿ ಕಂಡು ಬರುವ ಆಯಾ ವಚನಕಾರರ ಅನುಭವದ ನುಡಿಗಳು, ಸ್ಫೂರ್ತಿಯುಕ್ತ ಭಾಷೆಯ ಸರಣಿಗಳು, ಇವುಗಳಿಂದ ಆ ವಚನಗಳು ಆಯಾ ವಚನಕಾರರವೇ ಇರುತ್ತವೆಂದು ಮನದಟ್ಟಾಗದೆ ಇರದು.

ಶಿವಶರಣರ ಕಾರ್ಯಗಳಲ್ಲಿ ಅವರಿಗೆ ಯಾವ ಆತಂಕಗಳು ಬರಲಿಲ್ಲವೆಂದು ಯಾರೂ ಭಾವಿಸಕೂಡದು. ಅವರು ಪ್ರತಿಪಾದಿಸಿದ ತತ್ವಗಳು ಹೊಸತರದವಾಗಿವೆ. ಅವು ಪೂರ್ವ ಪದ್ಧತಿಗಳ ಮೂಲಕ ಲಾಭವನ್ನು ಹೊಂದುತ್ತಿರುವಂಥವರಿಗೆ ತಡೆಯನ್ನುಂಟುಮಾಡುವಂಥವಿರುತ್ತವೆ. ಇಂಥವರು ಶಿವಶರಣರನ್ನು ಆಗಿಂದಾಗ್ಗೆ ಬಹಳ ಹಿಂಸಿಸಿದ್ದಾರೆಂದು ಈ ಗ್ರಂಥದಲ್ಲಿಯ ಶಿವಶರಣರ ಚರಿತ್ರೆಗಳಿಂದ ಕಂಡು ಬರುತ್ತದೆ. ಧರ್ಮ ಪ್ರಸಾರದ ಆರಂಭದ ಕಾಲದಲ್ಲಿ ಹೀಗಾಗುವದು ಸ್ವಾಭಾವಿಕವಿರುತ್ತದೆ. ಸೋಹಳಿಯ ಸೋಮಪ್ಪೆಯು ಜೈನಳು. ಆದರೆ ಅವಳು ಜೈನರಿಂದ ಬಹು ಕಠೋರವಾದ ಹಿಂಸೆಗೆ ಒಳಗಾಗಬೇಕಾಯಿತು. ಕೆಂಭಾವಿಯ ಭೋಗಣ್ಣನು ಬ್ರಾಹ್ಮಣನು. ಅವನನ್ನು ಸ್ವಬಾಂಧವರು ಊರ ಬಿಟ್ಟು ಹೊರಗೆ ಹಾಕಿಸಿದರು. ಬಳ್ಳೇಶ ಮಲ್ಲಯ್ಯನು ಜೈನನು. ಆದರೆ ಅವನ

ಜೈನ ಜೋಡಿಗರು ಅವನನ್ನು ಪೀಡಿಸಲು ಉದ್ಯುಕ್ತರಾದರು. ಸೂರಂಬೆಯು ಬ್ರಾಹ್ಮಣಿಯು. ಇವಳು ಅಸ್ಪೃಶ್ಯನೊಡನೆ ಭೋಜನ ಮಾಡಿದ್ದಕ್ಕೋಸ್ಕರ, ಬ್ರಾಹ್ಮಣರು ಅವಳನ್ನು ಪೀಡಿಸಿದರು. ಉರಿಲಿಂಗದೇವನು ತನ್ನ ಲಿಂಗಾನುಸಂಧಾನದ ಕಾರ್ಯದ ಸಲುವಾಗಿ ನದೀ ತೀರದಲ್ಲಿ ಒಂದು ಗುಡಿಸಲನ್ನು ಹಾಕಿಕೊಂಡಿದ್ದನು. ಆದರೆ ದುಷ್ಟರು ಅವನ ಆ ಗುಡಿಸಲಿಗೆ ಬೆಂಕಿ ಹಚ್ಚಿದರು. ಏಲೇಶ ಕೇತಯ್ಯನು ಮೊದಲು ಶೈವಮತಸ್ತನು. ಆದರೆ ಅವನನ್ನು ಕೊಂದು ಹಾಕಲಿಕ್ಕೆ ಸ್ವಜಾತಿಯವರು ಬಗೆದರು. ಚಿಕ್ಕ ಮಗುವಾದ ಕೋಲಂಬೆಯು ತಾನು ಕಟ್ಟಿದ ಗುಡಿಸಲಲ್ಲಿ ಶಿವಾರಾಧನೆ ಮಾಡುತ್ತಿದ್ದಾಗ ಒಬ್ಬ ವೈಷ್ಣವನು ಆ ಗುಡಿಸಲಿಗೆ ಬೆಂಕಿ ಹಚ್ಚಿದನು. ಹೀಗೆ ಶಿವಶರಣರು ತಮ್ಮ ಆಚರಣೆಯಂತೆ ನಡೆಯುವಲ್ಲಿ ಪರಧರ್ಮೀಯರೂ ದುಷ್ಟರೂ ಅವರನ್ನು ಪೀಡಿಸಿದ್ದಾರೆ, ಕಾಡಿದ್ದಾರೆ, ಕೊಂದು ಹಾಕಲು ಪ್ರಯತ್ನಿಸಿದ್ದಾರೆ. ಆದರೆ ಯಾವ ಶಿವಶರಣನೂ ಈ ವಿರೋಧಿಗಳಿಗೆ ಪ್ರತಿಕಾರ ಮಾಡಲು ಯತ್ನಮಾಡಿಲ್ಲೆಂಬುದನ್ನು ಲಕ್ಷಿಸತಕ್ಕದ್ದು. ಅವರೆಲ್ಲರೂ ಇಂಥವರನ್ನು ಕ್ಷಮಿಸಿ ಪರಮಾತ್ಮನಲ್ಲಿ ವಿಶ್ವಾಸವಿಟ್ಟು ನಡೆದಿದ್ದಾರೆ. ಇದರಿಂದ ಅವರು ಲೋಕೋದ್ಧಾರ ಕಾರ್ಯ ಮಾಡಲು ಶಕ್ತರಾದರು.

ಅನೇಕರು ಶಿವಶರಣರ ಚರಿತ್ರೆಗಳಲ್ಲಿ ಅದ್ಭುತಗಳಿವೆ. ಆದ್ದರಿಂದ ಅವು ನಂಬಲರ್ಹವಲ್ಲವೆಂದು ಆಕ್ಷೇಪಿಸುತ್ತಾರೆ. ಹೀಗೆ ನಮಗೆ ಕೆಲವರು ತಿಳಿಸಿದ್ದುಂಟು. ಆದರೆ ಶಿವಶರಣರು ಕಾಲ್ಪನಿಕ ಪುರುಷರಲ್ಲ. ಅವರು ಹಿಂದೆ ನಿಜವಾಗಿ ಆಗಿ ಹೋಗಿದ್ದಾರೆ. ಇದು ಅವರವರ ಗ್ರಾಮಗಳಲ್ಲಿ ಈಗಲೂ ಇರುವ ಕುರುಹುಗಳಿಂದಲೂ, ಅಲ್ಲಿ ಪ್ರಚಲಿತವಿರುವ ಹೇಳಿಕೆಗಳಿಂದಲೂ, ಅವರು ಬರೆದ ವಚನಗಳಿಂದಲೂ ಊಹಿಸಬಹುದು. ಬೌದ್ಧ, ಜೈನರಲ್ಲಿ ಮಹಾತ್ಮರ ಚರಿತ್ರೆಗಳು ಅಸಂಖ್ಯವಾಗಿವೆ. ಕ್ರಿಶ್ಚನರಲ್ಲಿಯೂ ಇಂಥ ಅನೇಕ ದಂತ ಕಥೆಗಳಿವೆ. ಹಿಂದೂಗಳಲ್ಲಿ ಬಹು ವಿಸ್ತೃತವಾದ ೧೮ ಪುರಾಣಗಳು ಮಹಾಭಾರತ ರಾಮಾಯಣಾದಿಗಳೂ ಇವೆ. ಅವುಗಳಲ್ಲಿ ಅದ್ಭುತಗಳು ತುಂಬಿರುತ್ತವೆ. ಆದರೆ ಅವುಗಳಲ್ಲೆಲ್ಲ ಆಯಾ ಧರ್ಮಗಳ ಶ್ರೇಷ್ಠ ತತ್ವಗಳು ಒಡಮೂಡಿರುತ್ತವೆ. ಅವು ಬಹುಜನ ಸಮಾಜದ ಲಕ್ಷವನ್ನು ಎಳೆದಿವೆ. ಅದರಲ್ಲಿಯ ಮಹಾಪುರುಷರ ವಿಷಯವಾಗಿ ಉದ್ಗ್ರಂಥಗಳಾಗಿವೆ. ಅವುಗಳು ಧಾರ್ಮಿಕ ಮತ್ತು ಸಾಮಾ



ಜಿಕ ಸಂಸ್ಕೃತಿಯು ದ್ಯೋತಕವಾಗಿವೆ. ಹಾಗೆಯೇ ಶಿವಶರಣರ ಚರಿತ್ರೆ ಗಳು ವೀರಶೈವ ಸಂಸ್ಕೃತಿಯು ದ್ಯೋತಕವಾಗಿರುತ್ತವೆ. ಆದ್ದರಿಂದ ಅವುಗಳನ್ನು ನಾವು ದುರ್ಲಕ್ಷಿಸಲು ಬರಲಾರದು. ಆದರೆ ಅವುಗಳಲ್ಲಿ ಅನೇಕ ಅದ್ಭುತಗಳಿರುವದು ನಿಜವು. ಅವುಗಳನ್ನು ನಂಬುವದು ಅಥವಾ ಬಿಡುವದು ವಾಚಕರ ಶ್ರದ್ಧೆಯ ಮೇಲೆ ಅವಲಂಬಿಸಿದೆ. ಅವುಗಳನ್ನು ಬಿಟ್ಟರೂ ಉಳಿದ ಕಥಾ ಭಾಗಗಳು ಅರ್ಥಪೂರ್ಣವಾಗಿರುತ್ತವೆಂಬುದು ಎಲ್ಲರ ತಿಳಿವಳಿಕೆಗೆ ಬಾರದೆ ಇರದು.

ನಾವು ಮೇಲೆ ನಿರ್ದೇಶಿಸಿದಂತೆ ಶಿವಶರಣರ ಚರಿತ್ರೆಗಳಲ್ಲೆಲ್ಲ ಶಿವಾನುಭವದ ತತ್ವಗಳು ಢಾಳವಾಗಿ ಪ್ರಕಾಶಿಸುತ್ತವೆ. ಆದ್ದರಿಂದ ಅವುಗಳನ್ನು ವಾಚಕರು ಆಳವಾಗಿ ಶಕ್ಯವಿದ್ದಷ್ಟು ಸ್ವಾನುಭವದಿಂದ ಅಭ್ಯಸಿಸಬೇಕೆಂದು ಅವರಿಗೆ ನಮ್ಮ ಸವಿನಯ ಸೂಚನೆ ಇದೆ. ಅಂದರೆ ಅವು ಎಷ್ಟು ತತ್ವ ಪೂರ್ಣವಾಗಿರುತ್ತವೆಂಬುದು ಅವರ ನಿದರ್ಶನಕ್ಕೆ ಬರದೆ ಇರಲಾರದು. ಗ್ರಂಥ ವಿಸ್ತಾರಭಯದಿಂದಕ್ಕೋಸ್ಕರ ಅವುಗಳನ್ನು ನಾವು ಬೇರೆ ಬೇರೆ ಚರಿತ್ರೆ ಗಳಲ್ಲಿ ವಿಸ್ತೃತವಾಗಿ ನಿರೂಪಿಸಿರುವದಿಲ್ಲ. ಅವುಗಳನ್ನು ನಾವು ಈ ಪ್ರಸ್ತಾವನೆಯಲ್ಲಿ ಮತ್ತು ಆಯಾ ಚರಿತ್ರೆಗಳ ನಿರೂಪಣೆಯಲ್ಲಿ ಬಹು ಸಂಕ್ಷಿಪ್ತ ವಾಗಿ ಮತ್ತು ಸೂಚನಾತ್ಮಕವಾಗಿ ಮಾತ್ರ ಉಲ್ಲೇಖಿಸಿದ್ದೇವೆ.

ಆದರೆ ಈ ಶಿವಶರಣರ ಚರಿತ್ರೆಗಳ ಮೇಲಿಂದ ಬಸವಾದಿಪ್ರಮುಥರ ಮಾರ್ಗವು ಆಚರಣೆಯಲ್ಲಿ ಬರಲಿಲ್ಲವೆಂಬ ಆಕ್ಷೇಪಣೆಯು ಮಾತ್ರ ಸರಿಯಾದದ್ದಲ್ಲವೆಂಬುದು ವಾಚಕರ ನಿದರ್ಶನಕ್ಕೆ ಬಂದಿರಬಹುದು. ಶಿವಶರಣರು ತಮ್ಮ ಉದಾರ ಮತ್ತು ಉಚ್ಚತಮ ವಿಚಾರಗಳ ಮೂಲಕ ದೇಶದಲ್ಲೆಲ್ಲ ಒಂದು ಕ್ರಾಂತಿಯನ್ನೆಸಗಿದರೆಂಬದು ಈ ಚರಿತ್ರೆಗಳಿಂದ ಸ್ಪಷ್ಟವಾಗದೆ ಇರಲಾರದು.

ಈ ಶಿವಶರಣರ ಚರಿತ್ರೆಗಳು ಪೂರ್ವಕಾಲದ ವೀರಶೈವೇತಿಹಾಸದ ಮೇಲೆಯೂ ಕೆಲವು ಮಟ್ಟಿಗೆ ಪ್ರಕಾಶವನ್ನು ಕೆಡಹುತ್ತವೆ. ಇವುಗಳಿಂದ ವೀರಶೈವದ ಉಗಮವು ಎಲ್ಲಿಂದ ಉಂಟಾಯಿತು, ಮತ್ತು ಅದು ಹೇಗೆ ಮುಂದೆ ಪ್ರವಹಿಸುತ್ತ ಹೋಯಿತು, ಎಂಬುದನ್ನು ತಿಳಿಯಬಹುದಾಗಿದೆ. ಈ ಗ್ರಂಥದಲ್ಲಿ ನಾವು ನಿರೂಪಿಸಿದ ಎಡೆಮಠದ ನಾಗಿದೇವನ ಚರಿತ್ರೆಯಿಂದ ಅವನು ಕಾಂಚೀಪುರದಲ್ಲಿದ್ದುದು ಕಂಡುಬರುತ್ತದೆ. ಬಿಜ್ಜಳನು

ಈ ಪಟ್ಟಣದ ಮೇಲೇರಿ ಹೋದಾಗ್ಗೆ ಬಸವೇಶ್ವರನು ಅವನೊಡನೆ ಹೋಗಿದ್ದನು. ಅವನು ಅಲ್ಲಿ ಈ ನಾಗಿದೇವನನ್ನು ಕಂಡು ಅವನನ್ನು ಕರ್ನಾಟಕಕ್ಕೆ ಬರಮಾಡಿಕೊಂಡನು. ಇದು ಬಸವೇಶ್ವರನು ಮಂತ್ರಿಯಾಗುವ ಪೂರ್ವದಲ್ಲಿಯ ಸಂಗತಿಯಾಗಿರಬೇಕು. ಯಾಕಂದರೆ ಅವನು ಮಂತ್ರಿಯಾದ ಬಳಿಕ ಕಾಂಚೀನಗರದಲ್ಲಿ ಆಳುತ್ತಿದ್ದ ಚೋಳರಾಜರೊಡನೆ ಬಿಜ್ಜಳರಾಜನು ಯುದ್ಧ ನಡಿಸಿದ್ದರ ಉಲ್ಲೇಖವು ಇತಿಹಾಸದಲ್ಲಿಲ್ಲ. ಆದುದರಿಂದ ಬಸವೇಶ್ವರನು ಇನ್ನೂ ಬಿಜ್ಜಳನಲ್ಲಿ ಕೆಳಗಿನ ತರಗತಿಯ ನೌಕರಿಯಲ್ಲಿದ್ದಾಗ ಅವನೊಡನೆ ಈ ಪಟ್ಟಣಕ್ಕೆ ಹೋಗಿರಬೇಕು. ಅಷ್ಟರಲ್ಲಿ ನಾಗಿದೇವನು ಅವನಕಿಂತಲೂ ಹಿರಿಯವನಾಗಿ ಬಹಳ ಪ್ರಸಿದ್ಧನಾಗಿರಬೇಕು. ನಾಗಿದೇವನ ಹೆಂಡತಿಯು ಮುಸಣಮ್ಮನು. ಆಕೆಯು ವಚನಕಾರಳು. ಆದ್ದರಿಂದ ಈ ಉಭಯತರು ಶಿವಾನುಭವಿಗಳಾಗಿ ಬಸವೇಶ್ವರನಕಿಂತಲೂ ಮೊದಲು ಪ್ರಸಿದ್ಧಿಗೆ ಬಂದಿದ್ದಾರೆ.

ಮುಸಣಮ್ಮನ ವಚನವೊಂದನ್ನು ನಾವು ಈ ಗ್ರಂಥದಲ್ಲಿ ಉದಹರಿಸಿದ್ದೇವೆ. ಆಕೆಯ ಮುದ್ರಿಕೆಯು 'ನಿಜಗುಣೇಶ್ವರ ಲಿಂಗ' ಎಂದಿದೆ. ಇದರಿಂದ ನಿಜಗುಣನು ಆಕೆಯ ಗುರುವಾಗಿ ಹಿರಿಯನಾಗಿರಬೇಕು. ಈ ನಿಜಗುಣನು ತನ್ನ ಗುರುವೆಂದು ಚಂದಿಮರಸನು ತನ್ನ ಕೆಲವು ವಚನಗಳಲ್ಲಿ ಹೇಳಿಕೊಂಡಿದ್ದಾನೆ. ಈ ಚಂದಿಮರಸನು ರಾಜನು. ಮೊದಲು ಕೆಂಭಾವಿಯಲ್ಲಿ ಆಳುತ್ತಿದ್ದನು. ಅವನೇ ಕೆಂಭಾವಿ ಭೋಗಣ್ಣನನ್ನು ತನ್ನ ರಾಜಧಾನಿಯಿಂದ ಹೊರಗೆ ಹಾಕಿದನು. ಈ ಸಂಗತಿಗಳಿಂದ ನಿಜಗುಣ, ಕೆಂಭಾವಿ ಭೋಗಣ್ಣ ಮತ್ತು ಚಂದಿಮರಸು ಇವರು ಸಮಕಾಲೀನರಾಗುತ್ತಾರೆ. ಮತ್ತು ಮುಸಣಮ್ಮ ಎಡೆಮಠದ ನಾಗಿದೇವ ಇವರು ಇವರ ತರುವಾಯ ಬಂದವರಾಗುತ್ತಾರೆ. ಆ ಮೇಲೆ ಬಸವೇಶ್ವರ, ಹೀಗೆ ಕ್ರಮವು ಇದ್ದ ಹಾಗೆ ಕಂಡುಬರುತ್ತದೆ. ಇವರಲ್ಲಿ ಮುಸಣಮ್ಮ, ನಿಜಗುಣ ಮತ್ತು ಚಂದಿಮರಸರು ವಚನಕಾರರು. ಆದ್ದರಿಂದ ಬಸವೇಶ್ವರನಕಿಂತಲೂ ಮೊದಲು ಶಿವಶರಣರು ಉದಯವಾಗಿ ಅವರು ವಚನಗಳ ಮೂಲಕ ತಮ್ಮ ಶಿವಾನುಭವವನ್ನು ಪ್ರಸಾರಮಾಡುತ್ತಿದ್ದುದು ತೋರಿಬರುತ್ತದೆ.

ಈಗಿನ ಗ್ರಂಥವಲ್ಲಿ ನಾವು ಸಕಳೇಶಮಾದರಸನ ಮತ್ತು ಶಿವಯೋಗಿ ಮಲ್ಲರಸನ ವೃತ್ತಾಂತಗಳನ್ನು ಕೊಟ್ಟಿದ್ದೇವೆ. ಇವರ ಚರಿತ್ರೆ

ಗಳಾದರೂ ಮೇಲಿನ ಸಂಗತಿಗಳನ್ನೇ ದೃಢಪಡಿಸುತ್ತವೆ. ಅವರಲ್ಲಿ ಶಿವಯೋಗಿ ಮಲ್ಲರಸನು ಸಕಳೇಶ ಮಾದರಸನಿಗೆ–ನೀನು ಕಲ್ಯಾಣಕ್ಕೆ ಹೋಗು ಮತ್ತು ಅತ್ತಕಡೆಯಿಂದ ಇನ್ನು ೫೦ ವರ್ಷಗಳ ತರುವಾಯ ಶ್ರೀಶೈಲಕ್ಕೆ ಬರುವಿ, ಎಂದು ಸೂಚಿಸುತ್ತಾನೆ. ಹಾಗೆಯೇ ಸಕಳೇಶನು ೫೦ ವರ್ಷಗಳ ತರುವಾಯ ಶ್ರೀಶೈಲಕ್ಕೆ ಬಸವೇಶ್ವರಾದಿಗಳನ್ನು ಕಂಡು ಬರುತ್ತಾನೆ. ಆದರೆ ಬಸವೇಶ್ವರನು ಲಿಂಗೈಕ್ಯವಾಗುವಾಗ ೩೬ ವರ್ಷದವನಾಗಿದ್ದನು. ಆದ್ದರಿಂದ ಸಕಳೇಶನು ಬಸವೇಶ್ವರನಕಿಂತಲೂ ಬಹಳ ಹಿರಿಯನಾಗುತ್ತಾನೆ. ಶಿವಯೋಗಿ ಮಲ್ಲರಸನು ಸಕಳೇಶ ಮಾದರಸನಿಗೆ ಗುರುವಾಗಿ ಬೋಧಿಸಿದ್ದಾನೆ. ಇವನು ಐಹೊಳೆಯಲ್ಲಿ ಜನಿಸಿ ಅಲ್ಲಿ ವೀರಶೈವದೀಕ್ಷೆಯನ್ನು ಹೊಂದಿ ತನ್ನ ರಾಜ್ಯವನ್ನು ಬಿಟ್ಟುಕೊಟ್ಟು ಶ್ರೀಶೈಲಕ್ಕೆ ಬಂದಿದ್ದಾನೆ. ಇದರಮೇಲಿಂದ ವಿಜಾಪುರ ಪ್ರಾಂತದಲ್ಲಿ ಮಲ್ಲರಸನಕಿಂತಲೂ ಮೊದಲು ಶಿವಾನುಭವದ ಚಳವಳಿಗೆ ಪ್ರಾರಂಭವಾಗಿತ್ತೆಂದ ತೋರುತ್ತದೆ. ಹಾಗೆಯೇ ಗೋರಕ್ಷನು ಐಹೊಳೆಗೆ ಸಮೀಪವಿರುವ ಪಟ್ಟದಕಲ್ಲಿನಲ್ಲಿ ಜನಿಸಿ ಮುಂದೆ ಅವನು ಕೊಲ್ಲಾಪುರಕ್ಕೆ ಹೋಗಿ ಅಲ್ಲಿ ರೇವಣಸಿದ್ಧೇಶ್ವರನಿಂದ ಗರ್ವಭಂಗಿತನಾಗಿ ಶ್ರೀಶೈಲಕ್ಕೆ ಬಂದನು. ಅಲ್ಲಿ ಅವನು ಪ್ರಭುದೇವರಿಂದ ವೀರಶೈವ ದೀಕ್ಷೆಯನ್ನು ಹೊಂದಿದನು. ಈ ಎಲ್ಲ ಚರಿತ್ರೆಗಳನ್ನು ಅವಲೋಕಿಸಿದಲ್ಲಿ ಶಿವಯೋಗಿಮಲ್ಲರಸ, ಸಕಳೇಶ ಮಾದರಸ, ರೇವಣಸಿದ್ಧೇಶ್ವರ ಮತ್ತು ಗೋರಕ್ಷ ಇವರೆಲ್ಲರೂ ಬಸವೇಶ್ವರನಕಿಂತಲೂ ಕೆಲವು ವರ್ಷ ಮೊದಲಿಗರಾಗಿರಬೇಕೆಂಬ ಅನುಮಾನವು ಉಂಟಾಗುತ್ತದೆ.

ಈ ಗ್ರಂಥದಲ್ಲಿ ನಾವು ರಾಗದ ಸಂಕಣ್ಣ ಅಥವಾ ರಾಗರಸಾಂಕ ಮತ್ತು ಬಾಹೂರು ಬ್ರಹ್ಮಯ್ಯ ಇವರ ಚರಿತ್ರೆಗಳನ್ನು ಕೊಟ್ಟಿದ್ದೇವೆ. ಇವರ ಚರಿತ್ರೆಗಳಾದರೂ ಬಸವೇಶ್ವರನಕಿಂತಲೂ ಮೊದಲು ವೀರಶೈವ ಧರ್ಮದ ಚಳವಳಿಯು ಕರ್ನಾಟಕದಲ್ಲಿ ಉಂಟಾಗಿತ್ತೆಂಬದನ್ನು ತೋರಿಸುತ್ತವೆ. ರಾಗದ ಸಂಕಣ್ಣನು ವಿಕ್ರಮಾದಿತ್ಯನ ಓಲಗದಲ್ಲಿ ಪ್ರಸಿದ್ಧನಾದನು. ಬಾಹೂರು ಬ್ರಹ್ಮಯ್ಯನು ಬಾಹೂರಲ್ಲಿದ್ದಾಗ ಪೆರ್ಮಾಡಿಯು ದಂಡು ಅವನ ಗ್ರಾಮದಲ್ಲಿ ಇಳಿದಾಗ ಅವನ ಆನೆಯನ್ನು ಅವನು ಕೊಂದದ್ದೂ ಆಮೇಲೆ ಅದರ ಪ್ರಾಣವನ್ನು ತಿರುಗಿ ಪಡೆದದ್ದೂ ಉಲ್ಲೇಖವಾಗಿವೆ. ಈ ವಿಕ್ರಮಾದಿತ್ಯನಿಗೆ 'ಪೆರ್ಮಾಡಿ' ಎಂಬ ಇನ್ನೊಂದು ಹೆಸರು ಇತ್ತು.

ಅದರೊಂದಿಗೆ 'ವಿಕ್ರಮಾದಿತ್ಯ' ಎಂಬ ಹೆಸರೂ ಶಿಲಾಶಾಸನಗಳಲ್ಲಿ ದೊರಕುತ್ತಿದೆ. ಈ ಸಂಗತಿಯಿಂದ ಬಾಹೂರು ಬ್ರಹ್ಮಯ್ಯ ಮತ್ತು ರಾಗ ರಸಾಂಕ ಈ ಉಭಯತರು ವಿಕ್ರಮಾದಿತ್ಯನ ಕಾಲದಲ್ಲಿದ್ದರೆಂದು ತೋರುತ್ತದೆ. ಈ ರಾಜನು ಕಲ್ಯಾಣಪಟ್ಟಣದಲ್ಲಿ ಕ್ರಿ. ಶ. ೧೦೭೬ ರಿಂದ ೧೧೨೬ ವರೆಗೆ ರಾಜ್ಯವಾಳಿದ್ದಾನೆ. ಇವರಲ್ಲಿ ಬಾಹೂರು ಬ್ರಹ್ಮಯ್ಯನು ವಚನಕಾರನಿದ್ದಾನೆ. ಇದರಿಂದ ಬಸವೇಶ್ವರನಕಿಂತಲೂ ಮೊದಲೇ ವೀರಶೈವಧರ್ಮವು ಕರ್ನಾಟಕದಲ್ಲಿ ವಚನಗಳ ಮೂಲಕ ಪ್ರಸಾರ ಹೊಂದಹತ್ತಿತ್ತೆಂದು ಕಂಡುಬರುತ್ತಿದೆ.

ಈ ವೀರಶೈವ ಚಳವಳಿಯು ಮೂಲಕ ಕರ್ನಾಟಕದಲ್ಲಿ ಅಲ್ಲಲ್ಲಿ ಚಳವಳಿಗಳಿದ್ದು ಅದನ್ನು ಅಲ್ಲಲ್ಲಿಯ ಶಿವಶರಣರು ತಾವು ಸ್ವತಂತ್ರವಾಗಿ ಮುಂದುವರಿಸುತ್ತಲಿದ್ದುದು ಈ ಗ್ರಂಥದಲ್ಲಿಯ ಚರಿತ್ರೆಗಳಿಂದ ತಿಳಿದು ಬರುತ್ತದೆ. ಬಹುರೂಪಿಚೌಡಯ್ಯನು ರೇಕಳಿಕೆ ಎಂಬ ಗ್ರಾಮದಲ್ಲಿ ಜನಿಸಿ ಮುಂದೆ ಕೊಟ್ಟಗಿರಿಯ ರಾಜನಲ್ಲಿಗೆ ಬಂದಿರಲು ಅಲ್ಲಿ ಅವನು ನಾಗಿನಾಥ ಎಂಬ ಜಂಗಮನಿಂದ ಲಿಂಗದ ಮರ್ಮವನ್ನು ತಿಳಿದವನಾದನು. ಶಿವಪ್ರಿಯನಾಚಿಯು ಪಂಡಿತಾರಾಧ್ಯನಿಂದ ತನ್ನ ಅಸ್ಪೃಶ್ಯತ್ವ ನಿವಾರಣೆಯ ಕಾರ್ಯದಲ್ಲಿ ಸ್ಫೂರ್ತಿಹೊಂದಿದಳು. ತೆಲುಗೇಶಮಸಣಯ್ಯನು ಲಿಂಗಂಪಲ್ಲಿಯಲ್ಲಿ ಬೇರೊಬ್ಬ ಜಂಗಮನಿಂದ ಲಿಂಗದ ವಿಶೇಷ ಜ್ಞಾನವನ್ನು ಸಂಪಾದಿಸಿದನು. ಹೀಗೆ ಕರ್ನಾಟಕದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಒಂದು ಕಾಲದಲ್ಲಿ ವೀರಶೈವ ಚಳವಳಿಯು ಉದ್ಭವಿಸಿದ್ದು ಕಂಡುಬರುತ್ತದೆ. ಇದರ ಮೂಲಕ ಅಲ್ಲಲ್ಲಿ ಅನೇಕ ಜಂಗಮರೂ ಶಿವಶರಣರೂ ಉದಯವಾಗಿ ಶಿವಾನುಭವಪ್ರಸಾರದ ಕಾರ್ಯಗಳನ್ನು ಸ್ವಂತವಾಗಿಯೇ ಮಾಡಿದ್ದಾರೆ.

ಈ ಕಾರ್ಯವು ಬಸವೇಶ್ವರನಕಿಂತಲೂ ಮೊದಲಿಗೆಯೇ ಪ್ರಾರಂಭವಾಗಿದ್ದಿತು. ಈ ಚಳವಳಿಯ ಪರಿಣಾಮವಾಗಿ ಬಸವೇಶ್ವರನೂ ಕೂಡ ಯಜ್ಞೋಪವೀತವನ್ನು ಅಲ್ಲಗಳೆದು ವೀರಶೈವ ಮತವನ್ನು ಹೊಂದಿದನು. ಅವನು ಮಂತ್ರಿಯಾದ ಬಳಿಕ ಅದರ ಚಳವಳಿಗೆ ಶಿವಾನುಭವ ಮಂಟಪದಲ್ಲಿ ಒಂದು ವ್ಯವಸ್ಥಿತ ಸ್ವರೂಪವು ಪ್ರಾಪ್ತವಾಯಿತು. ಅಷ್ಟರಲ್ಲಿ ದೇಶದಲ್ಲಿ ಅನೇಕ ಶಿವಶರಣರು ಉತ್ಪನ್ನರಾಗಿದ್ದರು. ಅವರು ಬಸವೇಶ್ವರನು ಒಂದು ವಿಖ್ಯಾತವಾದ ರಾಜ್ಯದಲ್ಲಿ ಮಂತ್ರಿಯಾಗಿ

ಅವನು ಸ್ಥಾಪಿಸಿದ ಶಿವಾನುಭವಮಂಟಪದ ಮೂಲಕ ಧರ್ಮೋದ್ಧಾರ ಕಾರ್ಯಗಳು ಒತ್ತರದಿಂದ ನಡೆದದ್ದನ್ನು ತಿಳಿದು ಅವನ ಸನ್ನಿಧಿಯನ್ನು ಹೊಂದಲಪೇಕ್ಷಿಸಿ ಕಲ್ಯಾಣಕ್ಕೆ ಬರುವವರಾದರು. ಹೀಗೆ ವೀರಶೈವ ಚಳವಳಿಯ ಇತಿಹಾಸವಿದ್ದದ್ದು ಈ ಗ್ರಂಥದಲ್ಲಿಯ ಶಿವಶರಣರ ಚರಿತ್ರೆಗಳಿಂದ ತಿಳಿದು ಬರುತ್ತದೆ.

ಶಿವಶರಣರ ಈ ಧಾರ್ಮಿಕ ಚಳವಳಿಯು ಕರ್ನಾಟಕದ್ದೇ ಇದ್ದು ಅದು ಹೊರಗಿನದಲ್ಲ. ಇದು ಯಾವ ಚಳವಳಿಯ ಅನುಕರಣವೂ ಅಲ್ಲ, ಅಥವಾ ಪರಿಣಾಮವೂ ಅಲ್ಲ. ದ್ರಾವಿಡದೇಶದಲ್ಲಿ ಒಂದು ಕಾಲದಲ್ಲಿ ಒಂದು ಶೈವ ಚಳವಳಿಯು ಉಂಟಾಗಿತ್ತು. ಅದನ್ನು ಪುರಸ್ಕರಿಸಿದ ಶರಣರಿಗೆ 'ಪುರಾತನರು' ಎಂಬ ಹೆಸರಿದೆ. ಅವರ ಸಂಖ್ಯೆಯು ೬೩ ಮಾತ್ರ ಇದೆ. ಇವರನ್ನು ವೀರಶೈವರು ಆದರಿಸುತ್ತಿದ್ದರೂ ಅವರ ಚಳವಳಿಯ ಸ್ವರೂಪಕ್ಕೂ ಶಿವಶರಣರ ಚಳವಳಿಯ ಸ್ವರೂಪಕ್ಕೂ ಮಹದಂತರವಿದೆ. ದ್ರಾವಿಡರ ಶೈವಧರ್ಮ ಮತ್ತು ಕರ್ನಾಟಕದ ಶಿವಶರಣರ ಶಿವಾನುಭವ ಇವುಗಳಲ್ಲಿ ಪರಸ್ಪರ ಭಿನ್ನತೆ ಇದೆ. ದ್ರಾವಿಡ ಶೈವರು ತ್ರಿಮೂರ್ತಿಗಳಲ್ಲೊಬ್ಬನಾದ ಶಿವನಿಗೆ ಬಹಳ ಮಹತ್ವಕೊಟ್ಟು ಅವನೊಬ್ಬನನ್ನೇ ಪೂಜಿಸುವವರಾಗಿದ್ದಾರೆ. ಆದರೆ ಶಿವಾನುಭವವು ಅವರಂತೆ ದೇವಾಲಯುಗಳಿಗೆ ಮಹತ್ವಕೊಟ್ಟಿರುವದಿಲ್ಲ. ಅದು ಪರಮಾತ್ಮನು ಸರ್ವವ್ಯಾಪಿಯಾಗಿದ್ದಾನೆ, ಯಾರು ಎಲ್ಲಿ ಭಕ್ತಿಯಿಂದ ಭಾವಿಸುತ್ತಾರೋ ಅಲ್ಲಿಯೇ ಅವನು ತಲೆದೋರುತ್ತಾನೆ, ಎಂದು ಹೇಳುತ್ತಿದೆ. ಈ ಮಹತ್ವದ ತತ್ವವು ಎಲ್ಲ ಶಿವಶರಣರ ಚರಿತ್ರೆಗಳಲ್ಲಿ ಕಂಡುಬರುತ್ತದೆ. ಆದ್ದರಿಂದ ಶಿವನು ಅವರಿಗೆ ಬರೇ ಶಿವಾಲಯುಗಳಲ್ಲಷ್ಟೇ ಅಲ್ಲ, ಜೋಳದ ರಾಶಿ, ದೀಪದ ಕುಡಿ, ಕಾಡುಗಲ್ಲು, ಹುಲ್ಲಿನ ಗುಡಿಸಲು, ಮೊಚ್ಚೆಯ ಜೋಡು, ಅಳೆಯುವ ಬಳ್ಳ, ಹೀಗೆ ಎಲ್ಲೆಲ್ಲಿ ಅವನನ್ನು ಶರಣರು ಭಾವಿಸಿರುವರೋ ಅಲ್ಲಿಯೇ ಕಾಣಿಸಿಕೊಂಡಿದ್ದಾನೆ. ಆದರೆ ದ್ರಾವಿಡದೇಶದಲ್ಲಿ ಕೆಲವು ಅತ್ಯಂತ ಪ್ರಸಿದ್ಧವಾದ ದೇವಾಲಯುಗಳಿವೆ. ಅವು ಈ ದ್ರಾವಿಡ ಪುರಾತನರನ್ನು ಬಹಳ ಆಕರ್ಷಿಸಿವೆ. ಅವುಗಳಿಗೆ ಅವರು ಮೆಚ್ಚಿದವರಾಗಿ ಅವುಗಳಿಗೋಸ್ಕರ ವಿಶೇಷ ಭಕ್ತಿಭಾವವನ್ನು ತಾಳಿದ್ದು ಅವರ ಚರಿತ್ರೆಗಳಿಂದ ಕಂಡುಬರುತ್ತದೆ. ಅಲ್ಲದೆ ಅವರಲ್ಲಿ ಷಟ್‌ಸ್ಥಲಶಾಸ್ತ್ರದಲ್ಲಿ ಮತ್ತು ಶಿವಾನುಭವದಲ್ಲಿ ಕಾಣಬರುವಂಥ ಲಿಂಗ

ಗಳ ವಿಚಾರವಿಲ್ಲ. ಶಿವಾನುಭವವು ತನ್ನಲ್ಲಿಯೇ ತನ್ನ ಆಚರಣೆಯು ಲ್ಲಿಯೇ ಲಿಂಗವನ್ನು ಕಾಣಬೇಕೆಂದು ಹೇಳುತ್ತಿದೆ. ಈ ತತ್ವದ ಮೂಲಕ ಶಿವಶರಣರ ಆಚರಣೆಗೂ ದ್ರಾವಿಡ ಶರಣರ ಆಚರಣೆಗೂ ಮಹದಂತ ರವು ಉಂಟಾಗಿರುತ್ತದೆ.

ಪುರಾತನರು ಶಿವನ ೬೪ ಲೀಲೆಗಳನ್ನು ಅತ್ಯಂತವಾಗಿ ಮನ್ನಿಸು ತ್ತಾರೆ, ಮತ್ತು ಶಿವ ಸಂಬಂಧವಾದ ಚಿನ್ಹಗಳನ್ನು ಬಹಳವಾಗಿ ಆದರಿ ಸುತ್ತಾರೆ. ಅವರು ಶಿವಭಕ್ತರನ್ನು ಬಿಟ್ಟು ಬೇರೆ ಯಾರನ್ನೂ ಭಜಿಸರು. ಆದರೆ ಶಿವಶರಣರು ಭವಿಗಳೊಡನಾಡಿದ್ದಾರೆ. ಅವರನ್ನು ಸುಧಾರಿಸಲು ಯತ್ನಿಸಿದ್ದಾರೆ. ಅವರ ಷಟ್‌ಸ್ಥಲಶಾಸ್ತ್ರದಲ್ಲಿ-- ಅವರ ಸಾದಾಖ್ಯಗಳು, ಸಕೀಲುಗಳು ಮೊದಲಾದವುಗಳಲ್ಲಿ, ಬ್ರಹ್ಮ, ವಿಷ್ಣು, ಶಿವ, ಸದಾಶಿವ, ಈಶ್ವರ, ಈಶಾನ ಎಂದು ಬೇರೆ ಬೇರೆ ಸ್ಥಳಗಳನ್ನು ಕಲ್ಪಿಸಿದ್ದುಂಟು. ಇವರು ಅಧಿದೇವತೆಗಳು. ಇವರು ಯಾವ ಪರಶಿವನ ಮೂಲಕ ಉತ್ಪನ್ನರಾಗಿರುವರೋ ಅವನಿಗೆಯೇ ಸಂಬಂಧಿಸಿಕೊಂಡು ತಮ್ಮ ತಮ್ಮ ವ್ಯಾಪಾರಗಳಲ್ಲಿ ಆಯಾ ಸ್ಥಳಗಳಲ್ಲಿ ತೊಡಗಿರುತ್ತಾರೆಂದು ಶಿವಾನುಭ ವವು ಹೇಳುತ್ತಿದೆ. ಹೀಗೆ ಷಟ್‌ಸ್ಥಲಶಾಸ್ತ್ರವು ತ್ರಿಮೂರ್ತಿಗಳಿಗೆ ಕೆಲ ವೊಂದು ಸ್ಥಾನವನ್ನು ಕಲ್ಪಿಸಿಕೊಟ್ಟಿರುತ್ತದೆ. ಆದರೆ ಈ ವೈಶಿಷ್ಟ್ಯವು ದ್ರಾವಿಡ ಶರಣರಲ್ಲಿರುವದಿಲ್ಲ.

ಶಿವಾನುಭವದಲ್ಲಿ ಕಾಯಕಕ್ಕೆ ಒಂದು ಮಹತ್ವದ ಸ್ಥಾನವು ಪ್ರಾಪ್ತ ವಾಗಿದೆ. ಅದು ಶರಣರಲ್ಲಿ ಧಾರ್ಮಿಕ ಸ್ವರೂಪವನ್ನು ಹೊಂದಿದೆ. ಇದೊಂದು ಕರ್ನಾಟಕದ ಶಿವಶರಣರ ವೈಶಿಷ್ಟ್ಯವು. ಇದು ಪುರಾತನ ರಲ್ಲಿರುವದಿಲ್ಲ. ಯಾವ ಶಿವಶರಣನಿದ್ದರೂ ಕೂಡ ಅವನು ಕೆಲವೊಂದು ಕಾಯಕವನ್ನು ಪಾಲಿಸಲೇಬೇಕು. ಮಠಾಧಿಕಾರಿಗಳಿಗೂ ಈ ತತ್ವವು ಅನ್ವಯಿಸುತ್ತದೆ. ಇದರಂತೆ ಎಲ್ಲ ಶಿವಶರಣರು ನಡೆದದ್ದು ಈ ಗ್ರಂಥ ದಲ್ಲಿಯ ಚರಿತ್ರೆಗಳಿಂದ ತಿಳಿದು ಬರುತ್ತದೆ. ಇದರಿಂದ ಶಿವಶರಣರು ಅನೇಕ ತರದ ಜನರಿಗೆ ಸಂಬಂಧವುಳ್ಳವರಾದರು. ಆದ್ದರಿಂದ ಸಮಾ ಜದಲ್ಲಿ ಹೇಗೆ ನಡಿಯಬೇಕೆಂಬ ವಿಷಯುವನ್ನು ಕುರಿತು ಅವರು ತಮ್ಮ ವಚನಗಳಲ್ಲಿ ಬಹಳ ಚರ್ಚೆ ಮಾಡಿದ್ದಾರೆ. ಹೀಗೆ ಷಟ್‌ಸ್ಥಲ ಶಾಸ್ತ್ರ ಮತ್ತು ನೀತಿಶಾಸ್ತ್ರ ಇವುಗಳನ್ನು ಅವರು ಪರಸ್ಪರ ಹೆಣೆದುಬಿಟ್ಟಿದ್ದಾರೆ.

ಶಿವಶರಣರಲ್ಲಿ ಭಕ್ತಿ ಎಂದರೆ ಕೇವಲ ಶ್ರದ್ಧೆ ಮಾತ್ರವಲ್ಲ. ದ್ರಾವಿಡ ಮತ್ತು ಬೇರೆ ಪ್ರಾಂತದ ಸಾಧುಗಳಲ್ಲಿ ಭಕ್ತಿ ಇದಕ್ಕೆ ಯಾವ ಸ್ವರೂಪು ಇದೆಯೋ ಅದಕ್ಕಿಂತಲೂ ಹೆಚ್ಚಿನ ವ್ಯಾಪಕ ಸ್ವರೂಪನ್ನು ಶಿವಶರಣರಲ್ಲಿ ಅದು ಹೊಂದಿದೆ. ಭಕ್ತಿಯಲ್ಲಿ ಅವರು ಆರು ವಿಧಗಳನ್ನು ಮಾಡಿದ್ದಾರೆ. ಇವುಗಳಲ್ಲಿ ಅವರು ಸತ್ಕ್ರಿಯೆ, ಜ್ಞಾನ, ಅನುಭವ, ಅವಧಾನ, ಇವುಗಳನ್ನು ಸಹ ಸಮಾವೇಶ ಮಾಡಿದ್ದಾರೆ. ಇದು ಪುರಾತನರಲ್ಲಿ ಕಂಡು ಬರುವದಿಲ್ಲ.

ಪುರಾತನರು ಶಿವನಿಗೆ ಮಾತ್ರ ಮಹತ್ವ ಕೊಡುತ್ತಾರೆ. ಆದ್ದರಿಂದ ಅವನ ಸ್ಥಾನವಾದ ಕೈಲಾಸಕ್ಕೆ ಹೋಗುವದೇ ಅವರ ಅಂತಿಮ ಧ್ಯೇಯ ವಾಗಿದೆ. ಆದರೆ ಶಿವಶರಣರು ಕೈಲಾಸಕ್ಕೆ ಮಹತ್ವ ಕೊಟ್ಟಿಲ್ಲ. ಅವರು ಲಿಂಗಾಂಗಸಾಮರಸ್ಯಕ್ಕೆ ಮಹತ್ವ ಕೊಟ್ಟಿದ್ದಾರೆ. ಈ ಸಾಮರಸ್ಯವು ಇಹದಲ್ಲಿದ್ದರೂ ಕೂಡ ಭಕ್ತನಿಗೆ ದೊರೆಯುತ್ತಿದೆಂದು ಶಿವಶರಣರು ತಿಳಿದು ಹಾಗೆ ಆಚರಿಸಿದ್ದಾರೆ. ಅವರಿಗೆ ಶಿವನು ಪ್ರತ್ಯಕ್ಷನಾದರೂ ಕೂಡ ಅವರು ಅವನೊಡನೆ ಕೈಲಾಸಕ್ಕೆ ಹೋಗಲು ಅಲ್ಲಗಳೆದಿದ್ದಾರೆ.

ದ್ರಾವಿಡ ಶೈವರಿಗೆ ಚೋಳ ಮತ್ತು ಪಾಂಡ್ಯ ರಾಜರ ಸಹಾಯವು ಬಹಳ ಇದ್ದುದು ಅವರ ಚರಿತ್ರೆಗಳಿಂದ ತಿಳಿಯುತ್ತದೆ. ಆದರೆ ಕರ್ನಾಟಕದ ಶಿವಶರಣರು ರಾಜರು ತಮ್ಮನ್ನು ಮನ್ನಿಸಬೇಕೆಂದು ಆಶೆ ಮಾಡಿಲ್ಲ. ರಾಜರೇ ಅವರ ಆಳಾಗಿ ದುಡಿದಿದ್ದಾರೆ. ರಾಜರು ಅವರ ಶಿವಾನುಭವಕ್ಕೆ ಒಲಿದು ತಮ್ಮ ರಾಜ್ಯವನ್ನು ತೊರೆದದ್ದು ಕಂಡು ಬರುತ್ತದೆ. ಹಾಗೆಯೇ ಶಿವಶರಣರು ಶ್ರೀಮಂತರನ್ನೂ ಲೆಕ್ಕಿಸಿಲ್ಲ. ಅವರು ಕೇವಲ ಬಡವರು, ಕೂಲಿಕಾರರು. ಅವರು ಚಿಂದಿಯನ್ನೂ ಹೊರಲಿಕ್ಕೆ ನಾಚರು. ತೊಡಲಿಕ್ಕೆ ಅರಿವೆ ಇಲ್ಲದಿರಲು ದಿಗಂಬರಿಗಳಾಗಿದ್ದಾರೆ. ದಿನಾಲು ದುಡಿದು ಗಳಿಸಬೇಕೆಂಬುದೇ ಅವರ ಬೋಧೆಯು. ದಿನಕ್ಕೆ ಸಾಲುವಷ್ಟರಕಿಂತ ಹೆಚ್ಚಿಗೆ ದೊರಕಿಸಬಾರದೆಂದು ಅವರು ಹೇಳುತ್ತಾರೆ. ಇದರಿಂದ ಶಿವಶರಣರು ಸ್ವತಂತ್ರ ಜೀವಿಗಳಾಗಿದ್ದಾರೆ. ಅವರು ಆರ ಮೊರೆ ಹೊಗರು. ಈ ಪ್ರಕಾರ ಶಿವಶರಣರ ಶ್ರೇಷ್ಠ ನಡೆ ಇದೆ.

ಶಿವಶರಣರಿಗೆ ತಮ್ಮ ಆಚರಣೆಗೋಸ್ಕರ ಖರ್ಚು ವೆಚ್ಚ ಏನೂ ಬೀಳದು. ಅವರಿಗೆ ಗುಡಿಗೋಪುರಗಳು ಬೇಡ. ಸುಂದರವಾದ ದೇವಾ

ಲಯುಗಳು ಬೇಡ. ಎಲ್ಲಿ ತಿಳಿಯಾದ ನೀರು, ಸೊಗಸಾದ ಪುಷ್ಪಗಳು, ಎಳೆದಾದ ತಳಿರುಗಳಿವೆಯೋ ಅಲ್ಲಿಯೇ ಅವರ ದೇವಾಲಯುವು. ಅವರು ತಮ್ಮ ಪೂಜಾದಿ ಕಾರ್ಯಗಳನ್ನು ಅಲ್ಲಿಯೇ ತೀರಿಸುತ್ತಾರೆ. ಅಲ್ಲಿಯೇ ಅವರು ಪರಮಾತ್ಮನ ಧ್ಯಾನದಲ್ಲಿರುತ್ತಾರೆ. ಈ ಧ್ಯಾನವು ತೀರಿದ ಬಳಿಕ ಅವರು ತಮ್ಮ ನಿತ್ಯದ ಕಾಯಕಗಳಲ್ಲಿ ತೊಡಗುತ್ತಾರೆ. ಹೀಗೆ ಅವರು ಲಿಂಗಾಂಗಸಾಮರಸ್ಯವನ್ನು ಇಹದಲ್ಲಿಯೇ ಹೊಂದುವರು. ಇದು ಈ ಗ್ರಂಥದಲ್ಲಿಯ ಚರಿತ್ರೆಗಳಿಂದ ವಾಚಕರಿಗೆ ತಿಳಿದು ಬರುತ್ತದೆ.

ಕರ್ನಾಟಕದ ಶಿವಶರಣರ ಶಿವಾನುಭವವು ಹೀಗಿರುವದರಿಂದ ಅವರು ಭವಿಗಳನ್ನು ಬೆರೆಯಲು ಹಿಂಜರಿದಿಲ್ಲ. ನೀರು ತಾವರೆಯಂತೆ ಅವರಲ್ಲಿಯೇ ಅವರು ಇದ್ದು ವ್ಯವಹರಿಸಿದ್ದಾರೆ. ಅವರು ಅರಣ್ಯಗಳಿಗೆ ಓಡಿಹೋಗಿಲ್ಲ. ಅವರು ದುಷ್ಟರೊಡನೆ, ಹೆಂಡಗುಡಿಕರೊಡನೆ, ಇದ್ದಾರೆ. ಕೆಡುಕರು ತಮಗೆ ಕೇಡುಬಗೆಯಲು ಅವರನ್ನು ಕ್ಷಮಿಸಿ ಬೋಧಿಸಿದ್ದಾರೆ. ಅಸ್ಪೃಶ್ಯರೊಡನೆ ಬೆರೆದಿದ್ದಾರೆ. ರಾಜರೊಡನೆಯೂ ಬ್ರಾಹ್ಮಣರೊಡನೆಯೂ ಕೂಡಿದ್ದಾರೆ. ಹಾಗೆಯೇ ಅವರು ಬಡವರೊಡನೆ, ಕೂಲಿಯವರೊಡನೆ, ಬಾಲ ಬಾಲಿಕೆಯರೊಡನೆ, ಸ್ತ್ರೀಯರೊಡನೆ, ಸಮನಾಗಿ ವರ್ತಿಸಿದ್ದಾರೆ. ಎಲ್ಲರಿಗೂ ಅವರು ಬೋಧೆಮಾಡಿದ್ದಾರೆ. ಅವರಲ್ಲಿ ಹಾಡಿದ್ದಾರೆ, ಕುಣಿದಿದ್ದಾರೆ, ಪಾಠಹೇಳಿದ್ದಾರೆ, ಕೀರ್ತನೆ ಮಾಡಿದ್ದಾರೆ. ಪುರಾತನ ಕಾಲದಲ್ಲಿ ಶಿವಶರಣರು ಹೀಗೆ ನಡೆದದ್ದರಿಂದ ವೀರಶೈವ ಧರ್ಮವು ಎಲ್ಲ ಸಮಾಜಗಳಲ್ಲಿ ಬಹು ಒತ್ತರದಿಂದ ಪಸರಿಸಿತು. ಲಕ್ಷಾವಧಿ ಜನರು ವೀರಶೈವರಾದರು.

ಶಿವಶರಣರ ಸಂಸ್ಕೃತಿಯು ಕರ್ನಾಟಕದ್ದೇ ಇದೆ. ಅದು ಅವರದೇ ಇದೆ. ಬೇರೊಬ್ಬರಿಂದ ಅವರು ಅದನ್ನು ಕಲಿತಿಲ್ಲ. ಅದು ಅವರಲ್ಲಿಯ ಉಚ್ಚವಿಚಾರಗಳ ಪರಿಣಾಮವಾಗಿದೆ.

ವೀರಶೈವರಲ್ಲಿ ಅಸಂಖ್ಯ ಶಿವಶರಣರು ಆಗಿಹೋಗಿದ್ದಾರೆ. ಉಳಿದವರ ಚರಿತ್ರೆಗಳನ್ನು ನಾವು ಬೇರೆ ಬೇರೆ ಭಾಗಗಳಲ್ಲಿ ಕ್ರಮೇಣ ಪ್ರಸಿದ್ಧಿಸುತ್ತ ಹೋಗುವೆವು.

ವಿಜಾಪುರ
ತಾ॥ ೧೮-೭-೧೯೪೪

**ಫ. ಗು. ಹಳಕಟ್ಟಿ.**
ಸಂಪಾದಕ.

# ಆಧಾರ ಗ್ರಂಥಗಳು.



ಈ ಗ್ರಂಥ ರಚನೆಯಲ್ಲಿ ನಾವು ಅವಲಂಬಿಸಿದ ಆಧಾರ ಗ್ರಂಥಗಳ ಪಟ್ಟಿಯನ್ನು ಕೆಳಗೆ ಕೊಟ್ಟದ್ದೇವೆ.

(೧) ಬಸವೇಶ್ವರ ಪುರಾಣದ ಕಥಾಸಾಗರ.
(೨) ಭೈರವೇಶ್ವರಕಾವ್ಯಕಥಾಮಣಿಸೂತ್ರರತ್ನಾಕರ.
(೩) ದೀಪದ ಕಲಿಯರ ಕಾವ್ಯ.
(೪) ಶಿವಕಥಾಸಾಗರ.
(೫) ಬಸವೇಶ್ವರ ವಚನ ಕಥಾ ಸರಿತ್ಸಾಗರ.
(೬) ಸಿಂಗಿರಾಜ ಪುರಾಣ ವಿಜಯ.
(೭) ಶರಣಲೀಲಾಮೃತ.
(೮) ಶಿವಶರಣರ ರಗಳೆಗಳು—ಹರಿಹರ.
(೯) ಉಚಿತ ಕಥೆಗಳು.
(೧೦) ಬಸವ ಪುರಾಣ—ಭೀಮಕವಿ ಕೃತ.
(೧೧) ವೀರಶೈವಾಮೃತ ಮಹಾ ಪುರಾಣ.
(೧೨) ಶಿವಶರಣರ ರಗಳೆಗಳು—ಅನೇಕ ಕವಿಗಳಿಂದ ರಚಿತವಾದವುಗಳು.
(೧೩) ರಾಘವಾಂಕ ಪುರಾಣ.
(೧೪) ಸಹಸ್ರಗಣ.
(೧೫) ಕಾಲಜ್ಞಾನದ ವಚನಗಳು.
(೧೬) ನಿರಂಜನವಂಶರತ್ನಾಕರ.
(೧೭) ದೇವಿಯರ ತ್ರಿವಿದಿ.
(೧೮) ವಚನಶಾಸ್ತ್ರಸಾರ ಭಾಗ ೧.

(೧೯) ಶಿವಾನುಭವ ಪತ್ರಿಕೆಯ ಹಿಂದಿನ ಸಂಚಿಕೆಗಳು.
(೨೦) ಶಿವತತ್ವಚಿಂತಾಮಣಿ.
(೨೧) ಶಿವತತ್ವರತ್ನಾಕರ.
(೨೨) ಅನೇಕ ವಚನಕಾರರ ಉಕ್ತಿಗಳು.
(೨೩) ಪಂಡಿತಾರಾಧ್ಯ ಪುರಾಣ.
(೨೪) ಕರ್ನಾಟಕ ಕವಿಚರಿತೆ ಭಾಗ ೧, ೨ ಮತ್ತು ೩.
(೨೫) ಚನ್ನಬಸವ ಪುರಾಣ.
(೨೬) ಪ್ರೌಢರಾಯನ ಕಾವ್ಯ.